# ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗಕ್ಕೆ
ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ತಿಪ್ಪೇಶ ಹೆಚ್. ಎಂ.



ಮಾರ್ಗದರ್ಶಕರು
ಡಾ. ರಮೇಶ ನಾಯಕ
ಪ್ರಾಧ್ಯಾಪಕರು




ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

೨೦೨೧

# ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ತಿಪ್ಪೇಶ ಹೆಚ್. ಎಂ.

ಮಾರ್ಗದರ್ಶಕರು
ಡಾ. ರಮೇಶ ನಾಯಕ
ಪ್ರಾಧ್ಯಾಪಕರು




ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬
೨೦೨೧

## ಸಂಶೋಧಕರ ಪ್ರಮಾಣ ಪತ್ರ

**"ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು"** ಎಂಬ ಮಹಾಪ್ರಬಂಧವನ್ನು **ಡಾ. ರಮೇಶ ನಾಯಕ,** ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಕನ್ನಡ ವಿಶ್ವವಿದ್ಯಾಲಯದ ಸಮಾಜವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

ದಿನಾಂಕ: 31-03-2021
ಸ್ಥಳ : ವಿದ್ಯಾರಣ್ಯ

**(ತಿಪ್ಪೇಶ ಹೆಚ್.ಎಂ)**
ಸಂಶೋಧನಾ ವಿದ್ಯಾರ್ಥಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಮಾರ್ಗದರ್ಶಕರ ದೃಢೀಕರಣ ಪತ್ರ

**ತಿಪ್ಪೇಶ ಹೆಚ್.ಎಂ** ಅವರು ಪಿಎಚ್.ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಸಮಾಜವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ: 31-03-2021

ಸ್ಥಳ : ವಿದ್ಯಾರಣ್ಯ

(ಡಾ. ರಮೇಶ ನಾಯಕ)
ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

**Kannada University, Hampi**
**Akshara Central Library**
**Anti-Plagiarism Cell**
**Certificate of Plagiarism Check Report**

---

**Ballari mattu Koppala Jilla Parisarada Bruhath Shilayugada Nelegalu**

**Megalithic Sites of Ballary and Koppal District Environs**

By

**Thippesha H.M.**

**Reg.No. 150108020055 dated: 14.09.2015**




Research Guide
**Dr. Ramesh Nayak**
Professor
Department of Studies in Ancient History and Archaeology
Kannada University, Hampi
Vidyaranya-583276.

---

**Urkund Analysis Result**

Analyzed document : KUH-PhD-DAHA-Thippesha H M.docx (D98346974)

Submitted : 3/15/2021 6:39:00 AM

Submitted by : Shankaragouda S G

Submitter email : shankargoudas.mailbox@gmail.com

**Similarity : 9%**

Analysis address : shankargoudas.mailbox.kanuni@analysis.urkund.com

15/03/2021

Seal and authorized sign

# ಪರಿವಿಡಿ

# ಸಂಕ್ಷೇಪ ಸೂಚಿ

| | | |
|---|---|---|
| ಅನು | : | ಅನುವಾದ |
| ಆರ್.ಜಿ.ಡಬ್ಲ್ಯೂ | : | ರೆಡ್ ಅಂಡ್ ಗ್ರೇ ವೇರ್ |
| ಆರ್.ಸಿ.ಪಿ.ಡಬ್ಲ್ಯೂ | : | ರೆಸೆಟ್ಟ ಕೋಟೆಡ್ ಪೇಂಟೆಡ್ ವೇರ್ |
| ಆರ್.ಡಬ್ಲ್ಯೂ | : | ರೆಡ್ ವೇರ್ |
| ಇ.ದ | : | ಇತಿಹಾಸ ದರ್ಶನ |
| ಇ.ದ.ಪು | : | ಇತಿಹಾಸ ದರ್ಪಣ ಪುಸ್ತಕ |
| ಇಂ.ಆ.ರಿ | : | ಇಂಡಿಯನ್ ಆರ್ಕಿಯಾಲಜಿ ಎ ರಿವಿವ್ಯೂ |
| ಎಂ.ಆ.ರಿ | : | ಮೈಸೂರು ಆರ್ಕಿಯಾಲಜಿ ರಿಪೋರ್ಟ್ |
| ಎನ್.ಬಿ.ಪಿ.ಡಬ್ಲ್ಯೂ | : | ನಾರ್ಥನ್ ಬ್ಲಾಕ್ ಪಾಲಿಶ್ಡ್ ವೇರ್ |
| ಎ.ಡಬ್ಲ್ಯೂ | : | ಆಂಧ್ರ ವೇರ್ |
| ಏ.ಇಂ | : | ಏನ್ಷಿಯಂಟ್ ಇಂಡಿಯಾ |
| ಏ.ಏ | : | ಏನ್ಷಿಯಂಟ್ ಏಷ್ಯಾ |
| ಕ.ಭಾ | : | ಕರ್ನಾಟಕ ಭಾರತಿ |
| ಕ್ರಿ.ಪೂ | : | ಕ್ರಿಸ್ತ ಪೂರ್ವ |
| ಕ್ರಿ.ಶ | : | ಕ್ರಿ.ಸ್ತ ಶಕ |
| ಬಿ.ಆರ್.ಡಬ್ಲ್ಯೂ | : | ಬ್ಲಾಕ್ ಅಂಡ್ ರೆಡ್ ವೇರ್ |
| ಬಿ.ಡಬ್ಲ್ಯೂ | : | ಬ್ಲಾಕ್ ವೇರ್ |
| ಡಿ.ಬಿ.ಡಬ್ಲ್ಯೂ | : | ಡಲ್ ಬ್ಲಾಕ್ ವೇರ್ |
| ಸು | : | ಸುಮಾರು |

# ಅಧ್ಯಾಯ: ಒಂದು
# ಪ್ರಸ್ತಾವನೆ

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ವ್ಯಾಪ್ತಿ

೧.೪ ಅಧ್ಯಯನ ವಿಧಾನ

೧.೫ ಪೂರ್ವಭಾವಿ ಅಧ್ಯಯನಗಳ ಸಮೀಕ್ಷೆ

೧.೬ ಅಧ್ಯಯನದ ಸ್ವರೂಪ

# ಅಧ್ಯಾಯ : ಒಂದು
# ಪ್ರಸ್ತಾವನೆ

## ೧.೧ ಪ್ರಸ್ತಾವನೆ

ಶಿಲಾಯುಗದ ಮಾನವನು ಒಂದೆಡೆ ನೆಲೆ ನಿಲ್ಲಲು ಸಹಸ್ರಾರು ವರ್ಷಗಳು ಕಳೆದಿವೆ. ಆರಂಭದಲ್ಲಿ ತನ್ನ ಸುತ್ತಲಿನ ಪರಿಸರದಲ್ಲಿ ದೊರೆಯುತ್ತಿದ್ದ ಹಣ್ಣು-ಹಂಪಲು, ಗೆಡ್ಡೆ-ಗೆಣಸು, ಮೀನು-ಮಾಂಸವನ್ನು ತಿಂದು ಜೀವಿಸುತ್ತಿದ್ದನು. ಮಾನವನು ಶಾರೀರಿಕ ಮತ್ತು ಬೌದ್ಧಿಕವಾಗಿ ವಿಕಾಸವಾದಂತೆಲ್ಲ ಸಾಕಷ್ಟು ಬದಲಾವಣೆಗಳನ್ನು ಕಂಡುಕೊಂಡನು. ಕಾಲಕ್ರಮಿಸಿದಂತೆ ಸಾದು ಪ್ರಾಣಿಗಳನ್ನು ಪಳಗಿಸಿ ಪಶುಸಂಗೋಪನೆ ಮತ್ತು ಉಳುಮೆ ಮಾಡುವುದನ್ನು ಕಂಡುಕೊಂಡು ಒಂದೆಡೆ ನೆಲೆಸಿ ಗ್ರಾಮೀಣ ಜೀವನವನ್ನು ಪ್ರಾರಂಭಿಸಿದನು. ಕಾಲ ಗತಿಸಿದಂತೆ ಈ ಅಂಶಗಳೇ ರಾಜ್ಯ ವ್ಯವಸ್ಥೆಯತ್ತ ಸಾಗಿಬರಲು ಕಾರಣವಾದವು. ಹಂತ ಹಂತವಾಗಿ ಪ್ರಗತಿಯತ್ತ ಸಾಗಿಬಂದ ಮಾನವನ ಇತಿಹಾಸವನ್ನು ಸಮಗ್ರ ಹಾಗೂ ಸೂಕ್ಷ್ಮವಾಗಿ ಗಮನಿಸುವ ಅಧ್ಯಯನಗಳು ಪ್ರಕಟವಾಗಿವೆ. ಈ ನಿಟ್ಟಿನಲ್ಲಿ ಅವಲೋಕಿಸುವುದಾದರೆ, ಕರ್ನಾಟಕದ ಮಧ್ಯಭಾಗದಲ್ಲಿರುವ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರವು ಪ್ರಾಗಿತಿಹಾಸ ಕಾಲದಿಂದಲೂ ಹಲವು ಮಹತ್ವದ ಅಂಶಗಳನ್ನು ತನ್ನ ಒಡಲೊಳಗೆ ಹುದುಗಿಸಿಕೊಂಡಿರುವುದನ್ನು ಗಮನಿಸಬಹುದು.

ನೈಸರ್ಗಿಕವಾದ ಗ್ರಾನೈಟ್ ಶಿಲೆಯ ಬೆಟ್ಟ-ಗುಡ್ಡಗಳು, ಗವಿಗಳು, ಕಲ್ಲಾಸರೆಗಳು, ತುಂಗಭದ್ರ ನದಿ ಮತ್ತು ಅದರ ಉಪನದಿಗಳಿಂದ ಕೂಡಿರುವ ಸೊಗಸಾದ ಪರಿಸರವನ್ನು ಒಳಗೊಂಡಿದೆ. ತುಂಬಾ ವೈವಿಧ್ಯತೆಯಿಂದ ಕೂಡಿರುವ ಇಲ್ಲಿನ ಭೌಗೋಳಿಕ ಪರಿಸರವು ಪ್ರಾಗಿತಿಹಾಸ ಕಾಲದಿಂದಲೂ ಮಾನವನು ವಾಸಿಸಲು ಅನುಕೂಲಕರ ವಾತವರಣದಿಂದ ವಿಸ್ತರಿಸಿಕೊಂಡಿತ್ತೆಂದು ಅಭಿಪ್ರಾಯಿಸಬಹುದು. ಪ್ರಸ್ತುತ ಕಲ್ಯಾಣ ಕರ್ನಾಟಕ(ಹೈದರಾಬಾದ್ ಕರ್ನಾಟಕ) ಪ್ರದೇಶದ ವ್ಯಾಪ್ತಿಗೆ ಒಳಪಟ್ಟಿರುವ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರವು ಪ್ರಾಗೈತಿಹಾಸಿಕ ಚಟುವಟಿಕೆಗಳ ಹಿನ್ನೆಲೆಯಲ್ಲಿ ತುಂಬಾ ಮಹತ್ವದ ಪರಿಸರವನ್ನು ಒಳಗೊಂಡಿರುವ ವಿಸ್ತಾರವಾದ ಪ್ರದೇಶ ಎಂಬುದರಲ್ಲಿ ಯಾವ ಅನುಮಾನಗಳಿಲ್ಲ. ಮಾನವನ ಸಾಂಸ್ಕೃತಿಕ ಚಟುವಟಿಕೆಗಳ ಮೊದಲ ಹೆಜ್ಜೆಗುರುತುಗಳನ್ನು ಪ್ರಸ್ತುತಪಡಿಸುವ ಹಾಗೂ ಉಳಿದೆಲ್ಲಾ ಬೆಳವಣಿಗೆಗಳಿಗೆ ಈ ಪರಿಸರವು ಹೇಗೆ ಪೂರಕವಾಗಿ ಪರಿಗಣಿತವಾಯಿತು ಎಂಬುದನ್ನು

ಕಂಡುಕೊಳ್ಳುವ ಅವಶ್ಯಕತೆ ಇದೆ. ಈ ಹಿನ್ನೆಲೆ ಇಟ್ಟುಕೊಂಡು ಪ್ರಾರಂಭದಲ್ಲಿ ಬಳ್ಳಾರಿ ಜಿಲ್ಲಾ ಪರಿಸರದ ಕುರಿತು ಹಾಗೂ ನಂತರ ಕೊಪ್ಪಳ ಜಿಲ್ಲೆಯ ವಿವರಗಳ ಕುರಿತು ಪ್ರಸ್ತಾವನೆಯಲ್ಲಿ ಹಲವು ಅವಶ್ಯಕ ವಿಷಯಗಳನ್ನು ಸ್ಥೂಲವಾಗಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ.

ಬಳ್ಳಾರಿ ಜಿಲ್ಲೆಯು ೧೪.೩೦'-೧೫.೫೦' ಉತ್ತರ ಅಕ್ಷಾಂಶ ಮತ್ತು ೭೫.೪೦'-೭೭.೧೧' ಪೂರ್ವ ರೇಖಾಂಶಗಳ ನಡುವೆ ಇರುವ ಭೌಗೋಳಿಕ ಪ್ರದೇಶ. ಬಳ್ಳಾರಿಯ ಪೂರ್ವಕ್ಕೆ ಆಂಧ್ರಪ್ರದೇಶದ ಅನಂತಪುರ ಮತ್ತು ಕರ್ನೂಲ್, ಪಶ್ಚಿಮಕ್ಕೆ ಕೊಪ್ಪಳ ನೈರುತ್ಯಕ್ಕೆ ದಾವಣಗೆರೆ, ದಕ್ಷಿಣಕ್ಕೆ ಚಿತ್ರದುರ್ಗ ಹಾಗೂ ಉತ್ತರಕ್ಕೆ ರಾಯಚೂರು ಜಿಲ್ಲೆಗಳು ಗಡಿಗಳಾಗಿವೆ. ಬಳ್ಳಾರಿ ಪ್ರದೇಶವು ದಕ್ಷಿಣದಿಂದ ಉತ್ತರಕ್ಕೆ ಇಳಿಜಾರಾಗಿದ್ದು ಬೆಟ್ಟಗಳಿಂದಾವರಿಸಿದೆ. ಕ್ರಿ.ಶ ೧೯೯೮ಕ್ಕಿಂತ ಮೊದಲು ಈ ಜಿಲ್ಲೆಯು ಎಂಟು ತಾಲ್ಲೂಕುಗಳನ್ನು ಒಳಗೊಂಡಿತ್ತು. ಅವುಗಳೆಂದರೆ ಬಳ್ಳಾರಿ, ಸಂಡೂರು, ಕೂಡ್ಲಿಗಿ, ಹಡಗಲಿ, ಹಗರಿಬೊಮ್ಮನಹಳ್ಳಿ, ಹೊಸಪೇಟೆ, ಸಿರುಗುಪ್ಪ ಮತ್ತು ಹರಪನಹಳ್ಳಿ. ೧೯೯೭ರಲ್ಲಿ ಜೆ.ಎಚ್ ಪಟೇಲ್ ಅವರು ಮುಖ್ಯಮಂತ್ರಿಯಾಗಿದ್ದ ಅವಧಿಯಲ್ಲಿ ಹೊಸದಾಗಿ ರಚಿಸಲಾದ ದಾವಣಗೆರೆ ಜಿಲ್ಲೆಗೆ ಹರಪನಹಳ್ಳಿ ತಾಲ್ಲೂಕನ್ನು ಸೇರಿಸಲಾಯಿತು. ಇದರಿಂದಾಗಿ ಪ್ರಸ್ತುತ ಏಳು ತಾಲ್ಲೂಕುಗಳು ಮಾತ್ರ ಜಿಲ್ಲೆಯ ವ್ಯಾಪ್ತಿಗೆ ಸೇರಿವೆ. ಇತ್ತೀಚೆಗೆ ಹರಪನಹಳ್ಳಿ ತಾಲ್ಲೂಕು ಪ್ರದೇಶವನ್ನು ಮತ್ತೆ ಬಳ್ಳಾರಿ ಜಿಲ್ಲೆಯ ಭೌಗೋಳಿಕ ವ್ಯಾಪ್ತಿಗೆ ಸೇರಿಸಲಾಗಿದೆ.

ಕೊಪ್ಪಳ ಜಿಲ್ಲೆಯು ಬ್ರಿಟಿಷರ ಕಾಲದಲ್ಲಿ ಸ್ವತಂತ್ರ ಜಿಲ್ಲೆಯಾಗಿತ್ತು. ನಂತರ ಕೊಪ್ಪಳ ಭಾಗವನ್ನು ರಾಯಚೂರು ಜಿಲ್ಲೆಗೆ ಸೇರಿಸಲಾಯಿತು. ೧-೪-೧೯೯೮ರಲ್ಲಿ ರಾಯಚೂರು ಜಿಲ್ಲೆಯನ್ನು ವಿಭಾಗಿಸಿ ಕೊಪ್ಪಳ ಪರಿಸರವನ್ನು ಪ್ರತ್ಯೇಕ ಜಿಲ್ಲೆಯಾಗಿ ರೂಪಿಸಲಾಯಿತು. ಕರ್ನಾಟಕದ ಮೈದಾನ ಪ್ರದೇಶ ವ್ಯಾಪ್ತಿಗೆ ಒಳಪಟ್ಟಿದ್ದು, ಇದರ ನೆರೆಹೊರೆಯ ಜಿಲ್ಲೆಗಳಾಗಿ ಬಾಗಲಕೋಟೆ, ರಾಯಚೂರು, ಗದಗ, ಬಳ್ಳಾರಿ ಜಿಲ್ಲೆಗಳು ಮೇರೆಗಳಾಗಿವೆ. ಕೊಪ್ಪಳ ಜಿಲ್ಲೆಯು ಗಂಗಾವತಿ, ಕೊಪ್ಪಳ, ಕುಷ್ಟಗಿ, ಯಲಬುರ್ಗಾ ಎಂಬ ನಾಲ್ಕು ತಾಲ್ಲೂಕುಗಳನ್ನು ಒಳಗೊಂಡಿರುವುದು. ಈ ಎಲ್ಲಾ ತಾಲ್ಲೂಕು ಪ್ರದೇಶಗಳಲ್ಲಿ ಪ್ರಾಗಿತಿಹಾಸ ಕಾಲದ ಕೆಲವು ಕುರುಹುಗಳು ಕಂಡುಬಂದಿವೆ. ಈ ಕುರಿತು ಬೆರಳೆಣಿಕೆ ಸಂಖ್ಯೆಯ ಸಂಶೋಧಕರು ಈ ಪ್ರದೇಶಗಳಲ್ಲಿ ಸ್ಥೂಲ ಹಾಗೂ ವಿಸ್ತೃತ ಅಧ್ಯಯನ ಕೈಗೊಳ್ಳುವ ಪ್ರಯತ್ನ ಮಾಡಿದ್ದಾರೆ.

## ೧.೨ ಅಧ್ಯಯನದ ಉದ್ದೇಶ

ಇಡೀ ಜೀವಸಂಕುಲದ ವಿಕಾಸ ಕ್ರಮದಲ್ಲಿ ಮಾನವ ವಿಶೇಷ ಸ್ಥಾನವನ್ನು ಹೊಂದಿದ್ದಾನೆ. 'ದೀರ್ಘಾವಧಿಯ ಭೂ ಇತಿಹಾಸಕ್ಕೆ ಹೋಲಿಸಿದರೆ ಮಾನವನ ಪೂರ್ವಜನ ಹುಟ್ಟು ಅರವತ್ತೈದು ಮಿಲಿಯನ್ ವರ್ಷಗಳಷ್ಟು ಪ್ರಾಚೀನವಾಗಿರುವ ದಾಖಲೆಗಳಿಗೆ ಸೀಮಿತವಾಗುತ್ತವೆ. ಅದರಲ್ಲಿ ಆದಿಮಾನವನ ಉಗಮ ಸರಿಸುಮಾರು ಹದಿನಾಲ್ಕು ಮಿಲಿಯನ್ ವರ್ಷಗಳಾಗಿದ್ದರೆ, ಆಧುನಿಕ ಮಾನವನ ಉಗಮ ಕೇವಲ ಎರಡು ಮಿಲಿಯನ್ ವರ್ಷಗಳಷ್ಟು ಪ್ರಾಚೀನ ಎಂಬುದಕ್ಕೆ ಮಿತಿಗೊಳ್ಳುತ್ತವೆ.

ಇಂತಹ ಹೇಳಿಕೆಗಳಿಗೆ ಪೂರಕವಾದ ಸಾಕ್ಷ್ಯಾಧಾರಗಳು ಕೂಡ ಕಂಡುಬಂದಿವೆ. ಮಾನವನ ಇತಿಹಾಸವನ್ನು ಸಮಗ್ರವಾಗಿ ಅಧ್ಯಯನ ಮಾಡುವುದು ಕಷ್ಟಕರ. ಆದರೆ ಅವನ ಜೀವನ ಕ್ರಮವನ್ನು ಬಿಡಿ ಬಿಡಿಯಾಗಿ ತೋರಿಸುವ ನಿಟ್ಟಿನಲ್ಲಿ ಅದನ್ನು ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಣೆ ಮಾಡಲಾಗುತ್ತದೆ. ಅದರಂತೆಯೇ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರವು ಪ್ರಾಗಿತಿಹಾಸ ಕಾಲದಿಂದಲೂ ಸಮೃದ್ಧವಾದ ಭೌಗೋಳಿಕ ಪರಿಸರವನ್ನು ಹೊಂದಿದ್ದು, ಆದಿಮಾನವ ಈ ಪ್ರದೇಶದಲ್ಲಿದ್ದ ವಿವಿಧ ನೆಲೆಗಳಲ್ಲಿ ನೆಲೆಸಿದ್ದಿರುವುದಕ್ಕೆ ಪೂರಕವಾಗಿ ದೊರೆತಿರುವ ಕುರುಹುಗಳಿಂದ ತಿಳಿಯಬಹುದಾಗಿದೆ. ಅವು ಅಂದಿನ ಮಾನವನ ಜೀವನ ಸಂಸ್ಕೃತಿಯನ್ನು ಅರಿಯುವ ಪ್ರಮುಖ ಆಕರಗಳಾಗಿವೆ. ಈ ಆಕರಗಳ ಹಿನ್ನೆಲೆಯಲ್ಲಿ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಯ ಪ್ರಾಗ್ಯೈತಿಹಾಸಿಕ ನೆಲೆಗಳು ಮತ್ತು ಅವುಗಳ ಮಹತ್ವವನ್ನು ಪುರಾತತ್ವ ಅಧ್ಯಯನಗಳ ದೃಷ್ಟಿಕೋನದಲ್ಲಿ ಆಗು ಮಾಡುವುದು ಈ ಸಂಶೋಧನೆಯ ಮುಖ್ಯ ಉದ್ದೇಶವಾಗಿದೆ.

ಬಳ್ಳಾರಿ ಪ್ರದೇಶದಲ್ಲಿ ಆದಿಮಾನವನು ನೆಲೆಸಿದಂತಹ ಹಲವು ನೆಲೆಗಳು ಕಂಡುಬಂದಿವೆ. ಅವುಗಳಲ್ಲಿ ಸಂಗನಕಲ್ಲು, ಕಪ್ಪಗಲ್ಲು, ನಿಟ್ಟೂರು, ಸಿರುಗುಪ್ಪ, ಕುರುಗೋಡು, ಭೈರನಾಯಕನಹಳ್ಳಿ, ಕುಡುತಿನಿ, ರಾಜಾಪುರ, ಹಂಪಸಾಗರ, ಅಲ್ಲೀಪುರ, ಕೊಟ್ನಕಲ್ಲು, ನವಲಿ, ಮಾಗಳ, ಮೈಲಾರ, ರಾಜವಾಳ, ಹುಲಿಗುಡ್ಡ, ಬೆಳಗಲ್ಲು, ಹಾಗೂ ಹಂಪಿ ಪರಿಸರದ ಮೊದಲಾದ ನೆಲೆಗಳು ಪ್ರಾಗ್ಯೈತಿಹಾಸಿಕ ಮಹತ್ವವನ್ನು ಪಡೆದಿವೆ ಎಂಬುದನ್ನು ದಾಖಲಿಸಬಹುದು. ಅದೇ ರೀತಿ ಕೊಪ್ಪಳ ಜಿಲ್ಲೆಯ ತಾವರೆಗೇರ, ವೆಂಕಟಾಪುರ, ಎಮ್ಮಿಗುಡ್ಡ, ಕೊಪ್ಪಳ, ಬಿಳೇಬಾವಿ, ಬೆಣಕಲ್ಲುಗುಡ್ಡ, ಶಿವಪುರ, ಅರಳಹಳ್ಳಿ, ಗಡ್ಡಿ, ಗುಡೂರು, ಚಿಕ್ಕಬೆಣಕಲ್, ಚಿಕ್ಕರಾಮಪುರ, ಜಂಗಮರಕಲ್ಲುಗುಡಿ, ತಿಮ್ಮಾಲಾಪುರ, ಬೆನಕಲ್, ಹಿರೇಬೆಣಕಲ್, ಜದವಾಲ್ ಎಂಬ ಹೆಸರಿನ ಗ್ರಾಮ ಪರಿಸರಗಳು ಪ್ರಾಗಿತಿಹಾಸಕಾಲದ ಪ್ರಮುಖ ನೆಲೆಗಳಾಗಿವೆ. ಈ ನೆಲೆಗಳಲ್ಲಿ ಹಳೆಯ ಶಿಲಾಯುಗದಿಂದ ಶಿಲಾ-ತಾಮ್ರಯುಗ ಹಾಗೂ ಆದಿ ಇತಿಹಾಸಕಾಲದ ಕುರುಹುಗಳು ಕಂಡುಬರುವುದರಿಂದ ಪ್ರಾಗಿತಿಹಾಸದ ಅಧ್ಯಯನಕ್ಕೆ ಹೆಚ್ಚಿನ ಪುಷ್ಠಿ ದೊರೆತಂತಾಗಿದೆ.

ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದಲ್ಲಿ ಬೆಳಕಿಗೆ ಬಂದಿರುವ ಬಹುತೇಕ ಪುರಾತತ್ವ ನೆಲೆಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಕುರಹುಗಳು ಅಧಿಕ ಸಂಖ್ಯೆಯಲ್ಲಿದ್ದು ಇದುವರೆಗೂ ಅವುಗಳ ಕುರಿತು ಸಮಗ್ರವಾದ ಅಧ್ಯಯನಗಳು ಆಗದೇ ಇರುವುದರಿಂದ ಆ ಕೊರತೆಯನ್ನು ನಿವಾರಿಸುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಲಾಗಿದೆ. ಈ ಎರಡೂ ಜಿಲ್ಲಾ ಪರಿಸರದಲ್ಲಿ ಕಂಡುಬರುವ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳು ಕೆಲವು ಕಡೆ ಸಾಕಷ್ಟು ದುಃಸ್ಥಿತಿಯಲ್ಲಿದ್ದರೆ, ಇನ್ನೂ ಕೆಲವು ಕಡೆ ಕಾಲನ ತುಳಿತಕ್ಕೆ ಸಿಕ್ಕು ಅವನತಿಗೆ ಈಡಾಗಿವೆ. ಕೆಲವೆಡೆ ಮೂಲರೂಪದಲ್ಲಿ ಇಂದಿಗೂ ಉಳಿದಿವೆ. ಆದುದ್ದರಿಂದ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿರುವ ಬೃಹತ್ ಶಿಲಾಯುಗದ ನೆಲೆಗಳ ಸ್ವರೂಪ ಮತ್ತು ಅವುಗಳ ಮಹತ್ವವನ್ನು ಪುರಾತತ್ವ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವುದು ಈ ಸಂಶೋಧನೆಯ ಮತ್ತೊಂದು ಉದ್ದೇಶವಾಗಿದೆ. ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳ

ವೈಶಿಷ್ಟ್ಯತೆ ಹಾಗೂ ಇತರೆಡೆ ದೊರಕಿರುವ ಈ ಸಂಸ್ಕೃತಿಯ ನೆಲೆಗಳಿಗಿರುವ ಸಂಬಂಧ, ಹೋಲಿಕೆ, ವ್ಯತ್ಯಾಸ, ಪ್ರಭಾವವೇನು? ಎಂಬುದನ್ನು ಪರಿಶೀಲಿಸಿ, ವ್ಯಾಪಕ ಸಮೀಕ್ಷೆ ನಡೆಸಲಾಗಿದೆ. ಅಲ್ಲದೆ ಈ ಸಂಸ್ಕೃತಿಯ ಪಸರುವಿಕೆಯಲ್ಲಾದ ಬದಲಾವಣೆ ಹಾಗೂ ಅದರ ವಿಸ್ತರಣೆ ಕುರಿತು ತಾರ್ಕಿಕವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳ ಪರಿಸರದಲ್ಲಿರುವ ಬೃಹತ್ ಶಿಲಾಯುಗದ ನೆಲೆಗಳನ್ನು ಪ್ರಾಥಮಿಕ ಹಂತದಲ್ಲಿ ಒಂದೆಡೆ ದಾಖಲಿಸುವುದು ಕೂಡ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ. ಹಾಗೂ ಅಧ್ಯಯನ ಪ್ರದೇಶದ ವಿವಿಧ ನೆಲೆಗಳಲ್ಲಿ ಲಭ್ಯವಾಗಿರುವ ವಸ್ತು-ಅವಶೇಷಗಳನ್ನು ಗುರುತಿಸಿ ಅವುಗಳ ಸಹಾಯದಿಂದ ಅಂದಿನ ಜನರ ಜೀವನ ಸಂಸ್ಕೃತಿ ಕುರಿತು ವಿಶ್ಲೇಷಿಸುವ ಪ್ರಯತ್ನವನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಮಾಡಲಾಗಿದೆ.

ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಯ ಭೌಗೋಳಿಕ ಸನ್ನಿವೇಶವು ಶಿಲಾಯುಗದ ಜನರು ವಾಸಿಸಲು ಪೂರಕವಾಗಿತ್ತೆ? ಅಥವಾ ಇಲ್ಲವೆ? ಎಂಬ ಅಂಶಗಳನ್ನು ಸಂಶೋಧನೆಯ ಮೂಲಕ ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಈ ಎರಡು ಜಿಲ್ಲಾ ಪರಿಸರದಲ್ಲಿರುವ ಬೃಹತ್ ಶಿಲಾಯುಗದ ನೆಲೆಗಳನ್ನು ಕುರಿತು ಪ್ರಕಟಿತ ಮತ್ತು ಅಪ್ರಕಟಿತ ಮಾಹಿತಿಗಳನ್ನು ಆಧರಿಸಿ ಅಂದಿನ ಸಾಮಾಜಿಕ ಜೀವನವನ್ನು ಕಟ್ಟಿಕೊಡಲಾಗಿದೆ. ಅಲ್ಲದೇ ವ್ಯಾಪಕ ಕ್ಷೇತ್ರಕಾರ್ಯ ಕೈಗೊಂಡು ಇದುವರೆಗೂ ಬೆಳಕಿಗೆ ಬರದೇ ಇರುವ ಹೊಸನೆಲೆಗಳನ್ನು ಪತ್ತೆಹಚ್ಚಿ ಅವುಗಳನ್ನು ದಾಖಲಿಸುವುದು ಹಾಗೂ ಅಧ್ಯಯನಕ್ಕೆ ಪೂರಕವಾಗಿ ಒಳಗೊಳಿಸುವ ಪ್ರಯತ್ನವನ್ನು ಸಹ ತಕ್ಕಮಟ್ಟಿಗೆ ದಾಖಲಿಸುವ ಕಾರ್ಯ ಮಾಡಲಾಗಿದೆ.

### ೧.೩ ಅಧ್ಯಯನದ ವ್ಯಾಪ್ತಿ

ಸಾಮಾನ್ಯವಾಗಿ ಯಾವುದೇ ಸಂಶೋಧನೆಯು ಯಶಸ್ವಿಯಾಗಬೇಕಾದರೆ ಅದಕ್ಕೆ ಒಂದು ನಿರ್ದಿಷ್ಟವಾದ ಚೌಕಟ್ಟು ಅಥವಾ ವ್ಯಾಪ್ತಿ (ಎಲ್ಲೆ) ಇರುವುದು ಅತೀ ಪ್ರಮುಖವಾದುದು. ಪ್ರಸ್ತುತ ಅಧ್ಯಯನದ ಶೀರ್ಷಿಕೆಯೇ ಸೂಚಿಸುವಂತೆ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರಕ್ಕೆ ಮಾತ್ರ ಪ್ರಸ್ತುತ ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ. ಆದರೂ ಸಹ ಅಧ್ಯಯನದ ಅವಶ್ಯಕತೆಗನುಗುಣವಾಗಿ ಈ ಪ್ರದೇಶದ ಸುತ್ತಮುತ್ತಲಿನ ಪ್ರಾಗೈತಿಹಾಸಿಕ ಕುರುಹುಗಳನ್ನು ಪ್ರಾಸಂಗಿಕವಾಗಿ ಗಮನಿಸಿ ಅವಶ್ಯಕವಿದ್ದರೆ ಒಳಗೊಳಿಸುವ ಕಾರ್ಯ ಮಾಡಲಾಗಿದೆ.

ಕಲ್ಯಾಣ ಕರ್ನಾಟಕ(ಹೈದರಾಬಾದ್ ಕರ್ನಾಟಕ) ಪ್ರದೇಶಕ್ಕೆ ಒಳಪಟ್ಟಿರುವ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳು ಒಟ್ಟು ಹನ್ನೊಂದು ತಾಲ್ಲೂಕುಗಳನ್ನು ಒಳಗೊಂಡಿವೆ. ಈ ಎಲ್ಲಾ ತಾಲ್ಲೂಕುಗಳಲ್ಲಿ ವಿವಿಧ ವಿಶ್ವವಿದ್ಯಾಲಯಗಳು, ಸಂಸ್ಥೆಗಳು ಹಾಗೂ ವಿದೇಶಿ ಸಂಸ್ಥೆಗಳಲ್ಲಿರುವ ಪುರಾತತ್ವ ಸಂಶೋಧಕರು ಹಾಗೂ ಆಸಕ್ತ ವಿದ್ವಾಂಸರು ಕೆಲವು ನೆಲೆಗಳನ್ನು ಪತ್ತೆಹಚ್ಚಿದ್ದಾರೆ. ಅವು ಪ್ರಾಗಿತಿಹಾಸ ಕಾಲದಿಂದ ಹಿಡಿದು ಆದಿ ಐತಿಹಾಸಿಕ ಕಾಲದವರೆಗಿನ ಮಹತ್ವವನ್ನು ತಿಳಿಸುತ್ತವೆ. ಅಂತಹ ನೆಲೆಗಳಲ್ಲಿ ಸಂಗನಕಲ್ಲು,

ಕಪ್ಪಗಲ್ಲು, ನಿಟ್ಟೂರು, ಬೆಳಗಲ್ಲು, ರಾಜಾಪುರ, ರಾಂಪುರ, ಕುರುಗೋಡು, ಕುಡುತಿನಿ ಮೊದಲಾದವು. ಅದೇ ರೀತಿ ಕೊಪ್ಪಳ ಜಿಲ್ಲೆಯ ಹಿರೇಬೆಣಕಲ್ಲು, ಚಿಕ್ಕಬೆಣಕಲ್ಲು, ಬಿಳೇಬಾವಿ, ಇನ್ನಿತರ ನೆಲೆಗಳಲ್ಲಿ ಪ್ರಾಗೈತಿಹಾಸಿಕ ಕುರುಹುಗಳು ಕಂಡುಬಂದಿವೆ. ಅವುಗಳಲ್ಲಿ ವಿವಿಧ ಕಾಲದ ಮಡಿಕೆ ಭಾಗಗಳು, ಕಲ್ಲಿನ ಉಪಕರಣಗಳು, ಶಿಲಾಸಮಾಧಿಗಳು, ಗೀರುಚಿತ್ರಗಳು, ವರ್ಣಚಿತ್ರಗಳು, ಗವಿ ಕಲ್ಲಾಸರೆಗಳು, ಕಬ್ಬಿಣದ ವಸ್ತು–ಅವಶೇಷಗಳು ದೊರತಿವೆ. ಹೀಗೆ ಬಳ್ಳಾರಿ ಮತ್ತು ಕೊಪ್ಪಳ ಪ್ರದೇಶಗಳಲ್ಲಿ ಕಂಡುಬರುವ ಆಕರಗಳು ಮತ್ತು ಸಂಗ್ರಹಿಸಿದ ಮಾಹಿತಿಯಿಂದ ಎರಡೂ ಜಿಲ್ಲಾ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು ಮತ್ತು ಅವುಗಳ ಮಹತ್ವವನ್ನು ಪುರಾತತ್ವ ಅಧ್ಯಯನಗಳ ಹಿನ್ನೆಲೆಯಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

## ೧.೪ ಅಧ್ಯಯನ ವಿಧಾನ

'ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು' ಎಂಬ ಅಧ್ಯಯನ ವಿಷಯವು ಕ್ಷೇತ್ರಕಾರ್ಯ ಆಧಾರಿತವಾಗಿದೆ. ಅಧ್ಯಯನದ ವ್ಯಾಪ್ತಿಗೆ ಒಳಪಡುವ ಪ್ರತಿಯೊಂದು ತಾಲ್ಲೂಕು ಪ್ರದೇಶಗಳಿಗೆ ನೇರವಾಗಿ ಭೇಟಿ ನೀಡಿ ಅಲ್ಲಿ ದೊರಕುವ ಕುರುಹುಗಳನ್ನು ಪರಿಶೀಲಿಸಿ, ದಾಖಲಿಸಿಕೊಳ್ಳುವುದರ ಜೊತೆಗೆ ಅವುಗಳ ಛಾಯಾಚಿತ್ರಗಳನ್ನು ಸಂಗ್ರಹಿಸಿ ಕಾಲಾನುಕ್ರಮದಲ್ಲಿ ವಿಂಗಡಿಸಿ, ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಪ್ರಾಥಮಿಕ ಆಕರಗಳ ಜೊತೆಗೆ ಆನುಷಂಗಿಕ ಆಕರಗಳನ್ನು ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ. ಈ ಎರಡೂ ಜಿಲ್ಲಾ ಪರಿಸರದ ವ್ಯಾಪ್ತಿಯಲ್ಲಿ ಬರುವ ಸ್ಥಳಗಳಲ್ಲಿನ ಮೌಖಿಕ ಕಥನಗಳನ್ನು, ಐತಿಹ್ಯಗಳನ್ನು ಹೊಂದಿರುವಂತಹ ಅಥವಾ ತಿಳಿದಿರುವಂತಹ ವಕ್ತೃಗಳನ್ನು ಭೇಟಿಮಾಡಿ ಚರ್ಚಿಸಿ, ವಿಷಯ ಸಂಗ್ರಹಿಸಲಾಗಿದೆ. ಅಧ್ಯಯನ ಪ್ರದೇಶದ ನಕಾಶೆಗಳ ಅಧ್ಯಯನ ಭೂ ಸ್ವರೂಪ, ಬೆಟ್ಟ–ಗುಡ್ಡ, ಹವಾಮಾನ, ಮಳೆ, ಹಳ್ಳ, ಕೆರೆ, ನದಿ, ಅರಣ್ಯ ಪ್ರದೇಶ ಕುರಿತು ಅವಲೋಕಿಸಲಾಗಿದೆ. ಪೂರ್ವಭಾವಿಯಾಗಿ ನಡೆದಿರುವ ಅಥವಾ ಪೂರ್ವ ಪ್ರಯತ್ನಗಳ ರೂಪದಲ್ಲಿ ಪ್ರಕಟಗೊಂಡ ಗ್ರಂಥಗಳ ಅವಲೋಕನ ಮತ್ತು ಪರಾಮರ್ಶನ ಮಾಡಿಕೊಳ್ಳಲಾಗಿದೆ. ಸಂಶೋಧನಾ ಲೇಖನಗಳು, ಎಂ.ಫಿಲ್, ಪಿಎಚ್.ಡಿ ಮಹಾಪ್ರಬಂಧಗಳು, ಉತ್ಖನನ ವರದಿಗಳು, ಪುರಾತತ್ವ ವಿಶ್ವಕೋಶ, ಕನ್ನಡ ವಿಷಯ ವಿಶ್ವಕೋಶಗಳು, ಸಂಶೋಧನಾ ವರದಿಗಳು, ನಿಯತಕಾಲಿಕೆಗಳು, ಗೆಜೆಟಿಯರ್‌ಗಳು, ಕರ್ನಾಟಕ ದೇವಾಲಯ ಕೋಶಗಳು ಮತ್ತು ಶಾಸನ ಸಂಪುಟಗಳನ್ನು ಆಧರಿಸಿ ಅವಶ್ಯಕ ಮಾಹಿತಿ ಸಂಗ್ರಹಿಸಿ ಪರಿಶೀಲಿಸಲಾಗಿದೆ. ನಂತರ ವಿಷಯಾನುಸಾರ ವರ್ಗೀಕರಿಸಿ ವಿಶ್ಲೇಷಣೆ ಮಾಡಲಾಗಿದೆ. ಹೀಗೆ ಅಧ್ಯಯನಕ್ಕೆ ಪೂರಕವಾದ ಆಕರಗಳು ಮತ್ತು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಗಳಿಂದ 'ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು' ಎಂಬ ವಿಷಯ ಕುರಿತು ಸಮಗ್ರರೂಪದ ವಿಶ್ಲೇಷಣಾತ್ಮಕ ಅಧ್ಯಯನವನ್ನು ರೂಪುಗೊಳಿಸುವ ಪ್ರಯತ್ನವನ್ನು ಪ್ರಾಮಾಣಿಕವಾಗಿ ಮಾಡಲಾಗಿದೆ.

## ೧.೫ ಪೂರ್ವಭಾವಿ ಅಧ್ಯಯನಗಳ ಸಮೀಕ್ಷೆ

ಬಳ್ಳಾರಿ-ಕೊಪ್ಪಳ ಜಿಲ್ಲಾ ಪರಿಸರದ ಪ್ರಾಗಿತಿಹಾಸವನ್ನು ಕುರಿತಂತೆ ಈವರೆಗೆ ಹಲವು ಅಧ್ಯಯನಗಳು ನಡೆದಿವೆ. ಆದರೆ ಅವು ಈ ಪರಿಸರದ ಕುರಿತಾಗಿ ಕೆಲ ವಿಚಾರಗಳ ಕುರಿತು ಬಿಡಿ ಬಿಡಿಯಾಗಿ ವಿವರಗಳನ್ನು ದಾಖಲಿಸುವ ಮಾದರಿಯವುಗಳಾಗಿವೆ. ಆದರೆ ಅಂಥ ವಿವರಗಳು ಒಟ್ಟಾರೆ ಇಡೀಯಾಗಿ ಹಾಗೂ ಸಮಗ್ರತೆಯನ್ನು ಸ್ಪಷ್ಟಪಡಿಸುವಂತ ಅಧ್ಯಯನಗಳಾಗಿಲ್ಲವೆಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಒಂದು ನಿರ್ದಿಷ್ಟ ವಿಷಯ ಕುರಿತು ಇಡೀಯಾಗಿ ಅಧ್ಯಯನ ನಡೆಸುವ ಮುಖ್ಯ ಗುರಿ ಇಟ್ಟುಕೊಳ್ಳಲಾಗಿದೆ. ಇಂಥ ಅಧ್ಯಯನವನ್ನು ಪೂರೈಸುವ ಸಂದರ್ಭದಲ್ಲಿ ಪೂರ್ವ ಅಥವಾ ಆಗಿ ಹೋಗಿರುವ ಅಧ್ಯಯನಗಳ ಮಹತ್ವದ ವಿಚಾರಗಳು ತಿಳಿಯುವುದು ಅವಶ್ಯಕ. ಈ ಹಿನ್ನೆಲೆಯಲ್ಲಿ ಪೂರ್ವಭಾವಿ ಸಮೀಕ್ಷೆ ರೂಪದಲ್ಲಿ ಅಂಥ ಅಧ್ಯಯನಗಳ ರೂಪದ ಮಾದರಿಯನ್ನು ದಾಖಲಿಸುವ ಪ್ರಯತ್ನ ಮಾಡಲಾಗಿದೆ.

ಬಳ್ಳಾರಿ ಪ್ರದೇಶದಲ್ಲಿ ಪುರಾತತ್ವ ನೆಲೆಗಳನ್ನು ಅನ್ವೇಷಿಸಿದವರಲ್ಲಿ ಕರ್ನಲ್ ಮೆಕೆಂಝಿಯವರು ಅಗ್ರಗಣ್ಯರು. ಅವರು ೧೮೦೨-೧೮೦೫ರ ಅವಧಿಯಲ್ಲಿ ಬಳ್ಳಾರಿ ಜಿಲ್ಲೆಯ 'ಕುಡುತಿನಿ ಬಳಿ ನವಶಿಲಾಯುಗ ಕಾಲದ ಬೂದಿ ದಿನ್ನೆ' ಸೇರಿದಂತೆ ಇನ್ನೂ ಐದು ಸ್ಥಳಗಳನ್ನು ಪತ್ತೆಹಚ್ಚಿದರು. ನಂತರ ೧೮೩೦ರ ದಶಕದಲ್ಲಿ ಭೂವಿಜ್ಞಾನಿ ಮತ್ತು ಪರಿಸರವಾದಿ ಕ್ಯಾಪ್ಟನ್ ಥಾಮಸ್ ನ್ಯೂಬೋಲ್ಡ್ ಅವರು ಕುಡುತಿನಿಯ ಬೂದಿ ದಿನ್ನೆ ನೆಲೆಗೆ ಭೇಟಿ ನೀಡಿದ್ದರಲ್ಲದೇ ಹಲಕುಂದಿ, ಕಪ್ಪಗಲ್ಲು, ನಿಂಬಾಪುರ ಬೂದಿ ದಿನ್ನೆಗಳನ್ನು ಹೊಸದಾಗಿ ಶೋಧಿಸಿದರು. ಇಲ್ಲಿನ ಬೂದಿ ಮಾದರಿಗಳ ವೈಜ್ಞಾನಿಕ ವಿಶ್ಲೇಷಣೆಯ ಫಲಿತಾಂಶಗಳ ಆಧಾರದ ಮೇಲೆ ಬೂದಿ ದಿನ್ನೆಗಳು ಮಾನವನ ಚಟುವಟಿಕೆಗಳಿಂದ ಉಂಟಾದವು. ಹಾಗಾಗಿ ಅವು ಬುಗ್ಗೆಗಳು, ಜ್ವಾಲಾಮುಖಿ ಇತ್ಯಾದಿಗಳಿಂದ ಉಂಟಾಗುವ ನೈಸರ್ಗಿಕ ನಿಕ್ಷೇಪಗಳೊಂದಿಗೆ ನಿರ್ಮಾಣವಾದವುಗಳಲ್ಲ ಎಂದು ತಿರ್ಮಾನಿಸಿದರು. ಹತ್ತೊಂಭತ್ತನೆಯ ಶತಮಾನದ ಮಧ್ಯಭಾಗದಲ್ಲಿ ಬಳ್ಳಾರಿ ಜಿಲ್ಲೆಯ ಕಲೆಕ್ಟರ್ ಆಗಿ ನೇಮಕಗೊಂಡಿದ್ದ ಸಿ.ಜೆ. ಪಿಳ್ಳೆ ಅವರು ಮೆಡೋಸ್ ಟೇಲರ್ ಅವರ ಸಲಹೆಯಂತೆ ಬೃಹತ್ ಶಿಲಾಯುಗದ ಒಂಭತ್ತು ನೆಲೆಗಳನ್ನು ಶೋಧಿಸಿದರು. ಅವುಗಳಲ್ಲಿ 'ಹಾಳಸಾಗರಮ್(ಹಾಳಸಾಗರ, ಕೂಡ್ಲಿಗಿ ತಾ.), ರಾಜವಾಳಮ್(ರಾಜವಾಳ, ಹೂವಿನಹಡಗಲಿ ತಾ.) ಹಾಗೂ ಗಡಿ ರಾಜ್ಯವಾದ ಆಂಧ್ರಪ್ರದೇಶದ ರಾಯದುರ್ಗ ತಾಲ್ಲೂಕಿನ ಮಲ್ಲಾಪುರ, ಅಡ್ಡಗೊಪ್ಪ, ಗೊಲ್ಲಹಳ್ಳಿ, ಕೊಂಡಾಪುರ, ಪೂಲೈರ್, ಮದ್ದೇಗಲ್ಲುರ್, ದಾವಧೂಳಕೊಂಡ ನೆಲೆಗಳು ಈ ಪ್ರದೇಶದಲ್ಲಿ ಮೊದಲಿಗೆ ಬೆಳಕಿಗೆ ಬಂದ ಬೃಹತ್ ಶಿಲಾಯುಗದ ನೆಲೆಗಳಾಗಿವೆ ಎಂಬುದನ್ನು ದಾಖಲಿಸಲಾಗಿದೆ.

೧೮೭೦ರ ದಶಕದಲ್ಲಿ ಜಿಲ್ಲಾ ಇಂಜಿನಿಯರ್ ಆಗಿದ್ದ ವಿಲಿಯಂ ಫ್ರೇಜರ್ ಅವರು ಕಪ್ಪಗಲ್ಲು ಮತ್ತು ಬಳ್ಳಾರಿ ಪಟ್ಟಣದ ಬೆಟ್ಟಗಳ ಮೇಲೆ ನವಶಿಲಾಯುಗದ ನಿವೇಶನಗಳನ್ನೂ ಹಾಗೂ ೧೮೯೦ರಲ್ಲಿ ಕಪ್ಪಗಲ್ಲು ಬೆಟ್ಟದ ಮೇಲೆ ಬಂಡೆ ಚಿತ್ರಗಳನ್ನು ಪತ್ತೆಹಚ್ಚಿದರು ಎಂಬ ವಿವರಗಳು ದಾಖಲಾಗಿವೆ. ನಂತರ ೧೮೮೦ರ ದಶಕದಲ್ಲಿ ಬಳ್ಳಾರಿ ಜಿಲ್ಲೆಯ ಭೌಗೋಳಿಕ ಸಮೀಕ್ಷೆಯನ್ನು ಶಿಸ್ತುಬದ್ಧವಾಗಿ

ಹಾಗೂ ಅಚ್ಚುಕಟ್ಟಾಗಿ ರಾಬರ್ಟ್ ಬ್ರೂಸ್‌ಫೂಟ್ ಅವರು ಅನ್ವೇಷಣೆ ಮಾಡಿದರು ಎಂಬ ವಿವರಗಳು ದಾಖಲಾಗಿರುವುದುಂಟು. ಇವರ ಸಂಶೋಧನೆಗಳು ಪುರಾತತ್ವ ಶಾಸ್ತ್ರದಲ್ಲಿ ಅತ್ಯಂತ ಮಹತ್ವದವುಗಳಾಗಿವೆ. ಮುಂದಿನ ದಿನಗಳಲ್ಲಿ ಕೈಗೊಂಡ ಪ್ರಮುಖ ಅಧ್ಯಯನಗಳೆಂದರೆ ೧೯೪೮ರಲ್ಲಿ ಬಿ. ಸುಬ್ಬರಾವ್ ಅವರು ನಡೆಸಿದ 'ಪ್ರಿ ಹಿಸ್ಟಾರಿಕ್ ಆ್ಯಂಡ್ ಅರ್ಲಿ ಹಿಸ್ಟಾರಿಕ್ ಬಳ್ಳಾರಿ' ಎಂಬ ವಿಷಯದ ಮೇಲೆ ಸಂಶೋಧನೆ ನಡೆಸಿ ಪ್ರಕಟಿಸಿದ ಸಂಶೋಧನ ಗ್ರಂಥದಲ್ಲಿ ಬಳ್ಳಾರಿ ಪ್ರದೇಶದ ಪುರಾತತ್ವ ಅಧ್ಯಯನದ ವಿವರಗಳನ್ನು ವಿಸ್ತೃತವಾಗಿ ದಾಖಲಿಸುವ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದರೆಂದು ಅಭಿಪ್ರಾಯಿಸಬಹುದು.

೧೯೪೭ರಲ್ಲಿ ಬಿ.ಸುಬ್ಬರಾವ್ ಅವರು ಸಂಗನಕಲ್ಲು ನೆಲೆಯಲ್ಲಿ ನಡೆಸಿದ ಉತ್ಖನನದಲ್ಲಿ ಕಂಡುಕೊಂಡ ಫಲಿತಾಂಶಗಳೆಂದರೆ, ನೆರೆಯ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ ನೆಲೆಗಿಂತ ಭಿನ್ನವಾದ ಹಾಗೂ ನವಶಿಲಾಯುಗಕ್ಕೂ ಪೂರ್ವದ ಸೂಕ್ಷ್ಮ ಶಿಲಾಯುಗದ ಡಾಲರೈಟ್ ಮತ್ತು ಸ್ಫಟಿಕ ಪದರುಗಳ ಕಲ್ಲಿನ ಉದ್ಯಮದ ನೆಲೆಯು ಸಂಗನಕಲ್ಲು ಆಗಿತ್ತು ಎಂಬುದನ್ನು ವಿವರವಾಗಿ ದಾಖಲಿಸಿದ್ದನ್ನು ಗಮನಿಸಬಹುದು. ನಂತರ ಈ ವಿವರಗಳನ್ನು ೧೯೪೮ರಲ್ಲಿ 'ಸ್ಟೋನ್ ಏಜ್ ಕಲ್ಚರ್ ಆಫ್ ಬಳ್ಳಾರಿ' ಎಂಬ ಕೃತಿಯಲ್ಲಿ ಪ್ರಕಟಿಸಿದರು. ಇವರ ನಂತರ ೧೯೬೯ರಲ್ಲಿ ಹೆಚ್.ಡಿ ಸಂಕಾಲಿಯ ಅವರು ಸಂಗನಕಲ್ಲಿನಲ್ಲಿ ಮರು ಉತ್ಖನನ ನಡೆಸಿ ಸೂಕ್ಷ್ಮಶಿಲಾಯುಗದ 'ಕೈಗಾರಿಕ ನೆಲೆ'(Factory site)ಯನ್ನು ಪತ್ತೆಹಚ್ಚಿದರು. ನಂತರ ಇದೇ ನೆಲೆಯಲ್ಲಿ ಜಿಯಾವುದ್ದೀನ್ ಅನ್ಸಾರಿ ಮತ್ತು ಎಂ.ಎಸ್. ನಾಗರಾಜ್‌ರಾವ್ ಅವರು ಮರು ಉತ್ಖನನ ನಡೆಸಿ ವಿವಿಧ ಹಂತದ ಅವಶೇಷಗಳನ್ನು ಬೆಳಕಿಗೆ ತಂದರು. ಎಂ.ಎಸ್. ನಾಗರಾಜರಾವ್ ಅವರು ೧೯೬೩-೬೪ರಲ್ಲಿ ಪುಣೆಯ ಡೆಕ್ಕನ್ ಕಾಲೇಜ್, ಸ್ನಾತಕೋತ್ತರ ಸಂಶೋಧನಾ ಸಂಸ್ಥೆಯೊಂದಿಗೆ, ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲ್ಲೂಕಿನ 'ತೆಕ್ಕಲಕೋಟೆಯ ಉಡೇದಗುಡ್ಡ'ದಲ್ಲಿ ನವಶಿಲಾ-ತಾಮ್ರಯುಗದ ನಿವೇಶನವನ್ನು ಉತ್ಖನನ ಮಾಡಿದರು. ತದನಂತರ ಸಂಗನಕಲ್ಲು ಮತ್ತು ಕಪ್ಪಗಲ್ಲು ಬಳಿಯಿರುವ ಬೂದಿದಿನ್ನೆಗಳ ಉತ್ಖನನ ಕೈಗೊಂಡು ಇನ್ನಷ್ಟು ಸಂಗತಿಗಳನ್ನು ದಾಖಲಿಸಲು ಪ್ರಯತ್ನಿಸಿದರು. ಹೀಗೆ ಬಳ್ಳಾರಿ ಪರಿಸರದ ಸಂಗನಕಲ್ಲು, ಕಪ್ಪಗಲ್ಲು, ತೆಕ್ಕಲಕೋಟೆಗಳಲ್ಲಿ ಉತ್ಖನನ ನಡೆಸಿ ಮಾನವನು ಬೆಳೆದು ಬಂದ ಬಗೆ ಅಥವಾ ಸಂಸ್ಕೃತಿಯ ಬೆಳವಣಿಗೆಯ ವಿವಿಧ ಹಂತಗಳನ್ನು ಗುರುತಿಸಿ ಕರ್ನಾಟಕದ ಪುರಾತತ್ವ ಸಂಸ್ಕೃತಿಯ ಅಧ್ಯಯನ ಮಾದರಿಗಳನ್ನು ಶ್ರೀಮಂತಗೊಳಿಸುವ ಪ್ರಯತ್ನವನ್ನು ಅವರು ರಚಿಸುವ ಗ್ರಂಥಗಳ ಮೂಲಕ ಕಾಣುತ್ತೇವೆ.

ಬಿ.ಸುಬ್ಬರಾವ್, ಕೆ.ಪದ್ದಯ್ಯ. ಎಫ್.ಆರ್. ಅಲ್ಚಿನ್ ಮತ್ತು ಝಡ್.ಡಿ. ಅನ್ಸಾರಿ, ಮಜುಂದಾರ್ ಮೊದಲಾದ ಪುರಾತತ್ವ ವಿದ್ವಾಂಸರು ಬಳ್ಳಾರಿ ಮತ್ತು ಕೊಪ್ಪಳ ಸುತ್ತಮುತ್ತಲಿನ ಪ್ರದೇಶದಲ್ಲಿ ಲಕ್ಷಾಂತರ ವರ್ಷಗಳಿಂದ ಮಾನವ ನೆಲೆಸಿದ್ದ ಎಂಬುದನ್ನು ಉತ್ಖನನಗಳಲ್ಲಿ ಕಂಡುಕೊಂಡ ಅಂಶಗಳೊಂದಿಗೆ ತಮ್ಮ ವರದಿಗಳನ್ನು ಪ್ರಕಟಿಸಿದ್ದಾರೆ. ೧೯೭೧ರಲ್ಲಿ ಅ.ಸುಂದರ ಅವರ 'ಗಂಗಾವತಿ ತಾಲ್ಲೂಕಿನ ಪ್ರಾಚ್ಯಾವಶೇಷಗಳು' ಎಂಬ ಸಂಶೋಧನಾ ಲೇಖನವು ಕರ್ನಾಟಕ ಭಾರತಿ ಸಂಪುಟ ೬, ಸಂಚಿಕೆ

೧ರಲ್ಲಿ ಪ್ರಕಟವಾಗಿದೆ. ಅಲ್ಲದೇ ಬಹುಮುಖ್ಯವಾಗಿ ಅದರಲ್ಲಿ ಪ್ರಸ್ತುತ ಪ್ರಬಂಧಕ್ಕೆ ಪೂರಕವಾದ ಹಲವಾರು ವಿಷಯ ವಿಶೇಷಗಳು ಪ್ರಕಟಗೊಂಡಿರುವುದನ್ನು ಗಮನಿಸಲಾಗಿದೆ. ಅವರು ಉತ್ತರ ಕನ್ನಡ, ಬೆಳಗಾವಿ, ಧಾರವಾಡ, ಹಾವೇರಿ, ಗದಗ, ಬಾಗಲಕೋಟೆ, ಕೊಪ್ಪಳ, ರಾಯಚೂರು, ಬಿಜಾಪುರ ಜಿಲ್ಲಾ ಪ್ರದೇಶವನ್ನು ತಮ್ಮ ವಿಶೇಷ ಅಧ್ಯಯನಕ್ಕೆ ಆಯ್ದುಕೊಂಡು ಉತ್ತರ ಕರ್ನಾಟಕದ ಬೃಹತ್ ಶಿಲಾ ಸಂಸ್ಕೃತಿಯ ವಿವಿಧ ಮಾದರಿಯ ಶಿಲಾಸಮಾಧಿಗಳನ್ನು ಅಧ್ಯಯನ ನಡೆಸಿ ತಮ್ಮ ಮಹಾಪ್ರಬಂಧವನ್ನು ರಚಿಸಿದ್ದಾರೆ. ೧೯೭೫ರಲ್ಲಿ 'ದಿ ಅರ್ಲಿ ಛೇಂಬರ್ ಟೋಂಬ್ಸ್ ಆಫ್ ಸೌಥ್ ಇಂಡಿಯಾ' ಎಂಬ ಹೆಸರಿನಲ್ಲಿ ತಮ್ಮ ಸಂಶೋಧನ ಗ್ರಂಥವನ್ನು ಪ್ರಕಟಿಸಿದ್ದಾರೆ. ಈ ಸಂಶೋಧನಾ ಗ್ರಂಥವು ಉತ್ತರ ಕರ್ನಾಟಕದ ವಿವಿಧ ನೆಲೆಗಳಲ್ಲಿರುವ ಬೃಹತ್ ಶಿಲಾಯುಗದ ಅಥವಾ ಕಬ್ಬಿಣಯುಗದ ಶಿಲಾಸಮಾಧಿಗಳನ್ನು ತಿಳಿದುಕೊಳ್ಳಲು ತುಂಬಾ ಉಪಯುಕ್ತ ಒಲವುಳ್ಳ ಮಹತ್ವದ ಗ್ರಂಥವಾಗಿದೆ. ನಂತರ ಅವರು ತಮ್ಮ ಸಂಶೋಧನ ಅವಧಿಯಲ್ಲಿ ಗುರುತಿಸಿದ ಬಂಡೆಚಿತ್ರಗಳನ್ನು ಕ್ರೋಢೀಕರಿಸಿ ೧೯೯೪ರಲ್ಲಿ 'ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ' ಎಂಬ ಪುಸ್ತಕವನ್ನು ಪ್ರಕಟಿಸಿದರು. ಈ ಪುಸ್ತಕದಲ್ಲಿ ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಯ ವಿವಿಧ ನೆಲೆಗಳಲ್ಲಿ ಕಂಡುಬಂದಿರುವ ಶಿಲಾಯುಗದ ಮಾನವನು ರಚಿಸುವ ಕಲಾತ್ಮಕ ಚಿತ್ರಗಳನ್ನು ಬೆಳಕಿಗೆ ತಂದರು. ಅವರ ನಿರಂತರ ಅಧ್ಯಯನ ಹಾಗೂ ಪ್ರಕಟಣೆ ಇಡೀ ರಾಜ್ಯದ ಎಲ್ಲಾ ಪ್ರದೇಶಗಳ ಪ್ರಾಗಿತಿಹಾಸದ ಚಿತ್ರಣವನ್ನು ಅರಿಯಲು ನೆರವಾಗಿದೆ. ಅದೇ ರೀತಿ ಬಳ್ಳಾರಿ ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ವಿಸ್ತರಿಸಿಕೊಂಡಿರುವ ಅಂಶಗಳ ಕುರಿತು ತಿಳಿ ಹೇಳುವ ಪರಿಚಯಾತ್ಮಕ ಕೃತಿಗಳು ಪ್ರಕಟವಾದವು.

೧೯೭೨ರಲ್ಲಿ ರಚಿತವಾದ ಬಿ.ಕೆ ಗುರುರಾಜ್ ರಾವ್ ಅವರ 'ಮೆಗಾಲಿಥಿಕ್ ಕಲ್ಚರ್ ಆಫ್ ಸೌಥ್ ಇಂಡಿಯಾ' ಎಂಬ ಕೃತಿಯು ದಕ್ಷಿಣ ಭಾರತದ ವಿವಿಧ ರಾಜ್ಯಗಳಲ್ಲಿ ಇರುವ ಬೃಹತ್ ಶಿಲಾಯುಗ ಸಂಸ್ಕೃತಿಯ ಕುರುಹುಗಳು ಹಾಗೂ ಅವುಗಳ ಮಹತ್ವವನ್ನು ತಿಳಿಸುವ ತುಂಬಾ ಮಹತ್ವದ ಸಂಶೋಧನಾ ಗ್ರಂಥವಾಗಿದೆ. ಮುಖ್ಯವಾಗಿ ಆಗಿನ ಮೈಸೂರು ರಾಜ್ಯದಲ್ಲಿದ್ದ ಕರ್ನಾಟಕದ ವಿವಿಧ ನೆಲೆಗಳಲ್ಲಿದ್ದ ಸಮಾಧಿ ಪ್ರಕಾರಗಳನ್ನು ಈ ಕೃತಿಯು ಸಾದರಪಡಿಸುತ್ತದೆ. ನಂತರ ೧೯೭೩ರಲ್ಲಿ ಪ್ರಕಟವಾದ ಎಸ್.ಬಿ. ದೇವ್(ಶಾಂತರಾಮ ಬಾಲಚಂದ್ರದೇವ್) ಅವರ 'ಪ್ರಾಬ್ಲಮ್ ಆಫ್ ಸೌಥ್ ಇಂಡಿಯನ್ ಮೆಗಾಲಿಥ್ಸ್' ಎಂಬ ಕೃತಿಯು ಪ್ರಮುಖವಾದುದೆಂದು ಪರಿಭಾವಿಸಲಾಗಿದೆ. ೧೯೯೪ರಲ್ಲಿ ರಚನೆಯಾದ ಉದಯರವಿ ಎಸ್. ಮೂರ್ತಿಯವರ 'ಮೆಗಾಲಿಥಿಕ್ ಕಲ್ಚರ್ಸ್ ಆಫ್ ಸೌಥ್ ಇಂಡಿಯಾ–ಸೋಶಿಯೋ–ಎಕನಾಮಿಕ್ ಪರ್ಸ್‌ಪೆಕ್ಟಿವ್ಸ್' ಎಂಬ ಕೃತಿಯು ದಕ್ಷಿಣ ಭಾರತದ ಸಾಮಾಜಿಕ ಸಂರಚನೆಗಳ ಪುನರ್ ನಿರ್ಮಾಣವಾದವು ಎಂಬ ವಿವರಗಳನ್ನು ತಿಳಿದುಕೊಳ್ಳಲು ಈ ಕೃತಿಯು ಮಹತ್ವದ ಪಾತ್ರವಹಿಸುತ್ತದೆ.

೧೯೮೮ರಲ್ಲಿ ಬಿ.ಎಂ. ಚಂದ್ರಶೇಖರಯ್ಯನವರು ರಚಿಸಿರುವ 'ಕೂಡ್ಲಿಗಿ ತಾಲ್ಲೂಕು ದರ್ಶನ' ಎಂಬ ಕೃತಿಯು ಕೂಡ್ಲಿಗಿ ತಾಲ್ಲೂಕಿನ ಭೌಗೋಳಿಕತೆ ಮತ್ತು ಐತಿಹಾಸಿಕ ಪ್ರೇಕ್ಷಣೀಯ ಸ್ಥಳಗಳ

ಕುರಿತು ಸಂಕ್ಷಿಪ್ತ ಮಾಹಿತಿ ನೀಡುತ್ತದೆ. ರವಿ ಕುಮಾರ ಎನ್.ಎಮ್ ಮತ್ತು ವೃಷಭೇಂದ್ರಚಾರ್ಯ ಅವರು ರಚಿಸಿರುವ ಕೂಡ್ಲಿಗಿ ತಾಲ್ಲೂಕಿನ ಸಮಗ್ರ ದರ್ಶನ ಎಂಬ ಕೃತಿಯು ಮುನ್ನುಡಿ ರೂಪದ ಕೂಡ್ಲಿಗಿ ತಾಲ್ಲೂಕಿನ ಭೌಗೋಳಿಕ ಅಂಕಿ ಅಂಶಗಳು, ಶಾಸನಗಳ ಸಮೀಕ್ಷೆ ಮತ್ತು ಇನ್ನಿತರೆ ಮಾಹಿತಿಗಳನ್ನು ಸಮಗ್ರ ಸಾರ ರೂಪದಲ್ಲಿ ನೀಡಿದ್ದಾರೆ. ೧೯೯೮ರಲ್ಲಿ ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ್, ಡಿ.ವಿ.ಪರಮಶಿವಮೂರ್ತಿ ಇವರಿಂದ ಸಂಪಾದಿತಗೊಂಡ 'ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆಯ ಶಾಸನಗಳು' ಎಂಬ ಕೃತಿಯಲ್ಲಿ ಬಳ್ಳಾರಿ ಜಿಲ್ಲೆಯ ಏಳು ತಾಲ್ಲೂಕುಗಳಲ್ಲಿನ ಪ್ರತಿಯೊಂದು ಗ್ರಾಮದಲ್ಲಿ ದೊರೆತ ಶಾಸನ ಪಠ್ಯ ಮತ್ತು ಸಾರಾಂಶವನ್ನು ಒಳಗೊಂಡಿದೆ.

೨೦೦೪ರಲ್ಲಿ ಪ್ರಕಟವಾದ ಬಾಲಸುಬ್ರಮಣ್ಯ ಅವರ ಹೆಸರಿನಲ್ಲಿ ಸಂಪಾದಿತವಾದ 'ಕುರುಗೋಡು' ಎಂಬ ಕೃತಿಯು ಆ ಗ್ರಾಮದ ಸುತ್ತಮುತ್ತಲಿನ ಪ್ರಾಗಿತಿಹಾಸ ಮತ್ತು ಐತಿಹಾಸಿಕ ದೇವಾಲಯಗಳ ಕುರಿತು ಸಮಗ್ರ ರೂಪದ ಮಾಹಿತಿ ನೀಡಲು ಸಫಲವಾಗಿದೆಯೆಂದು ಹೇಳಬಹುದು.

ಲಕ್ಷ್ಮಣ್ ತೆಲಗಾವಿಯವರು ೨೦೦೪ರಲ್ಲಿ ರಚಿಸಿದ 'ಮೌರ್ಯ ಮತ್ತು ಶಾತವಾಹನಯುಗ' ಎಂಬ ಕೃತಿಯಲ್ಲಿ ಕರ್ನಾಟಕ ಸಂಸ್ಕೃತಿಯ ಬಹು ಆಯಾಮಗಳಾಗಿರುವ ಪುರಾತತ್ವ ಹಾಗೂ ಚಾರಿತ್ರಿಕ ಅಂಶಗಳ ಕುರಿತು ಸಮಗ್ರ ಹಾಗೂ ಸೂಕ್ಷ್ಮವಾದ ವಿಶ್ಲೇಷಣೆಗಳನ್ನು ಪ್ರಕಟಪಡಿಸಿದ್ದಾರೆ. ಅಲ್ಲದೆ ವಿವಿಧ ನಿವೇಶನಗಳಲ್ಲಿ ಕಂಡುಬರುವ ಬೃಹತ್ ಶಿಲಾಸಂಸ್ಕೃತಿಯ ಜನರ ಕುರುಹು ಮತ್ತು ಖನಿಜ ನಿಕ್ಷೇಪಗಳು, ಸಾಮ್ರಾಜ್ಯಗಳು ಉದಯಿಸಲು ಕಾರಣವಾದ ಸಂಗತಿಗಳಾಗಿ ಹೇಗೆ ಪ್ರಭಾವಿಸಿದವು ಎಂಬುದನ್ನು ವಿವರಿಸುವ ಕೃತಿಯಾಗಿದೆ ಎಂಬುದನ್ನು ದಾಖಲಿಸಬಹುದು. ೨೦೦೬ರಲ್ಲಿ ಪ್ರಕಟಗೊಂಡಿರುವ 'ಚಿನ್ನಹಗರಿ ಸಿರಿ' ಎಂಬ ಕೃತಿಯನ್ನು ವಿರೂಪಾಕ್ಷಿ ಪೂಜಾರಹಳ್ಳಿ ಅವರು ರಚಿಸಿದ್ದಾರೆ. ಈ ಗ್ರಂಥವು ಚಿನ್ನಹಗರಿ ನದಿ ಪರಿಸರದ ಚರಿತ್ರೆ ಮತ್ತು ಸಂಸ್ಕೃತಿಯ ವಿವಿಧ ಆಯಾಮಗಳ ಕುರಿತು ತಿಳಿಸಲು ಸಮರ್ಥವಾಗಿರುವುದು.

೨೦೧೦-೧೧ರಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ವತಿಯಿಂದ ಮಹದೇವಯ್ಯ ಅವರು ಕುರುಗೋಡು ಗ್ರಾಮದ ಬೂದಿಕೊಳ್ಳ ಎಂಬ ಸ್ಥಳದಲ್ಲಿ ನವಶಿಲಾಯುಗ ಮತ್ತು ಬೃಹತ್ ಶಿಲಾಯುಗ ಕಾಲದ ಸಾಂಸ್ಕೃತಿಕ ಅವಶೇಷಗಳಿರುವ ನಿವೇಶನವನ್ನು ಉತ್ಖನನ ಮಾಡಿ ಆಸಕ್ತಿದಾಯಕ ವಿವರಗಳನ್ನು ವರದಿ ಮಾಡಿದರು. ಈ ವರದಿ ವಿವರಗಳು ಆ ಪರಿಸರದ ಪ್ರಾಗಿತಿಹಾಸದ ಹೊಸ ವಿಸ್ತಾರಗಳನ್ನು ತಿಳಿದುಕೊಳ್ಳಲು ಸಹಾಯಕವಾಗಿವೆ. ೨೦೧೧ರಲ್ಲಿ ವಾಸುದೇವ ಬಡಿಗೇರ ಅವರಿಂದ ರಚನೆಗೊಂಡ 'ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ' ಎಂಬ ಕೃತಿಯು ಬಳ್ಳಾರಿ ಪರಿಸರದ ಭೌಗೋಳಿಕತೆ, ಪ್ರಾಗೈತಿಹಾಸಿಕ ಹಿನ್ನೆಲೆ, ರಾಜಕೀಯ ಆಡಳಿತ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಕಲೆ ಮತ್ತು ದೇವಾಲಯ ವಾಸ್ತುಶಿಲ್ಪದ ಬಗ್ಗೆ ವಿವರಿಸುತ್ತದೆ. ಪ್ರಾಥಮಿಕ ಹಾಗೂ ಆನುಷಂಗಿಕ ಆಕರಗಳನ್ನು ಬಳಸಿಕೊಂಡು ರೂಪುಗೊಂಡ ಈ ಕೃತಿಯಲ್ಲಿರುವ ಹಲವಾರು ವಿಷಯಗಳನ್ನು

ಪ್ರಸ್ತುತ ಮಹಾಪ್ರಬಂಧದ ಪೂರಕ ಅಂಶಗಳಾಗಿ ಬಳಸಿಕೊಳ್ಳಲಾಗಿದೆ. ೨೦೧೧ರಲ್ಲಿ ಕೆ.ಬಿ. ಶಿವತಾರಕ್ ಅವರ 'ಕರ್ನಾಟಕದ ಪುರಾತತ್ವ ನೆಲೆಗಳು' ಎಂಬ ಕೃತಿಯು ಕರ್ನಾಟಕದ ಎಲ್ಲಾ ಜಿಲ್ಲೆಗಳ ಪರಿಸರದಲ್ಲಿ ಹರಡಿಕೊಂಡಿರುವ ಪುರಾತತ್ವ ನೆಲೆಗಳ ಕುರಿತು ಪ್ರಾಥಮಿಕ ತಿಳುವಳಿಕೆ ನೀಡುವ ಮಹತ್ವದ ಆಕರ ಗ್ರಂಥವಾಗಿದೆ. ೨೦೧೧ರಲ್ಲಿ ಗಿರಿಜಾ ಅವರಿಂದ ರಚಿಸಲ್ಪಟ್ಟ 'ಸಂಡೂರು ತಾಲ್ಲೂಕು ಒಂದು ಚಾರಿತ್ರಿಕ ಅಧ್ಯಯನ' ಎಂಬ ಸಂಶೋಧನ ಗ್ರಂಥವು ಸಂಡೂರು ಪರಿಸರದ ಭೌಗೋಳಿಕತೆ ಮತ್ತು ಚಾರಿತ್ರಿಕ ವಿವರಗಳನ್ನು ಕುರಿತು ತಿಳಿಸುತ್ತದೆ. ೨೦೧೪ರಲ್ಲಿ ಎನ್. ರಾಮಕೃಷ್ಣಯ್ಯನವರು ರಚಿಸಿದ 'ಸಿರುಗುಪ್ಪ ತಾಲ್ಲೂಕಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ' ಎಂಬ ಸಂಶೋಧನ ಗ್ರಂಥವು ಸಿರುಗುಪ್ಪ ತಾಲ್ಲೂಕಿನ ಭೌಗೋಳಿಕ ಹಿನ್ನೆಲೆ, ಪ್ರಾಗಿತಿಹಾಸ, ರಾಜಕೀಯ ಇತಿಹಾಸ, ಆಡಳಿತ ವ್ಯವಸ್ಥೆ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪ ಕುರಿತು ವಿವರಗಳನ್ನು ನೀಡುವ ಚಿಕ್ಕ ಹೊತ್ತಿಗೆಯಾಗಿದೆ. ಇತ್ತೀಚೆಗೆ ಆರ್. ಮಂಜನಾಯ್ಕ್ ಅವರು 'ಕೂಡ್ಲಿಗಿ ಮತ್ತು ಹಗರಿ ಬೊಮ್ಮನಹಳ್ಳಿ ತಾಲ್ಲೂಕುಗಳ ಪುರಾತತ್ವೀಯ ಅಧ್ಯಯನ' ಎಂಬ ವಿಷಯವನ್ನು ಕುರಿತು ಪಿಎಚ್.ಡಿ ಸಂಶೋಧನೆ ಕೈಗೊಂಡು ಕೂಡ್ಲಿಗಿ ಮತ್ತು ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳಿಗೆ ಸಂಬಂಧಿಸಿದ ಹಲವಾರು ಮಾಹಿತಿಗಳನ್ನು ಪ್ರಸ್ತುತಪಡಿಸಿದ್ದಾರೆ.

ಕೊಪ್ಪಳ ಜಿಲ್ಲೆ ಪುರಾತತ್ವ ನೆಲೆಗಳ ಕುರಿತಿರುವ ಸಂಶೋಧನೆಗಳು ೧೮೦೧-೦೩ರಿಂದ ಕರ್ನಲ್ ಮೆಕೆಂಝಿ ಅವರು ಆನೆಗೊಂದಿ-ಹಂಪಿ ಮತ್ತು ಅದರ ಪರಿಸರದ ಅನ್ವೇಷಣೆಯೊಂದಿಗೆ ಪ್ರಾರಂಭವಾದ ಚಟುವಟಿಕೆಗಳು ಇಂದಿನವರೆಗೆ ಅವಿರತವಾಗಿ ನಡೆಯತ್ತಿವೆ. ಯಜ್ದಾನಿ ಅವರು ೧೯೩೨ರಲ್ಲಿ ಕೊಪ್ಪಳದ ಆರು ಇಸ್ಲಾಮಿಕ್ ಶಾಸನಗಳನ್ನು 'ಎಪಿಗ್ರಾಫಿಯಾ ಇಂಡೋ-ಇಸ್ಲಾಮಿಕ್' ಎಂಬ ಪುಸ್ತಕದಲ್ಲಿ ಪ್ರಕಟಿಸಿದ್ದಾರೆ. ಮೊಟ್ಟಮೊದಲಿಗೆ ರೆವರೆಂಡ್ ಜಿ. ಕೆಯಿಸ್‌ರವರ ಗಮನಕ್ಕೆ ಬಂದ ಗಂಗಾವತಿ ತಾಲ್ಲೂಕಿನ ಹಿರೇಬೆಣಕಲ್ಲು ಪರಿಸರದಲ್ಲಿನ ಬೃಹತ್ ಶಿಲಾಯುಗದ ಅವಶೇಷಗಳನ್ನು ಸುರಪುರ ಸಂಸ್ಥಾನದಲ್ಲಿ ಅಂದು ಬ್ರಿಟಿಷ್ ರಾಯಭಾರಿಯಾಗಿದ್ದ ಕರ್ನಲ್ ಮೆಡೋಸ್ ಟೇಲರ್ ಅವರು ಸಮಗ್ರವಾಗಿ ಪರಿಶೀಲಿಸಿ ೧೮೫೨ರಲ್ಲಿ ಸಂಬಂಧಿಸಿದ ಎಲ್ಲಾ ವಿವರಗಳನ್ನು ಸಂಶೋಧನಾ ಜರ್ನಲ್‌ನಲ್ಲಿ ಪ್ರಕಟಿಸಿದ್ದಾರೆ. ತರುವಾಯ ಭಾರತದ ಪ್ರಾಗಿತಿಹಾಸದ ಪಿತಾಮಹರೆನಿಸಿಕೊಂಡ ರಾಬರ್ಟ್ ಬ್ರೂಸ್‌ಫೂಟ್ ಅವರು ಭಾರತೀಯ ಭೂಗರ್ಭ ಸರ್ವೇಕ್ಷಣಾ ಇಲಾಖೆಯ ಅಧಿಕಾರಿಯಾಗಿದ್ದ ಸಂದರ್ಭದಲ್ಲಿ ಅವಿಭಜಿತ ರಾಯಚೂರು ಜಿಲ್ಲೆಯಾದ್ಯಂತ ೧೮೬೩-೭೧ರಲ್ಲಿ ಕೈಗೊಂಡ ಅನ್ವೇಷಣೆಯಲ್ಲಿ ಗಂಗಾವತಿ ತಾಲ್ಲೂಕಿನ 'ಕೆರೆಹಾಳ ಹಾಗೂ ಜಂತಕಲ್ಲಿನ' ಕೋಟೆ ಪ್ರದೇಶದಲ್ಲಿ ವಿಸ್ತರಿಸಿಕೊಂಡಿದ್ದ ಪ್ರಾಚ್ಯಾವಶೇಷಗಳನ್ನು ಶೋಧಿಸಿ ಪ್ರಾಥಮಿಕ ಸಂಗತಿಗಳನ್ನು ವರದಿ ಮಾಡಿದರು.

೧೯೫೨ರಲ್ಲಿ ಆರ್.ಎಲ್. ಟರ್ನರ್ ಅವರ 'ದಿ ಗವಿಮಠ ಆಂಡ್ ಪಾಲ್ಕಿಗುಂಡು ಇನ್ಸ್‌ಕ್ರಿಪ್ಷನ್ಸ್ ಆಫ್ ಅಶೋಕ' ಎಂಬ ಲೇಖನವು ಹೈದರಾಬಾದ್ ಆರ್ಕಿಯಾಲಾಜಿಕಲ್ ಸೀರಿಸ್ ನಂ-೧೦ರಲ್ಲಿ ಪ್ರಕಟವಾಗಿದೆ. ಇದರಲ್ಲಿ ಕೊಪ್ಪಳದಲ್ಲಿ ದೊರೆತ ಅಶೋಕನ ಮೂರು ಶಾಸನಗಳು ಹಾಗೂ ಪತ್ಯದ

ಸಾರಾಂಶವನ್ನು ಈ ಪತ್ರಿಕೆಯಲ್ಲಿ ವಿವರಿಸಲಾಗಿದೆ. ೧೯೭೦ರಲ್ಲಿ ಮೈಸೂರು ರಾಜ್ಯ ಸರ್ಕಾರ, ಬೆಂಗಳೂರು ಇವರು ಪ್ರಕಟಿಸಿದ 'ರಾಯಚೂರು ಡಿಸ್ಟ್ರಿಕ್ಟ್ ಗೆಜೆಟಿಯರ್' ಎಂಬ ಗ್ರಂಥವು ರಾಯಚೂರು ಜಿಲ್ಲೆಯ ಪ್ರಾಗೈತಿಹಾಸಿಕ, ಐತಿಹಾಸಿಕ ಕಲಾಕ್ಷೇತ್ರಗಳ, ಭೌಗೋಳಿಕ ಪರಿಸರ ಗುಣಲಕ್ಷಣಗಳ ಕುರಿತಾಗಿ ವಿವರಿಸುವ ಮಾಹಿತಿಗಳು ಈ ಪರಿಸರದ ಕುರಿತು ಸಂಶೋಧನೆ ಮಾಡುವ ಸಂಶೋಧಕರಿಗೆ ದಿಕ್ಸೂಚಿಯಂತಿದೆ. ತದನಂತರ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲಾ ಪರಿಸರದ ಪುರಾತತ್ವ ವಿಷಯಗಳ ಕುರಿತು ಬಿ.ಕೆ. ಗುರುರಾಜ ರಾವ್, ವಿಶೇಷವಾಗಿ ಅ.ಸುಂದರ, ಅಲ್ಚಿನ್ ದಂಪತಿಗಳು, ರು.ಮ. ಷಡಕ್ಷರಯ್ಯ, ಭಾರತೀಯ ಪುರಾತತ್ವ ಸರ್ವೇಕ್ಷಣ ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯ ನಿರ್ದೇಶನಾಲಯದ ಹಲವು ಸಂಶೋಧಕರು ಹಾಗೂ ಇತ್ತೀಚೆಗೆ ಬಿ.ಸಿ ಪಾಟೀಲ, ರವಿ ಕೋರಿಶೆಟ್ಟರ್ ಮತ್ತು ಶರಣಬಸಪ್ಪ ಕೋಲ್ಕಾರ ಮೊದಲಾದವರು ಈ ಪ್ರದೇಶದಲ್ಲಿ ಹಲವು ಪ್ರಾಗೈತಿಹಾಸಿಕ ಸಂಸ್ಕೃತಿಯ ನೆಲೆಗಳನ್ನು ಮತ್ತು ವರ್ಣಚಿತ್ರಗಳನ್ನು ಪತ್ತೆಹಚ್ಚಿ ಅವುಗಳ ಕುರಿತು ವಿವರಗಳನ್ನು ಸಾದ್ಯಂತವಾಗಿ ಪ್ರಕಟಿಸುವಲ್ಲಿ ಯಶಸ್ವಿ ಆಗಿದ್ದಾರೆ. ೧೯೮೬ರಲ್ಲಿ ಜಿ. ಶಾಮಚಾರ್ಯರಿಂದ ರಚಿಸಲಾದ 'ಯಲಬುರ್ಗಿ ತಾಲ್ಲೂಕು ದರ್ಶನ' ಎಂಬ ಕೃತಿಯಲ್ಲಿ ಯಲಬುರ್ಗಾ ತಾಲ್ಲೂಕಿನ ಪ್ರಾಚೀನ, ಮಧ್ಯಯುಗೀನ, ಆಧುನಿಕ ಇತಿಹಾಸ, ಐತಿಹಾಸಿಕ ಸ್ಥಳಗಳ ಮತ್ತು ಮಳೆ-ಬೆಳೆ-ಮಣ್ಣು ಔದ್ಯೋಗಿಕ ರಂಗ, ಕೈಗಾರಿಕೆ, ಜನಸಂಖ್ಯೆ ಮುಂತಾದವುಗಳ ಕುರಿತು ವಿವರಿಸಲಾಗಿದೆ. ೧೯೮೭ರಲ್ಲಿ ಹುಣಸಗಿ ಪ್ರಕಾಶ ಅವರು ರಚಿಸಿದ 'ಗಂಗಾವತಿ ತಾಲ್ಲೂಕು ದರ್ಶನ' ಎಂಬ ಕೃತಿಯು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಕಿರು ಕೈಪಿಡಿಯಾಗಿದ್ದು, ತಾಲ್ಲೂಕಿನಲ್ಲಿರುವ ಪ್ರಾಗೈತಿಹಾಸಿಕ ಮತ್ತು ಐತಿಹಾಸಿಕ ಮಾಹಿತಿ, ಜನಸಂಖ್ಯೆ, ಮಳೆ ಪ್ರಮಾಣ, ಮಣ್ಣು, ಬೆಳೆ, ಖನಿಜ ಇತ್ಯಾದಿ ಮಾಹಿತಿಗಳನ್ನು ಒಳಗೊಂಡಿರುವುದನ್ನು ಕಾಣುತ್ತೇವೆ. ಇದೇ ವರ್ಷದಲ್ಲಿ ನಾ.ಬಾ.ಶಾಸ್ತ್ರಿ ಅವರಿಂದ ರಚಿತವಾದ 'ಕೊಪಣ-ಕೊಪ್ಪಳ' ಎನ್ನುವ ಕೃತಿಯು ಈ ಪ್ರದೇಶದ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಪರಂಪರೆಗಳನ್ನು ಸ್ಥೂಲವಾಗಿ ತಿಳಿಸುವ ಅಧ್ಯಯನ ಕಾರ್ಯಗಳಲ್ಲಿ ಮೊದಲ ಕಿರುಪುಸ್ತಕವಾಗಿದೆಯೆಂದರೆ ತಪ್ಪಾಗಲಾರದು.

೧೯೯೮ರಲ್ಲಿ ಚನ್ನಬಸಪ್ಪ ಎಸ್. ಪಾಟೀಲ ಮತ್ತು ವಿನೋದಾ ಪಾಟೀಲ ಅವರು ರಚಿಸಿದ 'ಇನ್ಸ್‌ಕ್ರಿಪ್ಷನ್ಸ್ ಆಫ್ ಕೊಪ್ಪಳ ಡಿಸ್ಟ್ರಿಕ್ಟ್.' ಎಂಬ ಕೃತಿಯಲ್ಲಿ ಕೊಪ್ಪಳ ಜಿಲ್ಲೆಯಲ್ಲಿ ದೊರೆತ ವಿವಿಧ ಗ್ರಾಮಗಳ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸಿದ ಶಾಸನ ಸಂಪುಟ ಸೂಚಿಯಂತಹ ಕೃತಿಯಾಗಿದೆ. ೧೯೯೯ರಲ್ಲಿ ದೇವರಕೊಂಡಾರೆಡ್ಡಿ, ಕೆ.ಜಿ.ಭಟ್‌ಸೂರಿ, ಕಲವೀರ ಮನ್ವಾಚಾರ್, ಡಿ.ವಿ. ಪರಮಶಿವಮೂರ್ತಿ ಇವರಿಂದ ಸಂಪಾದಿತಗೊಂಡ 'ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨, ಕೊಪ್ಪಳ ಜಿಲ್ಲೆಯ ಶಾಸನಗಳು' ಎಂಬ ಕೃತಿಯಲ್ಲಿ ಕೊಪ್ಪಳ ಜಿಲ್ಲೆಯ ನಾಲ್ಕು ತಾಲ್ಲೂಕುಗಳಲ್ಲಿನ ಪ್ರತಿಯೊಂದು ಗ್ರಾಮದಲ್ಲಿ ದೊರೆತ ಶಾಸನ ಪಠ್ಯ ಮತ್ತು ಸಾರಾಂಶವನ್ನು ಒಳಗೊಂಡಿದೆ.

ಸಾಯಬಣ್ಣ ಕೆ. ಮೇಲಕಾರ ಅವರು ೨೦೦೨ರಲ್ಲಿ 'ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಚರಿತ್ರೆ ಮತ್ತು ಶಿಲಾಯುಗದ ಸಂಸ್ಕೃತಿ' ಎಂಬ ವಿಷಯವನ್ನು ಕುರಿತು ಪಿಎಚ್.ಡಿ ಸಂಶೋಧನೆ

ಕೈಗೊಂಡು ಜಿಲ್ಲೆಗೆ ಸಂಬಂಧಿಸಿದ ಹಲವಾರು ಮಾಹಿತಿಗಳನ್ನು ಪ್ರಸ್ತುತಪಡಿಸಿದ್ದಾರೆ. ಇತ್ತೀಚೆಗೆ ಬಿ.ಸಿ.ಪಾಟೀಲ ಅವರು 'ಕೊಪ್ಪಳ : ಸಾಂಸ್ಕೃತಿಕ ಪರಂಪರೆ'(೧೯೯೮) ಪ್ರಕಟಿಸಿದರೆ, ಡಿ.ಎಸ್. ಅಶ್ವತ್ಥ್ ಅವರು ಸಾದರಪಡಿಸಿರುವ 'ಕೊಪ್ಪಳ : ಸಾಂಸ್ಕೃತಿಕ ಇತಿಹಾಸ' ಮತ್ತು ಜಗದೀಶ ಬ್ಯಾಲಹುಣಿಸಿ ಅವರ 'ಕೊಪ್ಪಳ ಗವಿಮಠ ಸಾಂಸ್ಕೃತಿಕ ಅಧ್ಯಯನಗಳು' ಎಂಬ ಪಿಎಚ್.ಡಿ ಮಹಾಪ್ರಬಂಧಗಳು ಪ್ರಸ್ತುತ ಮಹಾಪ್ರಬಂಧ ರಚಿಸುವಲ್ಲಿ ಹೆಚ್ಚು ಉಪಯುಕ್ತವಾಗಿವೆ. ಸುಗಂಧಾರ ಅವರ 'ಹಿಸ್ಟ್ರಿ ಅಂಡ್ ಆರ್ಕಿಯಾಲಜಿ ಆಫ್ ಆನೆಗೊಂದಿ' ಮತ್ತು ಎ.ವಿ. ನಾಗನೂರ ಅವರ 'ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಜೈನಧರ್ಮ: ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಪಿಎಚ್.ಡಿ ಮಹಾಪ್ರಬಂಧಗಳು ಪ್ರಸ್ತುತ ಮಹಾಪ್ರಬಂಧ ರಚಿಸುವಲ್ಲಿ ನೆರವಾಗಿವೆ. ಶರಣಬಸಪ್ಪ ಕೋಲ್ಕಾರ ಅವರು ೨೦೧೦ರಲ್ಲಿ ಅನ್ವೇಷಿಸಿ ಸಂಶೋಧಿಸಿರುವ 'ಶಿಲಾಯುಗದ ಗವಿ ಚಿತ್ರಗಳು' ಎಂಬ ಸಂಶೋಧನಾ ಗ್ರಂಥವು ಹಂಪಿ ಮತ್ತು ಕೊಪ್ಪಳ ಪ್ರದೇಶದಲ್ಲಿರುವ ಗವಿ, ಬಂಡೆ ಚಿತ್ರಗಳನ್ನು ಕುರಿತಾಗಿ ಹೆಚ್ಚಿನ ವಿವರಗಳನ್ನು ನೀಡುವಲ್ಲಿ ಸಫಲವಾಗಿದೆ.

೨೦೧೦ರಲ್ಲಿ ಕೊಪ್ಪಳದ ಗವಿಸಿದ್ದೇಶ್ವರ ಸಂಸ್ಥಾನ ಮತ್ತು ಶ್ರೀ ಗವಿಸಿದ್ದೇಶ್ವರ ಕಲಾವಿಜ್ಞಾನ ಮತ್ತು ವಾಣಿಜ್ಯ ಪದವಿ ಮಹಾವಿದ್ಯಾಲಯದಲ್ಲಿ ನಡೆದ ವಿಚಾರಸಂಕಿರಣದಲ್ಲಿ ವಿವಿಧ ಸಂಶೋಧಕರಿಂದ ಮಂಡನೆಯಾದ ಸಂಶೋಧನಾ ಲೇಖನಗಳನ್ನು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು ಇಲಾಖೆಯು ಆರ್. ಗೋಪಾಲ್ ಅವರ ಸಂಪಾದಕತ್ವದಲ್ಲಿ 'ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಎಂಬ ಗ್ರಂಥವನ್ನು ಪ್ರಕಟಿಸಿದೆ. ೨೦೧೦ರಲ್ಲಿ ಹನುಮನಗೌಡ ಸಿ. ಅವರು ರಚಿಸಿದ 'ಕುಷ್ಟಗಿ ತಾಲ್ಲೂಕು ದರ್ಶನ' ಎಂಬ ಕೃತಿಯು ತಾಲ್ಲೂಕಿನ ಹವಾಗುಣ ಮಳೆ, ಬೆಳೆ, ಖನಿಜ, ಔದ್ಯೋಗಿಕರಣ, ಜನಸಂಖ್ಯೆ, ಪ್ರಾಗಿತಿಹಾಸ, ಇತಿಹಾಸ, ಸ್ಮಾರಕಗಳನ್ನು ಕುರಿತು ಸಂಕ್ಷಿಪ್ತ ಮಾಹಿತಿಯನ್ನು ನೀಡುತ್ತದೆ. ಇತ್ತೀಚೆಗೆ ಸುಭಾಷ ಕ. ಕಾಂಬಳೆ ಅವರು 'ಕೊಪ್ಪಳ ಜಿಲ್ಲೆಯ ಪುರಾತತ್ವ' ಎಂಬ ವಿಷಯವನ್ನು ಕುರಿತು ಪಿಎಚ್.ಡಿ ಸಂಶೋಧನೆ ಕೈಗೊಂಡು ಜಿಲ್ಲೆಗೆ ಸಂಬಂಧಿಸಿದ ಹಲವಾರು ಮಾಹಿತಿಗಳನ್ನು ಪ್ರಸ್ತುತಪಡಿಸಿದ್ದಾರೆ. ಹೀಗೆ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರವನ್ನು ಕುರಿತಂತೆ ಅಧ್ಯಯನಗಳು, ಲೇಖನಗಳು, ಪತ್ರಿಕೆ ವರದಿಗಳಲ್ಲಿ ಇತಿಹಾಸ ಮತ್ತು ಪುರಾತತ್ವದ ಬಗ್ಗೆ ಹಲವು ಕೃತಿಗಳು ಪ್ರಕಟವಾಗಿದ್ದರೂ ಅವು ನಿರ್ದಿಷ್ಟವಾದ ಒಂದು ವಿಷಯವನ್ನು ಅಥವಾ ಒಂದು ಸ್ಥಳದ ಸಂಗತಿಗಳನ್ನು ಕುರಿತಾದ ಬಿಡಿ ಬಿಡಿ ಅಧ್ಯಯನಗಳಾಗಿವೆ. ಆದರೆ ಇಡೀ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರವನ್ನು ಗಮನದಲ್ಲಿಟ್ಟುಕೊಂಡು ಈ ಪ್ರದೇಶದಲ್ಲಿ ದೊರಕುವ ಎಲ್ಲಾ ಆಕರಗಳನ್ನು ಬಳಸಿಕೊಂಡು ನಡೆಸಿರುವ ಅಧ್ಯಯನಗಳು ವಿರಳವಾಗಿವೆ. ಈಗಾಗಲೇ ಪ್ರಕಟವಾಗಿರುವ ಆಕರಗಳನ್ನು ಬಳಸಿಕೊಂಡು ಇನ್ನೂ ಬೆಳಕಿಗೆ ಬಾರದಿರುವ ಹೊಸ ನೆಲೆಗಳನ್ನು ಶೋಧಿಸುವ ನಿಟ್ಟಿನಲ್ಲಿ 'ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು' ಎಂಬ ಶೀರ್ಷಿಕೆ ಅಡಿಯಲ್ಲಿ ಸಂಶೋಧನೆ ಕೈಗೊಳ್ಳಲಾಗಿದೆ.

## ೧.೬ ಅಧ್ಯಯನದ ಸ್ವರೂಪ

"ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು" ಎಂಬ ವಿಷಯದ ಸ್ವರೂಪವನ್ನು ಕುರಿತು ಕೆಲವು ವಿಧಾನಗಳನ್ನು ಮಾಡಿಕೊಳ್ಳಲಾಗಿದೆ. ಅಧ್ಯಯನದ ಸ್ವರೂಪವು ಒಟ್ಟು ಎಂಟು ಅಧ್ಯಾಯಗಳನ್ನು ಒಳಗೊಂಡಿರುವುದು. ಅವುಗಳಲ್ಲಿ ಮೊದಲನೆಯ ಅಧ್ಯಾಯವು ಪ್ರಸ್ತಾವನೆರೂಪದಾಗಿದ್ದು ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಹಾಗೂ ಪೂರ್ವಭಾವಿಯಾಗಿ ನಡೆದ ಅಧ್ಯಯನಗಳ ಸಮೀಕ್ಷೆ ಕುರಿತು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದ ಭೌಗೋಳಿಕ ಅಂಶಗಳನ್ನು ಗಮನಿಸಲಾಗಿದೆ. ಹಾಗೂ ಎರಡು ಜಿಲ್ಲೆಗಳ ಹವಾಮಾನ, ಶಿಲೆಗಳು, ಖನಿಜಗಳು, ಮಣ್ಣಿನ ಮಾದರಿ, ಮಳೆ ಪ್ರಮಾಣ, ನದಿ–ಹಳ್ಳಗಳು, ಬೆಟ್ಟ–ಗುಡ್ಡಗಳು, ಪ್ರಾಣಿಸಂಪತ್ತು, ಸಸ್ಯಸಂಪತ್ತು, ಜನಸಂಖ್ಯೆ–ಜನಸಮುದಾಯ ವೃತ್ತಿ ಹಾಗೂ ಕೃಷಿ ಚಟುವಟಿಕೆಗಳ ಕುರಿತು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರವು ಒಳಗೊಂಡಿರುವ ಪ್ರಾಗೈತಿಹಾಸಿಕ ಹಿನ್ನೆಲೆಯನ್ನು ವಿವರಿಸಲಾಗಿದೆ. ಮುಖ್ಯವಾಗಿ ಮಾನವನ ವಿಕಸನದ ಸಾಂಸ್ಕೃತಿಕ ಹಂತಗಳಾದ ಹಳೆಯ ಶಿಲಾಯುಗ, ಮಧ್ಯಶಿಲಾಯುಗ, ನವಶಿಲಾಯುಗ, ಶಿಲಾ–ತಾಮ್ರಯುಗ ಕಾಲದ ವಿವರಗಳನ್ನು ವಿಶ್ಲೇಷಿಸಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಕುರಿತು ನಡೆದಿರುವ ಐತಿಹಾಸಿಕ ಸಂಗತಿಗಳು, ಐತಿಹ್ಯ ಮತ್ತು ನಂಬಿಕೆ ಆಚರಣೆಗಳು ಹಾಗೂ ಜೀವನ ಸಂಸ್ಕೃತಿ ಕುರಿತು ವಿವರಿಸುವ ಅಂಶಗಳನ್ನು ಚರ್ಚಿಸುವ ಹಾಗೂ ತಕ್ಕಮಟ್ಟಿಗೆ ವಿಶ್ಲೇಷಿಸಿ ದಾಖಲಿಸುವ ಪ್ರಯತ್ನಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದಲ್ಲಿರುವ ಬೃಹತ್ ಶಿಲಾಯುಗದ ನೆಲೆಗಳನ್ನು ಸ್ಮಶಾನ ನೆಲೆಗಳು, ವಸತಿ ನೆಲೆಗಳೆಂದು ವಿಂಗಡಿಸಿಕೊಂಡು ಅವುಗಳ ಸ್ವರೂಪಗಳನ್ನು ಕುರಿತು ಚರ್ಚಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಬೃಹತ್ ಶಿಲಾಯುಗ ನೆಲೆಗಳಲ್ಲಿ ದೊರೆತ ಅವಶೇಷಗಳು ಅಥವಾ ಸಾಮಾಗ್ರಿಗಳನ್ನು ಪರಿಶೀಲಿಸಿ ವಿಷಯ ವಿಶ್ಲೇಷಣೆ ಮಾಡಲಾಗಿದೆ. ಅವುಗಳಲ್ಲಿ ಶಿಲಾಸಮಾಧಿಗಳು, ಮೃತ್ಪಾತ್ರೆಗಳು, ಕಬ್ಬಿಣದ ವಸ್ತು, ಅವಶೇಷಗಳು, ಕಲಾತ್ಮಕ ಅವಶೇಷಗಳಾದ ಮಣಿಗಳು, ಸುಡಾವೆ ಮಣ್ಣಿನ ಗೊಂಬೆಗಳು, ಕಲಾತ್ಮಕ ಕುರುಹುಗಳು(ವರ್ಣಚಿತ್ರಗಳು, ಗೀರುಚಿತ್ರಗಳು, ಕುಟ್ಟುಚಿತ್ರಗಳು) ಹಾಗೂ ಶಿಲೋಪಕರಣಗಳ ಕುರಿತು ವಿಶ್ಲೇಷಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಬೃಹತ್‌ಶಿಲಾಯುಗ ಮತ್ತು ಆದಿ ಐತಿಹಾಸಿಕ ಕಾಲದ ನಡುವಿನ ಸಂಬಂಧವನ್ನು ಕುರಿತು ಚರ್ಚಿಸಲಾಗಿದೆ. ಹಾಗೂ ಕೃಷಿ ಚಟುವಟಿಕೆಗಳು, ಜನ ಸಮುದಾಯಗಳು, ನಗರೀಕರಣ ಪ್ರಕ್ರಿಯೆಗಳು, ವ್ಯಾಪಾರ–ವಾಣಿಜ್ಯ ಚಟುವಟಿಕೆಗಳು ಹಾಗೂ ರಾಜ್ಯ ನಿರ್ಮಾಣ ಪ್ರಕ್ರಿಯೆ

ಕುರಿತು ದಾಖಲಾಗಿರುವ ವಿವರಗಳನ್ನು ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ವಿಶ್ಲೇಷಿಸಿ ಸಾದರಪಡಿಸುವ ಪ್ರಯತ್ನ ಮಾಡಲಾಗಿದೆ.

ಎಂಟನೆಯ ಅಧ್ಯಾಯವು ಕೊನೆಯ ಅಧ್ಯಾಯವಾಗಿದ್ದು, ಇದರಲ್ಲಿ ಅಧ್ಯಯನದ ಫಲಿತಗಳನ್ನು ಇಡೀಯಾಗಿ ಸಂಕ್ಷಿಪ್ತಗೊಳಿಸಿ ವಿವರಿಸಲಾಗಿದೆ. ಅಧ್ಯಯನಕ್ಕೆ ಪೂರಕವಾದ ಆಕರಗ್ರಂಥಗಳು, ಸಂಕ್ಷೇಪ ಸೂಚಿ, ವಕ್ತೃವಿವರ, ನಕ್ಷೆಗಳು ಹಾಗೂ ಛಾಯಾಚಿತ್ರಗಳನ್ನು ಅನುಬಂಧದಲ್ಲಿ ದಾಖಲಿಸಲಾಗಿದೆ. ಹೀಗೆ 'ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು' ಎಂಬ ಅಧ್ಯಯನ ವಿಷಯದ ಸಂಪೂರ್ಣ ಚಿತ್ರಣವನ್ನು ಮೇಲ್ಕಾಣಿಸಿದ ಅಧ್ಯಾಯಗಳಲ್ಲಿ ಸಂಯೋಜಿಸಿ ಪ್ರಸ್ತುತ ಮಹಾಪ್ರಬಂಧವನ್ನು ಪೂರ್ಣಗೊಳಿಸಲಾಗಿದೆ.

# ಅಧ್ಯಾಯ : ಎರಡು

# ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಯ ಭೌಗೋಳಿಕ ವಿವರಗಳು

ಭೌಗೋಳಿಕ ಪರಿಸರವು ಜನಸಮುದಾಯಗಳನ್ನು ಕಟ್ಟಿಕೊಡುವ ಬಹುಮುಖ್ಯ ಅಂಶಗಳಲ್ಲಿ ಒಂದಾಗಿದೆ. ಮಾನವನ ಜೀವನ ವೃತ್ತಾಂತಕ್ಕೂ ಮತ್ತು ಆತನು ವಾಸಿಸುವ ಪರಿಸರಕ್ಕೂ ನಿಕಟ ಸಂಬಂಧವಿದೆ. ಆದ್ದರಿಂದ ಮಾನವನ ಚರಿತ್ರೆಯನ್ನು ತಿಳಿಯಲು ಭೌಗೋಳಿಕ ಪರಿಸರದ ಜ್ಞಾನ ಅತ್ಯವಶ್ಯಕವಾಗಿದೆ. ಮಾನವನ ಇತಿಹಾಸವು ಆಯಾ ಪ್ರದೇಶಗಳ ಸ್ವಾಭಾವಿಕ ವಾತಾವರಣವನ್ನು ಬಳಸಿಕೊಂಡು ರೂಪಗೊಳ್ಳುವುದು. ಇಂಥ ಸನ್ನಿವೇಶಗಳು ಚರಿತ್ರೆಯ ಬರವಣಿಗೆಯಲ್ಲಿ ಸಹಕಾರಿಯಾಗಿ ನಿಲ್ಲುತ್ತವೆ. ಭೌಗೋಳಿಕ ಅಂಶಗಳ ಪರಿಜ್ಞಾನವಿಲ್ಲದೆ ಇತಿಹಾಸ ರಚಿಸುವುದು ಸುಲಭವಲ್ಲ. ಆದ್ದರಿಂದ ಭೌಗೋಳಿಕ ಪ್ರದೇಶದ ಸನ್ನಿವೇಶಗಳನ್ನು ತಿಳಿಯಲು ಆ ಪ್ರದೇಶದ ಭೂರಚನೆ, ಹವಾಗುಣ, ನದಿಕೊಳ್ಳಗಳು, ಬೆಟ್ಟ-ಗುಡ್ಡಗಳು, ಕಲ್ಲು-ಮಣ್ಣು ಹಾಗೂ ನೈಸರ್ಗಿಕ ಸಂಪತ್ತಿನ ಬಗೆಗಿರುವ ಗುಣಾವಗುಣಗಳನ್ನು ಅರಿತುಕೊಳ್ಳುವುದು ಸೂಕ್ತವು ಮತ್ತು ಪ್ರಯೋಜನಕಾರಿಯಾದುದೆಂದು ಅಭಿಪ್ರಾಯಿಸಬಹುದು. ಪ್ರಾಯಶಃ ಇಂತಹ ಪ್ರಾಥಮಿಕ ವಿವರಗಳನ್ನು ತಿಳಿದುಕೊಂಡಾಗಲೇ ಆಯಾ ಪ್ರದೇಶದಲ್ಲಿ ಬೆಳೆದುಬಂದ ಮಾನವನ ಸಂಸ್ಕೃತಿಯ ಬೆಳವಣಿಗೆಯ ಕುರಿತು ಇರುವ ವಿವಿಧ ಆಯಾಮಗಳನ್ನು ಸೂಕ್ಷ್ಮವಾಗಿ ತಿಳಿಯಬಹುದು. ಇಂಥೆಲ್ಲಾ ಅಂಶಗಳು ಆಯಾ ಪ್ರದೇಶದ ಜನ ಜೀವನದ ಸರ್ವಾಂಗೀಣ ಅಭಿವೃದ್ಧಿಗೆ ಹೇಗೆ ಪೂರಕವಾದವು ಎಂಬುದನ್ನು ನಿಖರವಾಗಿ ತಿಳಿಯಬಹುದು. ಈ ನಿಟ್ಟಿನಲ್ಲಿ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಯ ಭೌಗೋಳಿಕ ವಿವರಗಳನ್ನು ಅಧ್ಯಯನಕ್ಕೆ ಪೂರಕವಾಗಿ ಕೆಳಕಂಡಂತೆ ವಿವೇಚಿಸಿ ಅಳವಡಿಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ.

**ಭೌಗೋಳಿಕ ವಿವರಗಳು**

ಕರ್ನಾಟಕದ ಮಧ್ಯಭಾಗದಲ್ಲಿರುವ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳು ನೆರೆಹೊರೆಯ ಜಿಲ್ಲೆಗಳಾಗಿವೆ. ಈ ಎರಡು ಜಿಲ್ಲೆಗಳು ನಾಡಿನ ಈಶಾನ್ಯ ಭಾಗದಲ್ಲಿ ಕೇಂದ್ರೀಕೃತಗೊಂಡಿವೆ. ಭೌಗೋಳಿಕವಾಗಿ ಉತ್ತರ ಅಕ್ಷಾಂಶ ೧೪.೩೦' ರಿಂದ ೧೫'.೫೦ ಮತ್ತು ೭೫'.೪೦ ರಿಂದ ೭೭'೧೧ ಪೂರ್ವರೇಖಾಂಶದವರೆಗೂ ವ್ಯಾಪಿಸಿವೆ.[೧] ಈ ಪ್ರದೇಶದ ಒಟ್ಟು ಭೂ ವಿಸ್ತೀರ್ಣ ೧೪೦೦೯

ಚದರ ಕಿ.ಮೀ. ಇದೆ. ಪೂರ್ವಕ್ಕೆ ಆಂಧ್ರಪ್ರದೇಶದ ಅನಂತಪುರ, ಕರ್ನೂಲ್ ಜಿಲ್ಲೆಗಳಿವೆ. ಪಶ್ಚಿಮಕ್ಕೆ ಹಾವೇರಿ, ಗದಗ ಜಿಲ್ಲೆಗಳು ಹಾಗೂ ಉತ್ತರಕ್ಕೆ ಬಾಗಲಕೋಟೆ, ರಾಯಚೂರು ಜಿಲ್ಲೆಗಳಿವೆ. ದಕ್ಷಿಣಕ್ಕೆ ದಾವಣಗೆರೆ, ಚಿತ್ರದುರ್ಗ ಜಿಲ್ಲೆಗಳು ಗಡಿಗಳಾಗಿವೆ. ಪ್ರಸ್ತುತ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳು ಹಿಂದುಳಿದ ಕಲ್ಯಾಣ ಕರ್ನಾಟಕದ(ಹೈದರಾಬಾದ್ ಕರ್ನಾಟಕ) ಆರು ಜಿಲ್ಲೆಗಳ ವ್ಯಾಪ್ತಿಗೆ ಒಳಪಟ್ಟಿವೆ.

**ಬಳ್ಳಾರಿ ಜಿಲ್ಲೆ**

ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಬಳ್ಳಾರಿಯು ಮದ್ರಾಸ್ ಪ್ರಾಂತ್ಯದ ಒಂದು ದೊಡ್ಡ ಜಿಲ್ಲೆಯಾಗಿತ್ತು. ಅಂದು ಈಗಿರುವ ತಾಲ್ಲೂಕುಗಳಲ್ಲದೇ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಆಧೋನಿ, ಆಲೂರು ಮತ್ತು ರಾಯದುರ್ಗ ತಾಲ್ಲೂಕುಗಳನ್ನು ಕೂಡ ಒಳಗೊಂಡ ವಿಸ್ತಾರವಾದ ರಾಯಲಸೀಮೆಯ ಪ್ರಮುಖ ಪ್ರದೇಶವೆಂದು ಕರೆಯಿಸಿಕೊಳ್ಳುತ್ತಿತ್ತು. ಆದರೆ ಭಾಷಾವಾರು ಪ್ರತ್ಯೇಕತೆಯ ಹೋರಾಟದ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಆಂಧ್ರಪ್ರದೇಶ ರಾಜ್ಯದ ಭಾಗವಾಗಿ ೧೯೫೩ರಲ್ಲಿ ಆಧೋನಿ, ಆಲೂರು ಮತ್ತು ರಾಯದುರ್ಗ ಭೌಗೋಳಿಕ ಪ್ರದೇಶಗಳು ಕನ್ನಡದ ಶಾಶ್ವತ ಸಂಬಂಧವನ್ನು ಕಡೆದುಕೊಂಡ ಭೂ ಪ್ರದೇಶಗಳಾಗಿ ಮಾರ್ಪಟ್ಟವು.[೨]

೧೯೫೩ರಲ್ಲಿ ಆಧೋನಿ, ಆಲೂರು, ಮತ್ತು ರಾಯದುರ್ಗ ತಾಲ್ಲೂಕುಗಳನ್ನು ಆಂಧ್ರಪ್ರದೇಶಕ್ಕೆ ವರ್ಗಾಯಿಸಿದ ಮೇಲೆ ಬಳ್ಳಾರಿ ಜಿಲ್ಲೆಯನ್ನು ಆಗಿನ ಮೈಸೂರು ಪ್ರಾಂತ್ಯಕ್ಕೆ ಸೇರಿಸಲಾಯಿತು. ಆದರೆ ಬಳ್ಳಾರಿ ತಾಲ್ಲೂಕನ್ನು ಮಾತ್ರ ಮೈಸೂರು ಪ್ರಾಂತ್ಯಕ್ಕೆ ವರ್ಗಾಯಿಸದೆ ಒಂದು ರೀತಿಯ ಅತಂತ್ರ ಸ್ಥಿತಿ ನಿರ್ಮಾಣವಾದಂತಾಯಿತು. ಈ ಸಂದರ್ಭದಲ್ಲಿ ಬಳ್ಳಾರಿ ತಾಲ್ಲೂಕು ಆಂಧ್ರಕ್ಕೆ ಸೇರಬೇಕೋ ಅಥವಾ ಮೈಸೂರಿಗೆ ಸೇರಬೇಕೋ ಎಂಬ ವಿವಾದ ಹುಟ್ಟಿಕೊಂಡಿತು. ಈ ವಿಚಾರವನ್ನು ತೀರ್ಮಾನಿಸಲು ಕೇಂದ್ರ ಸರ್ಕಾರದಿಂದ ಹೈದರಾಬಾದ್‌ನ ಉಚ್ಚನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳಾದ ಶ್ರೀ ಎಲ್.ಎಸ್. ಮಿಶ್ರಾ ಅವರ ನೇತೃತ್ವದಲ್ಲಿ ೧೯, ಮೇ ೧೯೫೩ರಲ್ಲಿ ಸಮಿತಿಯೊಂದನ್ನು ರಚಿಸಲಾಯಿತು. ಆ ಸಮಿತಿಯು ತನ್ನ ವರದಿಯಲ್ಲಿ ಬಳ್ಳಾರಿ ತಾಲ್ಲೂಕು ಸಂಪೂರ್ಣವಾಗಿ ಕರ್ನಾಟಕ ಪ್ರಾಂತ್ಯಕ್ಕೆ ಸೇರಬೇಕು ಎಂದು ಸಲಹೆ ನೀಡಿತು. ಈ ಸಲಹೆಯನ್ನು ಸರ್ಕಾರ ಅಂಗೀಕಾರ ಮಾಡಿತು. ಇದರಿಂದ ಕರ್ನಾಟಕ ಏಕೀಕರಣ ಇತಿಹಾಸದಲ್ಲಿ ಮೈಸೂರು ಪ್ರಾಂತ್ಯಕ್ಕೆ ಸೇರ್ಪಡೆಯಾದ ಮೊದಲ ಭಾಗವೇ ಬಳ್ಳಾರಿ ತಾಲ್ಲೂಕು. ಹಲವು ಹೋರಾಟಗಳ ಫಲವಾಗಿ ಬಳ್ಳಾರಿ ಜಿಲ್ಲೆಯು ಕರ್ನಾಟಕದ ಭಾಗವಾಗಿ ೧೯೫೩ರಿಂದಲೂ ತನ್ನದೇ ಛಾಪನ್ನು ಮೂಡಿಸುತ್ತಾ ಬಂದಿರುವುದು ಭೌಗೋಳಿಕವಾಗಿ ವಿಸ್ತಾರವಾಗಿದ್ದ ಬಳ್ಳಾರಿ ಪಟ್ಟಣವನ್ನು ಇಟ್ಟುಕೊಂಡು ಇದೇ ಸಂದರ್ಭದಲ್ಲಿ ಉಳಿದ ಎಂಟು ತಾಲ್ಲೂಕುಗಳನ್ನು ಕೂಡ ಬಳ್ಳಾರಿ ಜಿಲ್ಲಾ ವ್ಯಾಪ್ತಿಗೆ ಸೇರಿಸಲಾಯಿತು. ಬಳ್ಳಾರಿ ಜಿಲ್ಲೆಯನ್ನು ಆಡಳಿತದ ಅನುಕೂಲಕ್ಕಾಗಿ ಬಳ್ಳಾರಿ ಉಪವಿಭಾಗ ಮತ್ತು ಹೊಸಪೇಟೆ ಉಪವಿಭಾಗಗಳೆಂದು ವಿಂಗಡಿಸಲಾಗಿದೆ.

ತುಂಗಭದ್ರಾ ಅಣೆಕಟ್ಟು ನಿರ್ಮಿಸುವ ಸಂದರ್ಭದಲ್ಲಿ ಅಣೆಕಟ್ಟೆಯ ಸ್ಥಳದಲ್ಲಿದ್ದ 'ಮಲ್ಲಾಪುರ' ಎಂಬ ಗ್ರಾಮವನ್ನು ಉಪತಾಲ್ಲೂಕಾಗಿ ಮಾಡಲಾಯಿತು. ಆದರೆ ಆ ಪ್ರದೇಶವು ಆಣೆಕಟ್ಟೆ ನೀರಿನಲ್ಲಿ

ಅಂತರ್ಗತವಾಯಿತು. ಪರಿಣಾಮವಾಗಿ ಆಡಳಿತದ ಅನುಕೂಲಕ್ಕಾಗಿ ೧೯೫೭ರಲ್ಲಿ ಸರಕಾರವು ಹಗರಿಬೊಮ್ಮನಹಳ್ಳಿ ಪಟ್ಟಣವನ್ನು ಕೇಂದ್ರವಾಗಿಟ್ಟುಕೊಂಡು ಹಗರಿಬೊಮ್ಮನಹಳ್ಳಿ ಎಂಬ ಹೆಸರಿನ ತಾಲ್ಲೂಕುವೊಂದನ್ನು ರಚಿಸಲಾಯಿತು. ಅಲ್ಲದೇ ನಂತರ ಕಾಲದಲ್ಲಿ ಅಂದರೆ ೧೯೯೮ರಲ್ಲಿ ಹೊಸದಾಗಿ ರಚಿಸಲಾದ ದಾವಣಗೆರೆ ಜಿಲ್ಲೆಗೆ ಈ ಹಿಂದೆ ಬಳ್ಳಾರಿ ಜಿಲ್ಲೆಯಲ್ಲಿದ್ದ ಹರಪ್ಪನಹಳ್ಳಿ ತಾಲ್ಲೂಕನ್ನು ಸೇರಿಸಿ ಜಿಲ್ಲೆಯ ವ್ಯಾಪ್ತಿಯನ್ನು ಕುಗ್ಗಿಸಲಾಯಿತು. ಇದರಿಂದಾಗಿ ಪ್ರಸ್ತುತ ಜಿಲ್ಲೆಯಲ್ಲಿ ಏಳು ತಾಲ್ಲೂಕುಗಳು ಮಾತ್ರ ಇವೆ. ಅವುಗಳಲ್ಲಿ ಬಳ್ಳಾರಿ, ಸಿರುಗುಪ್ಪ, ಸಂಡೂರು ತಾಲ್ಲೂಕುಗಳನ್ನು ಬಳ್ಳಾರಿ ಉಪವಿಭಾಗಕ್ಕೆ ಒಳಪಡಿಸಿದರೆ ಹೊಸಪೇಟೆ, ಕೂಡ್ಲಿಗಿ, ಹೂವಿನಹಡಗಲಿ, ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳನ್ನು ಹೊಸಪೇಟೆ ಉಪವಿಭಾಗಕ್ಕೆ ಸೇರಿಸಲಾಗಿದೆ. ಒಟ್ಟಾರೆಯಾಗಿ ಈ ಜಿಲ್ಲೆಯಲ್ಲಿ ೨೬ ಹೋಬಳಿಗಳು, ೫೪೯ ಗ್ರಾಮಗಳು, ೭೭ ಮಂಡಲಗಳು ಜಿಲ್ಲಾ ವ್ಯಾಪ್ತಿಯಲ್ಲಿ ಕೇಂದ್ರಿಕೃತವಾಗಿವೆ. ಸದ್ಯ ಈ ಜಿಲ್ಲೆಯು ಒಟ್ಟು ೮೪೫೦ ಚದರ ಕಿ.ಮೀ ಭೂ ವಿಸ್ತೀರ್ಣವನ್ನು ಹೊಂದಿರುವುದನ್ನು ಗಮನಿಸಬಹುದು.[೩] (ದಾವಣಗೆರೆ ಜಿಲ್ಲೆಯಲ್ಲಿದ್ದ ಹರಪನಹಳ್ಳಿ ತಾಲ್ಲೂಕನ್ನು ಪುನಃ ೨೦೧೯ರಲ್ಲಿ ಬಳ್ಳಾರಿ ಜಿಲ್ಲೆಗೆ ಸೇರಿಸಿ ಮತ್ತೆ ಜಿಲ್ಲಾ ವ್ಯಾಪ್ತಿಯನ್ನು ಹಿಗ್ಗಿಸಲಾಗಿದೆ).

**ಕೊಪ್ಪಳ ಜಿಲ್ಲೆ**

ಕೊಪ್ಪಳ ಪ್ರದೇಶವು ಬ್ರಿಟಿಷರ ಕಾಲದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಸ್ವತಂತ್ರ ಜಿಲ್ಲೆಯಾಗಿತ್ತು.[೪] ನಂತರ ಕೊಪ್ಪಳ ಭಾಗವನ್ನು ರಾಯಚೂರು ಜಿಲ್ಲೆಗೆ ಸೇರಿಸಲಾಯಿತು. ೧ನೇ ಎಪ್ರಿಲ್ ೧೯೯೮ರಲ್ಲಿ ರಾಯಚೂರು ಜಿಲ್ಲೆಯನ್ನು ವಿಂಗಡಿಸಿ ಕೊಪ್ಪಳ ಜಿಲ್ಲೆಯನ್ನು ಪ್ರತ್ಯೇಕ ಜಿಲ್ಲೆಯಾಗಿ ರೂಪಿಸಲಾಯಿತು. ಗುಲ್ಬರ್ಗ ವಿಭಾಗಕ್ಕೆ ಒಳಪಟ್ಟಿರುವ ಈ ಜಿಲ್ಲೆಯಲ್ಲಿ ಕೊಪ್ಪಳ, ಗಂಗಾವತಿ, ಕುಷ್ಟಗಿ, ಯಲಬುರ್ಗಾ ಎಂಬ ಹೆಸರಿನ ನಾಲ್ಕು ತಾಲ್ಲೂಕುಗಳಿವೆ. ಕೊಪ್ಪಳ ತಾಲ್ಲೂಕು ಪ್ರದೇಶವು ೧೩೭೫ ಚ.ಕಿ.ಮೀ, ಯಲಬುರ್ಗಾ ೧೪೧೨ ಚ.ಕಿ.ಮೀ, ಕುಷ್ಟಗಿ ೧೩೬೬ ಚ.ಕೀ.ಮೀ ಹಾಗೂ ಗಂಗಾವತಿ ತಾಲ್ಲೂಕು ಪ್ರದೇಶವು ೧೩೨೮ ಚ.ಕಿ.ಮೀ ವಿಸ್ತೀರ್ಣತೆಯಿಂದ ಕೂಡಿದ ಆಡಳಿತಾತ್ಮಕವಾಗಿ ಕೊಪ್ಪಳ ಜಿಲ್ಲಾ ವ್ಯಾಪ್ತಿಯಲ್ಲಿರುವ ಪ್ರದೇಶವಾಗಿದೆ. ಒಟ್ಟು ಈ ತಾಲ್ಲೂಕುಗಳು ಸೇರಿ ೫೫೪೯ ಚದರ ಕಿ.ಮೀ ಭೌಗೋಳಿಕ ವಿಸ್ತೀರ್ಣತೆಯನ್ನು ಹೊಂದಿರುವುದನ್ನು ಕಾಣುತ್ತೇವೆ.[೫]

**ಭೂರಚನೆ**

ಅಧ್ಯಯನಕ್ಕೆ ಆಯ್ಕೆಮಾಡಿಕೊಂಡಿರುವ ಪ್ರಸ್ತುತ ಪ್ರದೇಶವು ಬೆಟ್ಟ-ಗುಡ್ಡಗಳು ಹಾಗೂ ಖನಿಜಗಳಿಂದ ತುಂಬಿದ ಸಮೃದ್ಧ ಪ್ರದೇಶವಾಗಿದೆ. ಕೊಪ್ಪಳ ಹಾಗೂ ಬಳ್ಳಾರಿ ಪ್ರದೇಶವು ಬಹುತೇಕ ಆರ್ಕಿಯನ್ ಶಿಲಾಸಮುದಾಯದಿಂದ ಕೂಡಿರುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ಕ್ರಿಸ್ಟಲ್ ಲೈನ್‌ಸಿಸ್ಟ್(ಸ್ಪಟಿಕಾತ್ಮಕ ಪದರು ಶಿಲೆ) ಲ್ಯಾಟರೈಟ್(ಜಂಬಿಟ್ಟಿಗೆ) ಮತ್ತು ಗ್ರಾನೈಟ್ಸ್ ಶಿಲಾ ಪದರುಗಳಿಂದ ಕೂಡಿರುವುದನ್ನು ಗಮನಿಸಬಹುದು. ಅಲ್ಲಲ್ಲಿ ಡೈಕ್‌ಶಿಲಾ ಪದರಗಳು ಕೂಡ ಲಭ್ಯವಾಗಿರುವುದನ್ನು ಗಮನಿಸಬಹುದು.

ಇಲ್ಲಿಯ ನಸುಗೆಂಪು ಮತ್ತು ಬೂದು ಬಣ್ಣದ ಶಿಲೆಗಳು ಹಂಪಿ, ಗಂಗಾವತಿ ತಾಲ್ಲೂಕಿನ ಹೇಮಗುಡ್ಡ ಹಾಗೂ ಕುಕನೂರಿನ ಬಳಿ ಕಾಣುತ್ತೇವೆ. ಕೆಂಪು ಕಣಶಿಲೆ ಹಾಗೂ ಕಂದು ಮತ್ತು ಊದಾ[೬](ಕನ್ನೀಲಿ) ಕಣಶಿಲೆಯನ್ನು ಆನೆಗುಂದಿ ಮತ್ತು ಹಿರೇಬೆಣಕಲ್ಲು ಪರಿಸರದಲ್ಲಿ ಕಂಡುಬರುತ್ತವೆ. ಧಾರವಾಡ ಶ್ರೇಣಿಗೆ ಸೇರಿದ ಕ್ರಿಸ್ಟಲೈನ್‌ಸಿಸ್ಟ್ ಶಿಲಾಸಂಕೀರ್ಣದಲ್ಲಿಯ ಪದರು ಚಿಕ್ಕ–ಚಿಕ್ಕ ನಡುಗಡ್ಡೆಗಳಂತೆ ಗೋಚರಿಸುತ್ತವೆ. ಕೊಪ್ಪಳ ತಾಲ್ಲೂಕಿನ ಮಾದಿನೂರು, ಗಂಗಾವತಿ ತಾಲ್ಲೂಕಿನ ಬೂದುಗುಂಪಾ, ಲಕ್ಷ್ಮೀಗುಡ್ಡಗಳು ಹಾಗೂ ಕುಷ್ಟಗಿ ತಾಲ್ಲೂಕಿನ ಕೆಲವು ಭಾಗಗಳಲ್ಲಿ ಪದರು ಶಿಲೆಗಳು ಕಂಡುಬರುತ್ತವೆ. ಒಟ್ಟಿನಲ್ಲಿ ಈ ಪ್ರದೇಶದಲ್ಲಿ ಕಂಡುಬರುವ ಶಿಲೆಗಳು ಅತೀ ಪುರಾತನವಾದವುಗಳೆಂದು ಅಭಿಪ್ರಾಯಿಸಲಾಗಿದೆ.

**ಮಣ್ಣು**

ಈ ಪ್ರದೇಶದಲ್ಲಿ ಎರೆ(ಕಪ್ಪು), ಕೆಂಪು, ಮಸಾರಿ, ಕೆಲವು ಕಡೆ ಸವಳು ಭೂಮಿ ಹಾಗೂ ಜೇಡಿಮಣ್ಣಿನಿಂದ ಮತ್ತು ಕ್ಷಾರ ಲವಣಗಳಿಂದ ಕೂಡಿರುವ ಫಲವತ್ತಾದ ಭೂಮಿ ಇದೆ. ತುಂಗಾಭದ್ರ ನದಿತೀರದಲ್ಲಿ ಮರಳು ಮಿಶ್ರಿತ ಕೆಂಪು ಜೇಡಿಮಣ್ಣು ಇರುವುದು. ಬೇರೆ ಬೇರೆ ಭಾಗದಲ್ಲಿ ಮಳೆಯ ಪ್ರಮಾಣಕ್ಕೆ ಅನುಗುಣವಾಗಿ ಪ್ರತ್ಯೇಕ ಮಣ್ಣು ಕಂಡುಬಂದಿದ್ದು ಪ್ರಸ್ತುತ ಪ್ರದೇಶದ ಪ್ರಾಕೃತಿಕ ವೈಶಿಷ್ಟ್ಯವು ಒಂದೇ ರೀತಿಯ ಸ್ವರೂಪ ಅಥವಾ ಗುಣಲಕ್ಷಣಗಳನ್ನು ಹೊಂದಿರದೇ ಸ್ವಲ್ಪಮಟ್ಟಿಗೆ ವೈವಿಧ್ಯತೆ ಒಳಗೊಂಡಿರುವುದನ್ನು ಗಮನಿಸಬಹುದು.

**ಬೆಟ್ಟ–ಗುಡ್ಡಗಳು**

ಈ ಪರಿಸರದಲ್ಲಿ ಹಲವಾರು ಬೆಟ್ಟಗುಡ್ಡಗಳಿವೆ. ಅವುಗಳಲ್ಲಿ ತುಂಗಭದ್ರಾ ಆಣೆಕಟ್ಟೆಯ ಹತ್ತಿರ ಮಲ್ಲಾಪುರ ಎಂಬ ಗ್ರಾಮದಿಂದ ಹಿಡಿದು ಬಳ್ಳಾರಿ ನಗರದವರೆಗೆ ಸುಮಾರು ೩೦ ಮೈಲಿ ದೂರದವರೆಗೆ ಬೆಟ್ಟಸಾಲುಗಳು ಸರಳ ರೇಖೆಯಂತೆ ಹರಡಿರುವುದನ್ನು ಕಾಣುತ್ತೇವೆ. ಈ ಬೆಟ್ಟ ಸಾಲಿನಲ್ಲಿ ಅಮೂಲ್ಯ ಖನಿಜಾಂಶಗಳಿವೆ. ಸಂಡೂರು ತಾಲ್ಲೂಕಿನ ಕುಮಾರಸ್ವಾಮಿ ಬೆಟ್ಟಶ್ರೇಣಿಯು ಅತಿ ಎತ್ತರದ ಗುಡ್ಡವಾಗಿದೆ. ಈ ಗುಡ್ಡವು ಸಮುದ್ರ ಪಾತಳಿಯಿಂದ ಸುಮಾರು ೩೪೦೦ ಅಡಿ ಎತ್ತರ ಹೊಂದಿರುವುದು. ಸ್ಥಳ ಪುರಾಣದ ಉಲ್ಲೇಖದಂತೆ ಈ ಪರ್ವತಕ್ಕೆ ಕೃತಯುಗದಲ್ಲಿ 'ದೇವಗಿರಿ' ಎಂದೂ, ತೇತ್ರಾಯುಗದಲ್ಲಿ 'ಸ್ವರ್ಣಗಿರಿ' ಎಂದೂ ದ್ವಾಪರಯುಗದಲ್ಲಿ 'ದಿವ್ಯಾಚಲ'ವೆಂದು ಕಲಿಯುಗದಲ್ಲಿ 'ಲೋಹಾಚಲ'ವೆಂದು ಕರೆಯಲಾಗುತ್ತಿತ್ತು ಎಂಬ ಅಭಿಪ್ರಾಯಗಳು ದಾಖಲಾಗಿರುವುದುಂಟು.[೭] ತಾರಕಾದಿ ಅಸುರರ ಸಂಹಾರಕ್ಕಾಗಿ ಸ್ವಾಮಿ ಕಾರ್ತಿಕೇಯನು ಬ್ರಹ್ಮಾದಿ ದೇವತೆಗಳಿಂದ ಪ್ರಾರ್ಥನೆ ಮಾಡಿಸಿಕೊಂಡು ದೇವ ಸೇನಾಧಿಪತ್ಯವನ್ನುವಹಿಸಿ ಬಂದು ಈ ಪರ್ವತದಲ್ಲಿ ನೆಲೆನಿಂತನೆಂಬ ಪ್ರತೀತವಿದೆ. ಇದೇ ಪರಿಸರದಲ್ಲಿನ ರಾಮನಮಲೆ ಬೆಟ್ಟವು ೩೨೫೬ ಅಡಿ ಎತ್ತರದಿಂದ ಕೂಡಿರುವ ಗುಡ್ಡವಾಗಿದೆ. ಇದೇ ಪರಿಸರದಲ್ಲಿರುವ ಜಂಬುನಾಥ ಬೆಟ್ಟ, ಸಂಡೂರು ಬೆಟ್ಟಗಳ ಸಾಲಿನಲ್ಲಿ ತಾಮ್ರದ ಅದಿರಿನ ನಿಕ್ಷೇಪವಿದೆ.

ಈ ಬೆಟ್ಟ ಸಾಲುಗಳು ಸಮುದ್ರ ಮಟ್ಟದಿಂದ ೩೨೮೫ ಅಡಿಗಳಷ್ಟು ಎತ್ತರವಾಗಿದ್ದು, ದರೋಜಿಯಿಂದ ಹಗರಿ ನದಿಯವರೆಗೆ ಸುಮಾರು ೩೬ ಮೈಲಿ ವಿಸ್ತಾರವಾಗಿ ಹಬ್ಬಿಕೊಂಡಿವೆ.[೮]

ಸಂಡೂರಿನಿಂದ ದಕ್ಷಿಣಕ್ಕೆ ಮೂವತ್ತು ಮೈಲು ದೂರದಲ್ಲಿರುವ ಮಲ್ಲಪ್ಪ ಅಥವಾ ಮಲ್ಲಯ್ಯನ ಗುಡ್ಡದ ಸಾಲು ೩೧೭೭ ಅಡಿ ಎತ್ತರವಾಗಿದೆ. ಅಲ್ಲದೇ ಈ ಗುಡ್ಡ ಶ್ರೇಣಿಯು ಹಡಗಲಿ ಹಾಗೂ ಹರಪನಹಳ್ಳಿ ತಾಲ್ಲೂಕುಗಳಲ್ಲಿ ಸುಮಾರು ೨೫ ಮೈಲು ವಿಸ್ತರಿಸಿಕೊಂಡಿರುವುದನ್ನು ಗಮನಿಸಬಹುದು. ಇದರ ದಕ್ಷಿಣಕ್ಕೆ ಇರುವ ಕಲ್ಲಹಳ್ಳಿ ಗುಡ್ಡದಸಾಲು ೨೮೦೦ ಅಡಿ ಎತ್ತರವಾಗಿದೆ. ಈ ಬೆಟ್ಟಸಾಲುಗಳಲ್ಲಿ ಅತ್ಯಂತ ಪ್ರಸಿದ್ಧ ಗುಡ್ಡವೆಂದರೆ ನರಸಿಂಹದೇವರ ಗುಡ್ಡ ಮತ್ತು ಉಚ್ಚಂಗಿ ದುರ್ಗಗಳಾಗಿವೆ. ಈ ಜಿಲ್ಲೆಯ ಬೆಟ್ಟಸಾಲುಗಳಲ್ಲಿ ಕೂಡ್ಲಿಗಿ ಬೆಟ್ಟಸಾಲುಗಳಲ್ಲಿರುವ ಆನೇಕಲ್ಲು ಗುಡ್ಡ ೨೩೭೮ ಅಡಿ ಎತ್ತರವಾಗಿದೆ. ಉತ್ತರಕ್ಕೆ ಸುಮಾರು ೫ ಕಿ.ಮೀ ದೂರದಲ್ಲಿ ಪ್ರಾರಂಭವಾಗಿ ಕೂಡ್ಲಿಗಿಯ ಉತ್ತರ ಮತ್ತು ಪೂರ್ವದ ಕಡೆ ಹಬ್ಬಿ ಜರಿಮಲೆದುರ್ಗದ(೨೭೪೩ ಅಡಿ ಎತ್ತರ) ಬಳಿ ಕೊನೆಗೊಳ್ಳುತ್ತವೆ. ಗುಡೇಕೋಟೆ ಗುಡ್ಡಗಳ ಸಾಲು ಸಂಡೂರು ತಾಲ್ಲೂಕಿನ ಚೋರುನೂರಿನ ಬಳಿ ಪ್ರಾರಂಭವಾಗಿ ಆಗ್ನೇಯಕ್ಕೆ ತಿರುಗಿ ಗುಡೇಕೋಟೆ ಮೂಲಕ ಚಿನ್ನಹಗರಿ ಕಣಿವೆಯನ್ನು ಪ್ರವೇಶಿಸಿ ಚಿತ್ರದುರ್ಗದಲ್ಲಿ ಕೊನೆಗೊಳ್ಳುತ್ತವೆ. ಈ ರೀತಿಯ ಬೆಟ್ಟಸಾಲುಗಳನ್ನು ಹೊಂದಿರುವ ಅವುಗಳು ಧಾರವಾಡ ಪ್ರಕಾರದ ಗುಡ್ಡಗಳಾಗಿದ್ದು, ದುಂಡಾಕಾರದ ಕಣಿವೆಗಳನ್ನು, ದೊಡ್ಡ ದೊಡ್ಡ ಬೃಹತ್ ಬಂಡೆಗಳನ್ನು ಹೊಂದಿವೆ.[೯] ಇಂತಹ ಬೆಟ್ಟಗುಡ್ಡಗಳ ಕಣಿವೆಯಲ್ಲಿ ಕಲ್ಲಾಸರೆಗಳಲ್ಲಿ ಶಿಲಾಯುಗದ ಮಾನವನ ನೆಲೆ ನಿವೇಶನಗಳು ಕಂಡುಬಂದಿವೆ. ಅದೇ ರೀತಿ ಕೊಪ್ಪಳ ಜಿಲ್ಲೆಯೂ ಸಹ ಸಮುದ್ರಮಟ್ಟಕ್ಕಿಂತ ಹೆಚ್ಚು ಎತ್ತರವಲ್ಲದ ಭೂ ಪ್ರದೇಶದಿಂದ ಕೂಡಿರುವುದನ್ನು ಗಮನಿಸಬಹುದು. ಇಲ್ಲಿ ಯಾವ ಪ್ರಮುಖ ಬೆಟ್ಟಸಾಲು ಕಂಡುಬರುವುದಿಲ್ಲ. ಅಲ್ಲಲ್ಲಿ ಮಾತ್ರ ಹೆಚ್ಚು ಎತ್ತರವಲ್ಲದ ಗುಡ್ಡಗಳಿಂದ ಕೂಡಿದ ವಿಸ್ತಾರವಾಗಿ ಹರಡಿಕೊಂಡಿರುವ ಪ್ರದೇಶವಾಗಿ ಕಂಡುಬರುತ್ತದೆ.

ಕುಷ್ಟಗಿ ತಾಲ್ಲೂಕಿನಲ್ಲಿ ಕಂಡುಬರುವ ಬೆಟ್ಟಗಳು ಬಾದಾಮಿ ಬೆಟ್ಟಶ್ರೇಣಿಗೆ ಸೇರಿವೆ. ಈ ಬೆಟ್ಟಸಾಲುಗಳು ಗಂಗಾವತಿ ತಾಲ್ಲೂಕಿನಲ್ಲಿಯೂ ಮುಂದುವರಿಯುತ್ತವೆ. ಇಲ್ಲಿನ ಕುಮಾರರಾಮನ ಬೆಟ್ಟವು ೨೨೩೭ ಅಡಿ ಎತ್ತರವಾಗಿದೆ. ಕುಷ್ಟಗಿಯಿಂದ ೩೨ ಕಿ.ಮೀ ದೂರದಲ್ಲಿ ಜಗದಗುಡ್ಡವು ೨೦೮೬ ಅಡಿ ಎತ್ತರವನ್ನು ಹೊಂದಿದ್ದರೆ, ಎಮ್ಮೆಗುಡ್ಡ ೨೯೬೩ ಅಡಿ ಎತ್ತರವನ್ನು ಒಳಗೊಂಡಿರುವುದನ್ನು ಕಾಣುತ್ತೇವೆ. ಕೊಪ್ಪಳದ ಕೋಟೆಗುಡ್ಡ ೨೩೩೯ ಅಡಿಗಳಷ್ಟು ಎತ್ತರ, ಯಲಬುರ್ಗಾ ತಾಲ್ಲೂಕಿನಲ್ಲಿರುವ ಮಂದಲಮರಿಗುಡ್ಡವು ೨೯೬೩ ಅಡಿ ಎತ್ತರವಾಗಿದೆ. ತಾವರೆಗೆರೆಯ ಬಳಿಯಿರುವ ಮೇಣೆಧಾಳು ಎಂಬಲ್ಲಿ ೧೯೫೧ ಅಡಿ ಎತ್ತರದ ಬೆಟ್ಟವಿದೆ.[೧೦] ಇಂತಹ ಬೆಟ್ಟಗಳಲ್ಲಿ ಶಿಲಾಯುಗದ ಮಾನವನ ನಿವೇಶನಗಳು ಕಂಡುಬಂದಿರುವುದನ್ನು ಗಮನಿಸಬಹುದು.

**ಖನಿಜ ಸಂಪತ್ತು**

ಕೊಪ್ಪಳ ಜಿಲ್ಲೆಗೆ ಹೋಲಿಸಿದರೆ ಬಳ್ಳಾರಿ ಜಿಲ್ಲೆಯ ಬೆಟ್ಟಗಳಲ್ಲಿ ಉತ್ತಮ ಗುಣಮಟ್ಟದ ಖನಿಜ ಸಂಪತ್ತು ದೊರೆಯುತ್ತದೆ. ಇಲ್ಲಿನ ಕಬ್ಬಿಣದ ಅದಿರಿನ ನಿಕ್ಷೇಪವು ವಿಶ್ವಮಾನ್ಯತೆ ಪಡೆದಿರುವುದು

ವಿಶೇಷ. ಬಳ್ಳಾರಿ ಭಾಗದಲ್ಲಿ ಕಬ್ಬಿಣದ ಅದಿರಲ್ಲದೆ ಮ್ಯಾಂಗನೀಸ್, ರೆಡ್‌ಆಕ್ಸೈಡ್ ಮುಂತಾದ ಖನಿಜಗಳು ದೊರೆಯುತ್ತವೆ. ಖನಿಜಗಳೆಲೆಲ್ಲಾ ಅತ್ಯಂತ ಅಮೂಲ್ಯವಾದುದೆಂದರೆ ಕಬ್ಬಿಣದ ಅದಿರು. ಬೃಹತ್ ಶಿಲಾಯುಗ ಕಾಲದಿಂದ ಇದರ ಉಪಯೋಗವನ್ನು ಕಂಡುಕೊಂಡ ಮಾನವನು ನಗರೀಕೃತ ಸಂಸ್ಕೃತಿಯೆಡೆಗೆ ಹೆಜ್ಜೆಹಾಕಿದನು. ಲೋಹ ಆಯುಧಗಳ ತಯಾರಿಕೆ ಹಾಗೂ ಬಳಕೆಯು ತೀವ್ರತರವಾದ ಬದಲಾವಣೆಗಳಿಗೆ ಮುನ್ನುಡಿ ಬರೆದವೆಂದು ಅಭಿಪ್ರಾಯಿಸಬಹುದು. ಈ ಎರಡೂ ಜಿಲ್ಲಾ ಪರಿಸರದಲ್ಲಿ ದೊರೆಯುವ ವಿವಿಧ ಬಗೆಯ ಖನಿಜಗಳನ್ನು ಪ್ರಸ್ತುತ ಅಧ್ಯಯನದ ವಿವರಗಳಿಗೆ ಪೂರಕವಾಗಿ ನಿಲ್ಲಬಲ್ಲ ಹಾಗೂ ಅವುಗಳ ಪರಿಣಾಮದಿಂದ ಉಂಟಾದ ಬದಲಾವಣೆಗಳನ್ನು ಮುಂದಿನ ಅಧ್ಯಾಯಗಳಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಸ್ಥೂಲರೂಪದಲ್ಲಿ ಖನಿಜ ಸಂಪನ್ಮೂಲಗಳ ವಿವರಗಳ ಬಗೆಗೆ ಪ್ರಸ್ತುತ ಅಧ್ಯಾಯದಲ್ಲಿ ದಾಖಲಿಸಲಾಗಿದೆ.

ಬಳ್ಳಾರಿಗೆ ಸಮೀಪದಲ್ಲಿರುವ ಬೆಳಗಲ್ ಗುಡ್ಡಸಾಲು ಮತ್ತು ಪಶ್ಚಿಮ ಭಾಗದಲ್ಲಿರುವ ಸಂಡೂರು ತಾಲ್ಲೂಕಿನ ನಂದಿಹಳ್ಳಿಯಿಂದ ಹೊಸಪೇಟೆಯವರೆಗಿನ ಸುಮಾರು ೪೦.ಕಿ.ಮೀ ಉದ್ದ ಹಾಗೂ ೧೫-೨೦ ಕಿ.ಮೀ ಅಗಲವುಳ್ಳ ವಿಸ್ತಾರವಾದ ಬೆಟ್ಟಗಳಲ್ಲಿ ಐರನ್ ಪಾರ್ಮೆಶನ್[೧೧] ಎಂಬ ಕಲ್ಲಿನಲ್ಲಿ ಕಬ್ಬಿಣದ ಅದಿರಿನ ನಿಕ್ಷೇಪಗಳಿವೆ. ದೇವಗಿರಿ, ಸುಬ್ಬರಾಯನಹಳ್ಳಿ, ರಾಮಘಡ ಭಾಗದ ಬೆಟ್ಟಗಳಲ್ಲಿ ಮ್ಯಾಂಗನೀಸ್ ದೊರೆಯುತ್ತದೆ. ಹರಪ್ಪನಹಳ್ಳಿ, ಚೆನ್ನಾಪುರ, ದರೋಜಿ ಸುತ್ತಮುತ್ತಲ ಬೆಟ್ಟಗಳಲ್ಲಿ ತಾಮ್ರ ನಿಕ್ಷೇಪಗಳಿವೆ. ಇಂದಿಗೂ ಸಹ ಬಳ್ಳಾರಿ ನಗರದ ದಕ್ಷಿಣಕ್ಕಿರುವ ಗುಡ್ಡಸಾಲನ್ನು ತಾಮ್ರಬೆಟ್ಟ ಎಂಬ ಹೆಸರಿನಿಂದ ಕರೆಯುತ್ತಾರೆ.

ಸಂಡೂರು ತಾಲ್ಲೂಕಿನ ಎತ್ತಿನಹಟ್ಟಿ(ತಾರನಗರ)ದಿಂದ ಮೂರು ಕಿ.ಮೀ ಆಗ್ನೇಯಕ್ಕೆ ಲಿಂಗದಹಳ್ಳಿ ವಲಯದಲ್ಲಿ ಕಾಣುವ ಶಿಲೆಗಳಲ್ಲಿ ಚಿನ್ನ ದೊರೆಯುವ ಸಾಧ್ಯತೆಯಿದೆ. ಶೃಂಗಮರಡಿ, ಚಿಗಟೇರಿ, ಕುಂಚೂರು ಭಾಗದಲ್ಲಿ ಚಿನ್ನ ದೊರೆಯುತ್ತದೆ. ತಾಳೂರು, ಉತ್ತನೂರು, ಹಿರೇಹಡಗಲಿ, ಚೆನ್ನನಹಳ್ಳಿಯಲ್ಲಿ ಜಿಪ್ಸಮ್ ದೊರೆತರೆ, ತೋರಣಗಲ್ಲಿನಲ್ಲಿ ಸುಣ್ಣದಕಲ್ಲು ಮಾಗ್ನಸೈಟ್ ಲಭ್ಯವಿರುವುದನ್ನು ಕಾಣುತ್ತೇವೆ. ಮೆಟ್ರಿ, ಉಬ್ಬಲಗಂಡಿ, ದೇವಲಾಪುರ, ಮಲ್ಲಪ್ಪನಗುಡ್ಡಗಳಲ್ಲಿಯೂ ಸಹ ಸುಣ್ಣದಕಲ್ಲು ಲಭಿಸುತ್ತದೆ. ನಾಗಲಾಪುರ, ರಾಜಾಪುರ, ಗಾದಿಗನೂರು ಹಾಗೂ ಅಂಕಮನಾಳ ಬೆಟ್ಟಗಳಲ್ಲಿ ಬೆಣಚುಕಲ್ಲು ದೊರೆಯುತ್ತದೆ. ಹರಿಶಂಕರ, ಜೋಗಿಕೊಳ್ಳಗಳಲ್ಲಿ ಮಿನರಲ್ ವಾಟರ್ ದೊರಕಿದರೆ ತುಮರಿ, ರಾಮಘಡ ಬಲದಗುಡ್ಡಗಳಲ್ಲಿ ಹಳದಿ ಓಕರ್ ಹರಡಿಕೊಂಡಿರುವುದು. ಜಾನಕುಂಟೆ, ಜಂಬುನಾಥನಹಳ್ಳಿ, ವ್ಯಾಸನಕೆರೆ, ಕರಡಿಕೊಳ್ಳಗಳಲ್ಲಿ, ರೆಡ್ ಓಕರ್ ದೊರೆಯುತ್ತದೆ. ದೇವಗೊಂಡನಹಳ್ಳಿ ಗ್ರಾನೈಟ್(ವಜ್ರ) ತಿಮ್ಮಲಾಪುರದಲ್ಲಿ ಬೆಸಾಲ್ಟ್ ಖನಿಜ ಸಂಪತ್ತು ಪತ್ತೆಹಚ್ಚಲಾಗಿರುವುದನ್ನು ಗಮನಿಸಬಹುದು.[೧೨]

ಕೊಪ್ಪಳ ಜಿಲ್ಲೆಯಲ್ಲಿ ಲಭ್ಯವಿರುವ ಕಬ್ಬಿಣದ ಅದಿರು ಕೆಳದರ್ಜೆಯದು. ಕುಷ್ಟಗಿ ತಾಲ್ಲೂಕಿನ ಜಾಜಿಗುಡ್ಡ, ಕಲ್ಮಂಗಿ, ಮ್ಯಾದಾರಡೋಕಿ ಮತ್ತು ನಂದಿಹಳ್ಳಿ ಎಂಬ ಸ್ಥಳಗಳಲ್ಲಿ ಕಬ್ಬಿಣದ ಅದಿರಿನ ನಿಕ್ಷೇಪಗಳು ಉಲ್ಲೇಖಿಸಲು ಅರ್ಹವಾಗಿವೆ. ಕೋನಾಪುರ ಮತ್ತು ಜಾಜಿಗುಡ್ಡದ ಕಬ್ಬಿಣದ ಅದಿರನ್ನು

ಸಂಸ್ಕರಿಸಲಾಗಿ ಕಬ್ಬಿಣದ ಅಂಶ ಶೇಕಡ ೧೯.೫೦ರಿಂದ ಶೇ.೪೩.೯ ರಷ್ಟು ಇರುವುದಾಗಿ ತಿಳಿದುಬಂದಿದೆ. ಕುಷ್ಟಗಿ ತಾಲ್ಲೂಕಿನ ತಾವರೆಗೇರ ಗ್ರಾಮದಲ್ಲಿ ಸಿಲಿಕಾನ್ ಖನಿಜಗಳಲ್ಲಿ ಒಂದಾಗಿರುವ ಬಿಳಿಬೆಣಚು ಪತ್ತೆಯಾಗಿದೆ. ಕೊಪ್ಪಳದಿಂದ ಮುನಿರಾಬಾದಿನ ಮಧ್ಯದಲ್ಲಿರುವ ಕಣಶಿಲೆಯ ಸಮುಚ್ಛಯದಲ್ಲಿ ಕೆಲವು ಬೆಣಚಿನ ಸಿರಗಳಿವೆ. ಗಂಗಾವತಿ ತಾಲ್ಲೂಕಿನ ಕನಕಗಿರಿಯ ಬಳಿ ಹಸಿರು ಬೆಣಚಿನ ಸಿರಗಳಿವೆ. ಕೊಪ್ಪಳ ನಗರದ ಉತ್ತರದಲ್ಲಿರುವ ಮಾದಿನೂರು-ಮದ್ಲಾಪುರ ಪ್ರದೇಶದಲ್ಲಿ ಬಳಪದಕಲ್ಲಿನ ನಿಕ್ಷೇಪಗಳಿವೆ. ಈ ಬಳಪದ ಕಲ್ಲು ಕೆಳಮಟ್ಟದ್ದಾಗಿರುವುದರಿಂದ ಟಾಲ್ಕಂಪೌಡರ್ ತಯಾರಿಕೆಯಲ್ಲಿ ಬಳಸುವುದು ಸಾಧ್ಯವಿಲ್ಲ. ಆದರೆ ೧೯೮೦ರ ದಶಕದಲ್ಲಿ ಇಲ್ಲಿ ಎರಡು ಗಣಿ ಗುತ್ತಿಗೆಗಳು ಕಾರ್ಯನಿರತವಾಗಿದ್ದವು. ಆಗ ಈ ಬಳಪದಕಲ್ಲನ್ನು ಹೊಸಪೇಟೆಯಲ್ಲಿದ್ದ ಕ್ರಿಮಿನಾಶಕ ಮಡ್ಡಿಯ ಉತ್ಪಾದನೆಯಲ್ಲಿ ಫಿಲ್ಲರ್ ಆಗಿ ಉಪಯೋಗಿಸಲಾಗುತ್ತಿತ್ತು. ಕೆಲವು ದಶಕಗಳ ಹಿಂದೆ ಈ ಕ್ರಿಮಿನಾಶಕ ಘಟಕವನ್ನು ಕೆಲವು ಕಾರಣಗಳಿಗಾಗಿ ಮುಚ್ಚಲಾಯಿತು.

ಕೊಪ್ಪಳದ ಬಳಿ ಇರುವ ಸೈನೈಟ್ ಶಿಲೆ (Synite) ಮತ್ತು ಯಲಬುರ್ಗಾ ತಾಲ್ಲೂಕಿನ ಕುಕನೂರು ಸುತ್ತಮುತ್ತಲ ಪ್ರದೇಶದಲ್ಲಿ ಲಭ್ಯವಿರುವ ತಿಳಿಕೆಂಪುವರ್ಣದ ಫೆಲ್ಸ್‌ಪಾರ್ ಖನಿಜದ ಹಾಗೂ ಕಪ್ಪುವರ್ಣದ ಖನಿಜಗಳ ಪಟ್ಟಿಗಳುಳ್ಳ ಸೀಣಶಿಲೆ (Granite) ಹಾಗೂ ಕುಷ್ಟಗಿ ತಾಲ್ಲೂಕಿನ ಕೆಲ ಹಳ್ಳಿಗಳಲ್ಲಿ ಗುಲಾಬಿ ವರ್ಣದ ಕಣಶಿಲೆ ಲಭ್ಯವಿರುವುದರಿಂದ ಅಲಂಕರಣ ಶಿಲೆಯ ಬ್ಲಾಕುಗಳನ್ನು ಗಣಮಾಡಿ ದೇಶ ವಿದೇಶಗಳಿಗೆ ರವಾನಿಸಲಾಗುತ್ತದೆ.[೧೩] ಒಟ್ಟಾರೆಯಾಗಿ ಈ ಎರಡೂ ಜಿಲ್ಲಾ ಪರಿಸರದಲ್ಲಿ ವೈವಿಧ್ಯಮಯವಾದ ಖನಿಜ ಸಂಪತ್ತು ಇಲ್ಲಿನ ಬೆಟ್ಟಗುಡ್ಡಗಳಲ್ಲಿ ಸಮೃದ್ಧವಾಗಿ ಹರಡಿಕೊಂಡಿರುವುದನ್ನು ಗಮನಿಸಬಹುದು. ಲಭ್ಯವಿರುವ ಅಂತಹ ಖನಿಜ ಸಂಪತ್ತುಗಳು ಈ ಕೆಳಗೆ ದಾಖಲಿಸಿದ ಖನಿಜಗಳು ಪ್ರಮುಖವಾಗಿವೆಯೆಂದು ಹೇಳಬಹುದು. ಕಬ್ಬಿಣದ ಅದಿರು, ಮ್ಯಾಂಗನೀಸ್, ತಾಮ್ರ, ಸತು, ಮ್ಯಾಗ್ನಸೈಟ್, ಬಂಗಾರ, ಜಿಪ್ಸಮ್, ಜೇಡಿಮಣ್ಣು, ಸುಣ್ಣದಕಲ್ಲು, ಬಳಪದಕಲ್ಲು, ಹಳದಿ ಓಕರ್, ರೆಡ್ ಓಕರ್, ಬೆಣಚುಕಲ್ಲು ವಜ್ರ, ಬೆಸಾಲ್ಟ್‌ನಂತಹ ಖನಿಜ ಸಂಪನ್ಮೂಲಗಳು ಬಳ್ಳಾರಿ ಭಾಗದಲ್ಲಿ ಹೇರಳವಾಗಿ ದೊರೆಯುತ್ತವೆ.

**ನದಿಗಳು**

ತುಂಗಾಭದ್ರ ಮತ್ತು ಅದರ ಉಪನದಿಗಳಾದ ಚಿಕ್ಕಹಗರಿ, ಹಗರಿ, ಚಿನ್ನಹಗರಿ ನದಿಗಳು ಬಳ್ಳಾರಿ ಜಿಲ್ಲಾಪರಿಸರದಲ್ಲಿ ಹರಿದಿದ್ದು ಕೃಷಿಚಟುವಟಿಕೆಗೆ ಅನುಕೂಲಕರವಾಗಿದೆ. ಕೊಪ್ಪಳ ಜಿಲ್ಲೆಯ ಪಾರ್ಶ್ವದಲ್ಲಿ ಕೃಷ್ಣಾನದಿಯ ಸೆಳೆತವಿದೆ. ಯಲಬುರ್ಗಾ ತಾಲೂಕಿನಲ್ಲಿ ಹುಟ್ಟುವ ಒಂದು ತೊರೆ ಕೊಪ್ಪಳದ ಸಮೀಪ ಹರಿದು ತುಂಗಭದ್ರಾ ಜಲಾಶಯದ ಹಿನ್ನೀರನ್ನು ಸೇರುತ್ತದೆ. ಕುಷ್ಟಗಿ ತಾಲ್ಲೂಕಿನ ಉಪ್ಪಲದೊಡ್ಡಿ ಬಳಿ ಹುಟ್ಟುವ ಕನಕಗಿರಿ ನಾಲಾ ಗಂಗಾವತಿ ತಾಲ್ಲೂಕನ್ನು ಪ್ರವೇಶಿಸಿ ತುಂಗಭದ್ರ ನದಿಯನ್ನು ಸಂಧಿಸುತ್ತದೆ. ತಾವರಗೇರ ಬಳಿ ಹುಟ್ಟುವ ಸಿದ್ಧಾಪುರ ನಾಲೆ ಕುಂಟೋಜಿ ಬಳಿ ತುಂಗಭದ್ರ ನದಿಯನ್ನು ಸೇರುತ್ತದೆ. ಇನ್ನು ಅನೇಕ ಚಿಕ್ಕಪುಟ್ಟ ತೊರೆಗಳಾಗಿ ಹರಿದಿರುವ ಜಲಮೂಲಗಳು ಈ

ಜಿಲ್ಲೆಗಳಲ್ಲಿ ಹರಿದು ಪ್ರಾಚೀನ ಕಾಲದಿಂದ ಜನ ನೆಲೆಯೂರಲು ಅವಕಾಶ ಒದಗಿಸಿವೆ ಎಂಬುದನ್ನು ಮನಗಾಣಬಹುದು.

**ತುಂಗಭದ್ರ ನದಿ**

ಕರ್ನಾಟಕದ ಪ್ರಮುಖ ನದಿಗಳಲ್ಲಿ ಒಂದಾಗಿರುವ ಇದು ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಿದ್ದು ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮಘಟ್ಟಗಳ ವರಾಹ ಪರ್ವತದಲ್ಲಿರುವ ಗಂಗಾಮೂಲದಲ್ಲಿ ಉಗಮವಾಗಿ ಅಲ್ಲಿಂದ ಎರಡು ಹರಿಗಳು ೧೪೦ ಕಿ.ಮೀ ದೂರದಲ್ಲಿ ಶಿವಮೊಗ್ಗ ಜಿಲ್ಲೆಯ 'ಕೂಡ್ಲಿ' ಎಂಬಲ್ಲಿ ಭದ್ರಾನದಿಯೊಂದಿಗೆ ಸಂಗಮಗೊಳ್ಳುತ್ತವೆ.[೧೪] ತದನಂತರ ಈ ನದಿಯು 'ತುಂಗಭದ್ರಾ' ಎಂಬ ಹೆಸರು ಪಡೆದುಕೊಳ್ಳುತ್ತದೆ. ಪ್ರಾಚೀನ ಮಹಾಕಾವ್ಯಗಳಾಗಿರುವ 'ರಾಮಾಯಣ' ಮತ್ತು 'ಮಹಾಭಾರತ' ಮಹಾಕಾವ್ಯಗಳಲ್ಲಿಯೂ ಕೂಡ ಈ ನದಿಯ ಉಲ್ಲೇಖವಾಗಿರುವುದು ಗಮನಾರ್ಹ ವಿಷಯ. ಮಹಾಭಾರತದಲ್ಲಿ ಜಾಹ್ನವಿ, ಕೃಷ್ಣವೇಣಿಗಳ ಜೊತೆಗೆ ತುಂಗಾವೇಣಿ ಎಂಬ ಹೆಸರು ಉಲ್ಲೇಖವಾಗಿರುವುದನ್ನು ಕಾಣುತ್ತೇವೆ. ಇಂದಿಗೂ ಹಂಪಿಯಲ್ಲಿ ಈ ನದಿಗೆ ಪಂಪಾತೀರ್ಥವೆಂದು ಕರೆಯಲಾಗುತ್ತದೆ. ನದಿ ನೀರು ಕುಡಿಯಲು ಯೋಗ್ಯವಾಗಿರುವುದರಿಂದ 'ಗಂಗಾ ಸ್ನಾನ ತುಂಗಾಪಾನ' ಎಂಬ ನಾಣ್ನುಡಿ ಈ ಭಾಗದ ಜನರಲ್ಲಿ ಹೆಚ್ಚಾಗಿ ಪ್ರಚಲಿತದಲ್ಲುಂಟು. ತುಂಗಾಭದ್ರಾ ನದಿಯು ಹೂವಿನಹಡಗಲಿ ತಾಲ್ಲೂಕಿನ ಗಡಿ ಪ್ರವೇಶಿಸುವ ಮೂಲಕ ಬಳ್ಳಾರಿ ಜಿಲ್ಲಾ ಪರಿಸರವನ್ನು ಪ್ರವೇಶಿಸುತ್ತದೆ. (ಹರಪನಹಳ್ಳಿ ತಾಲ್ಲೂಕು ಇತ್ತೀಚೆಗೆ ಪುನಃ ಬಳ್ಳಾರಿ ಜಿಲ್ಲೆಯನ್ನು ಸೇರಿದ್ದರಿಂದ ಸದ್ಯ ಬಳ್ಳಾರಿ ಜಿಲ್ಲಾ ಪರಿಸರ ಆ ತಾಲ್ಲೂಕನ್ನು ಒಳಗೊಂಡು ವಿಸ್ತರಿಸಿಕೊಂಡಿದ್ದರಿಂದ ತುಂಗಭದ್ರಾ ನದಿಯ ಪ್ರದೇಶವು ಹರಪನಹಳ್ಳಿ ತಾಲ್ಲೂಕಿನ ಮೂಲಕ ಬಳ್ಳಾರಿ ಪ್ರವೇಶಿಸುತ್ತದೆ ಎಂದು ಅರ್ಥೈಸಲಾಗುತ್ತದೆ.) ಪಶ್ಚಿಮ ಉತ್ತರ ಭಾಗದಲ್ಲಿ ಹರಿದಿರುವ ಇದು ಹರಪ್ಪನಹಳ್ಳಿ, ಹಡಗಲಿ, ಹಗರಿಬೊಮ್ಮನಹಳ್ಳಿ, ಹೊಸಪೇಟೆ ಮತ್ತು ಸಿರುಗುಪ್ಪ ತಾಲ್ಲೂಕುಗಳನ್ನು ಒಳಗೊಂಡ ಇದು ೩೨೦ ಕಿ.ಮೀ ಹರಿದು ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಸಂಗಮೇಶ್ವರ ಎಂಬಲ್ಲಿ ಕೃಷ್ಣಾ ನದಿಯನ್ನು ಸಂಧಿಸುತ್ತದೆ. ಹಾಗೂ ಈ ನದಿಯ ಪಾತ್ರವು ಪಶ್ಚಿಮದಲ್ಲಿ ಹಾವೇರಿ, ಗದಗ, ಉತ್ತರದಲ್ಲಿ ಕೊಪ್ಪಳ--ರಾಯಚೂರು ಜಿಲ್ಲೆಗಳಿಗೆ ಗಡಿಯಾಗಿ ಹರಿದಿರುವುದನ್ನು ಗಮನಿಸಬಹುದು.

**ಉಪನದಿಗಳು**

ಹಗರಿ, ಚಿಕ್ಕಹಗರಿಗಳಲ್ಲದೆ ಚಿನ್ನಹಗರಿಯನ್ನೊಳಗೊಂಡಂತೆ ಹಲವಾರು ಸಂಖ್ಯೆಯಲ್ಲಿ ಜಿನುಗುವ ಹಳ್ಳಗಳು ಅಥವಾ ತೊರೆಗಳು ತುಂಗಭದ್ರಾ ನದಿಗೆ ಬಂದು ಸೇರುತ್ತವೆ. ಹಗರಿ ನದಿಯೂ ಚಿಕ್ಕಮಗಳೂರು ಜಿಲ್ಲೆಯ ಮಲ್ಲಯ್ಯನಗಿರಿ ಹಾಗೂ ತುಂಗಲಿಯಲ್ಲಿ ಎರಡು ಹರವುಗಳಲ್ಲಿ ಹುಟ್ಟಿಕೊಳ್ಳುತ್ತದೆ. ಅಲ್ಲದೇ ಅವುಗಳನ್ನು ವೇದ ಮತ್ತು ಆವತಿ ಎಂಬ ಹೆಸರಿನಿಂದಲೂ ಕೂಡಾ ಕರೆಯಲಾಗುತ್ತದೆ. ಈ ಎರಡೂ ಸೆಳೆತಗಳು ಚಿತ್ರದುರ್ಗದಲ್ಲಿ ಸಂಧಿಸಿರುವ ಕಾರಣಕ್ಕೆ 'ವೇದಾವತಿ' ಎಂಬ ಹೆಸರನ್ನು ಪಡೆದುಕೊಳ್ಳುತ್ತದೆ. ಇದು ಚಿತ್ರದುರ್ಗ ಜಿಲ್ಲೆಯನ್ನು ಹಾದು ಬಳ್ಳಾರಿ ಹತ್ತಿರ ಇರುವ 'ರೂಪನಗುಡಿ' ಎಂಬ ಗ್ರಾಮದ

ಬಳಿ ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಶಾಸನಗಳಲ್ಲಿ 'ಹಗರಿ' ಕುರಿತು ಕೆಲವು ವಿವರಗಳು ದಾಖಲಾಗಿರುವುದುಂಟು. 'ಅಗ-ಅರಿ'(ಅಘಹರಿ) ಎಂದರೇ ಪಾಪವನ್ನು ತೊಳೆಯುವ ಎಂಬ ಅರ್ಥದಲ್ಲಿ ಬಳಸಲಾಗಿದೆ.[೧೫] ನಂತರ ಸುಮಾರು ೬೨ ಕಿ.ಮೀ ಹರಿದು ಸಿರಗುಪ್ಪ ತಾಲ್ಲೂಕಿನ ಸಿದ್ದರಗಡ್ಡೆ ಆಥವಾ ಶ್ರೀಧರಗಡ್ಡೆ ಎಂಬ ಹಳ್ಳಿಯಲ್ಲಿ ತುಂಗಭದ್ರಾ ನದಿಯೊಂದಿಗೆ ವಿಲೀನಗೊಳ್ಳುತ್ತದೆ. ವಿಶಾಲವಾಗಿ ಹರಿದಿರುವ ಈ ನೀರಿನ ಪರಿಸರದ ಗ್ರಾಮಗಳೂ ಪ್ರಾಚೀನ ಕಾಲದಿಂದಲೂ ಮಾನವನಿಗೆ ಜೀವನಾಡಿಯಾಗಿ ಮಾರ್ಪಟ್ಟಿದೆ ಎಂದರೆ ತಪ್ಪಾಗಲಾರದು.

**ಚಿಕ್ಕಹಗರಿ**

ಚಿತ್ರದುರ್ಗ ಜಿಲ್ಲೆಯಲ್ಲಿ ಉಗಮಗೊಂಡು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ ಅಂಜಿಗೇರಿ ಎಂಬಲ್ಲಿ ಪ್ರವೇಶಿಸುವ ಇದು ಹರಪ್ಪನಹಳ್ಳಿ, ಹಡಗಲಿ, ಕೂಡ್ಲಿಗಿ ಹಾಗೂ ಹಗರಿಬೊಮ್ಮನಹಳ್ಳಿ ಪರಿಸರದ ಈ ನಾಲ್ಕೂ ತಾಲ್ಲೂಕುಗಳಲ್ಲಿ ತನ್ನ ಮಹತ್ವವನ್ನು ಪ್ರಸ್ತುತಪಡಿಸುತ್ತದೆ. ಈ ಹಳ್ಳವು ಸುಮಾರು ೪೦ ಕಿ.ಮೀ ಮುಂದೆ ಸಾಗಿ ತುಂಗಭದ್ರಾ ನದಿಯಲ್ಲಿ ಸೇರಿಕೊಳ್ಳುತ್ತದೆ.

**ಚಿನ್ನಹಗರಿ**

'ಚಿನ್ನಹಗರಿ' ಎನ್ನುವುದು ಅಪರೂಪದ, ಕಿರಿದಾದ ಬಡನದಿ. ಇದು ತನ್ನ ಪ್ರಾಕೃತಿಕ ಸೌಂದರ್ಯವನ್ನು ಮಳೆಗಾಲದಲ್ಲಿ ಮಾತ್ರ ವಿಸ್ತರಿಸಿಕೊಳ್ಳುತ್ತದೆ. ಈ ನದಿಗೆ ಕನ್ನಡದಲ್ಲಿ ಹಗರಿ, ಚಿಕ್ಕಹಗರಿ, ಸಣ್ಣಹಗರಿ ಮತ್ತು ಜನ್ನಿಗೆಹಳ್ಳವೆಂದು ಕರೆಯುವರು. ದಿವಂಗತ ಹುಲ್ಲೂರು ಶ್ರೀನಿವಾಸ ಜೋಯಿಸರು ಈ ನದಿಯನ್ನು 'ಪಾಪವಿನಾಶಿನಿ' ಎಂದು ಕರೆದಿದ್ದಾರೆ. ಕೆಲವರು ಈ ನದಿಗೆ ಸ್ತ್ರೀ ದೇವತೆಯ ಸ್ಥಾನವನ್ನು ಕಲ್ಪಿಸಿದ್ದಾರೆ. ಚಿನ್ನ ಎಂಬುದು ಭಾಷಿಕವಾಗಿ ಕನ್ನಡದಲ್ಲಿ ಹೊನ್ನು, ಬಂಗಾರವಾದರೂ ಪ್ರಸ್ತುತ ಅದಲ್ಲವಾಗಿದೆ. 'ಚಿನ್ನಮ್ಮ' ಎಂಬ ಬುಡಕಟ್ಟು ದೇವತೆ ಈ ಭಾಗದಲ್ಲಿ ಪೂಜಾರ್ಹಳಾಗಿದ್ದು, ಜನರು ಕ್ರಮೇಣ ಅದೇ ಹೆಸರಿನಿಂದ ವಾಚಿಸಿರಬಹುದು. ಆದರೆ ಭೂಗರ್ಭ ಶಾಸ್ತ್ರಜ್ಞರು ಚಿನ್ನದ ನಿಕ್ಷೇಪ (ಗಣಿ)ಗಳಿದ್ದವೆಂದು, ಅದಕ್ಕಾಗಿ ಚಿನ್ನಹಗರಿ ಎಂದು ಕರೆದಿರಬಹುದು. ಈ ನದಿಗೆ ಜಲಮೂಲ ಜನ್ನಿಗೆಹಳ್ಳ, ಈ ಹಳ್ಳವು ಭೌಗೋಳಿಕವಾಗಿ ಚಿತ್ರದುರ್ಗದ ಪಶ್ಚಿಮ ಬೆಟ್ಟಗಳಲ್ಲಿ ಹುಟ್ಟಿ ಹಳಿಯೂರು, ಹಿರೆಗುಂಟನೂರು, ಚಿತ್ರಹಳ್ಳಿಯಿಂದ ಕಾತ್ರಾಳುಕೆರೆ ಮೂಲಕ ಹರಿದು ಜಗಳೂರು ತಾಲ್ಲೂಕಿನ ಸಂಗೇನಹಳ್ಳಿ ಕೆರೆಯನ್ನು ತಲುಪುತ್ತದೆ. ತರುವಾಯ ಅಲ್ಲಿಂದ ಚಿಕ್ಕಗೊಂಡನಹಳ್ಳಿ, ತುರುವನೂರು, ದೊಣ್ಣೆಹಳ್ಳಿ, ಮುಸ್ಟೂರು, ಚಿಕ್ಕಮಲ್ಲನ ಹೊಳೆ, ತೊರೆಕೋಲಮ್ಮನಹಳ್ಳಿಯ ಮೂಲಕ ಬಳ್ಳಾರಿ ಜಿಲ್ಲೆಯ ಗಡಿಪ್ರದೇಶವಾದ ಕಲ್ಲಳ್ಳಿಯನ್ನು ಪ್ರವೇಶಿಸುತ್ತದೆ. ಅಲ್ಲಿಂದ ಹರಿಯುವಾಗ ಕೆಲವು ಉಪಹಳ್ಳಗಳು ಬಂದು ಸೇರುತ್ತವೆ. ಅವುಗಳೆಂದರೆ ಕಳ್ಳರಹಳ್ಳ, ಕುರಿಬೋರಯ್ಯನಹಳ್ಳ, ತಿಪ್ಪೇಹಳ್ಳ, ಉಡೇಂಹಳ್ಳ, ಕುಮತಿಹಳ್ಳ ಮತ್ತು ಪೆದ್ದವಂಕ(ದೊಡ್ಡಹಳ್ಳ) ಎಂಬ ಮೊದಲಾದ ಉಪಹಳ್ಳಗಳಿವೆ. ಅಣಬೂರು, ಹುಲಿಕೆರೆ, ಹೂಡೇಂ, ಕುಮತಿ, ಗುಡೆಕೋಟೆ, ಜರಿಮಲೆಗಳಿಂದ ಹರಿದುಬಂದ ಹಳ್ಳಗಳು

ಈ ನದಿಗೆ ಸೇರಿಕೊಳ್ಳುತ್ತವೆ. ಕುಮತಿಯವರೆಗೆ ಈ ಹಳ್ಳಕ್ಕೆ ಜನ್ನಿಗೆ ಹಳ್ಳವೆಂದು ಮುಂದುವರೆದು ಸಾಗಿದಂತೆಲ್ಲಾ ಚಿನ್ನಹಗರಿ ಎಂದು ಕರೆಯಲಾಗುತ್ತದೆ.[೧೬]

ಪ್ರಸ್ತುತ ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳ ಗಡಿಯಾಗಿ ಪರಿಣಮಿಸಿರುವ ಇದು ಆಂಧ್ರಪ್ರದೇಶದ ರಾಯದುರ್ಗ ತಾಲ್ಲೂಕಿನ ಉತ್ತರದಲ್ಲಿ ಹಗರಿನದಿಗೆ ಬಂದು ಸೇರುತ್ತದೆ. ಅಷ್ಟೇ ಅಲ್ಲದೇ ಆಯಾ ಸ್ಥಳಗಳಲ್ಲಿ ಹಲವು ಹಳ್ಳಗಳು ಉಗಮವಾಗಿ ತುಂಗಭದ್ರಾನದಿ ಅಥವಾ ಅದರ ಉಪನದಿಗಳನ್ನು ಸೇರಿಕೊಳ್ಳುತ್ತವೆ. ಸಂಡೂರು ತಾಲ್ಲೂಕಿನ ನಾರಿಹಳ್ಳ ಎಂಬ ಹಳ್ಳಕ್ಕೆ ಆಣೆಕಟ್ಟು ನಿರ್ಮಿಸಿ ನೀರಾವರಿ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಲಾಗಿದೆ. ಇದಲ್ಲದೆ ಹಗ್ಗರನೂರುಹಳ್ಳ, ಹಂಪಸಾಗರಹಳ್ಳ, ಹಂಪಾಪಟ್ಟಣ ಅಥವಾ ಬೆಲ್ಲಹುಣಿಸಿಹಳ್ಳ, ಗೌರಿಪುರಹಳ್ಳ ಮುಂತಾದ ಹಳ್ಳಗಳು ಜಿಲ್ಲೆಯ ವಿವಿಧ ಭಾಗದಲ್ಲಿ ಹರಿದು ಜನರಿಗೆ ಅನುಕೂಲ ಒದಗಿಸಿವೆ. ಈ ಪರಿಸರದ ಸಾಂಸ್ಕೃತಿಕ ವೈಭವಕ್ಕೆ ಪೂರಕವಾದ ಸನ್ನಿವೇಶಗಳನ್ನು ಸೃಷ್ಟಿಸಿವೆಯೆಂದರೆ ತಪ್ಪಾಗಲಾರದು.

**ಅರಣ್ಯ ಪ್ರದೇಶ**

ಬಳ್ಳಾರಿ ಜಿಲ್ಲೆಯಲ್ಲಿ ೧.೧೯.೨೪೭ ಹೆಕ್ಟೇರ್ ಪ್ರದೇಶದಲ್ಲಿ ಅರಣ್ಯವಿದೆ. ಆದರೆ ಶೇ.೯೦ರಷ್ಟು ಅರಣ್ಯ ಜಿಲ್ಲೆಯ ನಾಲ್ಕು ತಾಲೂಕುಗಳಲ್ಲಿ ಮಾತ್ರ ಕೇಂದ್ರೀಕೃತಗೊಂಡಿದೆ. ಹೊಸಪೇಟೆ, ಕೂಡ್ಲಿಗಿ ಮತ್ತು ಸಂಡೂರು ತಾಲ್ಲೂಕುಗಳಲ್ಲಿನ ಅರಣ್ಯದ ವಿಸ್ತೀರ್ಣ ೬೮,೪೮೧ ಹೆಕ್ಟೇರ್‌ಗಳು. ಆದರೆ ಉಳಿದ ನಾಲ್ಕು ತಾಲ್ಲೂಕುಗಳಾದ ಬಳ್ಳಾರಿ, ಸಿರುಗುಪ್ಪ, ಹಡಗಲಿ ಮತ್ತು ಹಗರಿಬೊಮ್ಮನಹಳ್ಳಿಗಳಲ್ಲಿನ ಅರಣ್ಯದ ವಿಸ್ತೀರ್ಣ ೧೪,೨೬೮ ಹೆಕ್ಟೇರ್‌ಗಳು.[೧೭] ಒಟ್ಟಿನಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಅರಣ್ಯ ಪ್ರದೇಶವು ಅಸಮತೋಲನದಿಂದ ಕೂಡಿರುವುದನ್ನು ಗಮನಿಸಬಹುದು. ಬಹುತೇಕ ಅರಣ್ಯ ಪ್ರದೇಶವು ಸಂಡೂರು, ಕೂಡ್ಲಿಗಿ, ಹೊಸಪೇಟೆ ತಾಲ್ಲೂಕುಗಳಲ್ಲೇ ಕೇಂದ್ರಿಕರಣಗೊಂಡಿರುವುದನ್ನು ಗಮನಿಸಬಹುದು. ಸಂಡೂರು–ಕೂಡ್ಲಿಗಿ ಕಣಿವೆ ಪ್ರದೇಶದಲ್ಲಿ ಮಾತ್ರ ಸ್ವಲ್ಪ ದಟ್ಟವಾದ ಅರಣ್ಯವಿದೆ. ಉಳಿದಂತೆ ಕುರುಚಲುಗಿಡ, ಕಳ್ಳಿ, ಜಾಲಿ, ಕಾರೆ ಗಿಡಗಳಿಂದ ಆವರಿಸಿದ ಅರಣ್ಯ ಕಂಡುಬರುತ್ತದೆ.

ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು ೨೯೪೫೧ ಹೆಕ್ಟೇರ್ ವಿಸ್ತೀರ್ಣದ ಅರಣ್ಯ ಪ್ರದೇಶವಿದ್ದು,[೧೮] ಇದು ಜಿಲ್ಲೆಯ ಭೌಗೋಳಿಕ ಪ್ರದೇಶದ ಶೇ.೨೧.೨೨ ರಷ್ಟಿದೆ. ಕರ್ನಾಟಕ ರಾಜ್ಯದಲ್ಲಿನ ಅರಣ್ಯ ಪ್ರದೇಶದ ಪ್ರಮಾಣ ಶೇ.೧.೦೭ ಕೊಪ್ಪಳ ಜಿಲ್ಲೆಯಲ್ಲಿನ ಅರಣ್ಯ ಪ್ರದೇಶವು ರಾಜ್ಯದ ಶೇ.೦.೫ರಷ್ಟು ಸಹ ಇಲ್ಲ. ಇಲ್ಲಿನ ಪ್ರದೇಶವು ಹೆಚ್ಚು ಕಲ್ಲು–ಬಂಡೆಗಳ ಬೆಟ್ಟಗಳಿಂದ ಕೂಡಿದ್ದು, ಸಸ್ಯಗಳು ದಟ್ಟವಾಗಿಲ್ಲ. ಕೊಪ್ಪಳ ಬ್ಲಾಕ್‌ನಲ್ಲಿ(೧೧,೧೭೩ಹೆ.) ಆಗೋಲಿ–ಹಿರೇಬೆಣಕಲ್ಲು(೬.೬೪೭ ಹೆಕ್ಟರ್) ಮಾದಿನಾಳ(೪೦೫.೫ಹೆ) ಪ್ರದೇಶಗಳಲ್ಲಿ ಕಾಯ್ದಿಟ್ಟ ಅರಣ್ಯಗಳಿವೆ.[೧೯] ಆದರೆ ಬಳ್ಳಾರಿ ಜಿಲ್ಲೆಯಷ್ಟು ವಿಸ್ತೃತವಾದ ಅರಣ್ಯಪ್ರದೇಶ ಈ ಜಿಲ್ಲೆಯಲ್ಲಿ ಕಂಡುಬರುವುದಿಲ್ಲ. ಒಟ್ಟಿನಲ್ಲಿ ಈ ಪ್ರದೇಶದಲ್ಲಿ ಒಣ ಉದುರೆಲೆಕಾಡು, ಕುರುಚಲು ಕಾಡುಗಳು ಎಂಬ ಎರಡು ವಿಧಗಳಿವೆ. ಒಣ ಉದುರೆಲೆ ಕಾಡುಗಳಲ್ಲಿ ಎಲೆ ಉದುರುವ ಮರಗಳೇ

ಇರುತ್ತವೆ. ಈ ಕಾಡುಗಳಲ್ಲಿ ಸಾಮಾನ್ಯವಾಗಿ ಕಮರಾ, ಹುಣಸೆ, ಬಾಗೆ, ದಂಡಿಗೆ, ಕರಿಜಾಲಿ, ತುಗ್ಗಲಿ, ಸ್ವಲ್ಪಮಟ್ಟಿಗೆ ತೇಗ ಮತ್ತು ಗಂಧದ ಮರಗಳು, ಬೇವು, ಕಕ್ಕೆ, ಸೀತಾಫಲ, ಅಳಲೆ, ಹೊನ್ನೆ, ಮತ್ತಿ, ಬಿಜ್ಜಾಲಿ, ಜಾಲಿ ಗಿಡಗಳ ಅರಣ್ಯ ಪ್ರದೇಶವು ಕಂಡುಬರುತ್ತವೆ.

**ಪ್ರಾಣಿ, ಪಕ್ಷಿಗಳು**

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ವಿವಿಧ ಬಗೆಯ ಪ್ರಾಣಿ, ಪಕ್ಷಿಗಳ ಕುರಿತು ತಜ್ಞರು ಮಾಹಿತಿಗಳನ್ನು ದಾಖಲಿಸಿದ್ದಾರೆ. ಚಿರತೆ, ಕರಡಿ, ನರಿ, ತೋಳ, ಕಪ್ಪು-ಕೆಂಪುಮುಖದ ಮಂಗಗಳು, ಚಿಗರಿ, ಮೊಲ, ಹಂದಿ, ಮುಳ್ಳುಹಂದಿ, ಕತ್ತೆಕಿರುಬ ಮತ್ತು ಪ್ಯಂಗೋಲಿಯನ್, ಹಾವುಗಳಲ್ಲಿ ನಾಗರಹಾವು, ಹೆಬ್ಬಾವು, ಇನ್ನಿತರ ಹಾವುಗಳು ಈ ಭಾಗದಲ್ಲಿ ಕಂಡುಬರುತ್ತವೆ. ಪಕ್ಷಿಗಳಲ್ಲಿ ನವಿಲುಗಳು, ಹಸಿರುಗಿಳಿಗಳು, ಗೊರವಂಕ, ಕೋಗಿಲೆ, ರತ್ನಪಕ್ಷಿ, ಕಾಗೆ, ಗೂಬೆ, ಬೆಳವ, ಗೀಜುಗಗಳು ಸಾಮಾನ್ಯವಾಗಿವೆ. ತುಂಗಾಭದ್ರ ತೀರದಲ್ಲಿ ಕಾಡುಕೋಳಿಗಳಿವೆ. ಯಲಬುರ್ಗಾ ತಾಲ್ಲೂಕಿನಲ್ಲಿ ಚಿಗರೆಗಳು ತಂಡೋಪ ತಂಡವಾಗಿ ಜೀವಿಸುತ್ತವೆ. ದರೋಜಿ ಕರಡಿದಾಮದಲ್ಲಿ ಅಧಿಕ ಸಂಖ್ಯೆಯಲ್ಲಿ ಕರಡಿಗಳಿವೆ. ಕೂಡ್ಲಿಗಿ ತಾಲ್ಲೂಕಿನ ಗುಡೇಕೋಟೆ ಭಾಗದಲ್ಲಿಯೂ ಸಹ ಕರಡಿಗಳಿವೆ. ಜಿಂಕೆಯ ಸಣ್ಣ-ಸಣ್ಣ ಹಿಂಡುಗಳು ಹಿಂದೆ ಈ ಪ್ರದೇಶದಲ್ಲಿ ಕಂಡುಬರುತ್ತಿದ್ದವಾದರೂ ಈಗ ಅವುಗಳು ಸಹ ವಿರಳವಾಗಿವೆ.

**ಹವಾಮಾನ**

ಬಳ್ಳಾರಿ ಮತ್ತು ಕೊಪ್ಪಳ ಪ್ರದೇಶವೂ ಸಮುದ್ರಮಟ್ಟದಿಂದ ಎತ್ತರದಲ್ಲಿರುವುದರಿಂದ ಇಲ್ಲಿಯ ಹವಾಗುಣ ಸಾಮಾನ್ಯವಾಗಿ ತಂಪಾಗಿರದೆ ಒಣಹವೆ, ಬಿಸಿಲು ಮತ್ತು ಸೆಕೆಯಿಂದ ಕೂಡಿರುತ್ತದೆ. ಬೇಸಿಗೆಯಲ್ಲಿ ಅತೀ ಉಷ್ಣ ಹಾಗೂ ಚಳಿಗಾಲದಲ್ಲಿ ಅತೀ ಚಳಿ ಇಲ್ಲಿನ ವೈಶಿಷ್ಟ್ಯವಾಗಿದೆ. ಸೂರ್ಯನ ಕಿರಣಗಳಿಗೆ ನೇರವಾಗಿ ತೆರೆದುಕೊಂಡಿರುವ ಭೂಮಿ ಅತೀ ಹೆಚ್ಚಿನ ಶಾಖ ಹೀರಿಕೊಂಡು ಒಣ ಹವಾಮಾನಕ್ಕೆ ಕಾರಣವಾಗಿದೆ. ದಟ್ಟವಾಗಿ ಮರಗಳು ಹಾಗೂ ಪೊದೆಗಳಿರುವ ಸಂಡೂರು-ಕೂಡ್ಲಿಗಿ ಪ್ರದೇಶದಲ್ಲಿ ಮಾತ್ರ ಸ್ವಲ್ಪ ತಂಪಾದ ಹವಾಮಾನವಿದೆ. ಭೂ ಪ್ರದೇಶದ ಮೇಲ್ಮೈಯಲ್ಲಿ ಹಸಿರಿನ ಹಾಸು ಇದ್ದರೆ ಹವಾಮಾನವು ತಂಪಾಗಿರುತ್ತದೆ. ಇದರಿಂದ ಮೋಡಗಳ ರಚನೆ ತೀವ್ರವಾಗಿರುತ್ತದೆ. ಮಳೆಯ ನೀರನ್ನು ಹೀರಿಕೊಂಡು ಮರ-ಗಿಡಗಳು ತಿರುಗಿ ತೇವಾಂಶವನ್ನು ಹವಾಮಾನಕ್ಕೆ ಹಿಂತಿರುಗಿಸುತ್ತವೆ. ಇದರಿಂದ ಅರಣ್ಯವು ದಟ್ಟವಾಗಿರುವ ಪ್ರದೇಶದಲ್ಲಿ ಹೆಚ್ಚು ಮಳೆಯಾಗುತ್ತದೆ. ಆದರೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಮಳೆಯ ಪ್ರಮಾಣ ಕಡಿಮೆ ಇದೆ. ಬಳ್ಳಾರಿ ಪ್ರದೇಶವು ವಾರ್ಷಿಕವಾಗಿ ಸರಾಸರಿ ೧೬.೭ ಸೆ.ಮೀ. ನಿಂದ ೪೩.೯ ಸೆ.ಮೀ ವರೆಗೆ ಮಳೆಯ ಪ್ರಮಾಣ ಹೊಂದಿರುವುದು ದಾಖಲಾಗಿದೆ. ಕೆಲವು ಸಲ ಇದು ೪೫ ರಿಂದ ೪೯ ಸೆ.ಮೀ, ವರೆಗೆ ಏರುತ್ತದೆ. ಮಳೆಯು ವಾರ್ಷಿಕವಾಗಿ ಸರಾಸರಿ ೫೭೪.೯ ಮಿ.ಮೀ ಇರುತ್ತದೆ.[೨೦]

ಬಳ್ಳಾರಿ ಮತ್ತು ಕೊಪ್ಪಳ ಸುತ್ತಲಿನ ಪ್ರದೇಶದಲ್ಲಿರುವ ಕಗ್ಗಲ್ಲು ಬೆಟ್ಟಗಳು ಅಂದಿನ ಜನರಿಗೆ ಸುರಕ್ಷಿತ ಪ್ರದೇಶಗಳಾಗಿ ಕಂಡುಬಂದವು. ಪ್ರಕೃತಿದತ್ತ ರಕ್ಷಣಾ ಸೌಲಭ್ಯವಲ್ಲದೆ ಇಲ್ಲಿ ದೊರೆಯುವ ಕಚ್ಚಾ ಅದಿರು, ಉಪಕರಣಗಳ ತಯಾರಿಕೆಗೆ ಅನುಕೂಲಕರವಾಗಿತ್ತು ಎಂದು ಹೇಳಬಹುದು. ಹಾಗೂ ಇಲ್ಲಿನ ಗುಡ್ಡಗಳ ಮೇಲೆ ನಿಂತಿರುವ ದೊಡ್ಡ ದೊಡ್ಡ ಬಂಡೆಗಳ ನಡುವಣ ಪ್ರದೇಶವನ್ನು ಸಮತಟ್ಟಾಗಿ ಮಾಡಿಕೊಂಡು ಕೆಳಗಣ ಬಯಲು ಪ್ರದೇಶದಲ್ಲಿ ವ್ಯವಸಾಯ ಮಾಡುತ್ತಿದ್ದರು. ಅವರು ವಾಸಿಸಲು ಆಯ್ಕೆಮಾಡಿಕೊಂಡಿದ್ದ ಎತ್ತರದ ಗುಡ್ಡಗಳು ಅವರ ಅವಶ್ಯಕತೆಗಳನ್ನು ಪೂರೈಸಲು ಬೇಕಾದ ಸೌಲಭ್ಯಗಳಿಂದ ಕೂಡಿದ್ದವು. ಬೇಸಾಯಕ್ಕೆ ಬೇಕಾದ ಹೆಚ್ಚು ವಿಸ್ತೃತವಲ್ಲದ ಸಣ್ಣ ಪರಿಮಾಣದ ಭೂಮಿ ಪಶು ಪಾಲನೆಗೆ ತಕ್ಕಂತೆ ಅನುಕೂಲತೆಯಿಂದ ಕೂಡಿತ್ತು. ಮಳೆ ಪ್ರಮಾಣ ಕಡಿಮೆ ಇದ್ದು, ತಮಗೆ ಸಾಕಷ್ಟು ನೀರಿನ ಪೂರೈಕೆ ಆಗುವಂತಹ ಭೂ ಸನ್ನಿವೇಶಗಳು ಈ ಎರಡೂ ಜಿಲ್ಲಾ ಪರಿಸರದಲ್ಲಿ ಇದ್ದುದರಿಂದ ಶಿಲಾಯುಗದಿಂದಲೂ ಮಾನವ ವಾಸಿಸುತ್ತಾ ಬಂದಿದ್ದಾನೆ. ಇಂತಹ ಭೌಗೋಳಿಕ ಸನ್ನಿವೇಶಗಳು ಬದಲಾದಂತೆಲ್ಲಾ ಮಾನವನು ತನಗೆ ಹಿತವೆನಿಸುವ ಕಡೆ ನೆಲೆಸುತ್ತಾ ಬಂದಿದ್ದಾನೆಂಬುದನ್ನು ಉದಾಹರಣೆಗಳ ಸಹಿತ ಗಮನಿಸಬಹುದು.

**ಕೊನೆ ಟಿಪ್ಪಣಿ**


೧. ಜಾನ್ ಕೆಲ್ಸಲ್., ೧೮೭೨, ಮ್ಯಾನ್ಯೂಯಲ್ ಆಫ್ ದ ಬಳ್ಳಾರಿ ಡಿಸ್ಟ್ರಿಕ್ಟ್ ಗೆಜೆಟಿಯರ್, ಪು. ೧೧.

೨. ಚಂದ್ರಶೇಖರ್ ಟಿ.ಆರ್., ೧೯೯೪, ಬಳ್ಳಾರಿ ಜಿಲ್ಲೆಯ ನಿಸರ್ಗ ಸಂಪತ್ತು, ಪು. ೧೬.

೩. ಅದೇ, ಪು. ೧೧.

೪. ಅಭಿಶಂಕರ್ ಕೆ.,(ಸಂ) ೧೯೭೦, ರಾಯಚೂರು ಡಿಸ್ಟ್ರಿಕ್ಟ್ ಗೆಜೆಟಿಯರ್, ಪು. ೧೧.

೫. ಶರಣಬಸಪ್ಪ ಕೋಲ್ಕಾರ್, (ಸಂ), ಕಳವೆ ಸ್ಮರಣ ಸಂಚಿಕೆ, ಪು. ೩೭೦.

೬. ಗೋಪಾಲ್ ಆರ್., (ಸಂ), ೨೦೧೧, ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೩೧೯.

೭. ಬ್ರಹ್ಮಶ್ರೀ ಬಾಲಚಂದ್ರ ಶಾಸ್ತ್ರೀ, ಶ್ರೀಸ್ಕಂದ ಕ್ಷೇತ್ರ ಮಹಾತ್ಮೆ, ಪು. ೩.

೮. ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ ಭಾಗ–೧, ಪು. ೩.

೯. ಚಂದ್ರಶೇಖರ್ ಟಿ.ಆರ್., ಪೂರ್ವೋಕ್ತ, ಪು. ೧೬.

೧೦. ಗೋಪಾಲ್ ಆರ್., (ಸಂ), ಪೂರ್ವೋಕ್ತ, ಪು. ೧೯.

೧೧. ಗಿರಿಜಾ, ೨೦೧೧. ಸಂಡೂರು ತಾಲ್ಲೂಕು ಒಂದು ಚಾರಿತ್ರಿಕ ಅಧ್ಯಯನ, ಪು. ೧೮.

೧೨. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೩.

೧೩. ಗೋಪಾಲ್ ಆರ್., (ಸಂ), ಪೂರ್ವೋಕ್ತ, ಪು. ೩೨೧.

೧೪. ಚಂದ್ರಶೇಖರ್ ಟಿ.ಆರ್., ಪೂರ್ವೋಕ್ತ, ಪು. ೨೪.

೧೫. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೩.

೧೬. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬. ಚಿನ್ನಹಗರಿ ಸಿರಿ, ಪು. ೩–೪.

೧೭. ಚಂದ್ರಶೇಖರ್ ಟಿ.ಆರ್., ಪೂರ್ವೋಕ್ತ, ಪು. ೨೫.

೧೮. ಗೋಪಾಲ್ ಆರ್., ಪೂರ್ವೋಕ್ತ, ಪು. ೨೬೯.

೧೯. ಅಭಿಶಂಕರ್, ೧೯೭೦, ರಾಯಚೂರು ಡಿಸ್ಟ್ರಿಕ್ಟ್ ಗೆಜೆಟಿಯರ್, ಪು. ೪.

೨೦. ವಾಸುದೇವ ಬಡಿಗೇರ, ಪೂರ್ವೋಕ್ತ, ಪು. ೫.

# ಅಧ್ಯಾಯ : ಮೂರು

# ಪ್ರಾಗೈತಿಹಾಸಿಕ ಹಿನ್ನೆಲೆ

## (ಹಳೆಯ ಶಿಲಾಯುಗದಿಂದ ಶಿಲಾ-ತಾಮ್ರಯುಗದವರೆಗೆ)

೩.೧ ಹಳೆಯ ಶಿಲಾಯುಗ
೩.೨ ಮಧ್ಯ ಶಿಲಾಯುಗ
೩.೩ ನೂತನ ಶಿಲಾಯುಗ
೩.೪ ಶಿಲಾ-ತಾಮ್ರಯುಗ

# ಅಧ್ಯಾಯ : ಮೂರು

## ಪ್ರಾಗೈತಿಹಾಸಿಕ ಹಿನ್ನೆಲೆ

ಮಾನವನ ದೀರ್ಘಕಾಲದ ಜೀವನ ಶೈಲಿಯ ವಿಕಾಸದ ಹಂತಗಳನ್ನು ಅಧ್ಯಯನದ ದೃಷ್ಟಿಯಿಂದ ಅನುಕ್ರಮವಾಗಿ ಪ್ರಾಗಿತಿಹಾಸಕಾಲ ಮತ್ತು ಆದಿ ಇತಿಹಾಸಕಾಲ ಹಾಗೂ ಇತಿಹಾಸ ಕಾಲ ಎಂದು ಪ್ರಮುಖವಾಗಿ ಮೂರು ಕಾಲಘಟ್ಟಗಳಲ್ಲಿ ವಿಭಾಗಿಸಲಾಗಿದೆ. ಲಿಖಿತ ದಾಖಲೆಗಳು ಲಭ್ಯವಿಲ್ಲದ ಕಾಲವನ್ನು ಪುರಾತತ್ವ ಪರಿಭಾಷೆಯಲ್ಲಿ ಪ್ರಾಗಿತಿಹಾಸ(Prehistory) ಎಂದು ಹೆಸರಿಸಲಾಗಿದೆ. ಲಿಖಿತ ದಾಖಲೆಗಳು ಲಭ್ಯವಿರುವ ಕಾಲವನ್ನು ಇತಿಹಾಸಕಾಲವೆಂದು(History) ಹಾಗೂ ಸಂಸ್ಕೃತಿಯೊಂದರ ಲಿಖಿತ ದಾಖಲೆಗಳು ಲಭ್ಯವಿದ್ದೂ ಓದಲು ಸಾಧ್ಯವಾಗದಿದ್ದಲ್ಲಿ ಅಥವಾ ಸಂಸ್ಕೃತಿಯೊಂದರಲ್ಲಿ ಬರವಣಿಗೆ ಇಲ್ಲದಿದ್ದಾಗಿಯೂ ಆ ಸಂಸ್ಕೃತಿಯ ಬಗೆಗೆ ಇತರ ಬರೆವಣಿಗೆ ಅರಿತ ಸಮುದಾಯಗಳಿಂದ ಮಾಹಿತಿ ಲಭ್ಯವಿದ್ದಾಗ ಆ ಕಾಲವನ್ನು ಆದಿ ಇತಿಹಾಸಕಾಲ(Protohistory) ಎಂದು ಕರೆಯಲಾಗುತ್ತದೆ. ಇತಿಹಾಸ ಕಾಲದಲ್ಲಿ ಮಾನವ ಒಂದು ಕಡೆ ನೆಲೆನಿಂತರೆ, ಪ್ರಾಗಿತಿಹಾಸ ಕಾಲದಲ್ಲಿ ಮಾನವ ಅಲೆಮಾರಿ ಜೀವನವನ್ನು ನಡೆಸುತ್ತಿದ್ದನು. ಹಾಗಾಗಿ ಅಂದಿನ ಸಮುದಾಯಗಳ ಜೀವನಕ್ರಮದ ಕುರಿತು ದಾಖಲೆಗಳು ಅಥವಾ ನಂಬಬಹುದಾದ ಕಥೆ ರೂಪದ ಆಕರಗಳು ಕಂಡುಬರುವುದು ವಿರಳವೆಂದೇ ಭಾವಿಸಬೇಕಾಗುತ್ತದೆ. ಆ ಕಾಲಕ್ಕೆ ಸಂಬಂಧಿಸಿದ ನಿಶ್ಚಿತ ಸಂಪ್ರದಾಯಗಳು ಸ್ಪಷ್ಟವಾಗುವುದಿಲ್ಲ ಅಥವಾ ಸಾಹಿತ್ಯವೂ ಕೂಡ ಇರುವುದಕ್ಕೆ ಸಾಧ್ಯವಿಲ್ಲ.[೧] ಆದರೂ ಅಂಥ ವಿವರಗಳನ್ನು ಕಾಲಗರ್ಭದಲ್ಲಿ ಬಿಟ್ಟು ಹೋದ ಪ್ರಾಕ್ತನಾವಶೇಷಗಳಿಂದ ಸಮುದಾಯದ ಜೀವನ ವೃತ್ತಾಂತವನ್ನು ತಿಳಿಯುವ ಪ್ರಯತ್ನ ಇಂದಿಗೂ ನಡೆಯುತ್ತಲಿದೆ.

ಆದಿಮಾನವರು ತಮ್ಮ ದಿನನಿತ್ಯದ ಅಗತ್ಯತೆಗೆ ಬೇಕಾದ ಆಹಾರ ಸಂಗ್ರಹಿಸಲು, ಬೇಟೆಯಾಡಲು, ಕಲ್ಲಿನ ಆಯುಧೋಪಕರಣಗಳನ್ನು ಬಳಸುತ್ತಿದ್ದರು. ಕಟ್ಟಿಗೆ, ಎಲುಬು, ಇನ್ನಿತರೆ ಜೈವಿಕ ದ್ರವ್ಯಗಳಿಂದ ತಯಾರಿಸಿದ ಉಪಕರಣಗಳನ್ನು ಉಪಯೋಗಿಸಿದ್ದಿರಬಹುದು. ಆದರೆ ಇಂತಹ ವಸ್ತುಗಳು ಕಾಲಗರ್ಭಕ್ಕೆ ಸಿಕ್ಕು ಹಾಳಾಗಿರುತ್ತವೆ. ಆದ್ದರಿಂದ ಅವುಗಳು ಇಂದಿನವರೆಗೂ ಶಾಶ್ವತವಾಗಿ ಉಳಿದಿಲ್ಲ. ಹಾಗೂ ಆ ಜನರು ತಯಾರಿಸಿದ ಮಣ್ಣಿನ ಮಡಕೆಗಳು, ಪ್ರಕೃತಿಯಲ್ಲಿ ತಮಗಾದ ಅನುಭವಗಳು, ಭಾವನೆಗಳನ್ನು ತಾತ್ಕಾಲಿಕವಾಗಿ ನೆಲೆಸಿದ್ದ ಗುಹೆ, ಕಲ್ಲಾಸರೆಗಳಲ್ಲಿ, ಬಯಲು ಬಂಡೆಗಳ ಮೇಲೆ ಅಭಿವ್ಯಕ್ತಗೊಳಿಸಿದ

ಕುಟ್ಟುಚಿತ್ರಗಳು(Bruising), ಗೀರುಚಿತ್ರಗಳು(Engraving), ವರ್ಣಚಿತ್ರಗಳ(Paintings) ನೆರವಿನಿಂದ ಮಾನವನ ದೀರ್ಘಕಾಲದ ಇತಿಹಾಸವನ್ನು ತಿಳಿಯಬಹುದಾಗಿದೆ.

ಪ್ರಾಗಿತಿಹಾಸ ಕಾಲದಲ್ಲಿ ಬಳಕೆಯಲ್ಲಿದ್ದ ವಿವಿಧ ಅವಶೇಷಗಳ ಆಧಾರದ ಹಿನ್ನೆಲೆಯಲ್ಲಿ 'ಶಿಲಾಯುಗ ಸಂಸ್ಕೃತಿ' ಮತ್ತು 'ಲೋಹಯುಗ ಸಂಸ್ಕೃತಿ' ಎಂಬ ಎರಡು ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಮಾನವನು ತನ್ನ ಉಗಮ ವಿಕಾಸ ಹಂತದಿಂದಲೂ ನಿರಂತರ ಬದಲಾವಣೆಗೆ ಒಡ್ಡಿಕೊಳ್ಳುತ್ತಾ ಬಂದಿದ್ದಾನೆ. ಆತನು ಶಾರೀರಿಕವಾಗಿ ಹಾಗೂ ಬೌದ್ಧಿಕವಾಗಿಯೂ ಬದಲಾವಣೆಗಳನ್ನು ಹೊಂದುವುದರ ಜೊತೆಗೆ ತನ್ನ ಪರಿಸರದಲ್ಲಿಯೂ ಪರಿವರ್ತನೆ ಉಂಟುಮಾಡಿದನು. ಶಿಲಾಯುಗ ಕಾಲದಿಂದಲೂ ರೂಪುಗೊಂಡಿರುವ ಮಾನವನ ಸಂಸ್ಕೃತಿಯನ್ನು ದೊರೆತ ಅವಶೇಷಗಳು ಹಾಗೂ ಅವುಗಳ ಬೆಳವಣಿಗೆಯನ್ನು ಆಧರಿಸಿ (ರಾಬರ್ಟ್ ಬ್ರೂಸ್‌ಫೂಟ್ ಅವರಿಂದ ಹಿಡಿದು ಇತ್ತೀಚಿನ ವರೆಗಿನ ಅಧ್ಯಯನಗಳ ಆಧಾರದ ಮೇಲೆ) ಹಳೆಯ ಶಿಲಾಯುಗ, ಮಧ್ಯ ಶಿಲಾಯುಗ(ಸೂಕ್ಷ್ಮ ಶಿಲಾಯುಗ), ನೂತನ ಶಿಲಾಯುಗ, ಶಿಲಾತಾಮ್ರಯುಗ(ಲೋಹಯುಗ) ಹಾಗೂ ಬೃಹತ್ ಶಿಲಾಯುಗ ಅಥವಾ ಕಬ್ಬಿಣಯುಗ ಎಂದು ನಾಲ್ಕು ವಿಭಾಗಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಹಳೆಯ ಶಿಲಾಯುಗದಿಂದ ಹಿಡಿದು ಶಿಲಾ ತಾಮ್ರಯುಗದವರೆಗಿನ ಪ್ರಾಗಿತಿಹಾಸ ಕಾಲದ ಕುರುಹುಗಳ ಹಿನ್ನೆಲೆಯಲ್ಲಿ ಈ ಅಧ್ಯಾಯವನ್ನು ವಿವರಿಸುವ ಹಾಗೂ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಶಿಲಾತಾಮ್ರಯುಗದ ನಂತರದ ಕಬ್ಬಿಣಯುಗ ಅಥವಾ ಬೃಹತ್ ಶಿಲಾಯುಗವನ್ನು ಕುರಿತು ಮುಂದಿನ ಅಧ್ಯಾಯದಲ್ಲಿ ವಿವರವಾಗಿ ವಿಶ್ಲೇಷಿಸಿ ನಿರೂಪಿಸಲಾಗಿದೆ.

### ೩.೧ ಹಳೆಯ ಶಿಲಾಯುಗ (Paleolithic Age)

ಹಳೆಯ ಶಿಲಾಯುಗವು ಸುಮಾರು ೫ ಲಕ್ಷ ದಿಂದ ೧.೨೫ ಲಕ್ಷ ವರ್ಷಗಳಷ್ಟು ಪುರಾತನವಾದುದು. ಈ ಹಳೆಯ ಶಿಲಾಯುಗ ಎಂಬ ಕನ್ನಡ ಪದವು ಇಂಗ್ಲೀಷ್ ಭಾಷೆಯ 'ಪ್ಯಾಲಿಯೋಲಿಥಿಕ್' ಎಂಬ ಪದಕ್ಕೆ ಸಮನಾಗಿದೆ. 'ಪ್ಯಾಲಿಯೋಲಿಥಿಕ್' ಎಂಬ ಪದವು ಗ್ರೀಕ್‌ನ 'ಪ್ಯಾಲಿಯೋ' ಮತ್ತು 'ಲಿಥಿಕ್' ಎಂಬ ಎರಡು ಪದಗಳಿಂದ ನಿಷ್ಪನ್ನ ಗೊಂಡಿರುವುದು. 'ಪ್ಯಾಲಿಯೋ' ಎಂದರೆ, 'ಹಳೆಯ' ಎಂತಲೂ, 'ಲಿಥಿಕ್' ಎಂದರೆ 'ಶಿಲೆ' ಎಂಬ ಅರ್ಥವಿದೆ. ಭಾರತದಲ್ಲಿ ಹಳೆಯ ಶಿಲಾಯುಗ ಸಂಸ್ಕೃತಿಯು ಬೆಳಕಿಗೆ ಬಂದುದು 'ಪ್ಲೀಸ್ಟೋಸಿನ್' ಕಾಲದಲ್ಲಿ. ಈ ಅವಧಿಯಲ್ಲಿ ಭೂಮಿಯ ಮೇಲ್ಮೈಯದ ಬಹುಭಾಗಗಳನ್ನು ಹಿಮಗಡ್ಡೆಯ ಹಾಳೆಗಳು ಮುಚ್ಚಿಕೊಂಡಿದ್ದವು. ಉಷ್ಣ ಪ್ರದೇಶಗಳು ಹಿಮ ಮುಕ್ತವಾಗಿದ್ದವಾದರೂ ಪ್ರಖರವಾದ ಮಳೆಗಾಳಿಗಳಿಗೆ ಗುರಿಯಾಗುತ್ತಿದ್ದವು. ಇಂತಹ ಸನ್ನಿವೇಶದಲ್ಲಿ ಮಾನವನು ತನ್ನ ಜೀವನದ ನಿರ್ವಹಣೆಗಾಗಿ ಒರಟಾದ ಶಿಲೋಪಕರಣಗಳನ್ನು ಉಪಯೋಗಿಸಿ ಅವಶ್ಯಕವಾದ ತನ್ನ ಆಹಾರವನ್ನು ದೊರಕಿಸಿಕೊಳ್ಳುತ್ತಿದ್ದ ಅವನ ರೀತಿ ನೀತಿಗಳಲ್ಲಿ ಸಾಕಷ್ಟು ಬದಲಾವಣೆಗಳಾಗದೆ ದೀರ್ಘಕಾಲ ಆದಿಮ ಹಂತದಲ್ಲಿಯೇ ಇದ್ದುದರಿಂದ ಈ ಕಾಲಘಟ್ಟವನ್ನು

'ಹಳೆಯ ಶಿಲಾಯುಗ ಸಂಸ್ಕೃತಿ' ಎಂಬ ಹೆಸರಿನಿಂದ ಗುರುತಿಸುವ ಪ್ರಯತ್ನಮಾಡಲಾಗಿದೆ. ಹಳೆಯ ಶಿಲಾಯುಗ ಸಂಸ್ಕೃತಿಯನ್ನು ಅಧ್ಯಯನ ದೃಷ್ಟಿಯಿಂದ ಮೂರು ಉಪವಿಭಾಗಗಳಾಗಿ ವರ್ಗೀಕರಿಸಲಾಗಿದೆ.

೩. ೧.೧ ಆದಿ ಹಳೆಯ ಶಿಲಾಯುಗ (Lower Paleolithic Age)

೩. ೧.೨ ಮಧ್ಯ ಹಳೆಯ ಶಿಲಾಯುಗ (Middle Paleolithic Age)

೩. ೧.೩ ಅಂತ್ಯ ಹಳೆಯ ಶಿಲಾಯುಗ (Upper Paleolithic Age)

೩. ೧.೧ ಆದಿ ಹಳೆಯ ಶಿಲಾಯುಗ (Lower Paleolithic Age)

ಭಾರತದ ಪ್ರಾಗಿತಿಹಾಸ ಕಾಲದ ಅಧ್ಯಯನದ ಪುಟಗಳು ಕರ್ನಾಟಕದ ಬಳ್ಳಾರಿ ಪ್ರದೇಶದಿಂದಲೇ ತೆರೆದುಕೊಳ್ಳುತ್ತವೆ ಎಂಬುದು ಗಮನಾರ್ಹ ಸಂಗತಿಯಾಗಿದೆ. ೧೮೩೬ರಲ್ಲಿ ಬ್ರಿಟಿಷ್ ಅಧಿಕಾರಿ ಕ್ಯಾಪ್ಟನ್ ನ್ಯೂಬೊಲ್ಡ್ ಅವರು ಬಳ್ಳಾರಿ ಜಿಲ್ಲೆಯ 'ಕುಡುತಿನಿ' ಮತ್ತು 'ಕಪ್ಪುಗಲ್' ನಲ್ಲಿರುವ ಬೂದಿ ದಿನ್ನೆ ನೆಲೆಗಳ ಕುರಿತು ಮಾಡಿರುವ ವರದಿಗಳು ಇತಿಹಾಸ ಪೂರ್ವಕಾಲದ ಮೊಟ್ಟಮೊದಲ ಶೋಧನೆಯಾಗಿವೆಯೆಂದು ಅಭಿಪ್ರಾಯಿಸಲಾಗಿದೆ. ಹೀಗೆ ಆರಂಭವಾದ ಅಧ್ಯಯನವು ಮುಂದೆ ೧೮೪೧–೪೨ರಲ್ಲಿ ಪ್ರೀಮ್‌ರೋಸ್ ಅವರು ರಾಯಚೂರಿನಲ್ಲಿ ತಮ್ಮ ಕೈತೋಟವನ್ನು ಸ್ವಚ್ಛಗೊಳಿಸುವಾಗ ಬಾಣದ ಮೊನೆ ಮತ್ತು ನೀಳಚಕ್ಕೆ ಮುಂತಾದ ಶಿಲೋಪಕರಣಗಳನ್ನು ಪರಿಶೀಲಿಸಿ ಕುತೂಹಲದಿಂದ ಮತ್ತಷ್ಟು ವಿವರಗಳನ್ನು ಪರಿಶೋಧಿಸುವ ಪ್ರಯತ್ನ ಮಾಡಿದರು. ಅದೇ ವರ್ಷದ ಕಾಲಘಟ್ಟದಲ್ಲಿ ಕರ್ನಲ್ ಮೆಡೋಸ್ ಟೇಲರ್ ಅವರು ಲಿಂಗಸುಗೂರಿನಲ್ಲಿ ಉಜ್ಜಿನಯಗೊಳಿಸಿದ ಕೈಕೊಡಲಿ ಉಪಕರಣಗಳನ್ನು ಶೋಧಿಸುವ ಮೂಲಕ ಪುರಾತತ್ವ ಅಧ್ಯಯನದ ಪುಟಗಳು ಮತ್ತಷ್ಟು ತೆರೆದುಕೊಳ್ಳುತ್ತಾ ಹೆಚ್ಚಿನ ವಿಸ್ತಾರವನ್ನು ಪಡೆಯಲಾರಂಭಿಸಿದವು.

ರಾಬರ್ಟ್ ಬ್ರೂಸ್‌ಫೂಟ್ ಅವರು ಮೇ, ೩೦, ೧೮೬೩ರಲ್ಲಿ ತಮಿಳುನಾಡಿನ(ಚೆನ್ನೈ) ಪಲ್ಲಾವರಂನಲ್ಲಿ ಜಂಬಿಟ್ಟಿಗೆ(ಲ್ಯಾಟರೈಟ್) ಗರಸು ಮಣ್ಣಿನಲ್ಲಿ ಮೊಟ್ಟಮೊದಲಿಗೆ ಅತೀ ಪ್ರಾಚೀನ ಸಂಸ್ಕೃತಿಯ ಉಪಕರಣಗಳನ್ನು ಪತ್ತೆಹಚ್ಚುವುದರ ಮುಖಾಂತರ ಭಾರತದ ಭೂಭಾಗವು ಸಹ ಮಾನವನ ಪ್ರಾಚೀನ ವಾಸ್ತವ್ಯ ನೆಲೆಗಳಲ್ಲೊಂದು ಎಂಬ ಸಂಗತಿಯನ್ನು ದಾಖಲಿಸಿ ಪ್ರಪಂಚವು ಭಾರತದ ಕಡೆಗೆ ದೃಷ್ಟಿಹರಿಸುವಂತಹ ಸಂದರ್ಭಗಳು ಸೃಷ್ಟಿಯಾದವು. ಇಂತಹ ಮಹತ್ವದ ಸಂಗತಿಯನ್ನು ಬೆಳಕಿಗೆ ತಂದ ರಾಬರ್ಟ್ ಬ್ರೂಸ್‌ಫೂಟ್ ಅವರನ್ನು 'ಭಾರತದ ಪ್ರಾಗಿತಿಹಾಸದ ಪಿತಾಮಹ' ಎಂದು ಕರೆಯಲಾಯಿತು. ಇದೇ ವರ್ಷದಲ್ಲಿ ತನ್ನ ಸಹೋದ್ಯೋಗಿ ವಿಲಿಯಂಕಿಂಗ್ ಜೊತೆಗೆ ಪಲ್ಲಾವರಂ ಸಮೀಪವಿರುವ 'ಅತ್ತಿರಂಪಕ್ಕಂ'[೨]ನಲ್ಲಿ ಹಳೆಯ ಶಿಲಾಯುಗದ ಉಪಕರಣಗಳನ್ನು ಪತ್ತೆಹಚ್ಚಿ ಪ್ರಕಟಿಸಿದನು. ೧೮೬೪ರಲ್ಲಿ ಪಲ್ಲಾವರಂನಲ್ಲಿ ಮತ್ತಷ್ಟು ಉಪಕರಣಗಳನ್ನು ಸಂಗ್ರಹಿಸಿ ೧೮೬೬ರಲ್ಲಿ 'ಮದ್ರಾಸ್ ಜರ್ನಲ್ ಆಫ್ ಲಿಟರೇಚರ್ ಅಂಡ್ ಸೈನ್ಸ್' ಎಂಬ ಸಂಶೋಧನ ಪತ್ರಿಕೆಯಲ್ಲಿ ತಾನು ಸಂಗ್ರಹಿಸಿದ ಉಪಕರಣಗಳು ಹಾಗೂ ಅವು ದೊರೆತ ಭೂ ವಿಸ್ತಾರವನ್ನು ಕುರಿತು ವಿವರಣಾತ್ಮಕ

ಟಿಪ್ಪಣಿಗಳ ಮೂಲಕ ವೈಜ್ಞಾನಿಕ ಪ್ರಬಂಧವನ್ನು ಪ್ರಕಟಿಸಿ ಸಂಶೋಧನೆಗೆ ಹೊಸ ದಿಕ್ಕನ್ನು ನಿರ್ಮಾಣ ಮಾಡಿದರೆಂದರೆ ತಪ್ಪಾಗಲಾರದು.

೧೮೬೧ರಲ್ಲಿ 'ಭಾರತೀಯ ಪುರಾತತ್ವ ಸರ್ವೇಕ್ಷಣೆ ಇಲಾಖೆ' ಪ್ರಾರಂಭಗೊಂಡು ಪುರಾತತ್ವ ಅಧ್ಯಯನಕ್ಕೆ ಮತ್ತಷ್ಟು ಪುಷ್ಟಿ ದೊರೆತಂತಾಯಿತು. ಇದೇ ಹಾದಿಯಲ್ಲಿ ಮುನ್ನಡೆದ ಭಾರತೀಯ ಮತ್ತು ವಿದೇಶಗಳ ಹಲವು ಪುರಾತತ್ವಶಾಸ್ತ್ರಜ್ಞರು ಅಂದಿನಿಂದ ಇಂದಿನವರೆಗೆ ಸತತ ಸಂಶೋಧನೆ ಮತ್ತು ಉತ್ಖನನಗಳನ್ನು ನಡೆಸಿದ ಫಲವಾಗಿ ಭಾರತದಾದ್ಯಂತ ಅನೇಕ ಪ್ರಾಗೈತಿಹಾಸಿಕ ನೆಲೆಗಳು ಬೆಳಕಿಗೆ ಬಂದವು. ೧೮೭೨ರಲ್ಲಿ ವಿಲಿಯಂ ಪ್ರೇಸರ್ ಅವರು ಬಳ್ಳಾರಿಯ ಉತ್ತರಕ್ಕೆ ಇರುವ 'ನವಿಲುಗುಡ್ಡ'ದಲ್ಲಿ ನೂತನ ಶಿಲಾಯುಗ ಅಥವಾ ನವ ಶಿಲಾಯುಗ ಸಂಸ್ಕೃತಿಯ ವಾಸ್ತವ್ಯದ ನೆಲೆಯನ್ನು ಪತ್ತೆಹಚ್ಚಿದರು. ಈ ನೆಲೆಯು ಸಂಗನಕಲ್ಲು ಗ್ರಾಮದ ವ್ಯಾಪ್ತಿಯಲ್ಲಿರುವುದರಿಂದ 'ಸಂಗನಕಲ್ಲು'[೩] ನೆಲೆ ಎಂಬ ಹೆಸರಿನಿಂದ ಪ್ರಸಿದ್ಧಿಯಾಗಿದೆ.

ರಾಬರ್ಟ್ ಬ್ರೂಸ್‌ಫೂಟ್ ಅವರು ಭಾರತೀಯ ಪುರಾತತ್ವ ಸರ್ವೇಕ್ಷಣೆ ಇಲಾಖೆಯ ಅಧಿಕಾರಿಯಾದ ಸಂದರ್ಭದಲ್ಲಿ ಕರ್ನಾಟಕ ಪ್ರದೇಶದಲ್ಲಿಯೂ ಹಲವು ನೆಲೆಗಳನ್ನು ಅನ್ವೇಷಿಸಿದರು. ಅವುಗಳಲ್ಲಿ ಉತ್ತರ ಕರ್ನಾಟಕದ ಕೃಷ್ಣ, ಮಲಪ್ರಭಾ ನದಿ ಬಯಲಿನ ಖ್ಯಾಡ್ ಮತ್ತು ಥಾಣಕ್ ಶಿರೂರು(ಬಾಗಲಕೋಟೆ ಜಿಲ್ಲೆ), ಘಟಪ್ರಭಾ ನದಿ ದಂಡೆಯ ಮೇಲಿರುವ ಅನಗವಾಡಿ ಹಾಗೂ ಕಲಾದಗಿ ಗ್ರಾಮ ಪರಿಸರಗಳಲ್ಲಿ ಇನ್ನೂ ಇತರೆ ನದಿಕೊಳ್ಳಗಳಲ್ಲಿ ಆದಿ ಹಳೆಯ ಶಿಲಾಯುಗದ ಉಪಕರಣಗಳು ಇದ್ದುದ್ದನ್ನು ೧೮೭೩ರಲ್ಲಿ ವರದಿ ಮಾಡಿದನು. ಶಿವಮೊಗ್ಗ ಜಿಲ್ಲೆಯ ನ್ಯಾಮತಿ, ಕುರೇಕೊಪ್ಪ, ಚಿತ್ರದುರ್ಗ ಜಿಲ್ಲೆಯ ತಾಳ್ಯ, ಚಿಕ್ಕಮಗಳೂರು ಹಾಗೂ ಬಳ್ಳಾರಿ ಜಿಲ್ಲೆ ಸೇರಿದಂತೆ ಹಲವಾರು ನೆಲೆಗಳಲ್ಲಿ ಈ ಸಂಸ್ಕೃತಿಯ ಉಪಕರಣಗಳನ್ನು ಸಂಗ್ರಹಿಸಿದರು.

೧೯೪೪ರಲ್ಲಿ ಲಂಡನ್ನಿನ 'ಇನ್‌ಸ್ಟಿಟ್ಯೂಟ್ ಆಫ್ ಆರ್ಕಿಯಾಲಜಿ'ಯ ಎಫ್.ಇ ಜಾಯನರ್ ಮತ್ತು ಆರ್.ವಿ. ಜೋಷಿಯವರೊಂದಿಗೆ ಖ್ಯಾಡ ನೆಲೆಗಳಲ್ಲಿ ಸಂಚರಿಸಿ ಹಲವು ಆಯುಧಾವಶೇಷಗಳನ್ನು ಅನ್ವೇಷಣೆ ಮಾಡಿದರು. ೧೯೪೪-೫೭ರಲ್ಲಿ ಆರ್.ವಿ ಜೋಷಿಯವರು ಮಲಪ್ರಭಾ ಕಣಿವೆಯಲ್ಲಿ ಪ್ರಾಗೈತಿಹಾಸಿಕ ಕಾಲಕ್ಕೆ ಸಂಬಂಧಿಸಿದಂತೆ ಭೂ ರಚನಾ ಶಾಸ್ತ್ರೀಯವಾದ ಅನ್ವೇಷಣೆಯನ್ನು ನಡೆಸಿದರು.[೪] ಶೋರಾಪುರ ಪ್ರದೇಶದಲ್ಲಿ ನಡೆದಿರುವ ಪ್ರಾಗೈತಿಹಾಸಿಕ ಅಧ್ಯಯನಗಳಿಂದ ಅಶ್ಯೂಲಿಯನ್ ಸಂಪ್ರದಾಯದ ಶಿಲೋಪಕರಣಗಳ ಬೃಹತ್ ಉತ್ಪಾದನ ಕೇಂದ್ರವೊಂದು ಬೆಳಕಿಗೆ ಬಂದಿತು. ನಂತರ ರಾಬರ್ಟ್ ಬ್ರೂಸ್‌ಫೂಟ್ ಅವರು ಕರ್ನಾಟಕದಲ್ಲಿ ಹಲವು ಜಿಲ್ಲೆಗಳಲ್ಲಿ ಹಳೆಯ ಶಿಲಾಯುಗದ ನೆಲೆಗಳನ್ನು ಶೋಧಿಸಿದರು. ಅವುಗಳಲ್ಲಿ ಪ್ರಸ್ತುತ ಅಧ್ಯಯನ ಕ್ಷೇತ್ರವಾಗಿರುವ ಬಳ್ಳಾರಿ ಜಿಲ್ಲೆಯ ಹಳಕುಂಡಿ,[೫] ಸಂಗನಕಲ್ಲು,[೬] ಬಾದನಹಟ್ಟಿಗುಡ್ಡ,[೭] ಬೆಳಗಲ್ಲು,[೮] ಕುರೇಕುಪ್ಪ,[೯] ದರೋಜಿ,[೧೦] ಹಿರೇಕುರುವತ್ತಿ,[೧೧] ಗಾದಿಗನೂರು,[೧೨] ಕಮಲಾಪುರ,[೧೩] ಮಲ್ಲಾಪುರ[೧೪] ಇನ್ನೂ ಮೊದಲಾದ ನೆಲೆಗಳು ಪತ್ತೆಮಾಡಿ ಅವುಗಳ ಕುರಿತು ವಿವರ ಪ್ರಕಟಿಸುವಲ್ಲಿ ಯಶಸ್ವಿಯಾದರು. ೧೯೬೪ರಲ್ಲಿ ಝಡ್.ಡಿ. ಅನ್ಸಾರಿ

ಅವರು ತುಂಗಭದ್ರಾ ನದಿ ದಂಡೆಯ ಬಲದಂಡೆಯ ನಿಟ್ಟೂರು[೧೫] ನೆಲೆಯಲ್ಲಿ ಮಣ್ಣಿನ ಪದರುಗಳಲ್ಲಿ ಗ್ರಾನೈಟ್-ನೀಸ್‌ನಲ್ಲಿರುವ ಡಾಲರೈಟ್ ಕಲ್ಲಿನಿಂದ ತಯಾರಿಸಿದ ಶಿಲೋಪಕರಣಗಳು, ಕಾಡು ದನದ ಪಳೆಯುಳಿಕೆಯನ್ನು ಶೋಧಿಸಿ ಆ ಮೂಲಕ ಶಿಲಾಯುಗ ಕಾಲದಲ್ಲಿದ್ದ ವಿವಿಧ ಪ್ರಾಣಿವರ್ಗದ ಕುರಿತು ಅಧ್ಯಯನ ಮಾಡಲು ಪ್ರಮುಖ ಸಾಕ್ಷ್ಯಾಧಾರಗಳನ್ನು ಸಂಶೋಧನಾ ವಲಯದ ಮುಂದಿಟ್ಟನು.

ಎಸ್.ಆರ್. ರಾವ್ ಅವರು ಹೊಸಪೇಟೆ ತಾಲ್ಲೂಕಿನ ಕಮಲಾಪುರದಿಂದ ನೈರುತ್ಯ ದಿಕ್ಕಿಗೆ ೬ ಕಿ.ಮೀ ದೂರದಲ್ಲಿ ಆದಿ ಹಳೆಯ ಶಿಲಾಯುಗದ ನೆಲೆಯನ್ನು ಶೋಧಿಸಿದರು. ಮುಖ್ಯವಾಗಿ ವಿಭಿನ್ನವಾದ ಡಾಲರೈಟ್ ಶಿಲೆಯಲ್ಲಿ ತಯಾರಿಸಿದ ಕೈಗೊಡಲಿ, ಹೆರೆಗತ್ತಿ, ಒಮ್ಮುಖ ಮತ್ತು ಹಿಮ್ಮುಖದ ನೀಳಚಕ್ಕೆ ಉಪಕರಣಗಳನ್ನು ಸಂಗ್ರಹಿಸಿದರು. ತರುವಾಯ ರವಿ ಕೋರಿಶೆಟ್ಟರ್ ಅವರು ಕೃಷ್ಣಾ ನದಿಯ ಪಾತ್ರದಲ್ಲಿ ವಿಸ್ತರಿಸಿಕೊಂಡಿರುವ ಪ್ರಾಗೈತಿಹಾಸಿಕ ನೆಲೆಗಳನ್ನು ಭೂವಿಜ್ಞಾನ ಮತ್ತು ಪ್ರಾಣಿ-ಸಸ್ಯವರ್ಗದ ಒಳಗೊಳ್ಳುವಿಕೆಯ ಹಿನ್ನೆಲೆಯಲ್ಲಿ ವಿಸ್ತೃತ ಅಧ್ಯಯನ ಕೈಗೊಂಡು ತಮ್ಮ ಅಭಿಪ್ರಾಯಗಳನ್ನು ಪ್ರಕಟಿಸಿದ್ದಾರೆ. ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಹನುಮಸಾಗರದಲ್ಲಿ[೧೬] ಈ ಸಂಸ್ಕೃತಿಯ ಉಪಕರಣಗಳನ್ನು ಶೋಧಿಸಿದರು. ಇತ್ತೀಚೆಗೆ ಎಚ್.ತಿಪ್ಪೇಸ್ವಾಮಿ ಅವರು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಜುಮ್ಮೋಬನಹಳ್ಳಿಯ ಪಿಕ್ಕಪ್‌ಹಳ್ಳದ[೧೭] ದಂಡೆಯಲ್ಲಿ ಈ ಸಂಸ್ಕೃತಿಯ ಉಪಕರಣಗಳನ್ನು ಶೋಧಿಸಿ ಅಧ್ಯಯನದ ವ್ಯಾಪ್ತಿಗೆ ಇನ್ನೂ ಹೆಚ್ಚಿನ ಅರಿವು ನೀಡಲು ಕಾರಣಕರ್ತರಾಗಿದ್ದಾರೆ.

**ಉಪಕರಣಗಳು**

ಆದಿ ಹಳೆಯ ಶಿಲಾಯುಗದ ಜನರು ಕ್ವಾರ್ಟ್‌ಜೈಟ್‌ಕಲ್ಲು, ಉಸುಕುಕಲ್ಲು, ಸುಣ್ಣದಕಲ್ಲು, ಒರಟು ಕ್ವಾರ್ಟ್‌ಜೈಟ್ ಹಾಗೂ ಸ್ಥಳೀಯವಾಗಿ ದೊರೆಯುವ ಶಿಲೆಗಳನ್ನು ಬಳಸಿಕೊಂಡು ಉಪಕರಣಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಇವುಗಳು ಅಶ್ಯೂಲ್ ಮಾದರಿಯಲ್ಲಿದ್ದು, ಕೈಕೊಡಲಿಗಳು(Handaxe), ಕೊರೆಗತ್ತಿಗಳು(Choppers), ಮಚ್ಚುಗಳು, ಸೀಳುಗತ್ತಿಗಳು(Cleavers), ದುಂಡುಚಪ್ಪಟೆ ಮುಂತಾದ ಆಕೃತಿಗಳಲ್ಲಿವೆ.[೧೮] ಇಂತಹ ಉಪಕರಣಗಳನ್ನು ತಮಗೆ ಬೇಕಾದ ರೀತಿಯಲ್ಲಿ ಸಿದ್ಧಪಡಿಸಿಕೊಳ್ಳುತ್ತಿದ್ದರು. ಉದಾಹರಣೆಗೆ ತ್ರಿಕೋನಾಕಾರ, ಬಾದಾಮಾಕಾರ, ಈಟಿ ಮೊನೆಯಕಾರ ಮಾನವನ ಹೃದಯದಾಕಾರಗಳ ರೀತಿಯಲ್ಲಿ ರಚನೆ ಮಾಡಿಕೊಳ್ಳುತ್ತಿದ್ದರು. 'ಕಲ್ಲಿನಿಂದ ಕಲ್ಲಿಗೆ ಹೊಡೆಯುವ ಮೂಲಕ, ಕಲ್ಲುಸುತ್ತಿಗೆ ಮತ್ತು ಲಘುಸುತ್ತಿಗೆ'[೧೯]ಎಂಬ ಮೂರು ವಿಧಾನಗಳನ್ನು ಅನುಸರಿಸಿ ಉಪಕರಣಗಳನ್ನು ಸಿದ್ದಪಡಿಸಿಕೊಳ್ಳುತ್ತಿದ್ದರೆಂದು ಸಂಶೋಧನೆಗಳು ಸಾಬೀತುಪಡಿಸಿವೆ.

ಈ ಉಪಕರಣಗಳನ್ನು ದೈನಂದಿನ ಆಹಾರ ಸಂಗ್ರಹಣೆಗಾಗಿ ಬಳಸುತ್ತಿದ್ದರು. ಗೆಡ್ಡೆಗೆಣಸುಗಳ ತೊಗಟೆ ತೆಗೆಯಲು, ಬೇಟೆಯಾಡಲು, ಪ್ರಾಣಿಯ ಮಾಂಸವನ್ನು ತುಂಡರಿಸಲು, ಮೃತ(ಸತ್ತ) ಪ್ರಾಣಿಯ ಚರ್ಮವನ್ನು ಬೇರ್ಪಡಿಸಲು, ಕಂಟಿ(ಪೊದೆ)ಗಳನ್ನು ಅಗೆದು ತೆಗೆಯಲು, ಸಸ್ಯಹಾರವನ್ನು ಸಿದ್ಧಪಡಿಸಲು, ಕಟ್ಟಿಗೆ ಉಪಕರಣಗಳನ್ನು ತಯಾರಿಸಲು ಇಂತಹ ಗಟ್ಟಿಯಾದ ಹತಾರಗಳು ಅವರಿಗೆ

ಅವಶ್ಯಕವಾಗಿದ್ದವು. ಬೆಟ್ಟಗಳ ತಪ್ಪಲಿನಲ್ಲಿ ಆಹಾರ, ಸದಾಕಾಲ ನೀರಿನ ಲಭ್ಯತೆಯಿರುವ ಹಾಗೂ ಉಪಕರಣಗಳನ್ನು ತಯಾರಿಸಲು ಅವಶ್ಯಕವಾದ ಕಚ್ಚಾ ಶಿಲೆಗಳು ದೊರೆಯುತ್ತಿದ್ದ ಪ್ರದೇಶಗಳಲ್ಲಿ ಈ ಸಂಸ್ಕೃತಿಯ ಜನರು ನೆಲೆಸುತ್ತಿದ್ದರೆಂಬ ಅಭಿಪ್ರಾಯಗಳಿವೆ. ಅಶ್ಯೂಲಿಯನ್ ಸಂಪ್ರದಾಯದ ತಾಂತ್ರಿಕ ಕ್ರಮವನ್ನು ಅನುಸರಿಸುತ್ತಿದ್ದ ಜನರು ಈಗಾಗಲೇ ಮೇಲೆ ತಿಳಿಸಿದ ಪ್ರದೇಶಗಳಲ್ಲಿ ವಾಸಿಸುತ್ತಿದ್ದ ಕುರುಹುಗಳು ಕಂಡುಬಂದಿವೆ. ಪುರಾತತ್ವಜ್ಞರು ಅಶ್ಯೂಲಿಯನ್ ಮಾದರಿಯ ನೆಲೆಗಳನ್ನು ಮೂಲ ನೆಲೆಗಳು, ಉಪಕರಣ ತಯಾರಿಕೆ ನಿವೇಶನಗಳು, ಹಳೆಯ ನೆರೆಮಣ್ಣಿನ ಬಯಲು ನೆಲೆಗಳು, ಗುಡ್ಡದ ತಪ್ಪಲಿನ ನಿವೇಶನಗಳು ಮತ್ತು ಸಮತಟ್ಟು ನಿವೇಶನಗಳೆಂದು ವಿಂಗಡಿಸಲಾಗಿದೆ. ಆದರೂ ಆ ಕಾಲದ ಸಾಂಸ್ಕೃತಿಕ ಪರಿಸರವನ್ನು ಸುಲಭವಾಗಿ ಅಧ್ಯಯನ ಮಾಡುವುದು ಕಷ್ಟಕರವೆಂದೇ ಹೇಳಬಹುದು. ಏಕೆಂದರೆ ಸಾಂಸ್ಕೃತಿಕ ಪರಿಸರದ ಬಗ್ಗೆ ಸ್ಪಷ್ಟವಾದ ಮಾಹಿತಿ ದೊರಕುವುದು ಅತಿ ಕಡಿಮೆ. ಆದರೆ ಹವಾಮಾನ, ಭೂರಚನೆ ಬಂಡೆಗಲ್ಲುಗಳು, ಮಣ್ಣು, ಖನಿಜಗಳು, ಸಸ್ಯಗಳು, ಪ್ರಾಣಿಗಳು ಇವೆಲ್ಲವುಗಳು ಅಂದಿನ ಪರಿಸರವನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ.

ಅಧ್ಯಯನ ಪ್ರದೇಶಗಳಲ್ಲಿ ಒಂದಾದ ನಿಟ್ಟೂರಿನಲ್ಲಿ ಝಡ್.ಡಿ ಅನ್ಸಾರಿಯವರು ಕಾಡು ದನದ ಅಸ್ತಿ ಅವಶೇಷಗಳನ್ನು ಶೋಧಿಸುವುದರ ಮೂಲಕ ಅಶ್ಯೂಲ್ ಹಂತದ ಪ್ರಾಣಿಗಳ ಚಹರೆಯನ್ನು ಗುರುತಿಸಿದರು. ಈ ಪ್ರಾಣಿಗಳ ಚಹರೆಯಿಂದ ಅಂದಿನ ಪರಿಸರದ ಬಗ್ಗೆ ಅಧ್ಯಯನ ಮಾಡಲು ಪ್ರಯತ್ನಿಸಿದರು.[೨೦] ಹಾಗೂ ಇಲ್ಲಿನ ಭೌಗೋಳಿಕ ಸನ್ನಿವೇಶವು ಈ ಸಂಸ್ಕೃತಿಯ ಜನರಿಗೆ ಅವಶ್ಯಕವಾದ ಪರಿಕರಗಳನ್ನು ಸಿದ್ದಪಡಿಸಿಕೊಳ್ಳಲು ಸಂಪತ್ಭರಿತ ಖನಿಜ ಸಂಪನ್ಮೂಲಗಳಿಂದ(ಕಚ್ಚಾಶಿಲೆಗಳು) ಕೂಡಿದ್ದರಿಂದ ಆ ಜನರು ತಾತ್ಕಾಲಿಕವಾಗಿ ನೆಲೆಸಿದ್ದರು ಎಂದು ಹೇಳಬಹುದು. ಈ ಸಂಸ್ಕೃತಿಯು ಕಾಲ ಕ್ರಮೇಣವಾಗಿ ಮುಂದುವರಿಯುತ್ತಾ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಪುನಃ ಬದಲಾದ ಸನ್ನಿವೇಶಗಳಲ್ಲಿ ಮಧ್ಯ ಹಳೆಯ ಶಿಲಾಯುಗ ಸಂಸ್ಕೃತಿಯಲ್ಲಿ ಕಾಣಿಸಿಕೊಂಡಿತು.

### ೩.೧.೨ ಮಧ್ಯ ಹಳೆಯ ಶಿಲಾಯುಗ (Middle Paleolithic Age)

ಆದಿ ಹಳೆಯ ಶಿಲಾಯುಗ ಮತ್ತು ಅಂತಿಮ ಹಳೆಯ ಶಿಲಾಯುಗಗಳ ನಡುವಿನ ಕಾಲಘಟ್ಟವೇ ಮಧ್ಯ ಹಳೆಯುಗ ಶಿಲಾಯುಗ. ಈ ಅವಧಿಯಲ್ಲಿ ಉಪಕರಣಗಳು ವಿಶಿಷ್ಟವಾಗಿವೆ. ಈ ಸಂಸ್ಕೃತಿಯ ಜನರು ತಮ್ಮ ಹಿಂದಿನ ಆದಿ ಹಳೆಯ ಶಿಲಾಯುಗದವರು ಅನುಸರಿಸುತ್ತಿದ್ದ ತಾಂತ್ರಿಕತೆಯೊಂದಿಗೆ ಹೊಸ ತಂತ್ರವೊಂದನ್ನು ರೂಪಿಸಿಕೊಂಡರು. ಇದನ್ನು 'ಲೆವಾಲ್ವಾ ತಂತ್ರಗಾರಿಕೆ'[೨೧] ಎಂದು ಕರೆಯಲಾಗುತ್ತದೆ. ದಪ್ಪಕಲ್ಲುಗಟ್ಟಿಯಿಂದ ಕ್ಲಾಸ್ಟನ್, ಲೆವಾಲ್ವಾ ಅಥವಾ ಮಸ್ಟೂರ್ ತಂತ್ರಗಳಿಂದ ಚಕ್ಕೆಗಳನ್ನು ಬೇರ್ಪಡಿಸಿಕೊಂಡು ಅವುಗಳಿಗೆ ನಿರ್ದಿಷ್ಟ ರೂಪವನ್ನು ನೀಡಿ ಉಪಕರಣಗಳನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರು. ಈ ಉಪಕರಣಗಳು ಗಾತ್ರದಲ್ಲಿ ಚಿಕ್ಕದಾಗಿದ್ದು, ಚಕ್ಕೆ ಉಪಕರಣಗಳು ಆಗಿರುವುದರಿಂದ ಬೇಟೆಯಾಡಲು, ನೆಲ ಅಗೆಯಲು, ಮರಗಿಡ ಕಡಿಯಲು ಬರುವುದಿಲ್ಲ. ಸಾಮಾನ್ಯವಾಗಿ ಇವುಗಳ ಗಾತ್ರ ೫.ಸೆಂ.ಮೀ, ನಿಂದ ೮.ಸೆಂ.ಮೀ.ನಷ್ಟಿದ್ದು ಸಣ್ಣ ಪ್ರಮಾಣದ ಕೆಲಸಕಾರ್ಯಗಳಿಗೆ

ಬಳಸಬಹುದೇ ಹೊರತು ದೊಡ್ಡ ಪ್ರಮಾಣದ ಕೆಲಸ ಕಾರ್ಯಗಳಿಗೆ ಬಳಸಲು ಬರುವುದಿಲ್ಲ. ಆದರೆ ಹೆರೆಯುವ ಉಪಕರಣಗಳು(Scrapers), ಒಳಬಾಗಿದ ಅಂಚಿನ ಹೆರೆಯುವ ಚಕ್ಕೆ ಉಪಕರಣಗಳು, ರಂಧ್ರಕಾರಕಗಳನ್ನು(Borers) ರಂಧ್ರ ಮಾಡಲು ಅಥವಾ ಆಳವಾಗಿ ತಿವಿಯಲು, ಬೇಟೆಯಾಡಲು, ಭರ್ಜಿಗಳನ್ನು ತಯಾರಿಸಲು ಉಪಯೋಗಿಸಿರಬಹುದು.

**ಉಪಕರಣ ತಯಾರಿಸಲು ಬಳಸಿದ ಶಿಲೆಗಳು**

ಮಧ್ಯ ಹಳೆಯ ಶಿಲಾಯುಗದಲ್ಲಿ ಚಕ್ಕೆ ಉಪಕರಣಗಳು, ಮೊನೆಗಳು, ಚೂರಿ ತರಹದ ಚಕ್ಕೆಗಳು, ದಂತಾಕಾರದ ಉಪಕರಣಗಳು, ಬೈರಿಗೆ, ಕೈಕೊಡಲಿಗಳು, ಮಚ್ಚುಗಳನ್ನು ತಯಾರಿಸಲು ಅತ್ಯಂತ ಪ್ರಶಸ್ಥವೆನಿಸಿದ ಅಗೇಟ್, ಕಾರ್ನಿಲಿಯನ್, ಜಾಸ್ಪರ್ ಮತ್ತು ಚರ್ಟ್‌ಶಿಲೆಗಳನ್ನು ಉಪಯೋಗಿಸುತ್ತಿದ್ದರು. ಉಪಕರಣಗಳ ತಯಾರಿಕ ವಿಧಾನಗಳು ಕಾಲದಿಂದ ಕಾಲಕ್ಕೆ ಬದಲಾದುದನ್ನು ಗಮನಿಸಬಹುದು. ಈ ಸಂಸ್ಕೃತಿಯ ಹೆಚ್ಚಿನ ಉಪಕರಣಗಳೆಲ್ಲಾ ಚಕ್ಕೆ ಕಲ್ಲಿನವುಗಳಾಗಿರುವುದರಿಂದ ಇವುಗಳನ್ನು ತಯಾರಿಸುವ ವಿಧಾನಕ್ಕೆ 'ಚಕ್ಕೆ ಉದ್ಯಮ'ವೆಂದು ಕರೆಯಲಾಗಿದೆ. ಆದಿ ಹಳೆಯ ಶಿಲಾಯುಗದ ಜನರಂತೆ ಮಧ್ಯ ಹಳೆಯ ಶಿಲಾಯುಗದ ಜನರು ನದಿದಡಗಳ ಮೇಲೆ, ಕಡಲತೀರಗಳಲ್ಲಿ, ಬೆಟ್ಟಗಳ ತಪ್ಪಲಿನಲ್ಲಿ ವಾಸಿಸುತ್ತಿದ್ದರು.

ಭಾರತದಲ್ಲಿ ೧೯೫೪ರಲ್ಲಿ ಹೆಚ್.ಡಿ ಸಂಕಾಲಿಯ ಅವರು ಪ್ರಪ್ರಥಮ ಬಾರಿಗೆ ಈ ಸಂಸ್ಕೃತಿಯ ಕೆಲವು ಆಯುಧ ಅವಶೇಷಗಳನ್ನು ಮಹಾರಾಷ್ಟ್ರದ ಅಹಮದ್ ನಗರ ಜಿಲ್ಲೆಯ ನೆವಾಸ ಬಳಿಯ ಪ್ರವರ ನದಿದಂಡೆಯ ಪದರುಗಳಲ್ಲಿ ಪತ್ತೆಹಚ್ಚಿದರು.[೨೨] ನಂತರದಲ್ಲಿ ಭಾರತದಾದ್ಯಂತ ಹೆಚ್ಚು ಕಡಿಮೆ ಎಲ್ಲಾ ಆದಿ ಹಳೆಯ ಶಿಲಾಯುಗದ ನೆಲೆಗಳಲ್ಲಿ ಈ ಸಂಸ್ಕೃತಿಯ ಅವಶೇಷಗಳನ್ನು ಗುರುತಿಸಲಾಯಿತು. ಮಹಾರಾಷ್ಟ್ರದ ಆದಮ್‌ಘರ್,[೨೩] ಆಂಧ್ರಪ್ರದೇಶದ ನಾಗಾರ್ಜನಕೊಂಡ,[೨೪] ರೇಣಿಗುಂಟ, ಕರ್ನೂಲ್, ಬೇಥಂಚರ್ಲ್, ಸೋನ್ ಹಾಗೂ ತಾಪಿ ಕಣಿವೆ[೨೫] ಮೊದಲಾದ ನೆಲೆಗಳಲ್ಲಿ ನಡೆಸಿದ ಸಂಶೋಧನೆ ಹಾಗೂ ಉತ್ಖನನಗಳಿಂದ ಈ ಸಂಸ್ಕೃತಿಗೆ ಸಂಬಂಧಿಸಿದ ಹಲವು ಅವಶೇಷಗಳು ದೊರಕಿರುವುದನ್ನು ಮನಗಾಣುತ್ತೇವೆ.

ಕರ್ನಾಟಕದಲ್ಲಿ ಆರ್.ಡಿ. ಬ್ಯಾನರ್ಜಿ, ಅ.ಸುಂದರ, ಆರ್.ಎಸ್.ಪಪ್ಪು, ಕೆ.ಪದ್ದಯ್ಯ, ರವಿ ಕೋರಿಶೆಟ್ಟರ್ ಮೊದಲಾದ ಪುರಾತತ್ವಜ್ಞರು ಮಧ್ಯ ಹಳೆಯ ಶಿಲಾಯುಗ ಸಂಸ್ಕೃತಿಯ ಹಲವು ನೆಲೆಗಳನ್ನು ಬೆಳಕಿಗೆ ತಂದಿದ್ದಾರೆ. ೧೯೫೭ರಲ್ಲಿ ಆರ್.ಡಿ. ಬ್ಯಾನರ್ಜಿಯವರು ಘಟಪ್ರಭಾ, ಮಲಾಪ್ರಭಾ ಹಾಗೂ ಕೃಷ್ಣನದಿಗಳ ಕೆಲವು ಭಾಗಗಳಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಹಲವು ವಿಶಿಷ್ಟ ಅಯುಧಗಳನ್ನು ಶೋಧಿಸಿದರು.[೨೬] ಅದೇ ರೀತಿ ಅ.ಸುಂದರ ಅವರು ಧಾರವಾಡ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಕೆಲವೊಂದು ನೆಲೆಗಳನ್ನು ಶೋಧಿಸಿದರು. ಅವುಗಳಲ್ಲಿ ಚನೆಗಾಂ, ಶಿಡ್ಲಪಡಿಗುಹೆಗಳು, ಮಟಕದೇವನಹಳ್ಳಿ ಮೊದಲಾದ ನೆಲೆಗಳು ಮುಖ್ಯವಾದವುಗಳು. ಆರ್.ಎಸ್. ಪಪ್ಪುರವರು ಕೃಷ್ಣ ಮತ್ತು ಘಟಪ್ರಭಾನದಿಗಳ

ದಂಡೆಗಳಲ್ಲಿ ಕೈಗೊಂಡ ಪರಿಶೋಧನೆಯ ಫಲವಾಗಿ ಮಧ್ಯ ಹಳೆಯ ಶಿಲಾಯುಗ ಸಂಸ್ಕೃತಿಯ ಹಲವು ನೆಲೆಗಳು ಶೋಧನೆಗೊಂಡಿವೆ. ಅವುಗಳಲ್ಲಿ ಸೀತಿಮನಿ, ಕದಂಪುರ್, ಜೈನಾಪುರ, ಹಿಪ್ಪರಗಿ, ಸಲ್ಲುಂದಿ, ಆಸಂಗಿ[೨೭] ಮುಂತಾದ ನೆಲೆಗಳು ಬೆಳಕಿಗೆ ಬಂದಿವೆ. ಬಾಗಲಕೋಟೆ ಜಿಲ್ಲೆಯ ಕೋವಳ್ಳಿಯಲ್ಲಿ ನಡೆಸಿದ ಸಣ್ಣ ಪ್ರಮಾಣದ ಉತ್ಖನನದಿಂದಾಗಿ ಈ ಸಂಸ್ಕೃತಿಗೆ ಸಂಬಂಧಿಸಿದ ನಿರ್ದಿಷ್ಟ ಮಾಹಿತಿಯನ್ನು ತಿಳಿಯುವುದರ ಜೊತೆಗೆ ಆಯುಧಗಳ ಉತ್ಪಾದನಾ ಕೇಂದ್ರವೆಂದು ಗುರುತಿಸಲಾಗಿದೆ.[೨೮]

ಕೆ.ಪದ್ದಯ್ಯ ಅವರು ಭೀಮಾ ಮತ್ತು ಅದರ ಉಪನದಿಗಳಲ್ಲೊಂದಾದ ದೋಣಿನದಿ ಪ್ರದೇಶಗಳಲ್ಲಿ ಈ ಸಂಸ್ಕೃತಿಯ ನೆಲೆಗಳನ್ನು ಪತ್ತೆಹಚ್ಚಿದರು. ಇವುಗಳಲ್ಲಿ ದೇವಪುರ, ಗುಲಬಾಳ, ಕಲದೇವನಹಳ್ಳಿ ಕೊಲ್ಲೂರು, ಮರಳಬಾವಿ, ವಜ್ಜಲ, ಹುಣಸಗಿ,[೨೯] ಹಾಗರಗುಂಡಿ,[೩೦] ಮೊದಲಾದ ನೆಲೆಗಳು ಪ್ರಮುಖವಾದವುಗಳಾಗಿವೆ. ಅಲ್ಲದೆ ಮಂಜ್ರಾ, ಕಾರಂಜ[೩೧] ತುಂಗಭದ್ರಾ, ವೇದಾವತಿ, ಹೇಮಾವತಿ, ಶಿಂಷ, ಪೆನ್ನಾರ ನದಿಕೊಳ್ಳಗಳಲ್ಲಿ ಈ ಸಂಸ್ಕೃತಿಯ ಆಯುಧಾವಶೇಷಗಳು ದೊರೆತಿವೆ.[೩೨] ಇಂತಹ ನಿವೇಶನಗಳು ಪ್ರಸ್ತುತ ಅಧ್ಯಯನ ಪ್ರದೇಶದ ನಿಟ್ಟೂರು ಮತ್ತು ಕೊಪ್ಪಳ ಜಿಲ್ಲೆಯ ಕಮ್ಮಲದಿನ್ನಿಯಲ್ಲಿ[೩೩] (ಕೃಷ್ಣಾ ನದಿ ಬಲದಂಡೆಯ ಹತ್ತಿರ) ಬೆಳಕಿಗೆ ಬಂದಿವೆ ಹೊರತು ಉಳಿದಂತೆ ಈ ಪರಿಸರದಲ್ಲಿ ಮತ್ತೆಲ್ಲೂ ಕಂಡುಬಂದಿಲ್ಲ.

ಕರ್ನಾಟಕದಲ್ಲಿ ಈ ಹಂತದ ನೆಲೆಗಳನ್ನು ಗಮನಿಸಿದಾಗ ವಿವಿಧ ಸನ್ನಿವೇಶಗಳ ಅನುಗುಣವಾಗಿ ಐದು ರೀತಿಯ ನಿವೇಶನಗಳನ್ನು ಕಾಣಬಹುದು. ಬಯಲು ಭೂಮಿಯ ನೆರೆಮಣ್ಣಿನ ನಿವೇಶನಗಳು, ಉನ್ನತಪಾತಳಿಯ ಮರಳಿನ ನಿವೇಶನಗಳು ಮತ್ತು ಕೈಗಾರಿಕೆ ನಿವೇಶನಗಳು, ಬೆಟ್ಟದ ತಪ್ಪಲಿನ ನಿವೇಶನಗಳು ಹಾಗೂ ಕೊನೆಯದಾಗಿ ನದಿಯ ಅರ್ವಾಚೀನ ಪಾತ್ರಗಳಲ್ಲಿಯ ನಿವೇಶನಗಳೆಂದು ಪುರಾತತ್ವಜ್ಞರು ಗುರುತಿಸಿದ್ದಾರೆ. ಮಧ್ಯ ಹಳೆಯ ಶಿಲಾಯುಗದ ಜನರಿಗೆ ಉಪಯೋಗವಾಗುವಂಥ ಸ್ಥಳಗಳ ನಿವೇಶನಗಳು ಕಚ್ಚಾಸರಕುಗಳು ದೊರಕುವ ಸಮೀಪದಲ್ಲಿವೆ. ಇವು ನದಿ ಪ್ರವಾಹಗಳಿಂದ ದೂರದಲ್ಲಿರುತ್ತವೆ. ಉತ್ತರ ಕರ್ನಾಟಕದ ಘಟಪ್ರಭಾ, ಮಲಪ್ರಭಾ ನದಿಗಳ ಕೊಳ್ಳಗಳಲ್ಲಿನ[೩೪] ಇಳುಕಲ್ಲಿನ ಮೇಲೆಯೂ ಈ ಸಂಸ್ಕೃತಿಯ ನಿವೇಶಗಳು ಕಂಡುಬಂದಿವೆ. ಆದಿ ಹಳೆಯ ಶಿಲಾಯುಗ ಹಾಗೂ ಮಧ್ಯ ಹಳೆಯ ಶಿಲಾಯುಗ ಇವುಗಳ ನಡುವೆ ಅಂತಹ ಬಲವಾದ ಹವಾಮಾನ ಬದಲಾವಣೆ ಕಂಡುಬರುವುದಿಲ್ಲ. ಚಿಕ್ಕಮಟ್ಟ ಬದಲಾವಣೆಗಳು ಆಗಿರಬಹುದೇ ಹೊರತು ಎರಡು ಕಾಲಘಟ್ಟಗಳ ಸಸ್ಯಗಳು ಮತ್ತು ಪ್ರಾಣಿಗಳ ಪಳೆಯುಳಿಕೆಗಳನ್ನು ಅಧ್ಯಯನ ಮಾಡಿದಾಗ ಅಂತಹ ವ್ಯತ್ಯಾಸವೇನು ಕಾಣುವುದಿಲ್ಲವೆಂದು ಕೆಲವು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ. ಪ್ಲಿಸ್ಟೋಸಿನ್ ಕೊನೆಯ ಕಾಲದಲ್ಲಿ ಅಲ್ಲಲ್ಲಿ ಅರಣ್ಯಗಳುಳ್ಳ ಜವುಳ ಪ್ರದೇಶಗಳಲ್ಲಿ ನದಿ ಕಣಿವೆ ಮಾದರಿಯ ಪರಿಸರವಿತ್ತೆಂದು ತಿಳಿಯುತ್ತದೆ. ಈ ಹಂತದಲ್ಲಿನ ಪ್ರಾಣಿ, ಸಸ್ಯಗಳ ಪಳೆಯುಳಿಕೆಗಳನ್ನು ಸಂಶೋಧಕರು ವೈಜ್ಞಾನಿಕ ಪರೀಕ್ಷೆಗೆ ಒಳಪಡಿಸಿ ಅವುಗಳ ಕಾಲಮಾನವನ್ನು ನಿರ್ಣಯಿಸಿದ್ದಾರೆ. ಇಂಗಾಲ ೧೪ರ ಕಾಲನಿರ್ಣಯದ ಪ್ರಕಾರ ಇಂದಿಗೆ

ಸುಮಾರು ೧೦.೦೦೦ ವರ್ಷಗಳಿಂದ ೪೦.೦೦೦ ವರ್ಷಗಳ ಹಿಂದೆ ಈ ಸಂಸ್ಕೃತಿ ಅಸ್ತಿತ್ವದಲ್ಲಿ ಇದ್ದಿರಬಹುದೆಂದು ತರ್ಕಿಸಲಾಗಿದೆ.[೩೫]

**೩.೧.೩ ಅಂತ್ಯ ಹಳೆಯ ಶಿಲಾಯುಗ (Upper Paleolithic Age)**

ಅಂತ್ಯ ಹಳೆಯ ಶಿಲಾಯುಗವು ಹಳೆಯ ಶಿಲಾಯುಗದ ಕೊನೆಯ ಹಂತವಾಗಿದ್ದು, ಮಧ್ಯ ಹಳೆಯ ಶಿಲಾಯುಗ ಹಾಗೂ ಸೂಕ್ಷ್ಮ ಶಿಲಾಯುಗಗಳ ನಡುವಿನ ಕಾಲಘಟ್ಟದಲ್ಲಿ ಅಸ್ತಿತ್ವದಲ್ಲಿದ್ದ ಸಂಸ್ಕೃತಿಯಾಗಿದೆ. ಈ ಸಂಸ್ಕೃತಿ ಕುರಿತು ೧೮೮೪ರಲ್ಲಿ ರಾಬರ್ಟ್ ಬ್ರೂಸ್‌ಫೂಟ್ ಅವರು ಬಿಲ್ಲಸ್ವರ್ಗ ನೆಲೆಯಲ್ಲಿ ಪತ್ತೆಹಚ್ಚಿದ್ದ ಮೂಳೆಯ ಆಯುಧಗಳನ್ನು ಯುರೋಪಿನ ಅಂತ್ಯ ಹಳೆಯ ಶಿಲಾಯುಗದ ಮ್ಯಾಗ್ಡಲೀಯನ್ ಆಯುಧಗಳೊಂದಿಗೆ ಹೋಲಿಸಿದ್ದರೂ, ಇತರ ಸಾಂದರ್ಭಿಕ ಆಧಾರಗಳ ಅಭಾವದಿಂದ ಈ ಸಂಸ್ಕೃತಿಯನ್ನು ನಿರ್ದಿಷ್ಟವಾಗಿ ಗುರುತಿಸಲು ಸಾಧ್ಯವಾಗಿರಲಿಲ್ಲ.[೩೬] ಇದರ ಒಂದೆರಡು ದಶಕಗಳ ನಂತರ ಕೆಲವು ವಿದ್ವಾಂಸರು ಈ ಕಾಲಘಟ್ಟಕ್ಕೆ ಸಂಬಂಧಿಸಿದ ಕೊರೆಯುಳಿ ಉಪಕರಣಗಳ ಮಾದರಿಗಳು ದಕ್ಷಿಣ ಭಾರತದಲ್ಲಿನ ಅಂತ್ಯ ಹಳೆಯ ಶಿಲಾಯುಗದ ಅಸ್ತಿತ್ವದ ಸಾಧ್ಯತೆಯನ್ನು ಸ್ಪಷ್ಟಪಡಿಸಿದ್ದರೂ ಸಹ ಇವುಗಳಿಗೆ ಪುಷ್ಟಿ ನೀಡುವಂತಹ ಹೆಚ್ಚಿನ ಮಾಹಿತಿ ದೊರೆತಿರಲಿಲ್ಲ. ಕೆ.ಆರ್.ಯು ಟಾಡ್, ಜಯ್ನೂರ್ ಮತ್ತು ಎಚ್.ಡಿ ಸಂಕಾಲಿಯವರು ಖಾಂದಿವಳ್ಳಿ, ಗಿಡ್ಡವಾರು ಹಾಗೂ ನೆವಾಸ ನೆಲೆಗಳಲ್ಲಿ ಅನುಕ್ರಮವಾಗಿ ಅಧ್ಯಯನ ನಡೆಸಿ ಈ ಸಂಸ್ಕೃತಿಯ ಅಸ್ತಿತ್ವದ ಬಗೆಗೆ ಮಂಡಿಸಿದ ಅಭಿಪ್ರಾಯಗಳು ನಿರ್ದಿಷ್ಟ ಸ್ತರಗಳಲ್ಲಿ ದೊರಕದೇ ಇರುವುದರಿಂದ ಅದನ್ನು ಗಂಭೀರವಾಗಿ ಪರಿಗಣಿಸಲಿಲ್ಲ.[೩೭] ಆದರೆ ಇತ್ತೀಚೆಗೆ ಕಳೆದ ಎರಡೂವರೆ ದಶಕಗಳಲ್ಲಿ ದೇಶದ ಹಲವು ಸ್ಥಳಗಳಲ್ಲಿ ನಡೆಸಿದ ಅನ್ವೇಷಣೆ ಮತ್ತು ಉತ್ಖನನಗಳಿಂದ ಭಾರತದಲ್ಲಿನ ಅಂತ್ಯ ಹಳೆಯ ಶಿಲಾಯುಗದ ಸಂಸ್ಕೃತಿಗೆ ಸಂಬಂಧಿಸಿದ ಅನೇಕ ಮಾಹಿತಿಗಳು ಲಭ್ಯವಾಗಿವೆ.

ಭಾರತದಲ್ಲಿ ೧೯೬೪ರಲ್ಲಿ ಎಂ.ಎಲ್.ಕೆ ಮೂರ್ತಿಯವರು ಮೊದಲ ಬಾರಿಗೆ ಈ ಸಂಸ್ಕೃತಿಯ ಅವಶೇಷಗಳನ್ನು ವೈಜ್ಞಾನಿಕವಾಗಿ ಬೆಳಕಿಗೆ ತಂದರು. ಅವರು ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ರಾಳ್ಳಕಾಲುವ ಕೊಳ್ಳದ ಸಮಸ್ತರಗಳಲ್ಲಿ ಕೆಲವೊಂದು ಆಯುಧ ಅವಶೇಷಗಳನ್ನು ಪತ್ತೆಹಚ್ಚಿದರು.[೩೮] ನಾಗಾರ್ಜುನಕೊಂಡ, ವೇಮುಲ, ಗಂಜಾಂಕೊಳ್ಳದ ನೆಲೆಗಳು,[೩೯] ಮಹಾರಾಷ್ಟ್ರದ ಪಾಟ್ನೆ,[೪೦] ನೇವಾಸ, ಇನಾಂಗಾಂ,[೪೧] ಖೇಡಾ,[೪೨] ಗುಜರಾತಿನ ಧವಲಪುರಿ,[೪೩] ರಾಜಾಸ್ತಾನದ ಬುಧಪುಷ್ಕರ್,[೪೪] ಮಧ್ಯಪ್ರದೇಶದ ರೇವಾ ಜಿಲ್ಲೆಯ ನೆಲೆಗಳು,[೪೫] ಬಿಂಬೇಟ್ಕಾ, ವೈನಗಂಗಾ, ಬನ್ಸೇರ್, ಉತ್ತರ ಪ್ರದೇಶದ ಬೇಲಾನ್ ಹಾಗೂ ಸೋನ್‌ನದಿ ಕಣಿವೆಗಳಲ್ಲಿರುವ[೪೬] ಪ್ರಮುಖ ನೆಲೆಗಳು ಸಾಕ್ಷಿಗಳಾಗಿ ಪುರಾತತ್ವ ಅಧ್ಯಯನಗಳಲ್ಲಿ ದಾಖಲಾಗಿವೆ.

ಕರ್ನಾಟಕದ ಮಟ್ಟಿಗೆ ಅ.ಸುಂದರ ಅವರು ೧೯೫೯ರಲ್ಲಿ ಬಿಜಾಪುರ ಜಿಲ್ಲೆಯ ಸಾಲ್ವಡಗಿಯಲ್ಲಿ ಪ್ರಪ್ರಥಮ ಬಾರಿಗೆ ಉಪಕರಣ-ಉತ್ಪಾದನ ನಿವೇಶನದಲ್ಲಿ ನೀಳಚಕ್ಕೆ ಉಪಕರಣ ಉದ್ಯಮವನ್ನು

ಶೋಧಿಸಿದರು.[೪೭] ನಂತರ ಎಂ. ಶೇಷಾದ್ರಿಯವರು ಈ ವಿಷಯವಾಗಿ ವಿವರಣಾತ್ಮಕ ಅಧ್ಯಯನ ಮಾಡಿ ಎರಡು ಭಿನ್ನವಾದ ಔದ್ಯಮಿಕ ಸಂಪ್ರದಾಯಗಳಿದ್ದವೆಂದು ಅವರು ತರ್ಕಿಸಿದ್ದಾರೆ. ಒಂದು ಚಕ್ಕೆ ಉದ್ಯಮ, ಮಧ್ಯ ಹಳೆಯ ಶಿಲಾಯುಗಕ್ಕೆ ಸಂಬಂಧಿಸಿದ್ದು, ಮತ್ತೊಂದು ನೀಳಚಕ್ಕೆ ಉದ್ಯಮ, ಅಂತ್ಯ ಹಳೆಯ ಶಿಲಾಯುಗಕ್ಕೆ ಸೇರಿದ್ದು ಎಂದು ಅಭಿಪ್ರಾಯಿಸಿದ್ದಾರೆ.[೪೮]

ಕಲ್ಬುರ್ಗಿ ಜಿಲ್ಲೆಯ ಹುಣಸಗಿಯಲ್ಲಿ ಈ ಸಂಸ್ಕೃತಿಯ ಬಹುತೇಕ ಎಲ್ಲಾ ಆಯುಧಗಳ ವೈವಿಧ್ಯತೆಗಳೂ ಬೆಳಕಿಗೆ ಬಂದವು. ಬಿಜಾಪುರ ಜಿಲ್ಲೆಯ ಸಿದ್ದಾಪುರ, ಅರಸನಾಳ್, ಶಿವಪುರ, ಅಡವಿಹುಲಬಾಗಲು[೫೦] ದೇವೂರು, ಸಿರೋಲ್,[೫೧] ಧಾರವಾಡ ಜಿಲ್ಲೆಯ ನಂದಿಹರಳಿಹಳ್ಳಿ ನಲ್ವಗತ್,[೫೨] ಬೆಂಗಳೂರು ಜಿಲ್ಲೆಯ ಸೂಡಸಂದ್ರ, ಸಿದ್ದಾಪುರಗಳು[೫೩] ಈ ಸಂಸ್ಕೃತಿಯ ನೆಲೆಗಳಾಗಿವೆ. ಅಲ್ಲದೆ ಕರ್ನಾಟಕದ ಮಟ್ಟಿಗೆ ಮಾಂಜರಾಕೊಳ್ಳದ ಬಳ್ಳೂರಾ, ಡೋಣಿನದಿ ಕೊಳ್ಳದ ಇಂಗಳೇಶ್ವರ, ಕೃಷ್ಣಾಕೊಳ್ಳದ ಸಾಲ್ವಡಗಿ, ತುಂಗಾಕೊಳ್ಳದ ತಕ್ಕನಹಳ್ಳಿ, ಪೆನ್ನಾರ್‌ಕೊಳ್ಳ ಹಾಗೂ ಪ್ರಸ್ತುತ ಅಧ್ಯಯನ ಕ್ಷೇತ್ರವಾಗಿರುವ ಕೊಪ್ಪಳ ಜಿಲ್ಲೆಯ ಹನುಮಸಾಗರ[೫೪](ಕುಷ್ಟಗಿ ತಾ.), ಹಿರೇಬೆಣಕಲ್ಲು,[೫೫](ಗಂಗಾವತಿ ತಾ.), ಬಳ್ಳಾರಿ ಜಿಲ್ಲೆಯ ಮಲ್ಲಾಪುರ[೫೬] (ಸಂಡೂರು ತಾ.)ಗಳಲ್ಲಿ ಇಂತಹ ನಿವೇಶನಗಳು ಕಂಡುಬಂದಿವೆ.

**ಉಪಕರಣಗಳು**

ನೀಳ ಅಲಗುಗಳು, ಹೆರೆಯುವ ಚಕ್ಕೆಗಳು, ಚೂರಿತರಹದ ಚಕ್ಕೆಗಳು, ಕೊರೆಯುವ ಒರೆಮೊನೆಗಳ, ದಬ್ಬಣದಂತಹ ಮೊನೆಗಳು ಹಾಗೂ ಒರೆಮೊನೆಗಳು ಈ ಸಂಸ್ಕೃತಿಯ ಪ್ರಮುಖ ಉಪಕರಣಗಳಾಗಿವೆ. ಇವುಗಳನ್ನು ಸಹ ಪರೋಕ್ಷ ಒತ್ತಡ ತಂತ್ರ, ವಕ್ಷಸ್ಥಳ ಒತ್ತಡ ತಂತ್ರ, ನೇರ ಒತ್ತಡ ತಂತ್ರ[೫೭] ಎಂಬ ಮೂರು ರೀತಿಯ ತಾಂತ್ರಿಕ ವಿಧಾನಗಳನ್ನು ಅಳವಡಿಸಿಕೊಂಡು ತಮಗೆ ಬೇಕಾದ ಆಕೃತಿಯಲ್ಲಿ ಉಪಕರಣಗಳನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರೆಂದು ತಿಳಿಯುತ್ತದೆ. ಈ ಆಯುಧೋಪಕರಣಗಳು ಗಾತ್ರದಲ್ಲಿ ಚಿಕ್ಕದಾಗಿದ್ದು, ತೀಕ್ಷ್ಣ ಅಂಚುಳ್ಳದ್ದಾಗಿ ಹೆಚ್ಚು ಉದ್ದವಿರುತ್ತವೆ. ಇಂತಹ ಉಪಕರಣಗಳನ್ನು ವಿವಿಧ ಉದ್ದೇಶಗಳಿಗಾಗಿ ಬಳಸಲು ಸಾಧ್ಯವಾಗುವಂತೆ ರಚನೆ ಮಾಡಲಾಗುತ್ತಿತ್ತು. ಈ ತಂತ್ರಜ್ಞಾನವು ಹಿಂದಿನವುಗಳಿಗಿಂತ ಹೆಚ್ಚು ಸುಧಾರಿಸಿದುದಾಗಿತ್ತು.

ಬಾಣದ ಮೊನೆಯಂತಹ ಉಪಕರಣಗಳನ್ನು ಕೋಲಿನ ತುದಿಗೆ ಜೋಡಿಸಿ ಈಟಿಗಳ ಬಾಣದ ಮೊನೆಯಾಗಿ ಉಪಯೋಗಿಸಿಕೊಳ್ಳಲಾಗುತ್ತಿತ್ತು. ಹಾಗೂ ಬೈರಿಗೆಯಂತಹ ಉಪಕರಣವನ್ನು ಹಸ್ತಿದಂತದ ಮೇಲೆ ಪ್ರಾಣಿಚಿತ್ರಗಳನ್ನು ಅಥವಾ ರೇಖಾಚಿತ್ರಗಳನ್ನು ಕೆತ್ತಲು ಉಪಯೋಗಿಸಲಾಗುತ್ತಿತ್ತು. ಈ ಕಾಲದ ಜನರು ತಮ್ಮ ಹಿಂದಿನ ಪೂರ್ವಜರಂತೆಯೆ ನದಿದಡಗಳ ಮೇಲೆಯೂ ಸಮುದ್ರದಂಡೆಯ ಮೇಲೆಯೂ ಬೆಟ್ಟಗಳ ಇಳುಕಲ್ಲಿನಲ್ಲಿಯೂ ಸಹ ನೆಲೆಸಿದ್ದರು ಎಂಬ ಅಭಿಪ್ರಾಯಗಳಿವೆ.

ಚತುರ್ಥ ಭೂಯುಗದ ಪ್ರಥಮ ಚರಣಕಾಲದಲ್ಲಿ(ಪ್ಲೀಸ್ಟೋಸಿನ್) ದೇಶದ ಬಹುಭಾಗದಲ್ಲಿಯ ಸಸ್ಯ ಸಂಪತ್ತು ವಿರಳವಾಯಿತು. ಮಳೆಯೂ ಕಡಿಮೆಯಾಯಿತು, ನದಿಕೊಳ್ಳಗಳ ಇಳಕಲ್ಲುಗಳ ಮೇಲಿನ

ಸಸ್ಯಾವರಣವು ವಿರಳವಾಯಿತು. ಉನ್ನತ ಪ್ರದೇಶದಲ್ಲಿ ಹರಿಯುತ್ತಿದ್ದ ನದಿಗಳ ಮೇಲೆ ಪರಿಣಾಮ ಉಂಟಾಯಿತು. ಪ್ರವಾಹದಲ್ಲಿಯ ನೀರು ಕಡಿಮೆಯಾಗಿ ಸಂಗ್ರಹವಾಗುತ್ತಿದ್ದ ಗಷ್ಟುಮಣ್ಣಿನ ಸಂಗ್ರಹ ಮತ್ತು ಗಾತ್ರ ಹೆಚ್ಚಾಯಿತು. ಈ ಎಲ್ಲಾ ಕಾರಣಗಳಿಂದಾಗಿ ಇಲ್ಲಿಯ ನದಿಗಳ ಪಾತ್ರಗಳು ಬದಲಾದವು. ಅವುಗಳ ಸ್ತರಗಳ ಹಂತದಲ್ಲಿಯೂ ಹೆಚ್ಚು ಕಡಿಮೆಯಾಯಿತು. 'ಪ್ಲೀಸ್ಟೋಸಿನ್' ಕೊನೆಯ ಕಾಲದಲ್ಲಿ ನೈರುತ್ಯ ಮುಂಗಾರು ಮಳೆ ದುರ್ಬಲವಾಯಿತು. ಇಂತಹ ಪ್ರಾಚೀನ ಪರಿಸರದಲ್ಲಿ ಅಂತ್ಯ ಹಳೆಯ ಶಿಲಾಯುಗದ ಮಾನವ ನೆಲೆಸಿದ್ದ ಎಂದು ಹೇಳಬಹುದು. ಪುರಾತತ್ವಜ್ಞರು ಈ ಹಂತದಲ್ಲಿ ದೊರೆತ ವಸ್ತು ಅವಶೇಷಗಳನ್ನು ವೈಜ್ಞಾನಿಕ ಕಾಲನಿರ್ಣಯಕ್ಕೆ ಒಳಪಡಿಸಿ, ಇಂದಿಗೆ ಸುಮಾರು ೧೦,೦೦೦ ವರ್ಷಗಳು ಹಿಂದೆ ೨೫.೦೦೦ ವರ್ಷಗಳಷ್ಟು ಪೂರ್ವದಲ್ಲಿ ಈ ಸಂಸ್ಕೃತಿಯು ಅಸ್ತಿತ್ವದಲ್ಲಿತ್ತೆಂದು ಅಭಿಪ್ರಾಯಿಸಿದ್ದಾರೆ.[೫೮]

### ೩.೨ ಸೂಕ್ಷ್ಮ ಶಿಲಾಯುಗ ಅಥವಾ ಮಧ್ಯ ಶಿಲಾಯುಗ (Mesolithic Age)

ಹಳೆಯ ಶಿಲಾಯುಗ ಮತ್ತು ನೂತನ(ನವ) ಶಿಲಾಯುಗದ ನಡುವಿನ ಕಾಲಘಟ್ಟವನ್ನು ಸೂಕ್ಷ್ಮಶಿಲಾಯುಗ ಅಥವಾ ಮಧ್ಯ ಶಿಲಾಯುಗವೆಂದು ಕರೆಯುತ್ತಾರೆ. ಗ್ರೀಕ್ ಭಾಷೆಯಲ್ಲಿ 'ಮೆಸೋ' ಎಂದರೆ, 'ಸೂಕ್ಷ್ಮ'ವೆಂತಲೂ, 'ಲಿಥಿಕ್' ಎಂದರೆ 'ಶಿಲೆ' ಎಂಬ ಅರ್ಥಗಳಿವೆ. ಈ ಕಾಲಘಟ್ಟದಲ್ಲಿ ಮಾನವನು ಬಳಸುತ್ತಿದ್ದ ಆಯುಧೋಪಕರಣಗಳ ಆಕಾರ ಮತ್ತು ಗಾತ್ರದಲ್ಲಿ ಬಹಳಷ್ಟು ಚಿಕ್ಕವಿರುವ ಕಾರಣದಿಂದ ಮಧ್ಯ ಶಿಲಾಯುಗ ಸಂಸ್ಕೃತಿಯನ್ನು 'ಸೂಕ್ಷ್ಮ ಶಿಲಾಯುಗ ಸಂಸ್ಕೃತಿ' (Mesolithic Age) ಎಂದು ಕರೆಯಲಾಗಿದೆ. ಸುಮಾರು ಹನ್ನೆರಡು ಸಾವಿರ ವರ್ಷಗಳ ಹಿಂದೆ ವಿಶ್ವಪರಿಸರದಲ್ಲಿ ಬದಲಾವಣೆಯಾಗಿ ಭೂಮಂಡಲದ ತಾಪಮಾನವು ಹೆಚ್ಚಿದಂತೆಲ್ಲಾ ಹುಲ್ಲುಗಾವಲಿನ ಬೆಳವಣಿಗೆಗೆ ಕಾರಣವಾಯಿತು. ಪ್ರಾಣಿ ಪಕ್ಷಿಗಳ ಸಂತತಿಯು ಕೂಡ ಹೆಚ್ಚಾಗತೊಡಗಿತು. ಪ್ರಾಣಿ–ಪಕ್ಷಿಗಳನ್ನು ಬೇಟೆಯಾಡುತ್ತಿದ್ದ ಮಾನವನು ಅವುಗಳ ಸ್ವಭಾವ, ಆಹಾರ ಹಾಗೂ ಸಂತತಿಯ ವೃದ್ಧಿಯ ಬಗ್ಗೆ ತಿಳಿದುಕೊಂಡನು. ಕ್ರಮೇಣವಾಗಿ ಈ ಕೆಲ ಪ್ರಾಣಿಗಳನ್ನು ಹಿಡಿದು ತಂದು ಪೋಷಿಸತೊಡಗಿದನು. ಹೀಗೆ ಪಶುಸಂಗೋಪನೆ ಮತ್ತು ಹೈನುಗಾರಿಕೆಯು ಪ್ರಾರಂಭವಾಯಿತು. ಹೊಳೆ, ಕೆರೆಗಳಲ್ಲಿ ಮೀನು ಇತ್ಯಾದಿ ಜಲಚರ ಪ್ರಾಣಿಗಳನ್ನು ಹಿಡಿಯುವುದನ್ನು ರೂಢಿಸಿಕೊಂಡನು. ಇದೇ ಸಂದರ್ಭದಲ್ಲಿ ಕೆಲವು ದವಸ ಧಾನ್ಯಗಳನ್ನು ಬೆಳೆಯುವ ಗರಿಕೆಗಳು ಸ್ವಾಭಾವಿಕವಾಗಿಯೇ ಹುಟ್ಟಿಕೊಂಡವು. ಇವುಗಳಿಂದ ದೊರೆತ ಅಕ್ಕಿ, ಗೋಧಿ ಹಾಗೂ ಬಾರ್ಲಿಯಂತಹ ದವಸ–ಧಾನ್ಯಗಳನ್ನು ಇವನು ಆಹಾರಕ್ಕಾಗಿ ಬಳಸುವುದನ್ನು ಅರಿತುಕೊಂಡನು. ಕ್ರಮೇಣವಾಗಿ ಅವುಗಳನ್ನು ಬೆಳೆಯುವ ವಿಧಾನವನ್ನು ಅರಿತು ಕೃಷಿ ಮಾಡಲು ಪ್ರಾರಂಭಿಸಿದ. ಈ ಎಲ್ಲಾ ಚಟುವಟಿಕೆಗಳು ನಂತರದ ನವಶಿಲಾಯುಗ ಹಂತದಲ್ಲಿ ಮತ್ತಷ್ಟು ಬೆಳವಣಿಗೆಯಾದವು. ಸಾಂಸ್ಕೃತಿಕ ಮುನ್ನಡೆಯಲ್ಲಿ ಈ ಸಂಸ್ಕೃತಿಯ ಪಾತ್ರ ಗಮನಾರ್ಹವಾಗಿದೆ.

#### ಸೂಕ್ಷ್ಮ ಶಿಲಾಯುಗದ ನೆಲೆಗಳು

ಭಾರತದ ಬಹುತೇಕ ಭಾಗಗಳಲ್ಲಿ ಈ ಸಂಸ್ಕೃತಿಯ ಆಯುಧಾವಶೇಷಗಳು ದೊರೆತಿವೆ. ಭಾರತದಲ್ಲಿ ೧೮೬೭ರ ವೇಳೆಗೆ ಎ.ಸಿ.ಎಲ್. ಕಾರ್ಲೈರವರು ಉತ್ತರ ಪ್ರದೇಶ ಮತ್ತು ಮಧ್ಯಪ್ರದೇಶದ ಬೆಟ್ಟಗಳ

ಸಾಲಿನಲ್ಲಿರುವ ಗುಹೆಗಳಲ್ಲಿ ಮೊದಲ ಬಾರಿಗೆ ಸೂಕ್ಷ್ಮಶಿಲಾಯುಧಗಳನ್ನು ಶೋಧಿಸಿದರು.[೫೯] ನಂತರ ೧೯೫೭ರಲ್ಲಿ ಬಿ.ಬಿ.ಲಾಲ್‌ರವರು ಬಿರ್ಬನಾಪುರ(ಒರಿಸ್ಸಾ) ನೆಲೆಯಲ್ಲಿ ನಡೆಸಿದ ಉತ್ಖನನದಲ್ಲಿ ದೊರೆತ ಆಯುಧಗಳಿಂದ ಸೂಕ್ಷ್ಮಶಿಲಾಯುಗದ ಆದಿ ಭಾಗದಲ್ಲಿ ನಿರ್ದಿಷ್ಟ ಆಕಾರವಿಲ್ಲದ ಸೂಕ್ಷ್ಮಶಿಲಾಯುಧಗಳು ಬೆಳಕಿಗೆ ಬಂದವೆಂದು ಶಂಕಿಸಿದರು. ಆದರೆ ಕೆ.ವಿ. ಸೌಂದರ್ಯರಾಜನ್ ಮೊದಲಾದ ಕೆಲವು ಭಾರತೀಯ ಪುರಾತತ್ವಜ್ಞರು ಈ ವಾದವನ್ನು ಒಪ್ಪುವುದಿಲ್ಲ.[೬೦] ಉತ್ತರಪ್ರದೇಶದ ಸಿಂಗ್ರೂಲಿ ಕಣಿವೆ, ಗುಜರಾತಿನ ಲಾಂಗ್‌ನಾಜ್, ಗಿಡ್ಡಲೂರು, ಖಾಂದವಳ್ಳಿ, ಮೆಗ್ನಾಪುರಂ,[೬೧] ಮಹಾರಾಷ್ಟ್ರದ ಬಾಲ್ದಬೆಟ್ಟ, ವರ್ಸೋವ, ಯೆರ್ನಗಾಳ,[೬೨] ಪಾಚಮರ್ಹಿ, ಕೌಡುವಿಲಿ, ಮೊರಹಾನ್‌ಪಹರ್, ದೇದ್ದಿಮೋರಿ, ಚಿತ್ತೂರು ಜಿಲ್ಲೆಯ ನೆಲೆಗಳು, ಸರಯ್‌ನಹರ್‌ರಾಯ್, ಮಧ್ಯಪ್ರದೇಶದ ಭಿಂಬೇಟ್ಕ, ಆದಮ್‌ಘರ್, ಇಂದ್ರಾವತಿ ಕಣಿವೆ, ನಾಗಾರ್ಜುನಕೊಂಡ, ರೇಣಿಗುಂಟ,[೬೩] ಕೇರಳದ ಮಲ್ಲಪೂಜಾ ನದಿ ಪ್ರದೇಶ, ತಮಿಳುನಾಡಿನ ಟೇರಿ, ಟುಟಿಕೊರಿನ್, ತಿರುಚಂದೂರು ಮೊದಲಾದ ನೆಲೆಗಳು ಈ ಸಂಸ್ಕೃತಿಯ ಪ್ರಮುಖ ಸಾಕ್ಷಿಗಳಾಗಿ ಪುರಾತತ್ವ ಅಧ್ಯಯನಗಳಲ್ಲಿ ದಾಖಲಾಗಿವೆ.

ಕರ್ನಾಟಕದಲ್ಲಿ ಸೂಕ್ಷ್ಮಶಿಲಾಯುಗದ ನಿವೇಶನಗಳು ೧೯೨೯ರ ವೇಳೆಗೆ ಬೆಳಕಿಗೆ ಬಂದಿದ್ದರೂ, ಇಲ್ಲಿ ದೊರೆತ ಉಪಕರಣಗಳ ವೈಜ್ಞಾನಿಕ ಅಧ್ಯಯನ ಆರಂಭವಾದುದು ೧೯೫೬ ನಂತರವೇ[೬೪] ಎಂದು ಹೇಳಬಹುದು. ೧೯೬೯ರಲ್ಲಿ ಎಚ್.ಡಿ.ಸಂಕಾಲಿಯಾ ಅವರು ಸಂಗನಕಲ್ಲಿನಲ್ಲಿ ಕೈಗೊಂಡ ಉತ್ಖನನದಿಂದ ಈ ಸಂಸ್ಕೃತಿಯು ನಿರ್ದಿಷ್ಟ ಕಾಲಮಾನಕ್ಕೆ ಸೇರಿದ ಪ್ರತ್ಯೇಕ ಸಂಸ್ಕೃತಿ ಎಂದು ಗುರುತಿಸಿದರು.[೬೫] ಕರ್ನಾಟಕದಲ್ಲಿ ಮೊದಲ ಬಾರಿಗೆ ಕಿರಿದಾದ ವಿವಿಧ ಆಯುಧಗಳ ಸಂಸ್ಕೃತಿಯೆಂದು ಗುರುತಿಸಲಾಯಿತೇ ಹೊರತು, ಈ ಸಂಸ್ಕೃತಿಯ ಜನರ ಜೀವನ ಕ್ರಮದ ಬಗೆಗೆ ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. ಅದೇ ರೀತಿ ಬ್ರಹ್ಮಗಿರಿ ಉತ್ಖನನದಲ್ಲಿ ಈ ಸಂಸ್ಕೃತಿಯ ಉಪಕರಣಗಳು ಗಮನಾರ್ಹ ಪ್ರಮಾಣದಲ್ಲಿ ದೊರಕಿದ್ದರೂ, ಇವುಗಳನ್ನು ನಿರ್ದಿಷ್ಟ ಹಾಗೂ ಪ್ರತ್ಯೇಕ ಸ್ತರದಲ್ಲಿದ್ದುದನ್ನು ಗುರುತಿಸದೆ ನೂತನ ಶಿಲಾಯುಗಕ್ಕೆ ಸೇರಿದವುಗಳೆಂದು ಭಾವಿಸಲಾಗಿತ್ತು. ಕರ್ನಾಟಕದಲ್ಲಿ ಇಲ್ಲಿಯವರೆಗೆ ನಡೆದ ಸ್ಥಳ ಪರಿಶೀಲನೆ ಮತ್ತು ಉತ್ಖನನಗಳಿಂದ ಹಲವು ಸೂಕ್ಷ್ಮಶಿಲಾಯುಗದ ನೆಲೆಗಳು ಬಹುತೇಕವಾಗಿ ರಾಜ್ಯದ ಎಲ್ಲಾ ಭಾಗಗಳಲ್ಲಿಯೂ ಕಂಡುಬಂದಿವೆ. ಜಾಲಹಳ್ಳಿ ಹಾಗೂ ಕಿಬ್ಬನಹಳ್ಳಿಗಳಲ್ಲಿ ಬೆಣಚುಗಲ್ಲಿನಲ್ಲಿ ಸಿದ್ದಪಡಿಸಿದ ಶಿಲೋಪಕರಣಗಳು ದೊರೆತಿವೆ. ಹೇಮಾವತಿ ಕೊಳ್ಳ, ಪೆನ್ನಾರು ಕೊಳ್ಳ, ದೋಣಿ ಕೊಳ್ಳದ ಹುಣಸಗಿ, ಇಂಗಳೇಶ್ವರ, ಭೀಮಕೊಳ್ಳದ ಹಿಂಗಣಿ, ಮಲಪ್ರಭಾ ಕೊಳ್ಳದ ತಮ್ಮಿನಾಳ, ಮರಳಭಾವಿ, ಕಾರಂಜಕೊಳ್ಳದ ಬೆಂಗಪುರ, ಮಂಜರಾಕೊಳ್ಳದ ವನಮಾಪುರ, ಭದ್ರಾಕೊಳ್ಳ ಹಾಗೂ ತುಂಗಾಕೊಳ್ಳಗಳಲ್ಲಿಯೂ ಈ ಸಂಸ್ಕೃತಿಯ ನೆಲೆಗಳು ಬೆಳಕಿಗೆ ಬಂದಿವೆ.[೬೬]

ಪ್ರಸ್ತುತ ಅಧ್ಯಯನ ಪ್ರದೇಶ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದಲ್ಲೂ ಸಹ ಈ ಸಂಸ್ಕೃತಿಯ ನಿವೇಶನಗಳನ್ನು ಹಲವು ಸಂಶೋಧಕರು ಶೋಧಿಸಿದ್ದಾರೆ. ಅವುಗಳಲ್ಲಿ ಕುಡುತಿನಿ,[೬೭]ಸಂಗನಕಲ್ಲು, ಕಾರಿಗನೂರು,[೬೮]ಗಾದಿಗನೂರು,[೬೯]ತಿಮ್ಮಲಾಪುರ,[೭೦]ಡಣಾಪುರ,[೭೧]ಭುವನಹಳ್ಳಿ,[೭೨]ಹಂಪಿ,[೭೩](ಮೊಸಳಯ್ಯನ

ಗುಡ್ಡ), ಅಪ್ಪಲಾಪುರ,[೭೪]ಅಯ್ಯನಹಳ್ಳಿ,[೭೫] ಕುರೆಕುಪ್ಪ,[೭೬] ಕೋದಾಳು,[೭೭] ತೋರಣಗಲ್ಲು,[೭೮] ಮಲ್ಲಾಪುರ,[೭೯] ಮಾದರಹಳ್ಳಿ,[೮೦]ಯಶವಂತನಗರ,[೮೧]ರಾಜಾಪುರ,[೮೨]ಗುಡೇಕೋಟೆ,[೮೩]ಸಿಡೇಗಲ್ಲು,[೮೪]ಜುಮ್ಮೋಬನಹಳ್ಳಿ,[೮೫] ಓಬಳಪುರ,[೮೬]ಕರಡಿಹಳ್ಳಿ,[೮೭] ಹಾಗೂ ಕೊಪ್ಪಳ ಜಿಲ್ಲೆಯ ಆನೆಗೊಂದಿ,[೮೮]ಮಲ್ಲಾಪುರಗಳಲ್ಲಿ[೮೯]ಈ ಸಂಸ್ಕೃತಿಯ ನಿವೇಶನಗಳು ದೊರೆಕಿವೆ. ಒಟ್ಟು ಇಪ್ಪತ್ನಾಲ್ಕು ನೆಲೆಗಳಲ್ಲಿ ಈ ಸಂಸ್ಕೃತಿಯ ಕುರುಹುಗಳು ಬೆಳಕಿಗೆ ಬಂದಿವೆ. ಈ ಸಂಸ್ಕೃತಿಯ ನೆಲೆಗಳ ಅಧ್ಯಯನವು ಆಗಿನ ಜನರ ಆಹಾರ ಪದ್ಧತಿ, ವಸತಿಕ್ರಮ, ಶವಸಂಸ್ಕಾರ ಪದ್ಧತಿ ಮುಂತಾದ ಪ್ರಮುಖ ಅಂಶಗಳ ಬಗೆಗೆ ಕುತೂಹಲವಾದ ಮಾಹಿತಿಗಳನ್ನೊದಗಿಸುತ್ತವೆ. ಜೊತೆಗೆ ಕೆಲವೇ ನಿರ್ದಿಷ್ಟ ನೆಲೆಗಳಲ್ಲಿ ಬೆಳಕಿಗೆ ಬಂದಿರುವ ಆ ಕಾಲದ ಬಂಡೆಯ ಮೇಲಿನ ವರ್ಣಚಿತ್ರಗಳು ಅವರ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಪದ್ಧತಿ ಹಾಗೂ ನಂಬಿಕೆಗಳ ಬಗೆಗೆ ತಿಳಿಸಿರುವುದರ ಜೊತೆಗೆ ಅವರ ಕಲೆಗಾರಿಕೆಯ ವಿಶಿಷ್ಟತೆಯನ್ನು ತಿಳಿಯಪಡಿಸಿವೆ.

೧೯೬೫ರಲ್ಲಿ ಪುಣೆ ಡೆಕ್ಕನ್ ಕಾಲೇಜಿನ ಹಾಗೂ ಸಂಶೋಧನಾ ಸಂಸ್ಥೆಯ ವಿದ್ವಾಂಸರು ಸಂಗನಕಲ್ಲು ನೆಲೆಯಲ್ಲಿ ಉತ್ಖನನ ನಡೆಸಿ ಅತಿ ಚಿಕ್ಕ ಗಾತ್ರದ ಶಿಲೋಪಕರಣಗಳನ್ನು ಶೋಧಿಸಿದರು. ಎಚ್.ಡಿ. ಸಂಕಾಲಿಯ ಅವರು ಸೂಕ್ಷ್ಮ ಶಿಲಾಯುಗದ ಆದಿ ಭಾಗ ಮತ್ತು ಉನ್ನತಿಯ ಹಂತಗಳನ್ನು ಗುರುತಿಸಿ ಮಹತ್ವದ ಮಾಹಿತಿ ನೀಡಿದರು. ಉತ್ಖನನದಲ್ಲಿ ಅತ್ಯಂತ ಪ್ರಶಸ್ತ ಶಿಲೆಗಳಾದ ಚರ್ಟ್, ಕ್ವಾರ್ಟ್ಜ್, ವೈಟ್‌ಕ್ವಾರ್ಟ್ಜ್‌ನಲ್ಲಿ ತಯಾರಿಸಿದ ಉಪಕರಣಗಳು ಮತ್ತು ಇವುಗಳ ತಯಾರಿಕೆಗಾಗಿ ಬಳಸಿದ ಶಿಲಾಗಟ್ಟಿಗಳನ್ನು ಗುರುತಿಸಿದರು.

**ಉಪಕರಣ ನಮೂನೆಗಳು**

ನೀಳ ಚಕ್ಕೆ ಮಾದರಿ, ಹೆರೆಚಕ್ಕೆ ಮಾದರಿ, ಮೊನೆ ಮಾದರಿ, ಬಾಣದ ಮೊನೆ, ಕೊರಗ, ಕೊರೆಯುಳಿ, ಅರ್ಧಚಂದ್ರಾಕೃತಿ ದಬ್ಬಳ ಮೊದಲಾದವುಗಳಿದ್ದು ವೈವಿಧ್ಯಮಯವಾಗಿವೆ. ಹೊಸಪೇಟೆ ತಾಲ್ಲೂಕಿನ ಭುವನಹಳ್ಳಿಯಲ್ಲಿ ವಿವಿಧ ಮಾದರಿಯ ಉಪಕರಣಗಳು ಕಂಡುಬಂದಿದ್ದು, ಅವುಗಳನ್ನು ಚರ್ಟ್‌ಶಿಲೆಯಲ್ಲಿ ತಯಾರಿಸಲಾಗಿದೆ. ಗಂಗಾವತಿ ತಾಲೂಕಿನ ಮಲ್ಲಾಪುರ ಗವಿಯ ಒಳಭಾಗದಲ್ಲಿ ಹೆರೆಚಕ್ಕೆ ಮತ್ತು ಅರ್ಧಚಂದ್ರಾಕೃತಿ ಉಪಕರಣಗಳು ಶೋಧವಾಗಿವೆ. ಹೆರೆಚಕ್ಕೆ ಮಾದರಿಯ ಆಯುಧಗಳು ಇವುಗಳ ತುದಿ ಮತ್ತು ಪಾರ್ಶ್ವಗಳೆರಡರ ಮೇಲೂ ರೂಪಿಸಲಾಗಿದೆ. ಇವು ನೀಳವಾದ ಮತ್ತು ಕಡಿಮೆ ಉದ್ದದ ಆಯತ, ತ್ರಿಭುಜ ಮತ್ತು ಅಂಡಕಾರದಲ್ಲಿರುವವು. ಅರ್ಧಚಂದ್ರಾಕೃತಿಯಲ್ಲಿ ರೂಪಿಸಿರುವ ಆಯುಧಗಳ ಒಂದು ತುದಿಯಲ್ಲಿ ಅಥವಾ ಎರಡೂ ಬದಿಗಳಲ್ಲಿ ಕಚ್ಚನ್ನುಂಟು ಮಾಡಿ ಮರು ಚಕ್ಕೆಗಳನ್ನು ತೆಗೆದು ಮೊನಚು ತುದಿಯನ್ನು ರಚಿಸಲಾಗಿರುತ್ತದೆ. ಎರಡು ಪಾರ್ಶ್ವಗಳಲ್ಲಿಯೂ ಅಲಗುಗಳಿದ್ದು, ಹೆಚ್ಚು ಕಡಿಮೆ ನೇರವಾಗಿ ಸಾಗಿವೆ. ಮೇಲ್ತುದಿಯ ಮೊನೆ ಹೆಚ್ಚು ಉಪಯುಕ್ತವಾದಂತೆ ತೋರುತ್ತದೆ. ಇದು ಈ ಕಾಲದ ಉಪಕರಣದ ಪ್ರಮುಖ ಲಕ್ಷಣವಾಗಿದೆ. ಹಂಪಿಯ ಪರಿಸರದಲ್ಲಿ ಸು. ಹದಿನಾಲ್ಕು ನಿವೇಶನಗಳಲ್ಲಿ ಈ ಸಂಸ್ಕೃತಿಯ ಆಯುಧಗಳು ದೊರೆತ ವಿವರಗಳು ದಾಖಲಾಗಿವೆ. ಹಂಪಿಯ ಶೃಂಗಾರದ ಹೆಬ್ಬಾಗಿಲಿನ ಸಮೀಪದ ಬೆಟ್ಟದ ತಪ್ಪಲಿನ ಮೊಸಳಯ್ಯನ ಗುಡ್ಡದಲ್ಲಿ ಈ

ಕಾಲಕ್ಕೆ ಸಂಬಂಧಪಟ್ಟ ಉಪಕರಣಗಳು ದೊರೆತಿವೆ. ಆನೆಗುಂದಿ ಹತ್ತಿರದ ಚಿಕ್ಕರಾಮಪುರದಲ್ಲಿ ಕಪ್ಪು–ಕಂದು ಬಣ್ಣದಲ್ಲಿ ಬಿಡಿಸಿರುವ ಜಿಂಕೆ, ಗೂಳಿ, ಮನುಷ್ಯರ ಚಿತ್ರಗಳು, ಹಾಗೂ ಇಲ್ಲಿ ದೊರೆತಂತಹ ಉಪಕರಣಗಳು ಸೂಕ್ಷ್ಮ ಶಿಲಾಯುಗಕ್ಕೆ ಸೇರಿದವುಗಳಾಗಿವೆ.[೧೦] ಈ ಕಾಲದ ಹವಾಮಾನದಲ್ಲಿ ಪ್ರಾದೇಶಿಕ ವೈವಿಧ್ಯತೆ ಇದ್ದಿತ್ತು. ಪ್ಲಿಸ್ಟೋಸಿನ್‌ನ ಕೊನೆಯ ಕಾಲದಲ್ಲಿ ಹಾಗೂ ಹೋಲೋಸಿನ್ ಪ್ರಾರಂಭ ಕಾಲದಲ್ಲಿ ಒಣ ಹವೆ ಇದ್ದ ಬಗ್ಗೆಯೂ ಪುರಾವೆಗಳು ದೊರೆತಿವೆ.[೧೧] ಸಮಕಾಲೀನ ಪ್ರಾಣಿಗಳ ಪಳೆಯುಳಿಕೆಗಳಿಂದ ಸೂಕ್ಷ್ಮ ಶಿಲಾಯುಗದ ಜನರ ಆಹಾರ ಪದ್ಧತಿ ಬಗ್ಗೆ ಸ್ವಲ್ಪಮಟ್ಟಿಗೆ ಚರ್ಚಿಸಲು ಸಾಧ್ಯ. ಈ ಹಂತದಲ್ಲಿ ಮಾನವ ಅಲೆಮಾರಿ ಜೀವನವನ್ನು ಬಿಟ್ಟು, ಒಂದೆಡೆ ನೆಲಸಲು ಪ್ರಾಂಭಿಸಿದನು. ಜೀವನ ವ್ಯವಸ್ಥೆಯೂ ಸುಧಾರಣೆ ಹಂತ ತಲುಪಿತು. ಇದರಿಂದ ಈ ಕಾಲದ ಆಹಾರೋತ್ಪಾದನೆಯ ಬೆಳವಣಿಗೆಯಾಗಿ 'ಸ್ಥಿತ್ಯಂತರ ಹಂತ'ವೆಂದು ಗುರುತಿಸಲಾಯಿತು. ಈ ಹಂತದಲ್ಲಿ ಕಂಡುಬಂದ ಉಪಕರಣಗಳು ಹಾಗೂ ರೇವೆ ಮಣ್ಣಿನಲ್ಲಿದ್ದ ಅವಶೇಷಗಳನ್ನು ಇಂಗಾಲ–೧೪ರ ವೈಜ್ಞಾನಿಕ ಕಾಲನಿರ್ಣಯ ವಿಧಾನಕ್ಕೆ ಒಳಪಡಿಸಿ ಅವು ಕ್ರಿ.ಪೂ. ಸು. ೨೯೦೦–೧೯೦೦ರ ಕಾಲಾವಧಿಯಲ್ಲಿ ಅಸ್ತಿತ್ವದಲ್ಲಿದ್ದ ಸೂಕ್ಷ್ಮಶಿಲಾಯುಗದ ಜನರ ಕುರುಹುಗಳೆಂದು ಪುರಾತತ್ವಜ್ಞರು ಗುರುತಿಸಿದ್ದಾರೆ.[೧೨]

### ೩.೩ ನೂತನ ಅಥವಾ ನವಶಿಲಾಯುಗ (Neolithic Age)

ಮಾನವನು ತನ್ನ ಅಗತ್ಯಕ್ಕೆ ಅನುಸಾರವಾಗಿ ಉಜ್ಜಿ ನಯಗೊಳಿಸಿದ ಮೇಲ್ಮೈಯುಳ್ಳ ಕಲ್ಲಿನ ಆಯುಧಗಳಾದ ಕೊಡಲಿಗಳು, ಕೈಬಾಚಿಗಳು, ಉಳಿಗಳು ಹಾಗೂ ಬೂದುವರ್ಣದ ಮಡಕೆಗಳನ್ನು ಬಳಸುತ್ತಿದ್ದ ಕಾಲಘಟ್ಟವನ್ನು 'ನವಶಿಲಾಯುಗ'ವೆಂದು ಕರೆಯಲಾಗುತ್ತದೆ. ಈ ಹಂತವು ಪ್ರಾಚೀನ ಶಿಲಾಯುಧಗಳಂತೆ ಪಶುಪಾಲನೆ ಮತ್ತು ಕೃಷಿಯಲ್ಲಿ ತೊಡಗಿದ ಕಾಲವಾಗಿತ್ತು. ಮುಖ್ಯವಾಗಿ ಮಾನವ ಆದಿಮ ಹಂತದಿಂದ ವಿಕಾಸಗೊಂಡು ನವೀನ ರೀತಿಯಲ್ಲಿ ಜೀವಿಸಲು ಪ್ರಾರಂಭಿಸಿದ ಹಂತವಾಗಿದೆ. 'ನವಶಿಲಾಯುಗ' ಎಂಬ ಕನ್ನಡ ಪದವು ಇಂಗ್ಲೀಷ್ ಭಾಷೆಯ 'ನಿಯೋಲಿಥಿಕ್ ಏಜ್' ಎಂಬ ಪದಕ್ಕೆ ಸಮನಾಗಿದೆ. ಗ್ರೀಕ್ ಭಾಷೆಯಲ್ಲಿ 'ನಿಯೋ' ಎಂದರೆ, 'ನವೀನ/ಹೊಸದು' ಎಂತಲು 'ಲಿಥಿಕ್' ಎಂದರೆ, 'ಶಿಲೆ' ಎಂಬ ಅರ್ಥಗಳಿವೆ. ಜಾನ್ ಲಬಕ್(ಲಾರ್ಡ ಆವೆಬರಿ) ೧೮೬೫ರಲ್ಲಿ ನಿಯೋಲಿಥಿಕ್ ಏಜ್ ಎಂಬ ಪದವನ್ನು ಮೊದಲಿಗೆ ಬಳಸಿದನು. ಇದು ಉಪಕರಣ ಬಳಕೆಯಲ್ಲಿ ಹೊಸ ತಂತ್ರ ಅನುಸರಿಸಿರುವುದನ್ನು ಪ್ರಧಾನವಾಗಿ ಸೂಚಿಸುತ್ತದೆ. ಗೋರ್ಡನ್ ಚೈಲ್ಡ್ ಅವರು ಈ ಸಂಸ್ಕೃತಿಯನ್ನು ಕ್ರಾಂತಿಕಾರಕ ಬದಲಾವಣೆ ಹಂತ ಎಂದು ಗುರುತಿಸಿದರು.[೧೩]

ಭಾರತದಲ್ಲಿ ಪ್ರಪ್ರಥಮ ಬಾರಿಗೆ ೧೮೬೦ರಲ್ಲಿ ಲಿಮೆಸೂರಿಯರ್ ಅವರು ಉತ್ತರ ಪ್ರದೇಶದ ಪೂರ್ವದ 'ತೋಸ್ಸೆ' ನದಿಯ ದಂಡೆಯಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಅವಶೇಷಗಳನ್ನು ಶೋಧಿಸಿದರು.[೧೪] ನಂತರ ಖಜಾಂಚಿಯವರು ೧೯೬೦–೬೬ರಲ್ಲಿ 'ಕಾಶ್ಮೀರದ ಬೂರ್ಜಹೋಮ್ ಮತ್ತು ಗುಫ್‌ಕ್ರಾಲ್' ನೆಲೆಗಳಲ್ಲಿ ನಡೆಸಿದ ಉತ್ಖನನವು ಔತ್ತರೇಯ ನೂತನ ಶಿಲಾಯುಗ ಸಂಸ್ಕೃತಿಯ ಮಾದರಿಯಾಗಿದೆ.[೧೫] ೧೯೮೧ರಲ್ಲಿ ಎ.ಕೆ ಶರ್ಮಾರವರು 'ಗುಫ್‌ಕ್ರಾಲ್'ನಲ್ಲಿ ಉತ್ಖನನ ಕೈಗೊಂಡು

ಮೂರು ಸಾಂಸ್ಕೃತಿಕ ಹಂತಗಳನ್ನು ಗುರುತಿಸಿದರು. ಅವುಗಳಲ್ಲಿ ನವಶಿಲಾಯುಗ, ಬೃಹತ್ ಶಿಲಾಯುಗ ಮತ್ತು ಆದಿ ಚಾರಿತ್ರಿಕ ಕಾಲ. ಅವುಗಳಲ್ಲಿ ನವಶಿಲಾಯುಗವನ್ನು ಮಣ್ಪಾತ್ರೆರಹಿತ ಹಂತ, ಆದಿಹಂತ ಮತ್ತು ಅಂತ್ಯ ಮಣ್ಪಾತ್ರೆಸಹಿತ ಹಂತಗಳೆಂದು ಮೂರು ಉಪಹಂತಗಳಾಗಿ ವಿಂಗಡಿಸಿದರು. ಅಲ್ಲದೇ ಚೀನಾ ದೇಶದ ನೂತನ ಶಿಲಾಯುಗ ಸಂಸ್ಕೃತಿಯ ಶಿಲಾಯುಧಗಳನ್ನು ಹೋಲುವ ಆಯುಧಗಳು ಹಾಗೂ ಭೂಮಿಯಲ್ಲಿ ಕುಣಿತೆಗೆದು ವಸತಿ ನಿರ್ಮಾಣ ಮಾಡಿಕೊಂಡಿರುವುದನ್ನು ಬೆಳಕಿಗೆ ತಂದರು.

'ಕರ್ನಾಟಕದಲ್ಲಿ ನೂತನ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಶೋಧನೆಯು ಪ್ರಪ್ರಥಮವಾಗಿ ೧೮೩೬ರಲ್ಲಿ ಬ್ರಿಟಿಷ್ ಅಧಿಕಾರಿ ಕ್ಯಾಪ್ಟನ್ ನ್ಯೂಬೋಲ್ಡ್ ಅವರು ಕುಡುತಿನಿ ಮತ್ತು ಕಪ್ಪಗಲ್‌ನ ಬೂದಿದಿಬ್ಬ ನೆಲೆಗಳನ್ನು ಪತ್ತೆಹಚ್ಚುವುದರ ಮೂಲಕ ಪ್ರಾರಂಭಿಸಿದನು.[೯೬] ನಂತರದಲ್ಲಿ ೧೮೪೧-೪೨ರಲ್ಲಿ ಸುರಪುರ ಸಂಸ್ಥಾನದಲ್ಲಿ ಅರಸನ ಪೊಲಿಟಿಕಲ್ ಏಜೆಂಟರ್ ಆಗಿದ್ದ ಮೆಡೋಸ್ ಟೇಲರ್ ಅವರು ಲಿಂಗಸುಗೂರಿನಲ್ಲಿ ಉಜ್ಜಿನಯಗೊಳಿಸಿದ ಕೊಡಲಿ ಉಪಕರಣಗಳನ್ನು ಶೋಧಿಸಿದರು. ಮೆಡೋಸ್ ಟೇಲರ್ ಮೂಲತಃ ಆಡಳಿತಗಾರನಾಗಿದ್ದರೂ ತನ್ನಲ್ಲಿರುವ ವಿಶೇಷ ಹವ್ಯಾಸ ಮತ್ತು ಆಸಕ್ತಿಯಿಂದಾಗಿ ಪ್ರಾಗಿತಿಹಾಸ ಕುರಿತ ನೆಲೆಗಳ ಶೋಧನೆಮಾಡಿ ಈ ಕ್ಷೇತ್ರಕ್ಕೆ ಹೊಸ ಬಗೆಯ ಮಾರ್ಗವನ್ನು ತೋರಿದ ಕೀರ್ತಿ ಟೇಲರನಿಗೆ ಸಲ್ಲುತ್ತದೆ. ಆಡಳಿತದ ಸಂದರ್ಭದಲ್ಲಿ ತಾನು ಹಾಕಿಕೊಂಡಿದ್ದ, ಯೋಜನೆಗಳನ್ನು ಪರಿವೀಕ್ಷಿಸುವ ಸಂದರ್ಭದಲ್ಲಿ ಹಲವಾರು ಗ್ರಾಮಗಳಿಗೆ ಭೇಟಿನೀಡಿದ ಅಂತಹ ಸಂದರ್ಭಗಳಲ್ಲಿ ಅಲ್ಲಿದ್ದ ಪ್ರಾಗೈತಿಹಾಸಿಕ ನೆಲೆಗಳನ್ನು ಅಚ್ಚುಕಟ್ಟಾಗಿ ಮುತುರ್ವಜಿವಹಿಸಿ ಗುರುತಿಸಿ ಪ್ರಕಟಿಸುವ ಪ್ರಯತ್ನ ಮಾಡಿದನು.[೯೭]

ರಾಬರ್ಟ್ ಬ್ರೂಸ್‌ಫೂಟ್‌ರವರು ೧೮೮೧-೧೮೮೬ ನಡುವಿನ ವೇಳೆಯಲ್ಲಿ ಕೋಲಾರ ಜಿಲ್ಲೆಯ ಶ್ರೀನಿವಾಸಪುರ ಮತ್ತು ಬೀರಮಂಗಲ, ಮೈಸೂರು ಜಿಲ್ಲೆಯ ಲಕ್ಷ್ಮಾಪುರ, ತಿ.ನರಸೀಪುರ, ಮಂಡ್ಯ ಜಿಲ್ಲೆಯ ಫ್ರೆಂಚ್‌ಹಿಲ್ಸ್ ಮುಂತಾದ ಕಡೆಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಕುರುಹುಗಳನ್ನು ಶೋಧಿಸಿದರು.[೯೮] ಈ ಸಂಸ್ಕೃತಿಗೆ ಸಂಬಂಧಿಸಿದಂತೆ ತಿ. ನರಸೀಪುರ[೯೯] ಮತ್ತು ಹೆಮ್ಮಿಗೆ[೧೦೦] ಸ್ಥಳಗಳಲ್ಲಿ ಕೆಲವು ವರ್ಣ ರೇಖಾಚಿತ್ರವುಳ್ಳ ಮೃತ್ಪಾತ್ರೆಯ ಭಾಗಗಳು ಮಾತ್ರ ಇದ್ದವು. ಬನಹಳ್ಳಿ(ಪಾಲರ್ ನದಿದಂಡೆ)ಯಲ್ಲಿ ನಡೆಸಿದ ಉತ್ಖನನದಲ್ಲಿ ವಸತಿಗೆ ಉಪಯೋಗಿಸಿದ ಅವಶೇಷಗಳು ಹಾಗೂ ವಿವಿಧ ಬಗೆಯ ಆಯುಧಗಳು ದೊರೆತಿವೆ.[೧೦೧] ಹಾವೇರಿ ಜಿಲ್ಲೆಯ ಹಳ್ಳೂರಿನಲ್ಲಿ ನಡೆಸಿದ ಉತ್ಖನನದಲ್ಲಿ ರಾಗಿ, ಕುದುರೆಯ ಎಲುಬುಗಳು, ವಸತಿ ಅವಶೇಷಗಳು, ಶವಕುಣಿಗಳು ದೊರೆತಿವೆ. ಉತ್ತರ ಕರ್ನಾಟಕದ ಹಲವೆಡೆ ನಡೆಸಿದ ವೈಜ್ಞಾನಿಕ ಸರ್ವೇಕ್ಷಣೆ ಮತ್ತು ಉತ್ಖನನದ ಫಲವಾಗಿ ಕೃಷ್ಣ ಮೇಲ್ದಂಡೆ, ಭೀಮ, ಮಲಪ್ರಭಾ ಕಣಿವೆಗಳು, ಸುರಪುರ, ತುಂಗಭದ್ರಾ ಹಾಗೂ ಇತ್ತೀಚೆಗೆ ರು.ಮಾ ಷಡಕ್ಷರಯ್ಯನವರು ಮಂಜ್ರಾ ಮತ್ತು ಕಾರಂಜಾ ನದಿ ಕಣಿವೆಗಳಲ್ಲಿ ಕೈಗೊಂಡ ಶೋಧನೆಗಳ ಕುರುಹಾಗಿ ಹಲವು ಮಹತ್ವದ ನೂತನ ಶಿಲಾಯುಗದ ನೆಲೆಗಳು ಬೆಳಕಿಗೆ ಬಂದಿರುವುದನ್ನು ಗಮನಿಸಬಹುದು.[೧೦೨]

ಮಾರ್ಟಿಮರ್ ವ್ಹೀಲರ್ ಅವರು ಬ್ರಹ್ಮಗಿರಿ ಉತ್ಖನನದಲ್ಲಿ ನವಶಿಲಾಯುಗದಿಂದ ಮೊದಲ್ಗೊಂಡು ಒಟ್ಟು ನಾಲ್ಕು ಹಂತಗಳನ್ನು ಗುರುತಿಸಿದ್ದಾರೆ. ಬ್ರಹ್ಮಗಿರಿ, ಮಸ್ಕಿ, ಸಂಗನಕಲ್ಲು, ತೆಕ್ಕಲಕೋಟೆ ಈ ಸಂಸ್ಕೃತಿಯ ವಾಸ್ತವ್ಯದ ನೆಲೆಗಳಾಗಿದ್ದವು. ಸಂಗನಕಲ್ಲಿನ ವಸತಿ ನೆಲೆ, ಕಪ್ಪಗಲ್ಲು ಬೂದಿ ದಿಬ್ಬ ಮತ್ತು ತೆಕ್ಕಲಕೋಟೆಗಳಲ್ಲಿ ನಡೆದ ಉತ್ಖನನಗಳಿಂದ ಹಲವು ಉಪಕರಣಗಳೊಂದಿಗೆ ವಾಸಕ್ಕಾಗಿ ನಿರ್ಮಿಸಿದ್ದ ಮನೆಗಳ (ಗುಡಿಸಲುಗಳ) ಚಿತ್ರಣ ದೊರೆತಿರುವುದು ವಿಶೇಷವಾಗಿದೆ. ಅಂದಿನ ಗುಡಿಸಲುಗಳ ವಿನ್ಯಾಸ ವರ್ತುಲ ಅಥವಾ ಆಯತಾಕಾರದಲ್ಲಿದ್ದು, ಅದರ ಒಂದು ಭಾಗ ಹಿಗ್ಗಿದ ಅರ್ಧದಷ್ಟು ವಿನ್ಯಾಸ ಹೊಂದಿವೆ. ನೆಲದ ಅಂಚಿನಲ್ಲಿ ಕಂಬಗಳನ್ನು ಅವುಗಳಿಗೆ ಬಿದಿರಿನ ಅಥವಾ ಬಳ್ಳಿಗಳಿಂದ ಹೆಣೆದ ತಡಿಕೆಗಳನ್ನು ಕಟ್ಟಲಾಗುತ್ತಿತ್ತು. ತಟ್ಟಿಗೋಡೆಯ ಎರಡೂ ಬದಿಗೆ ಕಲಸು ಮಣ್ಣು ಮೆತ್ತಿ ಬುಡದಲ್ಲಿ ಕಲ್ಲುಗಳನ್ನು ಇಡಲಾಗುತ್ತಿತ್ತು. ಹದಿನಾರು ಅಂಗುಲಗಳಷ್ಟು ಆಳದ ಅವಶೇಷ ಹಾಗೂ ಮೂವತ್ತು ಅಡಿ ವ್ಯಾಸದ ನಿವೇಶನ ಆಕಾರದಲ್ಲಿ ದುಂಡಾಗಿತ್ತೆಂದು ಉತ್ಖನನ ವರದಿಯಲ್ಲಿ ದಾಖಲಾಗಿದೆ. ನೆಲಕ್ಕೆ ಚಿಪ್ಪುಕಲ್ಲುಗಳನ್ನು ಹಾಕಿ ಮೇಲೆ ಕೆಂಪುಮಣ್ಣಿನಿಂದ ಗಟ್ಟಿಗೊಳಿಸಲಾಗುತ್ತಿತ್ತು. ಸಂಗನಕಲ್ಲಿನ ಉತ್ಖನನದಲ್ಲಿ ಬಿದಿರಿನ ಪಡಿಯಚ್ಚುನ್ನೊಳಗೊಂಡ ಮಣ್ಣಿನ ಭಾಗಗಳು ದೊರೆತಿವೆ. ಸೀಳಿದ ಬೊಂಬಿನ ಜಾಳಿಗೆಗಳನ್ನು ನಾಲ್ಕರಿಂದ ಆರು ಅಡಿಗಳಷ್ಟು ಎತ್ತರವಾದ ಗೋಡೆಗಳ ಮೇಲೆ ನಿಲ್ಲಿಸಿ ಆ ಜಾಳಿಗೆಗಳಿಗೆ ಮಣ್ಣನ್ನು ಮೆತ್ತಲಾಗುತ್ತಿತ್ತು. ಮೇಲ್ಛಾವಣಿ ವೃತ್ತಾಕಾರದಲ್ಲಿರುವಂತೆ ರಚನೆ ಮಾಡಲಾಗುತ್ತಿತ್ತು ಎಂಬ ಸಂಗತಿ ಉತ್ಖನನದಿಂದ ತಿಳಿದುಬಂದಿದೆ. ಈ ಕಾಲದ ನಿವೇಶನಗಳು ವಾಸಕ್ಕೆ ಯೋಗ್ಯವಾದ ಸೌಕರ್ಯಗಳು ಇರುವ ಕಡೆಗಳಲ್ಲಿ ಮಾತ್ರ ಕಂಡುಬಂದಿವೆ.

ಬಳ್ಳಾರಿ ಮತ್ತು ಸುತ್ತಮುತ್ತಲಿನ ಕಗ್ಗಲ್ಲು ಬೆಟ್ಟಗಳು ಅಂದಿನ ಜನರಿಗೆ ಪ್ರಕೃತಿ ದತ್ತ ರಕ್ಷಣಾ ಸೌಲಭ್ಯವಲ್ಲದೆ ಇಲ್ಲಿ ದೊರೆಯುವ ಶಿಲೆಗಳು ಆಯುಧಗಳ ತಯಾರಿಕೆಗೆ ಉಪಯುಕ್ತವಾಗಿವೆ. ಇಲ್ಲಿನ ಗುಡ್ಡಗಳ ಮೇಲೆ ನಿಂತಿರುವ ದೊಡ್ಡ ದೊಡ್ಡ ಬಂಡೆಗಳ ನಡುವಣ ಪ್ರದೇಶವನ್ನು ಸುಲಭವಾಗಿ ಸಮತಟ್ಟಾದ ಜಾಗಗಳಾಗಿ ಪರಿವರ್ತಿಸಿಕೊಂಡು, ಗುಡ್ಡಗಳ ಕೆಳಗಣ ಬಯಲು ಪ್ರದೇಶದಲ್ಲಿ ವ್ಯವಸಾಯ ಮಾಡುತ್ತಿದ್ದರೆಂದು ಗ್ರಹಿಸಬಹುದು. ಇವರು ವಾಸಿಸಲು ಆರಿಸಿದ್ದ ಎತ್ತರದ ಗುಡ್ಡಗಳು ಅವರ ಅವಶ್ಯಕತೆಗಳನ್ನು ಪೂರೈಸಲು ಬೇಕಾದ ಸೌಲಭ್ಯಗಳಿಂದ ಕೂಡಿದ್ದವು. ಬೇಸಾಯಕ್ಕೆ ಅವಶ್ಯಕವಾದ ಆದರೆ ವಿಸ್ತೃತವಲ್ಲದ ಸಣ್ಣ ಪರಿಮಾಣದ ಭೂಮಿ, ಪಶುಪಾಲನೆ ತಕ್ಕಂತೆ ಅನುಕೂಲತೆ, ಹೆಚ್ಚು ಮಳೆಯಿಲ್ಲದೆ ತಮಗೆ ಸಾಕಷ್ಟು ನೀರಿನ ಪೂರೈಕೆ ಆಗುವಂತಹ ಭೂ ಸನ್ನಿವೇಶಗಳು ಇಂಥ ನೆಲೆಗಳಲ್ಲಿ ವಾಸಿಸಲು ಪ್ರಮುಖ ಕಾರಣವೆನ್ನಬಹುದು. ಇವರು ಇಂದಿನ ದೃಷ್ಟಿಯಲ್ಲಿ ವ್ಯವಸಾಯ ಮಾಡುತ್ತಿದ್ದರು ಎನ್ನುವುದಕ್ಕಿಂತ ತೋಟಗಾರಿಕೆಯ ಬೇಸಾಯದ ಕಸುಬನ್ನು ಅರಿತ್ತಿದ್ದು, ಅದನ್ನು ತಮ್ಮ ಜೀವನಕ್ಕೆ ಅಳವಡಿಸಿಕೊಂಡಿದ್ದರು ಎನ್ನಬಹುದು.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಹಲವು ನೆಲೆಗಳನ್ನು ಸಂಶೋಧಕರು ಬೆಳಕಿಗೆ ತಂದಿದ್ದಾರೆ. ಅವುಗಳಲ್ಲಿ ಕುಡುತಿನಿ,[೧೦೩] ಕಪ್ಪಗಲ್ಲು,[೧೦೪] ಸಂಗನಕಲ್ಲು,[೧೦೫] ಕತ್ತಳಿ,[೧೦೬]

ತೆಕ್ಕಲಕೋಟೆ,[೧೦೭] ನಿಟ್ಟೂರು,[೧೦೮] ಕೊಂಚಗೇರಿ,[೧೦೯] ದರೋಜಿ,[೧೧೦] ಕುರುಗೋಡು,[೧೧೧] ಕಾಕುಬಾಳ,[೧೧೨] ತಿಮ್ಮಲಾಪುರ,[೧೧೩] ಬೆಳಗಟ್ಟ,[೧೧೪] ರಾಜಾಪುರ,[೧೧೫] ಹಂಪಸಾಗರ,[೧೧೬] ಅಲ್ಲಿಪುರ,[೧೧೭] ಕೊಟ್ನಕಲ್ಲು,[೧೧೮] ನವಲಿ,[೧೧೯] ಮಾಗಳ,[೧೨೦] ಮೈಲಾರ,[೧೨೧] ರಾಜವಾಳ,[೧೨೨] ಇಂಗಳಗಿ,[೧೨೩] ಗಾದಿಗನೂರು,[೧೨೪] ದಾನಪುರ,[೧೨೫] ಬೆಳಗೋಡುಹಾಳು,[೧೨೬] ವೆಂಕಟಾಪುರ[೧೨೭] ಹಾಲಸಾಗರ[೧೨೮] ನರಸಿಂಹಗಿರಿ,[೧೨೯] ಸಿಡೇಗಲ್ಲು,[೧೩೦] ಕಲ್ಲಹಳ್ಳಿ,[೧೩೧] ಕರಡಿಹಳ್ಳಿ,[೧೩೨] ಗುಡೇಕೋಟೆ[೧೩೩] ಹಾಗೂ ಕೊಪ್ಪಳ ಜಿಲ್ಲೆಯ ಬಂಡಿಹರಲಾಪುರ,[೧೩೪] ಜರಗುಂಟೆ,[೧೩೫] ಮಲ್ಲಾಪುರ,[೧೩೬] ಮುಸಲಾಪುರ,[೧೩೭] ಹರಲಾಪುರ,[೧೩೮] ಕುಂಟೋಜಿ,[೧೩೯] ಕಕ್ಕರಗೊಳ,[೧೪೦] ಅರಳಿಹಳ್ಳಿ,[೧೪೧] ಅಂಜನಹಳ್ಳಿ,[೧೪೨] ಆಗೋಲಿ,[೧೪೩] ಚಿಕ್ಕರಾಮಪುರ[೧೪೪] ಇಂತಹ ಒಟ್ಟು ಮೂವತ್ತೇಳು ನೆಲೆಗಳನ್ನು ಹಲವು ಸಂಶೋಧಕರು ಶೋಧಿಸಿದ್ದಾರೆ. ಬಹುತೇಕ ನೆಲೆಗಳು ಗುಡ್ಡಗಳ ಮೇಲಿನ ಸಮತಟ್ಟಾದ ಬಯಲಿನಲ್ಲಿವೆ. ಇನ್ನೂ ಕೆಲವು ನೆಲೆಗಳು ಬಯಲು ಪ್ರದೇಶದಲ್ಲಿದ್ದರೂ ಅವುಗಳು ರಕ್ಷಣೆಯ ದೃಷ್ಟಿಯಿಂದ ಅಷ್ಟು ಉತ್ತಮವಾಗಿಲ್ಲದ ಕಾರಣ ಅಂತಹ ಸ್ಥಳಗಳಲ್ಲಿ ಹೆಚ್ಚಾಗಿ ನೆಲೆಸುತ್ತಿರಲಿಲ್ಲವೆಂದು ತೋರುತ್ತದೆ. ಅಲ್ಲದೇ ನದಿ ತೀರದಲ್ಲಿಯೂ ಸಹ ಈ ಕಾಲದ ನಿವೇಶನಗಳು ದೊರಕಿವೆ. ನೀರಿನ ಸೌಕರ್ಯವಿರುವ ಫಲವತ್ತಾದ ಭೂ ಭಾಗವು ಕೃಷಿಗೆ ಯೋಗ್ಯವಾಗಿತ್ತು. ಅಲ್ಲದೇ ನದಿ ನೀರಿನಲ್ಲಿ ವಾಸವಿರುವ ಜಲಚರ ಪ್ರಾಣಿಗಳನ್ನು ಆಹಾರಕ್ಕಾಗಿ ಬಳಸುತ್ತಿದ್ದರು. ಶಂಖ, ಚಿಪ್ಪು ಮೊದಲಾದ ಜೈವಿಕ ವಸ್ತುಗಳನ್ನು ಆಭರಣಗಳ ತಯಾರಿಸಲು ಉಪಯೋಗಿಸುತ್ತಿದ್ದರು ಎಂದು ಹೇಳಬಹುದು.

**ಉಪಕರಣಗಳ ನಮೂನೆಗಳು**

ಅಧ್ಯಯನ ಕ್ಷೇತ್ರದ ವಿವಿಧ ನೆಲೆಗಳಲ್ಲಿ ಉಜ್ಜಿನಯಗೊಳಿಸಿದ ಕೊಡಲಿ, ಬಾಚಿ, ಉಳಿ, ಬೆಣೆ, ಮೊನೆ ಅಥವಾ ಕೆತ್ತುಳಿ, ಉಜ್ಜುವ ಸಲಕರಣೆ, ಹಿಡಿಹಾರೆ, ಒನಕೆ, ಬೀಸುವಕಲ್ಲು, ಅರೆಯುವಕಲ್ಲು, ಸುತ್ತಿಗೆ, ಕುಟ್ಟಣಿ, ಒರಳು, ಕವಣೆಕಲ್ಲು ಇವೇ ಮೊದಲಾದ ಉಪಕರಣಗಳನ್ನು ಮತ್ತು ಸಣ್ಣ ಪ್ರಮಾಣದಲ್ಲಿ ಕೃಷಿ ಮಾಡಲು ಉಪಯೋಗವಾಗುವಂತಹ ಉಪಕರಣಗಳನ್ನು ಗಟ್ಟಿಯಾದ ಕರಿಕಲ್ಲಿನಿಂದ ತಯಾರಿಸಿಕೊಳ್ಳುತ್ತಿದ್ದರೆಂದು ವ್ಯಕ್ತವಾಗುತ್ತದೆ. ಸಂಗನಕಲ್ಲು ನೆಲೆಯಲ್ಲಿ ಸೂಕ್ಷ್ಮಶಿಲಾಯುಗ ಕಾಲದಿಂದಲೂ ನಿರಂತರವಾಗಿ ಅಲ್ಲೇ ನೆಲೆಸುತ್ತಾ ಬಂದಿರುವುದು ತಿಳಿಯುತ್ತದೆ. ಅಧ್ಯಯನ ಪ್ರದೇಶದಲ್ಲಿರುವ ಕಾಕುಬಾಳು ನೆಲೆಯಲ್ಲಿ ಬೂದುವರ್ಣದ ಮಡಕೆಗಳು, ಅರೆಯುವ ಕಲ್ಲು, ಹೆರೆಚಕ್ಕೆ, ಶಂಖದ ಆಭರಣಗಳು ದೊರೆತಿವೆ. ಹಂಪಿ, ಆನೆಗುಂದಿ, ಆಗೋಲಿ, ಪರಿಸರದಲ್ಲಿ ಈ ಕಾಲದ ಗವಿವರ್ಣಚಿತ್ರಗಳು ಕಂಡುಬಂದಿವೆ.

**ಶವಸಂಸ್ಕಾರ ಪದ್ಧತಿ**

ಈ ಸಂಸ್ಕೃತಿಯ ಜನರು ಮೂರು ರೀತಿಯ ಶವಸಂಸ್ಕಾರ ಪದ್ದತಿ ಅನುಸರಿಸುತ್ತಿದ್ದರು. ಶವಕುಣಿಯಲ್ಲಿ ನೇರವಾಗಿ ಶವವನ್ನು ನೇರವಾಗಿ ಮಲಗಿಸುವುದು. ಮೊದಲು ಒಂದೆಡೆಯಲ್ಲಿ ಹುಗಿದು ನಂತರ ಹುಗಿದ ಸ್ಥಳದಿಂದ ಅಸ್ಥಿಗಳನ್ನು ಸಂಗ್ರಹಿಸಿ ಎರಡನೆಯ ಬಾರಿಗೆ ಬೇರೊಂದು ಕುಣಿಯಲ್ಲಿ

ವ್ಯವಸ್ಥಿತವಾಗಿಟ್ಟು ಸಂಸ್ಕಾರ ಮಾಡುವುದು. ಶವಕುಣಿಯಲ್ಲಿ ಮೂರು-ನಾಲ್ಕು ದೊಡ್ಡ ಮಡಕೆಗಳ ಬುಡಗಳನ್ನು ಒಡೆದು ಸೇರಿಸಿ ಅದರೊಳಗೆ ಅಸ್ಥಿ ಅವಶೇಷಗಳನ್ನು ಇಡುವುದು. ಅಥವಾ ಒಂದೇ ಪಾತ್ರೆಯಲ್ಲಿ ಅಸ್ಥಿ ಅವಶೇಷಗಳನ್ನಿಟ್ಟು ಅದನ್ನು ಶವಕುಣಿಯಲ್ಲಿ ಮಣ್ಣು(ದಫನ್) ಮಾಡುವುದು. ಎರಡನೆಯ ಪ್ರಕಾರದಲ್ಲಿ ಸಂಗ್ರಹಿಸಿದ ಅಸ್ಥಿ ಅವಶೇಷಗಳನ್ನು ದೇಹ ರಚನೆಯಂತೆ ವ್ಯವಸ್ಥಿತವಾಗಿ ಇಡಲಾಗುತ್ತಿತ್ತು. ಇದರೊಂದಿಗಿನ ಮಣ್ಣಿನ ಪಾತ್ರೆಗಳನ್ನು ಹುಗಿಯಲಾಗುತ್ತಿತ್ತು. ಅಪರೂಪವಾಗಿ ಮನೆಯೊಳಗೆ ಶವಸಂಸ್ಕಾರ ಮಾಡಿದ ಕುರುಹುಗಳು ದೊರೆತಿವೆ. ಈ ಪದ್ದತಿಯನ್ನು ಮುಂದೆ ಶಿಲಾತಾಮ್ರಯುಗದ ಜನರು ಅನುಸರಿಸಿದರು ಎಂದು ತಿಳಿಯುತ್ತದೆ.

### ೩.೪ ಶಿಲಾ-ತಾಮ್ರಯುಗ (Chalcolithic Age)

ನವಶಿಲಾಯುಗ ಸಂಸ್ಕೃತಿ ನಂತರ ವಿಕಾಸಗೊಂಡ ಹಂತವೇ ಶಿಲಾತಾಮ್ರಯುಗ ಸಂಸ್ಕೃತಿ. ಮೊಟ್ಟ ಮೊದಲ ಬಾರಿಗೆ ತಾಮ್ರದ ಅದಿರಿನಿಂದ ಲೋಹವನ್ನು ತಯಾರಿಸಿ ಅದರಿಂದ ಆಭರಣ, ಆಯುಧ ಮೊದಲಾದವುಗಳನ್ನು ತಯಾರಿಸಲಾಗುತ್ತಿತ್ತು. ಈ ಹಂತದ ಖಚಿತ ಬೆಳವಣಿಗೆಯೆಂದರೆ ಶಿಲಾಯುಧಗಳ ಜೊತೆಗೆ ತಾಮ್ರ ಅಥವಾ ಕಂಚಿನ ಉಪಕರಣಗಳ ಬಳಕೆಯಾದುದು. ಆದ್ದರಿಂದ ಈ ಸಂಸ್ಕೃತಿಯನ್ನು ಶಿಲಾ-ತಾಮ್ರಯುಗವೆಂದು ಕರೆಯಲಾಯಿತು. ಗೋರ್ಡಾನ್ ಚೈಲ್ಡ್ ಅವರ ಪ್ರಕಾರ ಒಂದು ಸಮಾಜದ ಸಂಸ್ಕೃತಿ ಹಂತವನ್ನು ನಿರ್ಧರಿಸಲು ಅದರಲ್ಲಿ ಕಂಡುಬರುವ ಪ್ರತ್ಯೇಕ ಲಕ್ಷಣಗಳನ್ನು ಬಿಡಿ ಬಿಡಿಯಾಗಿ ತೆಗೆದುಕೊಳ್ಳದೇ ಆ ಎಲ್ಲಾ ಲಕ್ಷಣಗಳ ಒಟ್ಟು ಪರಿಣಾಮವನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಈ ನಿಟ್ಟಿನಲ್ಲಿ ಭಾರತದಲ್ಲಿ ಶಿಲಾ-ತಾಮ್ರಯುಗ ಸಂಸ್ಕೃತಿಗೆ ಸೇರಿದ ಹಲವು ನೆಲೆಗಳು ಆವಿಷ್ಕಾರಗೊಂಡಿವೆ. ಹರಪ್ಪ ಸಂಸ್ಕೃತಿಯಲ್ಲಿ ತಾಮ್ರದಿಂದ ತಯಾರಿಸಿದ ವಿವಿಧ ನಮೂನೆಯ ಆಯುಧೋಪಕರಣಗಳನ್ನು ಸಂಶೋಧಕರು ಬೆಳಕಿಗೆ ತಂದಿದ್ದಾರೆ.

ಕರ್ನಾಟಕದ ವಿವಿಧ ನೆಲೆಗಳನ್ನು ಭೌಗೋಳಿಕವಾಗಿ ಗಮನಿಸಿದಾಗ ಉತ್ತರದಿಂದ ದಕ್ಷಿಣದ ಭಾಗದಲ್ಲಿ ಪಿಕ್ಲಿಹಾಳ್, ಮಸ್ಕಿ, ಟಿ.ನರಸಿಪುರ ನೆಲೆಗಳಲ್ಲಿ ನಡೆಸಲಾದ ಉತ್ಖನನಗಳಲ್ಲಿ ತಾಮ್ರ ಶಿಲಾಯುಗ ಸಂಸ್ಕೃತಿಯ ಕುರುಹುಗಳಾದ ಸುಧಾರಿತ ಮಣ್ಣಿನ ಮಡಕೆಗಳ ಬಳಕೆ ಹಾಗೂ ಅಲ್ಪ ಪ್ರಮಾಣದ ಲೋಹದ ಬಳಕೆ ಜೊತೆಗೆ ಶಿಲೋಪಕರಣಗಳನ್ನು ಬಳಸಿಕೊಂಡಿದ್ದುದು ತಿಳಿಯುತ್ತದೆ. ಭೀಮಾ ಮತ್ತು ಕೃಷ್ಣ ನದಿ ಪಾತ್ರವು ಕಪ್ಪುಮಣ್ಣಿನ ಪ್ರದೇಶವಾಗಿರುವುದರಿಂದ ಉತ್ತರ ಕರ್ನಾಟಕದ ಪ್ರದೇಶವು ವಾಸ್ತವ್ಯದ ನೆಲೆಗಳಾಗಿ ಆಯ್ಕೆ ಮಾಡಿಕೊಂಡು ನೆರೆಹೊರೆಯ ಪ್ರದೇಶಕ್ಕೆ ಪ್ರಸರಣವಾಗಿರುವುದು ತೋರುತ್ತದೆ. ದಕ್ಷಿಣ ಕರ್ನಾಟಕದಲ್ಲಿ ಇಂತಹ ನೆಲೆಗಳನ್ನು ಪ್ರಾತಿನಿಧಿಕವಾಗಿ ಗುರುತಿಸಬಹುದಾಗಿದೆ.

ಅಧ್ಯಯನ ಪ್ರದೇಶದಲ್ಲಿ ಶಿಲಾತಾಮ್ರಯುಗ ಸಂಸ್ಕೃತಿಗೆ ಸಂಬಂಧಿಸಿದ ಹಲವು ನೆಲೆಗಳನ್ನು ಸಂಶೋಧಕರು ಪತ್ತೆಹಚ್ಚಿದ್ದಾರೆ. ಅವುಗಳಲ್ಲಿ ಅಪ್ಪಯ್ಯನಹಳ್ಳಿ, ಕಪ್ಪಗಲ್ಲು, ಕುಡುತಿನಿ, ಕುರುಗೋಡು, ಬಳ್ಳಾರಿ, ಸಂಗನಕಲ್ಲು, ತೆಕ್ಕಲಕೋಟೆ, ದರೋಜಿ, ಭೈರನಾಯಕನಹಳ್ಳಿ, ರಾಜಾಪುರ, ಲಕ್ಷ್ಮೀಪುರ,

ಗದ್ದಿಕೇರ, ಹಂಪಸಾಗರ, ಅಲ್ಲಿಪುರ, ಗಾದಿಗನೂರು, ಗುಡಿಓಬಳಾಪುರ, ಹಂಪಿ, ನಿಂಬಾಪುರ, ಬೆಳಗಲ್ಲು, ಬೆಳಗೋಡುಹಾಳು, ವೆಂಕಟಾಪುರ, ಹಳಕುಂಡಿ, ತಾವರೆಗೇರ, ಗವಿಮಠ, ಬೇವಿನಾಳ, ಶಿವಪುರ, ಅಂಜನಹಳ್ಳಿ, ಆನೆಗುಂದಿ, ಇಂದರ್ಗಿ, ಕನಕಗಿರಿ, ಕೇಸರಹಟ್ಟಿ, ಕುಂಟೋಜಿ, ಗೋನಾಳ, ಚಿಕ್ಕರಾಮಪುರ, ತಿಪ್ಪನಹಾಳು, ನಂದಿಹಳ್ಳಿ, ಪನ್ನಾರ, ನಾರಯಣಪುರ, ಬಂಡಿಹರಲಾಪುರ, ಮಲ್ಲಾಪುರ, ಹಿರೇಜಂತಕಲ್ಲು, ಹಿರೇಬೆಣಕಲ್ಲು, ಹೊಸಕೆರೆ, ಹೆಬ್ಬಾಳ, ಕೆರೆಹಳ್ಳಿ, ತಿಪ್ಪನಾಳ ಒಟ್ಟು ನಲವತ್ತೇಳು ನೆಲೆಗಳಲ್ಲಿ ಈ ಸಂಸ್ಕೃತಿಯ ಜನರು ಬಳಸುತ್ತಿದ್ದಂತಹ ವಿವಿಧ ಮಡಕೆ–ಕುಡಿಕೆಗಳು, ವರ್ಣಚಿತ್ರಗಳು, ಬಂಡೆಚಿತ್ರಗಳು ಇತರೆ ಕಲಾತ್ಮಕ ವಸ್ತುಗಳನ್ನು ಹಲವು ಸಂಶೋಧಕರು ಮತ್ತು ಪುರಾತತ್ವಜ್ಞರು ಶೋಧಿಸಿದ್ದಾರೆ. ಅವುಗಳ ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ. ಈ ಸಂಸ್ಕೃತಿಯಲ್ಲಿ ಸಮಕಾಲೀನ ಅಥವಾ ನಂತರದ ವಿಭಿನ್ನ ಸಾಂಸ್ಕೃತಿಕ ವರ್ಗಗಳಿದ್ದವು. ಅವುಗಳ ಕಾಲಮಾನ ವ್ಯತ್ಯಾಸಗಳಿಂದ ಕೂಡಿದೆ. ಎರಡನೆಯ ವರ್ಗಕ್ಕೆ ಸೇರಿದ ಬಳ್ಳಾರಿ ಜಿಲ್ಲೆಯಲ್ಲಿನ ಬಹುತೇಕ ನೆಲೆಗಳಲ್ಲಿ ಸೂಕ್ಷ್ಮ ಶಿಲೋಪಕರಣಗಳು ಚಕ್ಕೆಕಲ್ಲಿನ ಮೂಲ ಶಿಲಾಗಟ್ಟಿಗಳು ಮತ್ತು ಇವುಗಳೊಂದಿಗೆ ಮಸುಕಾದ ಕೆಂಪುವರ್ಣದ ಮಡಕೆ ಅವಶೇಷಗಳು, ಬೂದಿ ದಿನ್ನೆಗಳು, ವರ್ಣಚಿತ್ರಗಳು, ಗೀರು ಮತ್ತು ಕುಟ್ಟುಚಿತ್ರಗಳು ಕಂಡುಬಂದಿದ್ದು ಅವು ಈ ಸಂಸ್ಕೃತಿಯನ್ನು ಅರಿಯಲು ನೆರವಾಗಿವೆ. ಈ ಸಂಸ್ಕೃತಿಯ ಜನರು ನವಶಿಲಾಯುಗದ ಜನರಂತೆ ತಾಂತ್ರಿಕವಾಗಿ ಮುಂದುವರೆದ ಜನರಾಗಿದ್ದು, ಕೃಷಿ, ಸೌಂದರ್ಯ ಪ್ರಜ್ಞೆಯುಳ್ಳವರಾಗಿದ್ದು ಜನರು ದಕ್ಷಿಣ ಭಾರತದಲ್ಲಿ ಅತ್ಯಂತ ಗಮನಾರ್ಹವಾದ ಉಪಕರಣಗಳು ರಾಯಚೂರು ಸಮೀಪದ ಕಲ್ಲೂರು ನೆಲೆಯಲ್ಲಿ ಉದ್ದನೆಯ ತಾಮ್ರದ ಖಡ್ಗಗಳು, ಅವುಗಳ ಹಿಡಿಕೆ ತುದಿ ಇಬ್ಭಾಗಗಳು ಪರಸ್ಪರ ವಿರುದ್ದ ದಿಕ್ಕಿನಲ್ಲಿ ಬಾಗಿದ್ದು ಕತ್ತಿಯ ಎರಡೂ ಬದಿಗಳು ಮಧ್ಯದಲ್ಲಿ ಉಬ್ಬಿರುವ ವರದಿಗಳು ದಾಖಲಾಗಿವೆ. ಅದೇ ರೀತಿ ಕಠಾರಿಯಂಥ ಉಪಕರಣಗಳು ಚಂದೋಳಿ ನೆಲೆಯಲ್ಲಿ ದೊರತಿವೆ.

ತೆಕ್ಕಲಕೋಟೆಯಲ್ಲಿ ಮೊದಲ ಹಂತದಲ್ಲಿ ನವಶಿಲಾಯುಗದ ಸಾಂಸ್ಕೃತಿಕ ಅವಶೇಷಗಳು ಕಂಡುಬಂದರೆ ಎರಡನೇ ಹಂತದಲ್ಲಿ ತಾಮ್ರದ ಕೊಡಲಿಯೊಂದು ಉತ್ಖನನ ಸಂದರ್ಭದಲ್ಲಿ ಬೆಳಕಿಗೆ ಬಂದಿದ್ದು, ಅದು ಉತ್ತಮ ಸ್ಥಿತಿಯಲ್ಲಿದೆ.[೧೮೫] ಇದು ೧೧ ಸೆಂ.ಮೀ ಉದ್ದ, ೭ ಸೆಂ.ಮೀ ಅಗಲ ಹಾಗೂ ೧.೫ ಸೆಂ. ಮೀ. ದಪ್ಪವಾಗಿದೆ. ಇದು ೪೩ ಇಂಚು ಆಳದಲ್ಲಿ (ತಳ ಹಂತದಲ್ಲಿ ದೊರೆತಿದ್ದು), ವೃತ್ತಾಕಾರದ ವಸತಿ ಸ್ಥಳದಲ್ಲಿ ದೊರೆತಿದ್ದು, ನೆಲಕ್ಕೆ ಸುಟ್ಟಮಣ್ಣನ್ನು ಹಾಕಿ ಗಟ್ಟಿಮಾಡಲಾಗಿದೆ. ಮಧ್ಯಭಾರತದ ತಾಮ್ರ ಶಿಲಾಯುಗ ಸಂಸ್ಕೃತಿಯ ವಿಶಿಷ್ಟ ಕುರುಹುಗಳಾದ ಕಪ್ಪು ಬಣ್ಣದ ಚಿತ್ರಗಳಿರುವ ಕೆಂಪು ವರ್ಣದ ಕೆಂಪು ಮಡಕೆಗಳು ದೊರೆತಿವೆ. ಆಯತಾಕಾರದಲ್ಲಿ ಎರಡೂ ತುದಿಗಳ ಅಲಗನ್ನು ಹೊಂದಿ ಮಧ್ಯಮ ಗಾತ್ರದಲ್ಲಿದೆ. ನೂತನ ಶಿಲಾಯುಗದ ಹಂತದೊಂದಿಗಿರುವುದು ಪ್ರಶ್ನಾರ್ಥಕವಾಗಿದೆ. ಅಲ್ಲದೆ ಈ ಸಂಸ್ಕೃತಿಯ ವರ್ಣಚಿತ್ರಗಳು ಗವಿಗಳಲ್ಲಿ ಕಂಡುಬಂದಿದ್ದು, ಅವುಗಳಲ್ಲಿ ಗೂಳಿ ಚಿತ್ರಗಳು ಪ್ರಮುಖವಾಗಿವೆ. ಒಟ್ಟಾರೆಯಾಗಿ ರಾಜ್ಯದಲ್ಲಿ ಎರಡು ನೆಲೆಗಳಲ್ಲಿ ಭೂ ಮೇಲ್ಮೈ ಪ್ರದೇಶದಲ್ಲಿಯೇ

ತಾಮ್ರದ ಉಪಕರಣಗಳು ದೊರೆತರೆ ಉಳಿದ ಈ ಲೋಹ ಸಾಮಗ್ರಿಗಳನ್ನು ನಿರ್ದಿಷ್ಟವಾಗಿ ಗುರುತಿಸುವಲ್ಲಿ ಯಶಸ್ವಿಯಾಗಿದ್ದರೂ ಹೆಚ್ಚಿನ ಅವಶೇಷಗಳನ್ನು ನಿರ್ಧರಿಸುವಲ್ಲಿ ಮಾಹಿತಿ ದೊರೆತಿಲ್ಲವೆಂಬುದು ಹಲವು ಸಂಶೋಧಕರ ಅಭಿಪ್ರಾಯವಾಗಿದೆ. ದೊರೆತಿರುವ ವಸ್ತುಗಳು ಅವುಗಳ ಸ್ಥಿತಿಗತಿಯು ಅವುಗಳು ಯಾವ ನಿರ್ದಿಷ್ಟ ಉಪಯೋಗಕ್ಕೆ ಬಳಕೆಯಾಗುತ್ತಿತ್ತೆಂಬುದನ್ನು ನಿರ್ಧರಿಸುವುದು ಕಷ್ಟವಾದರೂ ಸಾಕಷ್ಟು ಸಾಧ್ಯತೆಗಳನ್ನು ಗ್ರಹಿಸಲಾಗಿದೆ.

**ಕಾಲಮಾನ**

ಈ ಸಂಸ್ಕೃತಿಯ ಕಾಲಮಾನದಲ್ಲಿಯೂ ಸಹ ವ್ಯತ್ಯಾಸಗಳಿರುವುದು ವಿವಿಧ ನೆಲೆಗಳಲ್ಲಿ ನಿರ್ಧರಿಸಿರುವ ಕಾಲಮಾನದಿಂದ ತಿಳಿಯುತ್ತದೆ. ಕೃಷ್ಣಾ ಮೇಲ್ದಂಡೆ ಪ್ರದೇಶದಲ್ಲಿ ಕ್ರಿ.ಪೂ.ಸು. ೨೩೦೦-೧೦೦೦ ಎಂದು ಗುರುತಿಸಲಾಗಿದೆ. ಅದರಂತೆ ಭೀಮಾ ಮತ್ತು ಕೃಷ್ಣಾ ಹಾಗೂ ಅದರ ಉಪನದಿಯಾದ ತುಂಗಭದ್ರಾ ಪ್ರದೇಶದಲ್ಲಿ ಜೋರ್ವೆ ಮಾದರಿಯ ಕಪ್ಪು ಬಣ್ಣದ ಚಿತ್ರಿತ ಮಡಕೆಗಳ ಕಾಲಮಾನವು ಕ್ರಿ.ಪೂ.ಸು. ೧೩೦೦-೮೦೦,[೧೪೬] ಎಂದು ತಿಳಿಯಲಾಗಿದೆ.

**ಬೂದಿ ದಿಬ್ಬಗಳು ಅಥವಾ ಬೂದಿ ದಿನ್ನೆಗಳು**

ಪುರಾತತ್ವ ಅಧ್ಯಯನಗಳಲ್ಲಿ ಬೂದಿ ದಿನ್ನೆಗಳು ಅಥವಾ ಬೂದಿ ದಿಬ್ಬಗಳ ಸಮಸ್ಯೆ ಎಂಬ ವಿಚಾರವು ಹೆಚ್ಚಿನ ಸಂಖ್ಯೆಯ ವಿದ್ವಾಂಸರ ಆಸಕ್ತಿಯನ್ನು ಕೆರಳಿಸಿದೆ. ಇಂತಹ ವಿವರಗಳು ನೂತನ ಶಿಲಾಯುಗ, ಶಿಲಾ-ತಾಮ್ರಯುಗ ಹಾಗೂ ಬೃಹತ್ ಶಿಲಾಯುಗ ಸಂಸ್ಕೃತಿಯ ಎಲ್ಲಾ ಹಂತಗಳಲ್ಲೂ ಬೂದಿದಿಬ್ಬಗಳು ನಿರ್ಮಾಣವಾಗಿವೆ. ಅಧ್ಯಯನ ಪ್ರದೇಶದಲ್ಲಿ ಬೂದಿದಿನ್ನೆ ನೆಲೆಗಳನ್ನು ಉಲ್ಲೇಖಿಸಿದವರಲ್ಲಿ ಕರ್ನಲ್ ಮೆಕೆಂಝಿಯವರು ಮೊದಲಿಗರು.[೧೪೭] ಬೂದಿ ದಿನ್ನೆಗಳನ್ನು ಬೂದಿಕಣಮ, ಬೂದಿ ದಿಬ್ಬ, ಬೂದಿಗುಂಟ ಎಂದು ಕರೆಯಲಾಗುತ್ತದೆ. ಇಂತಹ ಬೂದಿ ದಿನ್ನೆಗಳ ಕುರಿತು ಸ್ಥಳೀಯ ಜನರು ಹತ್ತು ಹಲವು ದಂತಕಥೆಗಳನ್ನು ಹೇಳುತ್ತಿದ್ದರು. ಮಹಾರಾಕ್ಷಸರನ್ನು ಚಿತೆಯ ಮೇಲೆ ಇಟ್ಟು ಸುಟ್ಟಿದ್ದರಿಂದಲೋ ಇಲ್ಲವೆ ರಾಮಾಯಣ, ಮಹಾಭಾರತ ಮಹಾಕಾವ್ಯಗಳಲ್ಲಿ ಬರುವ ಹಿಡಿಂಬಾಸುರ, ವಾಲಿ ಮುಂತಾದವರ ಶವಗಳನ್ನು ದಹನ ಸಂಸ್ಕಾರ ಮಾಡಿದ್ದರಿಂದ ಬೂದಿದಿನ್ನೆಗಳು ರಚನೆಯಾದವು ಎಂದು ಅಲ್ಲಿಯ ಜನರು ಕಥೆ ಹೇಳುತ್ತಿದ್ದರು. ೧೯೩೮ರ 'ಮದ್ರಾಸ್ ಜರ್ನಲ್ ಆಫ್ ಲಿಟರೇಚರ್ ಆ್ಯಂಡ್ ಸೈನ್ಸ್' ಎಂಬ ಸಂಚಿಕೆಯಲ್ಲಿ ಬೂದಿಕಣಮ ಎಂಬಲ್ಲಿರುವ ಬೂದಿ ದಿನ್ನೆಯ ಬಗ್ಗೆ ಸ್ವಚಿತ್ರವಾಗಿ ವಿವರಿಸಲಾಗಿದೆ. ಮೊಟ್ಟಮೊದಲಿಗೆ ೧೮೪೦ರಲ್ಲಿ ನ್ಯೂಬೋಲ್ಡ್ ಅವರು ಬೂದಿ ದಿನ್ನೆಯನ್ನು ವ್ಯವಸ್ಥಿತವಾಗಿ ಅಧ್ಯಯನ ಮಾಡಿದರು. ಅವರು ಕುಡುತಿನಿಯಲ್ಲಿರುವ ಬೂದಿ ದಿನ್ನೆಯು ೧೪ ಮೀಟರ್ ಎತ್ತರ, ೧೨೬ ಮೀಟರ್ ಸುತ್ತಳತೆ ಹೊಂದಿರುವುದನ್ನು ದಾಖಲಿಸಿದ್ದಾರೆ. ನಂತರ ಕಪ್ಪಗಲ್‌ನಲ್ಲಿರುವ ಬೂದಿ ದಿನ್ನೆಯನ್ನು ಉತ್ಖನನ ನಡೆಸಿದರು. ಅಲ್ಲಿ ಕಂಡುಬಂದ ಸಂಗತಿಗಳನ್ನು ಆಧರಿಸಿ ಈ ದಿನ್ನೆಗಳು ಶವಸಂಸ್ಕಾರದ ಕುರುಹುಗಳೆಂದು ನಿರ್ಣಯಿಸಿದರು. ಇದರಿಂದ ಬೂದಿದಿನ್ನೆಗಳ

ಬಗ್ಗೆ ಇದ್ದ ದಂತಕಥೆಗಳು ನಿಜ ಇರಬಹುದೆಂದು ಅವರು ನಿರ್ಣಯಿಸಿದರು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಪ್ಪುಗಲ್ಲು, ಸಂಗನಕಲ್ಲು, ಹಲಕುಂದಿ, ಕುಡುತಿನಿ, ತೆಕ್ಕಲಕೋಟೆ, ಹಳೇನೆಲ್ಲುಡಿ, ಕೊಂಚಗೇರಿ, ಕುರೇಕೊಪ್ಪ, ತೋರಣಗಲ್ಲು, ಕಾಕುಬಾಳು, ಗಾದಿಗನೂರು, ಕಂಚುಗಾರ ಬೆಳಗಲ್ಲು, ವೆಂಕಟಾಪುರ, ನಿಂಬಾಪುರ, ಕಲ್ಲಹಳ್ಳಿ, ಮುಂತಾದ ಸ್ಥಳಗಳಲ್ಲಿ ಬೂದಿದಿನ್ನೆಗಳು ಕಂಡುಬಂದಿದ್ದು ಅವುಗಳ ಬಗ್ಗೆ ದೇಶಿಯ ಮತ್ತು ವಿದೇಶಿಯ ವಿದ್ವಾಂಸರು ವೈಜ್ಞಾನಿಕ ಅಧ್ಯಯನ ನಡೆಸಿರುವರು. ಅಧ್ಯಯನ ಕ್ಷೇತ್ರದಲ್ಲಿರುವ ಬೂದಿದಿನ್ನೆಗಳ ಕುರಿತಾಗಿ ಎಫ್.ಆರ್ ಅಲ್ಚಿನ್, ರಾಮಿರೆಡ್ಡಿ, ಮಜುಮದಾರ್, ರಾಜಗುರು, ಕೆ.ಪದ್ದಯ್ಯ, ಅ.ಸುಂದರ ಮೊದಲಾದವರು ಅಧ್ಯಯನ ಮಾಡಿ ತಮ್ಮ ತಮ್ಮ ಅಧ್ಯಯನ ಆಧಾರಿತ ಅಭಿಪ್ರಾಯ ಮಂಡಿಸಿದ್ದಾರೆ.

ಖ್ಯಾತ ಪುರಾತತ್ವಜ್ಞರಾದ ಎಫ್.ಆರ್. ಅಲ್ಚಿನ್ ಅವರು ತಮ್ಮ 'ನಿಯೋಲಿತಿಕ್ ಕ್ಯಾಟಲ್ ಕೀಪರ್ಸ್ ಆಫ್ ಸೌಥ್ ಇಂಡಿಯಾ: ಎ ಸ್ಟಡಿ ಆಫ್ ಡೆಕ್ಕನ್ ಆ್ಯಶ್ ಮೌಂಡ್ಸ್' ಎಂಬ ಕೃತಿಯಲ್ಲಿ ಬೂದಿದಿನ್ನೆ ನೆಲೆಗಳು ದನಕರುಗಳ ದೊಡ್ಡಿಗಳಾಗಿದ್ದು(ದನಗಳನ್ನು ನಿಲ್ಲಿಸುವ ಸ್ಥಳ) ಇಲ್ಲಿ ಕ್ರಮೇಣ ದೊಡ್ಡ ಪ್ರಮಾಣದಲ್ಲಿ ಸಗಣಿ ಸಂಗ್ರಹವಾಗುತಿತ್ತು. ಹೀಗೆ ಸಂಗ್ರಹಗೊಂಡ ಸಗಣಿಯನ್ನು ಸುಡಲಾಗುತ್ತಿತ್ತು. ಇಂತಹ ಕ್ರಿಯೆ ಮೇಲಿಂದ ಮೇಲೆ ಅದೇ ಸ್ಥಳದಲ್ಲಿ ಜರುಗುತ್ತಿದ್ದರಿಂದ ಕಾಲಕ್ರಮೇಣ ಅದು ಪದರುಗಳಾಗಿ ರಚನೆಯಾಗುತ್ತಿತ್ತೆಂದು ಅಭಿಪ್ರಾಯಿಸಿದ್ದಾರೆ.

ರಾಮಿರೆಡ್ಡಿಯವರು ಬೂದಿ ದಿನ್ನೆಗಳು ಮೂಲದಲ್ಲಿ ಕಬ್ಬಿಣದ ಅದಿರನ್ನು ಸಂಗ್ರಹಿಸಿ ಲೋಹ ತಯಾರಿಸುವುದಕೋಸ್ಕರ ಸುಟ್ಟಿದ್ದರಿಂದ ಉಂಟಾದ ದಿನ್ನೆಗಳೆಂದಿದ್ದಾರೆ. ರಾಬರ್ಟ್ ಬ್ರೂಸ್‌ಫುಟ್ ಅವರು ನವಶಿಲಾಯುಗದ ಜನರು ಜಾನುವಾರುಗಳ ದೊಡ್ಡ ದೊಡ್ಡ ಮಂದೆಗಳನ್ನು ಸಾಕುತ್ತಿದ್ದರೆಂದೂ ಜಾನುವಾರುಗಳ ಸಗಣಿಯನ್ನು ಒಂದೆಡೆ ಗುಡ್ಡೆಹಾಕಿ ಅದು ತ್ಯಾಜ್ಯವಾದ್ದರಿಂದ ಕಾಲದಿಂದ ಕಾಲಕ್ಕೆ ಸುಡುತ್ತಿದ್ದರು. ಇಲ್ಲವೇ ಸಗಣಿಯ ಈ ಗುಡ್ಡೆಗಳಿಗೆ ಆಕಸ್ಮಿಕವಾಗಿ ಬೆಂಕಿಬಿದ್ದು ಅವು ಸುಟ್ಟು ಬೂದಿಯಾಗುತ್ತಿದ್ದವೆಂದು ಅಭಿಪ್ರಾಯಿಸಿದ್ದಾರೆ. ಮಜುಮ್‌ದಾರ ಮತ್ತು ರಾಜಗುರು ಅವರು ಇವು ಮೂಲತಃ ದೊಡ್ಡಿಗಳಲ್ಲ, ದೊಡ್ಡಿಗಳಿಂದ ಸಗಣಿಯನ್ನು ಸಂಗ್ರಹಿಸಿ ಬೇರೆಡೆಯಲ್ಲಿ ಒಟ್ಟುತ್ತಿದ್ದರು ಅಂತಹ ಒಟ್ಟಿನ ನೆಲೆಗಳು ಬೂದಿ ದಿನ್ನೆಗಳು ಎಂದಿದ್ದಾರೆ.[೧೪೪]

ಕೆ.ಪದ್ದಯ್ಯ ಅವರು ಇವು ದನಗಳ ಸಗಣಿ ಸುಡುವುದರಿಂದ ಉಂಟಾಗಿದ್ದು, ಆದರೆ ಅದರ ಉದ್ದೇಶವು ಇದರ ಬೆಂಕಿಯು ದಿನಗಟ್ಟಲೆ ಇದ್ದುದರಿಂದ ಸಾಕಿದ ಪ್ರಾಣಿಗಳನ್ನು ಹಾಗೂ ಮನುಷ್ಯರನ್ನು ಹಿಡಿಯಲು ಬರುತ್ತಿದ್ದ ಕಾಡುಪ್ರಾಣಿಗಳನ್ನು ದೂರವಿಡಲು ಇದೊಂದು ಕ್ರಮವಾಗಿತ್ತೆಂದು ಅಭಿಪ್ರಾಯಿಸಿದ್ದಾರೆ. ಇಷ್ಟು ದೊಡ್ಡ ಪ್ರಮಾಣದಲ್ಲಿ ಸಗಣಿಯನ್ನು ಸುಡುವುದರ ಉದ್ದೇಶವೇನೆಂಬುದರ ಬಗ್ಗೆ ಸ್ಪಷ್ಟತೆ ಇಲ್ಲ. ಇವುಗಳು ಬಹುಮಟ್ಟಿಗೆ ಪಶುಸಂಗೋಪನೆ ಮಾಡುತ್ತಿದ್ದ ಜನರು ಇವುಗಳಿಗೆ ಕಾರಣಕರ್ತರಾಗಿರಬಹುದೆಂದು ತಿಳಿಯುತ್ತದೆ. ಪ್ರಾಯಶಃ ಅತಿ ಹೆಚ್ಚು ಪ್ರಮಾಣದಲ್ಲಿ ಸಂಗ್ರಹವಾಗುತ್ತಿದ್ದ ಸಗಣಿಯನ್ನು ತಮ್ಮ ನಂಬಿಕೆಗೆ ಸಂಬಂಧಿಸಿದ ಧಾರ್ಮಿಕ ಕಟ್ಟಳೆಯಂತೆ ಸುಡಲಾಗುತ್ತಿತ್ತು ಎಂಬ

ಬಲವಾದ ನಂಬಿಕೆಯಿತ್ತು. ಇಂತಹ ಪದ್ಧತಿ ಇಂದಿಗೂ ಹೋಳಿ, ದೀಪಾವಳಿ ಹಬ್ಬಗಳಲ್ಲಿ ಆಚರಿಸುವುದನ್ನು ಕಾಣುತ್ತೇವೆ. ಈ ದಿನ್ನೆಗಳು ನವಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಮಧ್ಯದವರೆಗೂ ಸೃಷ್ಟಿಯಾಗಿರಬಹುದೆಂದು ತೋರುತ್ತದೆ. ಅಲ್ಲದೆ ಅಂದಿನ ಜನರು ಹೆಚ್ಚು ಪಶುಸಂಗೋಪನೆಯಲ್ಲಿ ತೊಡಗಿದ್ದು ಇಂತಹ ದಿನ್ನೆಗಳ ರಚನೆಗೆ ಕಾರಣಕರ್ತರಾಗಿದ್ದರೆಂಬುದು ಸೂಚಿಸುಸತ್ತದೆ.

ಅಧ್ಯಯನ ಪ್ರದೇಶದಲ್ಲಿರುವ ವೆಂಕಟಾಪುರದ ಬೂದಿ ದಿನ್ನೆಯನ್ನು ಸ್ಥಳೀಯರು ವಾಲಿ ಭಂಡಾರ, ವಾಲಿಕಾಷ್ಠ ಎಂದು ಕರೆಯುತ್ತಾರೆ. ಅದರಂತೆ ಕುಡುತಿನಿಯಲ್ಲಿರುವ ಬೂದಿ ದಿನ್ನೆಯನ್ನು ಹಿಡಿಂಬಾಸುರನನ್ನು ದಹನ ಮಾಡಿದ ಸ್ಥಳವೆಂದು ಕರೆಯುತ್ತಾರೆ. ಪ್ರಾಯಶಃ ಆಯಾ ಸಮಾಜದ ಮುಖಂಡರಾದ ವಾಲಿ, ಹಿಡಂಬಾಸುರ ಮೊದಲಾದವರ ದಹನ ಪ್ರಕ್ರಿಯೆಯನ್ನು ಆಗಾಗ್ಗೆ ದೊಡ್ಡ ಪ್ರಮಾಣದಲ್ಲಿ ಸಗಣಿ ರಾಶಿ ಮಾಡಿ ಸುಡುವುದರ ಮೂಲಕ ಆಚರಿಸುತ್ತಿದ್ದ ಸಾಧ್ಯತೆ ಇದೆ. ಅ.ಸುಂದರ ಅವರು ಇಂಥ ದಿನ್ನೆಗಳು ಪ್ರಾಯಶಃ ಆಚರಣೆಯ ದ್ಯೋತಕವಾಗಿ ನಿರ್ಮಾಣವಾಗಿದ್ದಿರಬಹುದೆಂದು ಅಭಿಪ್ರಾಯಿಸಿದ್ದಾರೆ.[೧೪೯] ಇಂತಹ ಬೂದಿ ದಿನ್ನೆಗಳ ಕುರಿತು ವಿಭಿನ್ನ ಅಭಿಪ್ರಾಯಗಳಿದ್ದರೂ ಅವು ಕಂಡುಬಂದಿರುವ ಭೌಗೋಳಿಕ ಪರಿಸರವನ್ನು ಗಮನಿಸಿದರೆ, ಕಾಡುಬೆಟ್ಟ ಶಿಲೆಗಳಿಂದ ಆವೃತಗೊಂಡ ಪ್ರದೇಶಗಳಲ್ಲಿ ಒಂದು ಕಾಲದಲ್ಲಿ ಕೃಷಿಗೆ ಯೋಗ್ಯವಾದ ಭೂಮಿ ಇರಲಿಲ್ಲವೆಂದು ತೋರುತ್ತದೆ. ಬಹಳ ಪ್ರಯತ್ನದ ಮೂಲಕ ಅದನ್ನು ಬಳಕೆ ಮಾಡಿಕೊಳ್ಳಬೇಕಾಗುತ್ತಿತ್ತು. ಇದರಿಂದ ಇಲ್ಲಿಯ ಜನವರ್ಗ ಪಶುಪಾಲನೆ ವೃತ್ತಿಯನ್ನು ಪ್ರಮುಖವಾಗಿ ಅವಲಂಬಿಸಿದಂತೆ ಕಾಣುತ್ತದೆ. ಇಂಥ ಬೆಟ್ಟ ಕಾಡುಗಳಲ್ಲಿ ನೆಲೆಸಿದ್ದಂತಹ ಜನರು ಕೊಟ್ಟಿಗೆಗಳಲ್ಲಿ ದನಕರುಗಳು ನಿಲ್ಲಿಸಿರಬೇಕು. ದಿನಂಪ್ರತಿ ಸಂಗ್ರಹವಾಗುತ್ತಿದ್ದ ಸಗಣಿಯನ್ನು ಪಕ್ಕದಲ್ಲಿ ಒಂದೆಡೆ ಗುಡ್ಡೆಹಾಕಿ ಅದು ತ್ಯಾಜ್ಯವಾದ್ದರಿಂದ ಕಾಲದಿಂದ ಕಾಲಕ್ಕೆ ಸುಡುತ್ತಿದ್ದರು. ಇಲ್ಲವೇ ಸಗಣಿಯ ಈ ಗುಡ್ಡೆಗಳಿಗೆ ಆಕಸ್ಮಿಕವಾಗಿ ಅಥವಾ ಉದ್ದೇಶ ಪೂರ್ವಕವಾಗಿ ಬೆಂಕಿ ಹಚ್ಚುತ್ತಿರಬೇಕು. ಅದು ಕ್ರಮೇಣವಾಗಿ ದಹಿಸಿದಂತೆಲ್ಲಾ ಬೂದಿ ದಿನ್ನೆಗಳು ಉಂಟಾಗಿರುವ ಸಾಧ್ಯತೆಯಿದೆ ಎಂದು ಅಭಿಪ್ರಾಯಿಸಬಹುದು. ಇಂತಹ ಬೂದಿದಿನ್ನೆಗಳ ಕಾಲಮಾನವನ್ನು ಸುಮಾರು ಕ್ರಿ.ಪೂ ೨೦೦೦-೬೦೦ರವರೆಗೆ ಎಂದು ಅಂದಾಜು ಮಾಡಲಾಗಿದೆ.[೧೫೦]

**ಕೊನೆ ಟಿಪ್ಪಣಿ**


೧. ಸುಂದರ ಅ., (ಸಂ), (ಮರು ಮುದ್ರಣ), ೨೦೧೮, ಕರ್ನಾಟಕ ಚರಿತ್ರೆ, ಸಂ-೧, ಆದಿ ಹಳೆಯ ಶಿಲಾಯುಗದಿಂದ ಕ್ರಿ.ಶ ೬೪೦, ಪು. ೧೨೫.

೨. ಅಂಬಳಿಕೆ ಹಿರಿಯಣ್ಣ, (ಸಂ), ೨೦೦೯, ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ, ಪು. ೮೭೧.

೩. ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕ ಪುರಾತತ್ವ ನೆಲೆಗಳು, ಪು. ೪.

೪. ಸುಂದರ ಅ., (ಸಂ), ಪೂರ್ವೋಕ್ತ, ಪು. ೯೭.

೫. ಫೂಟ್ ಆರ್.ಬಿ., ೧೯೧೬, ಇಂಡಿಯನ್ ಪ್ರಿಹಿಸ್ಟಾರಿಕ್ ಅಂಡ್ ಪ್ರೋಟೋಹಿಸ್ಟಾರಿಕ್ ಆ್ಯಂಟಿಕ್ಯುಟೀಸ್, ಪು. ೩೩.

೬. ಸುಬ್ಬರಾವ್ ಬಿ., ೧೯೪೮, ಸ್ಟೋನ್ ಏಜ್ ಕಲ್ಚರ್ ಆಫ್ ಬಳ್ಳಾರಿ, ಪು. ೫-೭.

೭. ಫೂಟ್ ಆರ್.ಬಿ., ೧೯೧೬, ಪೂರ್ವೋಕ್ತ, ಪು. ೭೭.

೮. ಅದೇ, ಪು. ೩೪.

೯. ಅದೇ, ಪು. ೩೫.

೧೦. ಅದೇ, ಪು. ೩೫.

೧೧. ಅದೇ, ಪು. ೩೫.

೧೨. ಅದೇ, ಪು. ೩೫.

೧೩. ಇಂ.ಆ.ರಿ, ೧೯೭೬-೭೭, ಪು. ೨೪

೧೪. ಅದೇ, ೧೯೮೭-೮೮, ಪು. ೩೩.

೧೫. ಅನ್ಸಾರಿ ಝುಡ್.ಡಿ., ೧೯೭೪, ಪೆಬಲ್ ಟೂಲ್ಸ್ ಫ್ರಮ್ ನಿಟ್ಟೂರು(ಮೈಸೂರು ಸ್ಟೇಟ್) ಇಂಡಿಯನ್ ಆ್ಯಂಟಿಕ್ವೇರಿ (ಹೊಸ ಮಾಲಿಕೆ), ಸಂ-೪, ಪು. ೧-೨.

೧೬. ಸುಂದರ ಅ., (ಸಂ), (ಮರು ಮುದ್ರಣ), ೨೦೧೮, ಪೂರ್ವೋಕ್ತ, ಪು. ೧೦೦ : ಇಂ.ಆ.ರಿ, ೧೯೭೫-೭೬, ಪು. ೨೨

೧೭. ತಿಪ್ಪೇಸ್ವಾಮಿ ಎಚ್., ೨೦೦೦, ಕೂಡ್ಲಿಗಿ ತಾಲ್ಲೂಕಿನಲ್ಲಿ ಪ್ರಾಗೈತಿಹಾಸಿಕ ನೆಲೆಗಳು, ಇ.ದ., ಸಂ.೧೬, ಪು. ೧.

೧೮. ಸುಂದರ ಅ., (ಸಂ), (ಮರು ಮುದ್ರಣ), ೨೦೧೮, ಪೂರ್ವೋಕ್ತ, ಪು. ೧೦೦.

೧೯. ಅದೇ, ಪು. ೧೨೯.

೨೦. ಅನ್ಸಾರಿ ಝುಡ್.ಡಿ., ಪೂರ್ವೋಕ್ತ, ಪು. ೧-೨.

೨೧. ಫ್ರಾನ್ಸ್ ದೇಶದ ಲೆವಾಲ್ವಾ ಎಂಬಲ್ಲಿ ಮೊಟ್ಟಮೊದಲಿಗೆ ಈ ತಂತ್ರವನ್ನು ಕಂಡುಕೊಳ್ಳಲಾಯಿತು. ಆದ್ದರಿಂದ ಈ ತಾಂತ್ರಿಕತೆಗೆ 'ಲೆವಾಲ್ವಾ' ಎಂದು ಕರೆಯಲಾಗುತ್ತದೆ. ಈ ತಂತ್ರದಿಂದ ಆಯ್ದ ಚರ್ಟ್ ಅಥವಾ ಜಾಸ್ಪರ್ ಕಲ್ಲು ತುಂಡನ್ನು ಡುಬ್ಬಾದ ಅಂದರೆ, ಆಮೆಯಾಕಾರಕ್ಕೆ ತಂದು ಮೇಲ್ಭಾಗವನ್ನು ಸಮತಟ್ಟಮಾಡಿ, ಅಂಚಿನಲ್ಲಿ ಒಂದರಪಕ್ಕ ಒಂದರಂತೆ ಚಕ್ಕೆಗಳನ್ನು ಎಬ್ಬಿಸಿಕೊಂಡು ಉಪಕರಣ ಸಿದ್ಧ ಮಾಡಿಕೊಳ್ಳುತ್ತಿದ್ದರು.

೨೨. ಸಂಕಾಲಿಯ ಹೆಚ್.ಡಿ., ಅನಿಮಲ್ ಫಾಸಿಲ್ಸ್ ಅಂಡ್ ಪ್ಯಾಲಿಯೋಲಿಥಿಕ್ ಇಂಡಸ್ಟ್ರೀಸ್ ದಿ ಪ್ರವರಾ ಬೇಸಿನ್ ಅಟ್ ನೇವಾಸ ಡಿಸ್ಟ್ರಿಕ್ಟ್ ಅಹಮದನಗರ, ಏನ್ಸಿಯಂಟ್ ಇಂಡಿಯಾ ಸಂ-೧೨, ಪು. ೩೫-೫೩.

೨೩. ಜೋಷಿ ಆರ್. ವಿ., ಸ್ಟೋನ್ ಏಜ್ ಕಲ್ಚರ್ಸ್ ಆಫ್ ಸೆಂಟ್ರಲ್ ಇಂಡಿಯಾ, ರಿಪೋರ್ಟ್ ಆನ್ ದಿ ಎಕ್ಸ್‌ಕವೇಷನ್ಸ್ ಆಫ್ ದಿ ರಾಕ್ ಶೆಲ್ಟರ್ಸ್ ಆಫ್ ಆಧಂಘರ್, ಪು. ೨೭-೨೯.

೨೪. ಅಮರ್‌ನಾಥ್ ಕನ್ನ, ಆರ್ಕಿಯಾಲಾಜಿ ಆಫ್ ಇಂಡಿಯಾ, ಪು. ೨೦೦.

೨೫. ಸೌಂದರ್ಯರಾಜನ್ ಕೆ.ವಿ., ಮಿಡಲ್ ಪ್ಯಾಲಿಯೋಲಿಥಿಕ್ ಇನ್ ಇಂಡಿಯಾ, ದೀಕ್ಷಿತ್ ಕೆ. ಎನ್.(ಸಂ), ಆರ್ಕಿಯಾಲಾಜಿಕಲ್ ಪರ್ಸ್‌ಪೆಕ್ಟಿವ್ಸ್ ಆಫ್ ಇಂಡಿಯಾ ಸಿನ್ಸ್, ಇಂಡಿಪೆಂಡೆನ್ಸ್, ಪು. ೯-೧೨.

೨೬. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು. ೯೭.

೨೭. ಅದೇ, ಪು. ೯೮.

೨೮. ಅದೇ, ಪು. ೯೮

೨೯. ಇಂ.ಆ.ರಿ, ೧೯೫೮-೫೯, ಪು. ೩೨

೩೦. ಅದೇ, ೧೯೫೬-೬೦, ಪು. ೭೩.

೩೧. ಷಡಕ್ಷರಯ್ಯ ಆರ್.ಎಂ., ಪ್ರಿಹಿಸ್ಟಾರಿಕ್ ಅಂಡ್ ಅರ್ಲಿ ಹಿಸ್ಟಾರಿಕ್ ಕಲ್ಚರ್ಸ್ ಇನ್ ದಿ ಮಂಜ್ರಾ ಅಂಡ್ ದಿ ಕಾರಂಜಾ ವ್ಯಾಲೀಸ್, ಪು. ೧೧-೭೪.

೩೨. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು. ೯೮-೯೯.

೩೩. ಅದೇ, ೧೯೭೫-೭೬, ಪು. ೨೨.

೩೪. ಶಿವತಾರಕ್ ಕೆ. ಬಿ., ಪೂರ್ವೋಕ್ತ, ಪು. ೯೮-೯೯.

೩೫. ಸುಂದರ ಅ., ೨೦೧೮, ಪೂರ್ವೋಕ್ತ, ಪು. ೧೫೦.

೩೬. ಫೂಟ್ ಆರ್. ಬಿ., ಪೂರ್ವೋಕ್ತ, ಪು. ೧೧೮-೧೧೯.

೩೭. ಮೂರ್ತಿ ಎಂ.ಎಲ್.ಕೆ., ಅಪ್ಪರ್ ಪ್ಯಾಲಿಯೋಲಿಥಿಕ್ ಇನ್ ಇಂಡಿಯಾ, ದೀಕ್ಷಿತ್ ಕೆ.ಎನ್.(ಸಂ), ಆರ್ಕಿಯಲಾಜಿಕಲ್ ಪರ್ಸ್‌ಪೇಕ್ಟವ್ಸ್ ಆಫ್ ಇಂಡಿಯಾ ಸಿನ್ಸ್, ಇಂಡಿಪೆಂಡೆನ್ಸ್ ಪು. ೧೫-೧೬.

೩೮. ಮೂರ್ತಿ ಎಂ.ಎಲ್.ಕೆ., ಬ್ಲೇಡ್ ಅಂಡ್ ಬ್ಯೂರಿನ್ ಇಂಡಸ್ಟ್ರೀಸ್ ಅಟ್ ರೇಣಿಗುಂಟಾ ಆನ್ ದಿ ಸೌಥ್-ಈಸ್ಟ್ ಕೋಸ್ಟ್ ಆಫ್ ಇಂಡಿಯಾ; ಪ್ರೊಸಿಡಿಂಗ್ಸ್ ಆಫ್ ಪ್ರಿ ಹಿಸ್ಟಾರಿಕ್ ಸೊಸೈಟಿ, ಸಂ.೨೮, ಪು. ೮೩-೧೦೧.

೩೯. ಮೂರ್ತಿ ಎಂ.ಎಲ್.ಕೆ., ಪೂರ್ವೋಕ್ತ, ದೀಕ್ಷಿತ್ ಕೆ.ಎನ್. (ಸಂ.೧), ೧೯೮೫ ಪು. ೧೫–೧೬.

೪೦. ಸಾಲಿ ಎಸ್.ಎ., ದಿ ಅಪ್ಪರ್ ಪ್ಯಾಲಿಯೋಲಿಥಿಕ್ ಕಲ್ಚರ್ ಅಟ್ ಪಾಟ್ನ ಡಿಸ್ಟ್ರಿಕ್ಟ್ ಜಲ್ಗಾನ್ ಮಹಾರಾಷ್ಟ್ರ, ರೀಸೆಂಟ್ ಅಡ್ವಾನ್ಸ್ ಇಂಡೋ–ಪಸಿಫಿಕ್ ಪ್ರಿಹಿಸ್ಟರಿ, ಪು. ೧೨೭–೧೪೫.

೪೧. ಮೂರ್ತಿ ಎಂ.ಎಲ್.ಕೆ., ಪೂರ್ವೋಕ್ತ, (ದೀಕ್ಷಿತ್ ಕೆ.ಎನ್. (ಸಂ.೧), ೧೯೮೫) ಪು. ೧೫–೧೬.

೪೨. ಇಂ. ಆ. ರಿ, ೧೯೬೨–೬೩, ಪು.೧೪–೧೫.

೪೩. ಅದೇ, ೧೯೬೦–೬೧, ಪು. ೨೮.

೪೪. ಅದೇ, ೧೯೬೩–೬೪, ಪು. ೨೩.

೪೫. ಅದೇ, ೧೯೬೩–೬೪, ಪು. ೨೧.

೪೬. ಅದೇ, ೧೯೬೩–೬೪, ಪು. ೩೬.

೪೭. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು. ೯೮–೯೯.

೪೮. ಶೇಷಾದ್ರಿ ಎಂ., ಸ್ಟೋನ್ ಏಜ್ ಟೂಲ್ಸ್ ಫ್ರಮ್ ಸಾಲ್ವಡಗಿ, ಬಿಜಾಪುರ ಡಿಸ್ಟ್ರಿಕ್ಟ್, ಮೈಸೂರು ಸ್ಟೇಟ್ಸ್, ಸಂ. ೨೨, ಪು. ೧–೫.

೪೯. ಪದ್ದಯ್ಯ ಕೆ., ದಿ ಅಶ್ಯೂಲಿಯನ್ ಕಲ್ಚರ್ ಆಫ್ ದಿ ಹುಣಸಗಿ ವ್ಯಾಲಿ–೯ ಪೆನ್ಸುಲಾರ್ ಇಂಡಿಯಾ, ಎ ಸೆಟಲ್‌ಮೆಂಟ್ ಸಿಸ್ಟಮ್ ಪರ್ಸ್‌ಪೆಕ್ಟಿವ್, ಪು. ೧–೧೦.

೫೦. ಇಂ. ಆ. ರಿ, ೧೯೫೯–೬೦ ಪು. ೩೪.

೫೧. ಅದೇ, ೧೯೬೨–೬೩, ಪು. ೧೬.

೫೨. ಅದೇ, ೧೯೬೦–೬೧ ಪು. ೨೮.

೫೩. ಅದೇ, ೧೯೫೯–೬೦, ಪು. ೩೪.

೫೪. ಅದೇ, ೧೯೭೫–೭೬, ಪು. ೨೨.

೫೫. ಅದೇ, ೧೯೬೫–೬೬, ಪು.೩೨ ; ಸುಂದರ ಅ., ಅರ್ಲಿ ಛೇಂಬರ್ ಟೋಂಬ್ಸ್ ಆಫ್ ಸೌಥ್ ಇಂಡಿಯಾ, ಎ ಸ್ಟಡಿ ಆಫ್ ದಿ ಐರನ್ ಏಜ್ ಮೆಗಾಲಿಥಿಕ್ ಮಾನ್ಯುಮೆಂಟ್ಸ್ ಆಫ್ ನಾರ್ತ್ ಕರ್ನಾಟಕ, ಪು. ೭೨–೭೭ ಮತ್ತು ೧೮೦–೧೮೬.

೫೬. ಇಂ. ಆ. ರಿ., ೧೯೮೭–೮೮, ಪು. ೩೩

೫೭. ಸುಂದರ, ಅ., ೨೦೧೮, ಪೂರ್ವೋಕ್ತ, ಪು. ೧೫೪.

೫೮. ಜಯಣ್ಣ ಯು. ೨೦೦೨, ಮೊಳಕಾಲ್ಮೂರು ತಾಲೂಕಿನ ಪುರಾತತ್ವೀಯ ಪರಿಸರ ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಪು. ೭೦.

೫೯. ಶಿವತಾರಕ್ ಕೆ. ಬಿ., ಪೂರ್ವೋಕ್ತ, ಪು. ೧೯೬.

೬೦. ಶ್ರೀನಿವಾಸ ಪಾಡಿಗಾರ, ಪೂರ್ವೋಕ್ತ, ೧೦೪: ಲಾಲ್ ಬಿ.ಬಿ., ದಿ ಮೆಸೋಲಿಥಿಕ್ ಸೈಟ್ ಭೀರ್‌ಭನಪುರ: ಎ ಜಿಯೋ ಕ್ರೋನಾಲಾಜಿಕಲ್ ಸ್ಟಡಿ, ಏನ್ಷಿಯಂಟ್ ಇಂಡಿಯಾ, ಸಂ.೧೭, ಪು. ೩೭.

೬೧. ರಾಧಕಾಂತ್, ದಿ ಮೆಸೋಲಿಥಿಕ್ ಕಲ್ಚರ್ಸ್ ಆಫ್ ಇಂಡಿಯಾ, ದೀಕ್ಷಿತ್. ಕೆ.ಎನ್, ಆರ್ಕಿಯಾಲಾಜಿಕಲ್ ಪರ್ಸ್‌ಪೆಕ್ಟಿವ್ಸ್ ಆಫ್ ಇಂಡಿಯಾ ಸಿನ್ಸ್, ಇಂಡಿಪೆಂಡೆನ್ಸ್, ಪು. ೨೯

೬೨. ಟಾಡ್ ಕೆ.ಆರ್.ಯು. ದಿ ಮೆಸೋಲಿಥಿಕ್ ಇಂಡಸ್ಟ್ರೀಸ್ ಆಫ್ ಬಾಂಬೆ, ಏನ್ಷಿಯಂಟ್ ಇಂಡಿಯಾ, ಸಂ.೬, ಪು. ೬

೬೩. ಸುಬ್ರಮಣ್ಯಂ ಬಿ., ಪ್ರಿ ಪ್ರೋಟೋ ಅಂಡ್ ಅರ್ಲಿ ಹಿಸ್ಟಾರಿಕ್ ಕಲ್ಚರ್ ಆಫ್ ಕೃಷ್ಣ ತುಂಗಭದ್ರಾ ವ್ಯಾಲಿ, ಪು. ೩೦.

೬೪. ಶಿವತಾರಕ್ ಕೆ.ಬಿ., ಪೂರ್ವೋಕ್ತ ಪು. ೧೯೭.

೬೫. ಸಂಕಾಲಿಯಾ. ಹೆಚ್.ಡಿ., ಮೆಸೋಲಿಥಿಕ್ ಅಂಡ್ ಪ್ರೀಮೆಸೋಲಿಥಿಕ್ ಇಂಡಸ್ಟ್ರಿಸ್ ಫ್ರಮ್ ಎಕ್ಸ್‌ಕವೇಷನ್ ಅಟ್ ಸಂಗನಕಲ್ಲು ಬಳ್ಳಾರಿ, ಪು. ೧-೪೧.

೬೬. ಸುಂದರ ಅ., ಪೂರ್ವೋಕ್ತ, ಪು. ೧೬೧.

೬೭. ಘೂಟ್, ಆರ್.ಬಿ., ಪೂರ್ವೋಕ್ತ, ಪು. ೩೩.

೬೮. ಇಂ. ಆ. ರಿ, ೧೯೯೩-೯೪, ಪು. ೫೬-೬೧.

೬೯. ಘೂಟ್, ಆರ್.ಬಿ., ಪೂರ್ವೋಕ್ತ, ಪು. ೭೭-೭೮; ಇಂ.ಆ.ರಿ, ೧೯೯೩-೯೪, ಪು. ೫೬-೬೧.

೭೦. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು. ೩೨೦.

೭೧. ಇಂ. ಆ. ರಿ, ಪೂರ್ವೋಕ್ತ, ಪು. ೫೬-೬೧.

೭೨. ಅದೇ, ಪು. ೫೬-೬೧.

೭೩. ಅದೇ, ೧೯೮೪-೮೫, ಪು. ೨೪-೨೫

೭೪. ಅದೇ, ೧೯೭೭-೭೮, ಪು. ೨೪-೨೫

೭೫. ಅದೇ, ೧೯೮೭-೮೮, ಪು. ೩೩.

೭೬. ಘೋಟ್, ಆರ್.ಬಿ., ಪೂರ್ವೋಕ್ತ, ಪು. ೭೭–೭೮; ಇಂ.ಆ.ರಿ, ೧೯೮೭–೮೮, ಪು. ೩೩.

೭೭. ಇಂ. ಆ. ರಿ, ೧೯೮೭–೮೮, ಪು. ೩೩.

೭೮. ಇಂ. ಆ. ರಿ, ೧೯೮೭–೮೮, ಪು. ೩೩.

೭೯. ಮೆಡೋಸ್ ಟೇಲರ್, ೧೯೪೧, ಮೆಗಾಲಿಥಿಕ್ ಟೋಂಬ್ಸ್ ಅಂಡ್ ಅದರ್ ಏನ್ಸಿಯಂಟ್ ರಿಮೇನ್ಸ್ ಇನ್ ದಿ ಡೆಕ್ಕನ್, ಪು. ೮೬: ಇಂ.ಆ.ರಿ, ೧೯೮೭–೮೮, ಪು. ೩೩.

೮೦. ಇಂ.ಆ.ರಿ, ೧೯೯೩–೯೪, ಪು. ೫೬–೬೧.

೮೧. ಇಂ.ಆ.ರಿ, ೧೯೯೨–೯೩, ಪು. ೪೨.

೮೨. ಅದೇ, ೧೯೮೭–೮೮, ಪು. ೩೩.

೮೩. ಜಯಣ್ಣ ಉಲ್ಲಾನಹಳ್ಳಿ, ೨೦೦೩, ಕೂಡ್ಲಿಗಿ ತಾಲ್ಲೂಕು, ಗುಡೇಕೋಟೆ ಪರಿಸರದ ಪುರಾತತ್ವ ಸಮೀಕ್ಷೆ, ಇ.ದ.ಸಂ.೧೮, ಪು. ೧–೪.

೮೪. ತಿಪ್ಪೇಸ್ವಾಮಿ ಹೆಚ್., ೨೦೦೧, ಕೂಡ್ಲಿಗಿ ತಾಲೂಕಿನಲ್ಲಿ ಪ್ರಾಗೈತಿಹಾಸಿಕ ನೆಲೆಗಳು, ಇ.ದ.ಸಂ.೧೬, ಪು. ೧.

೮೫. ಅದೇ, ಪು. ೨.

೮೬. ರಂಗನಾಥ್ ಟಿ., ಕೂಡ್ಲಿಗಿ ತಾಲ್ಲೂಕಿನ ಪುರಾತತ್ವ ನೆಲೆಗಳು, ಅಪ್ರಕಟಿತ ಕೃತಿ

೮೭. ಅದೇ,

೮೮. ಇಂ. ಆ. ರಿ, ೧೯೬೧–೬೨, ಪು. ೧೦೨.

೮೯. ಸುಂದರ ಅ., ೧೯೭೫, ಪೂರ್ವೋಕ್ತ, ಪು.೭೨; ಇಂ.ಆ.ರಿ, ೧೯೭೭–೭೮, ಪು. ೩೦.

೯೦. ಇಂ. ಆ. ರಿ, ೧೯೭೬–೭೭, ಪು ೨೪–೨೫.

೯೧. ಸುಂದರ ಅ., (ಸಂ), ೨೦೧೮, ಪೂರ್ವೋಕ್ತ, ಪು. ೧೬೧.

೯೨. ಜಯ್ಯಣ್ಣ ಯು. ೨೦೦೨, ಪೂರ್ವೋಕ್ತ, ಪು. ೭೧.

೯೩. ಇರ್ಫಾನ್ ಹಬೀಬ್(ಮೂಲ), ಪ್ರದೀಪ್ ಬೆಳಗಲ್(ಅನು), ೨೦೦೮, ಪೂರ್ವೇತಿಹಾಸ, ಪು..೮೦.

೯೪. ಕೃಷ್ಣಸ್ವಾಮಿ ವಿ.ಡಿ., ನಿಯೋಲಿಥಿಕ್ ಪ್ಯಾಟ್ರನ್ ಆಫ್ ಇಂಡಿಯಾ, ಏನ್ಸಿಯಂಟ್ ಇಂಡಿಯಾ, ಸಂ.೧೬. ಪು. ೨೬.

೯೫. ಥಾಪರ್ ಬಿ.ಕೆ., ಫ್ರೆಶ್ ಲೈಟ್ ಆನ್ ದಿ ನಿಯೋಲಿಥಿಕ್ ಕಲ್ಚರ್ಸ್ ಆಫ್ ಇಂಡಿಯಾ, ದೀಕ್ಷಿತ್ ಕೆ.ಎನ್ (ಸಂ.), ಆರ್ಕಿಯಾಲಾಜಿ ಪರ್ಸ್‌ಪೆಕ್ಟಿವ್ ಆಫ್ ಇಂಡಿಪೆಂಡೆನ್ಸ್, ಪು..೪೧.

೯೬. ಪದ್ದಯ್ಯ ಕೆ., ೨೦೧೯, ನಿಯೋಲಿಥಿಕ್ ಆ್ಯಶ್ ಮೌಂಡ್ಸ್ ಆಫ್ ದ ಡೆಕ್ಕನ್, ಪು..೧-೧೫.

೯೭. ದೇವುಪತ್ತಾರ (ಸಂ), ಮಹಾದೇವ ಬಾಬಾ ಮೆಡೋಸ್ ಟೇಲರ್, ಪು. ೩೧.

೯೮. ಫೂಟ್ ಆರ್.ಬಿ., ಪೂರ್ವೋಕ್ತ, ಪು. ೭೬-೭೭.

೯೯. ಶೇಷಾದ್ರಿ ಎಂ., ೧೯೭೧, ರಿಪೋರ್ಟ್ ಆನ್ ದಿ ಎಕ್ಸ್‌ಕವೇಷನ್ ಅಟ್ ಟಿ. ನರಸೀಪುರ, ಪು. ೧-೫.

೧೦೦. ಹನುಮಂತರಾವ್ ಕೆ. ಮತ್ತು ನಾಗರಾಜು ಎಸ್., ೧೯೭೪, ಎಕ್ಸ್‌ಕವೇಷನ್ ಅಟ್ ಹೆಮ್ಮಿಗೆ, ಪು. ೦೫.

೧೦೧. ಇಂ. ಆ. ರಿ, ೧೯೬೭-೬೮, ಪು. ೩೮-೩೯.

೧೦೨. ಷಡಕ್ಷರಯ್ಯ ಆರ್.ಎಂ., ಪೂರ್ವೋಕ್ತ, ಪು. ೧೦-೭೦.

೧೦೩. ಅಲ್ಚಿನ್ ಎಫ್.ಆರ್., ೧೯೬೩, ನಿಯೋಲಿಥಿಕ್ ಕ್ಯಾಟಲ್ ಕೀಪರ್ಸ್ ಆಫ್ ಸೌಥ್ ಇಂಡಿಯಾ, ಪು. ೭೯-೮೦.

೧೦೪. ಫೂಟ್ ಆರ್.ಬಿ., ೧೯೧೪, ಇಂಡಿಯನ್ ಪ್ರಿ ಹಿಸ್ಟಾರಿಕ್ ಅಂಡ್ ಪ್ರೋಟೋ ಹಿಸ್ಟಾರಿಕ್ ಆ್ಯಂಟಿಕ್ವಿಟೀಸ್ ಪು. ೪೨-೫೬. ; ಮಜುಂದಾರ್ ಜಿ.ಜಿ ಮತ್ತು ರಾಜಗುರು ಎಸ್.ಎನ್., ೧೯೬೬, ಆ್ಯಶ್‌ಮೌಂಡ್ ಅಂಡ್ ಎಕ್ಸಕವೇಶನ್ ಅಟ್ ಕಪ್ಪಗಲ್, ಪು. ೬೭-೬೯.

೧೦೫. ಸುಬ್ಬರಾವ್ ಬಿ., ೧೯೪೮ ಸ್ಟೋನ್ ಏಜ್ ಕಲ್ಚರ್ಸ್ ಆಫ್ ಬಳ್ಳಾರಿ ಪು. ೪ ; ಸಂಕಾಲಿಯ ಹೆಚ್.ಡಿ., ೧೯೬೯, ಮೆಸೋಲಿಥಿಕ್ ಅಂಡ್ ಪ್ರೀಮೆಸೋಲಿಥಿಕ್ ಇಂಡಸ್ಟ್ರೀಸ್ ಫ್ರಮ್ ದ ಎಕ್ಸ್‌ಕವೇಶನ್ ಆ್ಯಟ್ ಸಂಗನಕಲ್ಲು, ಪು. ೬.

೧೦೬. ಫೂಟ್ ಆರ್.ಬಿ., ಪೂರ್ವೋಕ್ತ, ಪು.೪೦.

೧೦೭. ನಾಗರಾಜ ರಾವ್ ಎಂ.ಎಸ್. ಮತ್ತು ಮಲ್ಹೋತ್ರ ಕೆ.ಸಿ., ೧೯೬೫, ಸ್ಟೋನ್ ಏಜ್ ಹಿಲ್ ಡ್ವೆಲರ್ಸ್, ಪು. ೧-೧೦.

೧೦೮. ಅನ್ಸಾರಿ ಝಡ್.ಡಿ., ಪೂರ್ವೋಕ್ತ, ಪು. ೧-೨.

೧೦೯. ಕೊಂಚಗೇರಿಯ ಅಬ್ಬೆನಾಗಪ್ಪ ಎಂಬುವವರ ಜಮೀನಿನಲ್ಲಿ ಸುಮಾರು ಅರ್ಧ ಎಕರೆ, ವಿಸ್ತೀರ್ಣ ಹರಡಿಕೊಂಡಿರುವ ಬೂದಿ ದಿನ್ನೆಯನ್ನು ಕ್ಷೇತ್ರಕಾರ್ಯಕೈಗೊಂಡ ಸಂದರ್ಭದಲ್ಲಿ ಶೋಧಿಸಲಾಯಿತು. ಸ್ಥಳೀಯರು ಈ ಬೂದಿದಿನ್ನೆಯ ಮಣ್ಣನ್ನು ಅಗೆದು ಮನೆಗಳ ಮೇಲೆ ಹಾಕಲು ಮತ್ತು ಫಲವತ್ತತೆಗಾಗಿ ಹೊಲಗಳಿಗೆ ಎತ್ತಿನಗಾಡಿಗಳ ಮೂಲಕ ಏರಿಕೊಂಡು ಹೋಗುತ್ತಿದ್ದುದರಿಂದ ಮೇಲಿನಿಂದ ತಳಭಾಗದವರೆಗೆ ಸ್ತರಗಳನ್ನು ಗುರುತಿಸಲು ಮತ್ತು ಅವಶೇಷಗಳನ್ನು ಪತ್ತೆಹಚ್ಚಲು ಸಹಾಯಕವಾಯಿತು. ಬೂದಿದಿಬ್ಬವು ಮೃದುವಾದ ಮತ್ತು ಗಟ್ಟಿಯಾದ ಕಲ್ಲು-ಗಾಜಿನಂತಾದ ಬೂದಿಯ ಪದರುಗಳಿಂದ ಕೂಡಿದೆ. ದಿನ್ನೆಯು ಹೆಚ್ಚು

ಎತ್ತರದಲ್ಲಿ ಇಲ್ಲವಾದರೂ ೫.೪ ಅಡಿ ಕನಿಷ್ಠ ಎತ್ತರದಲ್ಲಿದೆ. ಇದರ ಕೆಳಸ್ತರದಲ್ಲಿ ಬೂದುಬಣ್ಣದ ಮಡಕೆಯ ಚೂರು ಹಾಗೂ ಮೇಲ್ಮಟ್ಟದಲ್ಲಿ ಗಟ್ಟಿಯಾದ ಕಬ್ಬಿಣದ ಕಿಟ್ಟರೂಪದ ಮಣ್ಣಿನಹೆಟ್ಟೆ (ಗರಸಿನಸೆಟ್ಟು) ಇರುವುದನ್ನು ಗುರುತಿಸಲಾಗಿದೆ. ಅಲ್ಪ ಪ್ರಮಾಣದಲ್ಲಿ ಮೂಳೆ ಅವಶೇಷಗಳು ಸಹ ಇದರಲ್ಲಿ ಕಂಡುಬಂದಿವೆ.

೧೧೦. ಫೂಟ್ ಆರ್.ಬಿ., ೧೯೧೬, ಪು. ೭೭–೭೮.

೧೧೧. ಇಂ. ಆ. ರಿ, ೧೯೭೭–೧೯೭೮, ಪು. ೨೫.

೧೧೨. ಅದೇ, ೧೯೯೩–೯೪, ಪು. ೫೬–೬೧.

೧೧೩. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು. ೩೨೦.

೧೧೪. ಶ್ರೀನಿವಾಸ ಎಲ್., ೨೦೧೧, ಹಂಪಿ ಪರಿಸರದ ಆದಿ ಮಾನವನ ನೆಲೆಗಳು, ಪು. ೨೬

೧೧೫. ಇಂ.ಆ. ರಿ., ೧೯೮೭–೮೮, ಪು. ೩೩.

೧೧೬. ಫೂಟ್ ಆರ್.ಬಿ., ಪೂರ್ವೋಕ್ತ, ಪು. ೮೦.

೧೧೭. ವೀಣಾ ಮಹಾಂತೇಶ ಸಿ., ೧೯೯೯, ಅಲ್ಲಿಪುರದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿ ನೆಲೆ, ಇ.ದ.,ಸಂ.೧೪, ಪು. ೧೭–೧೮.

೧೧೮. ವೀಣಾ ಎಂ.ಪಿ., ೧೯೯೮, ಕೊಟ್ನಕಲ್ಲು ಪರಿಸರದ ಪ್ರಾಗೈತಿಹಾಸಿಕ ನೆಲೆಗಳು, ಇ.ದ.,ಸಂ.೧೩, ಪು. ೧೫–೧೬.

೧೧೯. ವೀಣಾ ಮಹಾಂತೇಶ ಸಿ., ೧೯೯೯, ಪೂರ್ವೋಕ್ತ, ಪು. ೧೫–೧೬.

೧೨೦. ವೀಣಾ ಎಂ.ಪಿ., ೧೯೯೮, ಪೂರ್ವೋಕ್ತ, ಪು. ೧೫–೧೬.

೧೨೧. ವೀಣಾ ಮಹಾಂತೇಶ ಸಿ., ೧೯೯೯, ಪೂರ್ವೋಕ್ತ, ಪು. ೧೭–೧೮.

೧೨೨. ಅದೇ, ಪು. ೧೭–೧೮.

೧೨೩. ಇಂ. ಆ. ರಿ., ೧೯೯೩–೯೪, ಪು. ೫೬–೬೧.

೧೨೪. ಫೂಟ್ ಆರ್.ಬಿ., ಪೂರ್ವೋಕ್ತ, ಪು. ೭೭–೭೮; ಇಂ. ಆ. ರಿ, ೧೯೯೦–೧೯೯೩, ಪು. ೫೬–೬೧.

೧೨೫. ಇಂ. ಆ. ರಿ., ಪೂರ್ವೋಕ್ತ, ಪು. ೫೬–೬೧.

೧೨೬. ಫೂಟ್ ಆರ್.ಬಿ., ಪೂರ್ವೋಕ್ತ, ಪು. ೭೭–೭೮; ಇಂ. ಆ. ರಿ, ೧೯೯೩–೧೯೯೪, ಪು. ೧೬.

೧೨೭. ಇಂ. ಆ. ರಿ., ೧೯೬೪–೬೫, ಪು. ೩೩; ಮತ್ತು ಇಂ. ಆ. ರಿ., ೧೯೮೪–೮೫, ಪು. ೨೪–೨೫.

೧೨೮. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಾಲಸಾಗರ ಗ್ರಾಮದ ಕೆರೆಯ ಹಿಂಬದಿಯಲ್ಲಿರುವ ಕಟ್ಟೆ ಮೇಲೆ ನವಶಿಲಾಯುಗದ ಶಿಲಾಕೊಡಲಿಗಳನ್ನು ಶೋಧಿಸಲಾಗಿದೆ. ಅವುಗಳಲ್ಲಿ ಮೊದಲನೆಯ ಕೈಗೊಡಲಿ (ಶಿಲಾಯುಧ)ಯ ಅಳತೆಯು ಈ ರೀತಿ ಇದೆ. ಉದ್ದ ೧೮ ಸೆಂ. ಮೀ, ಅಗಲ ೯ ಸೆಂ.ಮೀ ಇದೆ. ಹಾಗೂ ಬಾಯಿಯ(ಅಂಚಿನ) ಭಾಗವು ೮ ಸೆಂ.ಮೀ ಇದೆ. ಹಿಡಿಕೆಯ ಭಾಗವು ತ್ರುಟಿತಗೊಂಡಿದೆ. ಸುತ್ತಲೂ ಚಕ್ಕೆಗಳನ್ನು ಎಬ್ಬಿಸಿಲಾಗಿದ್ದು, ಹೆಚ್ಚಿನ ಮಟ್ಟದಲ್ಲಿ ಉಜ್ಜಿ ನುಣುಪುಗೊಳಿಸಿರುವುದಿಲ್ಲ. ಆದರೆ ಅಂಚಿನ ಭಾಗವನ್ನು ಮಾತ್ರ ಉಜ್ಜಿರುವುದು ಕಂಡುಬರುತ್ತದೆ. ಇದನ್ನು ನವಶಿಲಾಯುಗ ಕಾಲದ ಮಾನವ ಆಯುಧವನ್ನು ತಯಾರಿಸಿಕೊಳ್ಳುವಾಗ ಒರಟಾದ ಶಿಲೆಯನ್ನು ನಿರ್ದಿಷ್ಟ ಆಕಾರಕ್ಕೆ ತಂದು ಅದನ್ನು ಉಜ್ಜಿನಯಗೊಳಿಸುವ ಪ್ರಯತ್ನ ಮಾಡಿರುವನು. ಮತ್ತೊಂದು ಕೈಗೊಡಲಿಯನ್ನು ಸಹ ಡೈಕ್ ಶಿಲೆಯನ್ನು ಬಳಸಿ ತಯಾರಿಸಲಾಗಿದೆ. ಇದರ ಉದ್ದ ೧೯ ಸೆಂ.ಮೀ ಇದ್ದು, ಅಗಲ ೬ ಸೆಂ.ಮೀ ಅಗಲವಿದೆ. ಬಾಯಿ ಅಂಚಿನ ಭಾಗವು ೯ ಸೆಂ.ಮೀ ಇರುವ ಇದು ಮೊದನೆಯದಕ್ಕಿಂತ ಉತ್ತಮವಾಗಿದೆ. ಇದರ ಸುತ್ತಲೂ ಚಕ್ಕೆಗಳನ್ನು ಎಬ್ಬಿಸಿ, ಉಜ್ಜಿನಯಗೊಳಿಸಿದೆ. ಇದನ್ನು ಆ ಕಾಲದ ಮನುಷ್ಯ ತನ್ನ ದಿನನಿತ್ಯದ ಕೆಲಸಗಳಿಗೆ ಬಳಸಿಕೊಂಡಿರಬಹುದು. ಈ ಶಿಲಾಯುಧಗಳು ಅಂದಿನ ಕಾಲದ ಮಾನವನ ಜೀವನದಲ್ಲಿ ಬಹುಮುಖ್ಯ ಪಾತ್ರವಹಿಸಿವೆ ಎಂದು ಹೇಳಬಹುದು.

೧೨೯. ತಿಪ್ಪೇಸ್ವಾಮಿ ಹೆಚ್., ೨೦೧೫, ಏಳೂರು ಗುಡ್ಡದ ನರಸಿಂಹಗಿರಿಯ ಪ್ರಾಚ್ಯಾವಶೇಷಗಳು, ಇ.ದಸಂ., ೩೦, ಪು. ೯.

೧೩೦. ತಿಪ್ಪೇಸ್ವಾಮಿ ಹೆಚ್, ಪೂರ್ವೋಕ್ತ, ಪು. ೧-೩.

೧೩೧. ಶ್ರೀನಿವಾಸ್ ಎಲ್., ಪೂರ್ವೋಕ್ತ, ಪು. ೫೩

೧೩೨. ಅದೇ, ಪು. ೫೩

೧೩೩. ಜಯಣ್ಣ ಉಲ್ಲಾನಹಳ್ಳಿ, ಪೂರ್ವೋಕ್ತ, ಪು. ೧-೪.

೧೩೪. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು. ೬೪.

೧೩೫. ಅಲ್ಚಿನ್ ಎಫ್.ಆರ್., ೧೯೬೩, ಪೂರ್ವೋಕ್ತ, ಪು. ೬೦.

೧೩೬. ಸುಂದರ ಅ., ೧೯೭೫, ಪೂರ್ವೋಕ್ತ, ಪು. ೭೨.

೧೩೭. ಶಿವತಾರಕ್., ಪೂರ್ವೋಕ್ತ, ಪು. ೭೩.

೧೩೮. ಇಂ.ಆ.ರಿ., ೧೯೭೭-೭೮, ಪು. ೨೫.

೧೩೯. ಅದೇ, ೧೯೭೦-೭೧, ಪು. ೬೮.

೧೪೦. ಅದೇ, ೧೯೬೨-೬೩, ಪು. ೧೬.

೧೪೧. ಅದೇ, ೧೯೭೨-೭೩, ಪು. ೬೦.

೧೪೨. ಸುಂದರ ಅ., ೧೯೯೪, ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಪು. ೬೭-೬೯.

೧೪೩. ಏನ್ಸಿಯಂಟ್ ಇಂಡಿಯಾ, ಸಂ.೪, ೧೯೪೭-೪೮, ಪು. ೩೦೮.

೧೪೪. ಇಂ.ಆ.ರಿ., ೧೯೭೭-೭೮, ಪು. ೨೫.

೧೪೫. ನಾಗರಾಜ ರಾವ್ ಎಂ.ಎಸ್., ಮತ್ತು ಮಲ್ಹೋತ್ರ ಕೆ.ಸಿ., ಪೂರ್ವೋಕ್ತ, ಪು. ೫.

೧೪೬. ಸುಂದರ ಅ.,(ಸಂ,) ಪೂರ್ವೋಕ್ತ, ಪು. ೨೧೮.

೧೪೭. ಪದ್ದಯ್ಯ ಕೆ., ೨೦೧೯, ನಿಯೋಲಿಥಿಕ್ ಆ್ಯಶ್ ಮೌಂಡ್ಸ್ ಆಫ್ ದ ಡೆಕ್ಕನ್, ಪು. ೧-೧೫.

೧೪೮. ಅದೇ, ಪು. ೧೬-೩೮.

೧೪೯. ಸುಂದರ ಅ., ಪೂರ್ವೋಕ್ತ, ಪು. ೨೪೦.

೧೫೦. ಪದ್ದಯ್ಯ ಕೆ., ಪೂರ್ವೋಕ್ತ, ಪು. ೧೩೭-೧೩೯.

# ಅಧ್ಯಾಯ : ನಾಲ್ಕು
# ಬೃಹತ್ ಶಿಲಾಯುಗ ಸಂಸ್ಕೃತಿ

೪.೧ ಐತಿಹಾಸಿಕ ಸಂಗತಿಗಳು
೪.೨ ಐತಿಹ್ಯ ಮತ್ತು ನಂಬಿಕೆ ಆಚರಣೆಗಳು
೪.೩ ಸಮಾಧಿ ಪ್ರಕಾರಗಳು

# ಅಧ್ಯಾಯ : ನಾಲ್ಕು
# ಬೃಹತ್ ಶಿಲಾಯುಗ ಸಂಸ್ಕೃತಿ

ಪ್ರಾಗಿತಿಹಾಸ ಅಧ್ಯಯನದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿ ಅಧ್ಯಯನವು ಬಹಳ ಆಸಕ್ತಿ ಮತ್ತು ಕುತೂಹಲ ಕೆರಳಿಸಿದೆ. ಪ್ರಪಂಚದ ವಿವಿಧ ಭಾಗಗಳಲ್ಲಿ ವಿಭಿನ್ನ ಸಮುದಾಯಗಳ ನಡುವೆ ದೊಡ್ಡ ಪ್ರಮಾಣದಲ್ಲಿ ಮೆಗಾಲಿತ್‌ಗಳನ್ನು ನಿರ್ಮಿಸುವ ಆಚರಣೆಯು ನವಶಿಲಾಯುಗದ ಕಾಲದಿಂದ ಪ್ರಾರಂಭವಾಯಿತು. ಇದು ಕಂಚಿನಯುಗ ಮತ್ತು ಕಬ್ಬಿಣದಯುಗ ಅಥವಾ ಬೃಹತ್ ಶಿಲಾಯಗದವರೆಗೂ ಮುಂದುವರೆಯಿತು. ಪಶ್ಚಿಮ ಯುರೋಪ್, ಮೆಡಿಟೇರಿಯನ್ ಪ್ರದೇಶದ ಹಲವಾರು ಭಾಗಗಳಲ್ಲಿ ಬೃಹತ್ ಶಿಲಾಸಮಾಧಿಗಳು ಕಂಡುಬಂದಿವೆ. ಈ ಮೆಗಾಲಿಥ್‌ಗಳು ಒಂದೇ ತರದ ರಚನೆಗಳಾಗಿಲ್ಲ. ಅವುಗಳು ಪ್ರಾದೇಶಿಕವಾಗಿ ವೈವಿಧ್ಯತೆಯಿಂದ ಕೂಡಿವೆ. ಮೆಗಾಲಿತ್‌ಗಳು ಮಾನವನ ಅಂತ್ಯಕ್ರಿಯೆಗೆ ಸಂಬಂಧಿಸಿದ್ದು, ಐರೋಪ್ಯ ರಾಷ್ಟ್ರಗಳಲ್ಲಿ ಇವುಗಳನ್ನು ಡ್ರಿಡ್ಯೂಜಮ್ ಕುರುಹುಗಳೆಂದು ನಂಬಲಾಗಿದೆ. ಈಜಿಪ್ಟ್‌ನ ನಾಗರೀಕತೆಯಲ್ಲಿ ಕಂಡುಬಂದಿರುವ ಮುಖ್ಯ ಕುರುಹುಗಳಲ್ಲಿ ಕಲ್ಲಿನಕೋಣೆಯಲ್ಲಿ ಶವವನ್ನು ಇಟ್ಟು ಸಮಾಧಿ ಮಾಡುತ್ತಿದ್ದ ಆಚರಣೆಗಳು ತುಂಬಾ ಮಹತ್ವ ಪಡೆದವು. ಹಾಗೂ ಅವುಗಳನ್ನು 'ಮಸ್ತಾಭ'ಎಂದು ಕರೆದಿದ್ದು, ನಂತರ ಕಾಲದಲ್ಲಿ ಈ ತರಹದ ಚಟುವಟಿಕೆಗಳು ಬೃಹತ್ ಗಾತ್ರದ ಪಿರಾಮಿಡ್ಡುಗಳನ್ನು ಕಟ್ಟಲು ಕಾರಣಭೂತ ಅಂಶಗಳಾದವು ಎಂಬುದನ್ನು ದಾಖಲಿಸಲಾಗಿದೆ. ೧೯ನೇ ಶತಮಾನದ ಭಾರತದಲ್ಲಿ ನಡೆಯುತ್ತಿದ್ದ ಶಿಲಾಯುಗ ಸಂಸ್ಕೃತಿಯ ಅಧ್ಯಯನಗಳು ಪ್ರಾರಂಭದಲ್ಲಿ ಕೇವಲ ಕಲಾವಸ್ತು ಸಂಗ್ರಹಗಳಿಗೆ ಹೆಚ್ಚಿನ ಮಹತ್ವ ನೀಡುತ್ತಿದ್ದ ಪ್ರಾಥಮಿಕ ಅಧ್ಯಯನಗಳಾಗಿದ್ದವು ಆದರೆ ಇತ್ತೀಚಿನ ಅಧ್ಯಯನಗಳು ಬದಲಾವಣೆಗೊಂಡಿವೆ. ಪ್ರಾಚೀನ ಮಾನವ ಸಂಸ್ಕೃತಿಯ ವಿಕಾಸದ ಹಂತಗಳನ್ನು ವಿವಿಧ ದೃಷ್ಟಿಕೋನದಲ್ಲಿ ಅರಿಯುವ ಪ್ರಯತ್ನಗಳು ನಡೆಯುತ್ತಿವೆ. ಮಾನವ ಪ್ರಾಚೀನ ಪರಿಸರದಲ್ಲಿ ತನ್ನನು ತಾನು ಹೇಗೆ ಅನುಸಂಧಾನ ಮಾಡಿಕೊಂಡಿದ್ದ ಎಂಬುದನ್ನು ವಿವಿಧ ಅಧ್ಯಯನಗಳ ಮೂಲಕ ಅರಿತುಕೊಂಡು ಅಂಥ ಪರಿಣಾಮಗಳು ಸಾಂಸ್ಕೃತಿಕ ಬೆಳವಣಿಗೆ ಹೇಗೆಲ್ಲಾ ಪ್ರಭಾವಿಸಿದವು ಎಂಬುದನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

**೪.೧. ಐತಿಹಾಸಿಕ ಸಂಗತಿಗಳು**

ಭಾರತದ ಮಟ್ಟಿಗೆ ಹೇಳುವುದಾದರೆ ಬೃಹತ್ ಶಿಲಾಯುಗದ ಅಧ್ಯಯನವು ಮೊಟ್ಟಮೊದಲು ಕರ್ನಲ್ ಮೆಕೆಂಝಿ ಅವರಿಂದಲೇ ಪ್ರಾರಂಭವಾಯಿತೆಂದು ಅಭಿಪ್ರಾಯಿಸಲಾಗುತ್ತದೆ. ಆಕಸ್ಮಿಕ

ಘಟನೆಗಳೆಂಬಂತೆ ೧೮೧೭ರಲ್ಲಿ ಕೊಚ್ಚಿನ್, ಚಿತ್ತೂರು ಹಾಗೂ ಹೈದರಾಬಾದ್ ಪ್ರದೇಶದಲ್ಲಿನ ಕೆಲವು ನೆಲೆಗಳನ್ನು ಶೋಧಿಸಿ ಪ್ರಕಟಿಸಲು ಪ್ರಯತ್ನಿಸಿದರು ಆದರೆ ಅವರು ಅಂದುಕೊಂಡಂತೆ ಆಗಲಿಲ್ಲ ಆ ನಂತರ ಅಂದರೆ ಅಧಿಕೃತವಾಗಿ ೧೮೨೩ರಲ್ಲಿ ಬ್ಯಾಬಿಂಗ್ಟನ್ ಅವರು ಕೇರಳದ ಕರಾವಳಿ ಪ್ರದೇಶದಲ್ಲಿ[೧] ಈ ಸಂಸ್ಕೃತಿಯ ಶಿಲಾಸಮಾಧಿಗಳನ್ನು ಸಂಶೋಧಿಸುವುದರ ಮೂಲಕ ಬೃಹತ್ ಶಿಲಾಸಂಸ್ಕೃತಿಯ ಅಧ್ಯಯನಗಳ ಪ್ರಾರಂಭಕ್ಕೆ ಮುನ್ನುಡಿ ಬರೆದರು. ನಂತರ ೧೮೭೧ರಲ್ಲಿ ಕಾರ್ಲೈಲ್‌ರವರು ಉತ್ತರ ಪ್ರದೇಶದ ಫತೇಪುರಸಿಕ್ರಿಯ ಪಶ್ಚಿಮ ದಿಕ್ಕಿನಲ್ಲಿರುವ 'ಖೀರಾ ಮತ್ತು ಜಾಗ್ನೇರ್' ನೆಲೆಗಳಲ್ಲಿ ಕಲ್ಲುಗುಪ್ಪೆಗಳನ್ನು ಶೋಧಿಸಿದರು.[೨] ಇದಾದ ನಂತರ ೧೮೯೪ರಲ್ಲಿ ಕಾರ್‌ಬರ್ಗ್ ಅವರು ಮಿರ್ಜಾಪುರ ಸಮೀಪದಲ್ಲಿ ಈ ಸಂಸ್ಕೃತಿಯ ಮತ್ತಷ್ಟು ನೆಲೆಗಳನ್ನು ಪತ್ತೆಹಚ್ಚಿದರು. ಇವರಿಬ್ಬರ ಸಂಶೋಧನೆಗಳಿಂದ ಉತ್ತೇಜನಗೊಂಡ ಹಲವಾರು ವಿದ್ವಾಂಸರು ಮುಂಬರುವ ದಿನಗಳಲ್ಲಿ ಉತ್ತರದ ಗಂಗಾನದಿ ಕಣಿವೆಯಿಂದ ಹಿಡಿದು ದಕ್ಷಿಣದ ವಿಂಧ್ಯಪರ್ವತ ಶ್ರೇಣಿಯ ತಪ್ಪಲಿನವರೆಗೂ ವಿವಿಧ ಮಾದರಿಯ ಕಲ್ಗೋರಿಗಳನ್ನು ಪತ್ತೆಹಚ್ಚಿ ಪ್ರಕಟಿಸುವ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಾರೆ ಎಂಬುದನ್ನು ಮನಗಾಣಬಹುದು. ಇವುಗಳಲ್ಲಿ ವಾರಣಾಸಿಯ ಬಾಂದ್ ಪ್ರದೇಶದಲ್ಲಿನ ಕಲ್ಲುಗುಪ್ಪೆಗಳು, ಅಲಹಾಬಾದ್ ಪ್ರದೇಶದ ಮಿರ್ಜಾಪುರದಲ್ಲಿ ಕುಣಿ ಸಮಾಧಿ, ಅಸ್ತಿ ಪಾತ್ರೆ ದಫನ್(Urnburial) ಸಮಾಧಿಗಳು ಬೆಳಕಿಗೆ ಬಂದವು.[೩] ಈ ಕುಣಿ ಸಮಾಧಿಗಳು ದಕ್ಷಿಣ ಭಾರತದಲ್ಲಿ ಕಂಡುಬರುವ ಕುಣಿ ಸಮಾಧಿಗಳಿಗಿಂತ ಅತಿ ಚಿಕ್ಕವಾಗಿವೆ ಎಂಬುದನ್ನು ಗಮನಿಸಬಹುದು.

ಈಶಾನ್ಯ ಭಾರತದಲ್ಲಿ ನಿಲುಸುಗಲ್ಲು ಮತ್ತು ಕಲ್ಮನೆ(Dolmen)ಗಳೇ ಪ್ರಮುಖವಾಗಿವೆ. ೧೯೨೩ರಲ್ಲಿ ಧೋಮಾಪುರ ಮತ್ತು ಅಸ್ಸಾಂ ಪ್ರದೇಶದ ಜಮಗುರಿ ನೆಲೆಗಳಲ್ಲಿ ದೊರೆತ ಕಲ್ಗೋರಿಗಳು ಈ ಭಾಗದ ಮೊದಲ ಅನ್ವೇಷಣೆಗಳಾಗಿವೆ. ಮಣಿಪುರದ ಚುರಚಾಂದ್‌ಪುರ ಮತ್ತು ಉಕ್ರುಲ್[೪] ಜಿಲ್ಲೆಗಳಲ್ಲಿ ಇತ್ತೀಚೆಗೆ ನಡೆದ ಸ್ಥಳ ಪರಿಶೋಧನೆಗಳಲ್ಲಿ ಹಲವು ನೆಲೆಗಳು ಬೆಳಕಿಗೆ ಬಂದಿರುವುದನ್ನು ದಾಖಲಿಸಲಾಗಿದೆ.

ಭಾರತದ ಪೂರ್ವಭಾಗದ ಮೊದಲ ಶೋಧನೆಗಳು ಬಿಹಾರಿನ ಛೋಟಾನಾಗಪೂರ್ ಮತ್ತು ರಾಂಚಿ ಪ್ರದೇಶದ ಕಲ್ಗೋರಿ ಸಂಸ್ಕೃತಿಗಳ ಅಧ್ಯಯನಕ್ಕೆ ಪೂರಕವಾಗಿವೆ. ೧೯೪೩ರಲ್ಲಿ ಹೈಮನ್ ಡೋರ್ಫ್‌ರವರು ಒರಿಸ್ಸಾದ ಸುಂದರ್‌ಘರ್ ಜಿಲ್ಲೆಯ ಬ್ರಹ್ಮಣೀನದಿ ಕಣಿವೆಯ ಸ್ಥಳ ಪರಿಶೋಧನೆಯಲ್ಲಿ ಸಾಕಷ್ಟು ನೆಲೆಗಳನ್ನು ಬೆಳಕಿಗೆ ತಂದರು.[೫] ೧೮೭೩–೭೪ರಲ್ಲಿ ಅಲೆಕ್ಸಾಂಡರ್ ಕನ್ನಿಂಗ್ ಹ್ಯಾಮ್‌ರವರ ಸಹಾಯಕರಾಗಿದ್ದ ಬಂಗ್ಲರ್ ಅವರು ಮಧ್ಯ ಭಾರತ ಪ್ರಾಂತ್ಯಗಳ ಶೋರಾರ್[೬] ಗ್ರಾಮದ ಬಳಿಯ ಊರ್ಧ್ವಮುಖ(ಮೇಲ್ಮುಕ)ವಾಗಿ ನಿಲ್ಲಿಸಿದ್ದ ನಿಲಸುಗಲ್ಲು ಹಾಗೂ ಚದುರಿ ಬಿದ್ದಿದ್ದ ಕಲ್ಲುಗಳ ಭಗ್ನಾವಶೇಷಗಳನ್ನು ವರದಿ ಮಾಡಿದರು ಆದರೂ ಇಂಥ ವಿವರಗಳು ಸಮೇತ ಅದು ಹೆಚ್ಚು ಗಮನ ಸೆಳೆಯಲಿಲ್ಲ. ಆದರೆ ೧೯೩೩–೩೪ರಲ್ಲಿ ಇದೇ ನೆಲೆಯನ್ನು ಪುನರ್ ಪರಿಶೀಲನೆ ನಡೆಸಿದಾಗ ಅವು ಶಿಲಾಯುಗದ ಸ್ಮಶಾನ ನೆಲೆಗಳೆಂದು ಗುರುತಿಸಲಾಯಿತು.[೭] ಮಧ್ಯಪ್ರದೇಶದ ದಕ್ಷಿಣ ಹಾಗೂ

ಪೂರ್ವಭಾಗಗಳಲ್ಲಿ ರಾಯಪುರ ಮತ್ತು ಬಸ್ತರ್ ಜಿಲ್ಲೆಗಳಲ್ಲಿ ಹಲವು ಬೃಹತ್ ಶಿಲಾಯುಗದ ನೆಲೆಗಳು ಕಂಡುಬಂದಿವೆ.

ದಖನ್ ಪ್ರಸ್ಥಭೂಮಿ ಪ್ರದೇಶಗಳಲ್ಲಿ ಈ ಸಂಸ್ಕೃತಿಯ ನೆಲೆಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದಿವೆ. ನೈಕುಂಡ, ತಾಕಲ್‌ಘಾಟ್ ನೆಲೆಗಳಲ್ಲಿ ವಸತಿಗಳು ಮತ್ತು ಕಲ್ಗೋರಿಗಳು ಅಕ್ಕಪಕ್ಕದಲ್ಲಿವೆ. ವಾರ್ಧಾ ಜಿಲ್ಲೆಯ ಪೌನಾರ್, ಖೈವಾಡ, ಅಮರಾವತಿ ಜಿಲ್ಲೆಯ ಕೌಂಡಿನ್ಯಪುರ, ಮಹೋರ್‌ಜೊಹಂ, ನಾಗಾಪುರ ಜಿಲ್ಲೆಯ ಜುನಾಪಾನಿ, ರಾಯಪುರ, ಧೂಲಿ ಜಿಲ್ಲೆಯ ರಂಜಾಳ ಮುಂತಾದ ನೆಲೆಗಳು ಈ ಪ್ರದೇಶದ ಪ್ರಮುಖ ಬೃಹತ್ ಶಿಲಾಸಮಾಧಿ ನೆಲೆಗಳಾಗಿವೆ ಎಂಬುದನ್ನು ಗಮನಿಸಬಹುದು. ತಮಿಳುನಾಡಿನಲ್ಲಿ ದೇಶಿಕನ್, ಕೆ.ವಿ.ರಾಮನ್, ಬಿ.ಕೆ.ಗುರುರಾಜ್‌ರಾವ್, ಬಿ.ನರಸಿಂಹಯ್ಯ, ಆಂಧ್ರಪ್ರದೇಶದಲ್ಲಿ ಬಿ.ಸುಬ್ಬರಾವ್, ಸುಬ್ರಮಣ್ಯಂ, ಹೆಚ್.ಸರ್ಕಾರ್, ಸಂಪತ್‌ಪುಲ್ಲಾರೆಡ್ಡಿ, ಕೇರಳದಲ್ಲಿ ಜಾನ್ ಅವರು ಈ ಸಂಸ್ಕೃತಿಯ ಕುರುಹುಗಳ ಕುರಿತು ವಿಸ್ತೃತ ಅಧ್ಯಯನ ಮಾಡಿದ್ದಾರೆ. ೧೮೭೯ರಲ್ಲಿ ಜೆ.ಹೆಚ್.ರಿವೆಟ್ ಕಾರ್ನೆಕ್‌ರವರು ನಾಗಪುರ ಸಮೀಪದಲ್ಲಿರುವ ಜುನಾಪಾನಿ[೮] ನೆಲೆಯಲ್ಲಿ ಉತ್ಖನನ ಕೈಗೊಂಡು ಹಲವು ನಿವೇಶನಗಳನ್ನು ಬೆಳಕಿಗೆ ತಂದರು. ಜುನಾಪಾನಿ ನೆಲೆಯಲ್ಲಿ ೧೫೦ ಶಿಲಾವೃತ್ತಗಳು[೯] ದೊರಕಿರುವುದು ವಿಶೇಷವಾಗಿದೆ.

ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ದಖನ್‌ನಲ್ಲಿ ತಾಮ್ರ ಶಿಲಾಯುಗದ ಅವಶೇಷಗಳ ಸಮಕಾಲೀನ ಸ್ತರಗಳಲ್ಲಿ ದೊರಕಿರುವುದು ಗಮನಾರ್ಹ ವಿಷಯವಾಗಿ ದಾಖಲಾಗಿದೆ. ಬಿ.ಕೆ.ಥಾಪರ್ ಅವರು ನಾಗಪುರದ ಪಶ್ಚಿಮಕ್ಕೆ ೧೫ ಕಿ.ಮೀ ದೂರದಲ್ಲಿರುವ ಮೆಹೋರ್‌ಜಾರ್(Mahurjhar) ನೆಲೆಯಲ್ಲಿ ಉತ್ಖನನ ನಡೆಸಿ ಕಬ್ಬಿಣದ ಹಿಡಿಕೆಯುಳ್ಳ ಖಡ್ಗವನ್ನು ಶೋಧಿಸಿದರು.[೧೦] ಇದರಿಂದ ತಿಳಿದುಬಂದ ಮುಖ್ಯ ಸಂಗತಿಯೆಂದರೆ, ಶಿಲಾತಾಮ್ರಯುಗದ ಮುಂದುವರಿಕೆಯ ಹಂತವನ್ನು ಅವರು ಖಚಿತಪಡಿಸಿದರು.

೧೯೬೦-೭೧ರಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ಕಾಶ್ಮೀರದ ಶ್ರೀನಗರ ಜಿಲ್ಲೆಯ ಬೂರ್ಜಹೋಮ್ ನೆಲೆಯ ನಿಲುಸುಗಲ್ಲೊಂದರ ಬಳಿ ಉತ್ಖನನ ನಡೆಸಿ, ಕೆಂಪು ಬಣ್ಣದ ಮಡಿಕೆಗಳಿಗೆ ಹೊಳಪು ನೀಡಿದ ಮಡಿಕೆಗಳು, ಉಜ್ಜಿಹೊಳಪುಗೊಳಿಸಿದ ನವಶಿಲಾಯುಗದ ಉಪಕರಣಗಳು ಮತ್ತು ಮೂಳೆಯ ಆಯುಧಗಳನ್ನು ಶೋಧಿಸಿದರು. ಮುಖ್ಯವಾಗಿ ೨ ಮತ್ತು ೫ನೆಯ ಸ್ತರದಲ್ಲಿ ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ಕೆಲವು ಅವಶೇಷಗಳನ್ನು ಪತ್ತೆಹಚ್ಚಿದರು.[೧೧] ಇಂಥ ಕುರುಹುಗಳು ಶಿಲಾಯುಗಗಳ ಮುಂದುವರಿಕೆಯ ಅವಿನಾಭಾವ ಸಂಬಂಧಗಳನ್ನು ಪ್ರಚುರಪಡಿಸುವಲ್ಲಿ ಸಹಾಯಕವಾದವು ಎಂಬುದು ತುಂಬಾ ಮುಖ್ಯ ಸಂಗತಿಗಳಾಗುತ್ತವೆ.

ರಾಜಸ್ಥಾನ ಮತ್ತು ಗುಜರಾತ್ ರಾಜ್ಯಗಳಲ್ಲಿ ಸಿಂಧೂ ನದಿಯ ಬಯಲಿನ ಸಂಸ್ಕೃತಿ ಹಾಗೂ ಅದರ ಸಮಕಾಲೀನ ಸಂಸ್ಕೃತಿ ನೆಲೆಗಳ ಬಗೆಗೆ ಉತ್ಖನನಗಳು ನಡೆದಿವೆ. ಸುರಕೋಟಾದ ವಸತಿ

ನಿವೇಶನದ ವಾಯುವ್ಯ ದಿಕ್ಕಿನಲ್ಲಿರುವ ಸ್ಮಶಾನ ಭೂಮಿಯಲ್ಲಿ ನಡೆಸಿದ ಉತ್ಖನನದಲ್ಲಿ ಬೃಹತ್ ಗಾತ್ರದ ಮುಚ್ಚಳಕಲ್ಲುಗಳ ಅಂಡಾಕಾರದ ಕುಣಿ ಬೆಳಕಿಗೆ ಬಂದಿದ್ದು, ಇದರೊಳಗೆ ಮಣ್ಣಿನ ಪಾತ್ರೆಗಳಿರುವುದು ವಿಶೇಷವೆನಿಸಿದೆ. ರಾಯಪುರದಲ್ಲಿ ಶಿಲಾವೃತ್ತದಿಂದ ಆವೃತವಾದ ಶವಕುಣಿಗಳು ಹಾಗೂ ಬಾಗಿಮೊಹರಿನ ಉತ್ಖನನದಲ್ಲಿ ಶಿಲಾಪೆಟ್ಟಿಗೆಯುಳ್ಳ ಕುಣಿ ಶಿಲಾವೃತ್ತಗಳಲ್ಲೂ ದೊರೆತಿವೆ. ನಂತರ ವಿದರ್ಭ ಪ್ರದೇಶದ ಕೆಲವೊಂದು ನೆಲೆಗಳ ಉತ್ಖನನದಿಂದ ಸಾಮಾನ್ಯವಾಗಿ ಈ ಸಂಸ್ಕೃತಿಯ ಜನರು ಚಿತ್ರಾಲಂಕೃತವಾಗಿರುವ ಕಪ್ಪು-ಕೆಂಪು ಇಲ್ಲವೇ ಅಭ್ರಕಯುಕ್ತ(Micacous) ಕೆಂಪುಬಣ್ಣದ ಮೃತ್ಪಾತ್ರೆಗಳನ್ನು ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ. ಮಹಾರಾಷ್ಟ್ರದ ತೇಕಲ್‌ಘಾಟ್ ನೆಲೆಯು ಮುಖ್ಯವಾದ ಬೃಹತ್‌ಶಿಲಾಯುಗದ ನೆಲೆಯಾಗಿದ್ದು, ಇಲ್ಲಿ ದೊರೆತ ಅವಶೇಷಗಳು ಮೆಹೋರ್‌ಜಾರ್ ಮತ್ತು ಆದಿಚನ್ನಲೂರುನಲ್ಲಿಯೂ ಸಹ ಕಂಡುಬಂದಿವೆ. ಅಲೆಕ್ಸಾಂಡರ್ ರೀರ್ ಅವರು ೧೯೦೩-೦೪ರಲ್ಲಿ ತಮಿಳುನಾಡಿನ ಆದಿಚನ್ನಲೂರ್ ಮತ್ತು ೧೯೦೭-೮ರಲ್ಲಿ ಚಂಗಲ್ಪೇಟ್ ಜಿಲ್ಲೆಯ ಪೆರಂಬಿಯಾರ್‌ನ ಕಲ್ಗೋರಿ(ಸಮಾಧಿ) ನೆಲೆಗಳಲ್ಲಿ ನಡೆಸಿರುವ ಉತ್ಖನನಗಳಲ್ಲಿ ದೊರೆತ ಸಾಮಾಗ್ರಿಗಳ ವರದಿಯನ್ನು ೧೯೧೫ರಲ್ಲಿ ವಿವರವಾಗಿ ಪ್ರಕಟಿಸಿದರು.[೧೨] ೧೯೪೮ರಲ್ಲಿ ಬಿ.ಕೆ. ಥಾಪರ್ ಅವರು ಪೋರ್ಕಳಂ[೧೩] ನೆಲೆಯಲ್ಲಿ ಉತ್ಖನನ ಕೈಗೊಂಡು ಈ ಸಂಸ್ಕೃತಿಗೆ ಸಂಬಂಧಿಸಿದ ಶಿಲಾಸಮಾಧಿಗಳ ರಚನೆ ಮತ್ತು ಅವುಗಳ ವಿನ್ಯಾಸ ಕುರಿತು ಚರ್ಚಿಸಿದರು. ಅಲ್ಲದೇ ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸಿ ಪ್ರಾದೇಶಿಕವಾಗಿ ಭಿನ್ನವಾಗಿರುವುದನ್ನು ಗುರುತಿಸಿ ಹೆಚ್ಚಿನ ಅಧ್ಯಯನಕ್ಕೆ ಕಾರಣರಾದರು. ಹೀಗೆ ದೇಶಾದ್ಯಂತ ಹಲವು ನೆಲೆಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಇತ್ತೀಚಿನವರೆಗೂ ಬೆಳಕಿಗೆ ಬಂದಿರುವುದನ್ನು ಪ್ರಕಟಗೊಂಡಿರುವ ಸಂಶೋಧನಾ ವರದಿಗಳು ಹಾಗೂ ಸಂಬಂಧಿಸಿದ ಪ್ರಕಟಗೊಂಡ ಗ್ರಂಥಗಳ ಮೂಲಕ ವಿವರಗಳನ್ನು ತಿಳಿಯಬಹುದಾಗಿದೆ.

ಕರ್ನಾಟಕದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಅಧ್ಯಯನವನ್ನು ಪ್ರಥಮ ಬಾರಿಗೆ ಮೆಡೋಸ್ ಟೇಲರ್ ಮತ್ತು ಕರ್ನಲ್ ಮೆಕೆಂಝಿ ಮೊದಲಾದ ಆಸಕ್ತಿಯುಳ್ಳ ಬ್ರಿಟಿಷ್ ಅಧಿಕಾರಿಗಳಿಂದ ಪ್ರಾರಂಭವಾಯಿತು ಎಂಬುದನ್ನು ತಿಳಿಯಬಹುದು. ೧೮೫೧ ರಿಂದ ೧೮೬೨ ರವರೆಗೆ ಗುಲ್ಬರ್ಗಾ ಜಿಲ್ಲೆಯಲ್ಲಿದ್ದ ಶೋರಾಪುರ ತಾಲ್ಲೂಕು, ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಗಳಲ್ಲಿರುವ ಹಲವಾರು ನೆಲೆಗಳ ಮೂಲಕ ಈ ಸಂಸ್ಕೃತಿಗೆ ಸಂಬಂಧಿಸಿದ ಕುರುಹುಗಳನ್ನು ಪತ್ತೆಹಚ್ಚುವುದರ ಮೂಲಕ ಪ್ರಾರಂಭಿಸಿದರೆಂದು ಅಭಿಪ್ರಾಯಿಸಬಹುದು.

ದಕ್ಷಿಣ ಭಾರತದ ಬೃಹತ್ ಶಿಲಾಯುಗದ ಸಮಾಧಿಗಳ ಶೋಧನೆ ನಡೆಸಿದವರಲ್ಲಿ ಕರ್ನಲ್ ಮೆಡೋಸ್ ಟೇಲರ್ ಪ್ರಪ್ರಥಮನಾಗಿದ್ದಾನೆ. ಟೇಲರ್ ಮೂಲತಃ ಬ್ರಿಟಿಷ್ ಅಧಿಕಾರಿಯಾಗಿದ್ದರೂ ತನ್ನಲ್ಲಿರುವ ಹವ್ಯಾಸ ಮತ್ತು ಆಸಕ್ತಿಯಿಂದಾಗಿ ಭೀಮಾ ಮತ್ತು ಕೃಷ್ಣ ನದಿಗಳ ನೆಲೆಗಳ ಸಂಗಮದ ಸಮೀಪ ಕರ್ನಾಟಕದ ಗುಲ್ಬರ್ಗಾ ಜಿಲ್ಲೆಯ ಶೋರಪುರ ಪ್ರದೇಶದಲ್ಲಿ ಹಲವು ಬೃಹತ್ ಶಿಲಾಯುಗದ ನೆಲೆಗಳನ್ನು ಶೋಧಿಸಿದನು. ಇಂತಹ ಹಲವಾರು ಶಿಲಾಸಮಾಧಿಗಳನ್ನು ಕ್ರಮಬದ್ಧವಾದ ಉತ್ಖನನಕ್ಕೆ

ಒಳಪಡಿಸಿದನು. ಶಿಲಾಸಮಾಧಿಗಳ ರಚನೆ, ಅವುಗಳಲ್ಲಿ ದೊರೆತ ವಸ್ತುಗಳು ಮುಂತಾದವುಗಳನ್ನೂ ನಕ್ಷೆ ಸಹಿತ ದಾಖಲೆ ಮಾಡಿದನು. ಉತ್ಖನನ ವರದಿಗಳಲ್ಲಿ ಸ್ತರವಿವರಣಾತ್ಮಕ ಚಿತ್ರಗಳನ್ನೂ, ನಕ್ಷೆಗಳನ್ನೂ ಸೇರಿಸಿ ವಸ್ತು–ಅವಶೇಷಗಳು ದೊರೆತ ಸಂದರ್ಭವನ್ನು ಸ್ಪಷ್ಟವಾಗಿ ವಿವರಿಸಿದ್ದಾನೆ.[೧೪]

ಟೇಲರ್‌ನು ಉತ್ಖನನದಲ್ಲಿ ಅನುಸರಿಸಿದ ವಿಧಾನಗಳು ಸ್ಪಷ್ಟ ಉದ್ದೇಶ ಮತ್ತು ಪರಿಕಲ್ಪನೆಯಿಂದ ಕೂಡಿದ್ದವು ಎಂಬುದಕ್ಕೆ ಸಾಕ್ಷಿಯಾಗಿವೆ. ಆದರೆ ಆತನು ಉತ್ಖನನದಲ್ಲಿ ಅನುಸರಿಸಿದ ವಿಧಾನಗಳನ್ನು ಬೇರೆ ಉತ್ಖನನಕಾರರು ಬಹುಬೇಗ ಅರಿತುಕೊಳ್ಳಲಿಲ್ಲ ಎಂಬುದೇ ದುರದೃಷ್ಟಕರ. ಇದರಿಂದ ಭಾರತದಲ್ಲಿ ವೈಜ್ಞಾನಿಕ ಸ್ತರವಿಂಗಡಣಾತ್ಮಕ ಉತ್ಖನನ ಪದ್ಧತಿಯು ಬಳಕೆಗೆ ಬರಲು ಇನ್ನೂರು ವರ್ಷಗಳ ಕಾಲ ಕಾಯಬೇಕಾಯಿತು. ಬೃಹತ್ ಶಿಲಾಯುಗದ ಸಮಾಧಿಗಳನ್ನು ಮೊಟ್ಟಮೊದಲು ಉತ್ಖನನ ಮಾಡಿದ ಟೇಲರ್ ಅವರ ಸಂಶೋಧನೆಗಳು ಮುಂದೆ ಈ ಸಂಸ್ಕೃತಿಯ ಬಗ್ಗೆ ಹೆಚ್ಚಿನ ಅಧ್ಯಯನ ಕೈಗೊಳ್ಳುವಿಕೆಗೆ ನೆರವಾದವು.

೧೮೭೯ರಲ್ಲಿ ಕ್ಯಾಪ್ಟನ್ ಕೋಲೆಯವರು ರಾಮಸ್ವಾಮಿ ಕಣಿವೆಯಲ್ಲಿ ನಾಲ್ಕು ಶಿಲಾಸಮಾಧಿಗಳನ್ನು ಉತ್ಖನನ ಮಾಡಿದರು. ಒಂದು ಶಿಲಾಸಮಾಧಿಯಲ್ಲಿ ದೊರೆತ ಮಡಕೆಯಲ್ಲಿ ಮಾನವನ ದವಡೆ ಹಲ್ಲು, ಆಹಾರ ಧಾನ್ಯಗಳಾದ ಭತ್ತದ ಹೊಟ್ಟು(Husk), ರಾಗಿ ಹಾಗೂ ಕಬ್ಬಿಣದ ವಸ್ತುಗಳನ್ನು ಶೋಧಿಸಿದರು.  ಭಾರತ ಸರ್ಕಾರದ ಅಥವಾ ರಾಜ್ಯ ಪುರಾತತ್ವ ಇಲಾಖೆಯಿಂದ ಮತ್ತು ಸಂಶೋಧನಾ ದೃಷ್ಟಿಯಿಂದ ಎಂ.ಎಚ್ ಕೃಷ್ಣ ಅವರು ೧೯೨೯ರಲ್ಲಿ ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯಲ್ಲಿ[೧೫] ಕೈಗೊಂಡ ಕಾರ್ಯಗಳು ತುಂಬಾ ಮಹತ್ವವೆನಿಸುತ್ತವೆ. ಅವರು ಚಂದ್ರವಳ್ಳಿ ನೆಲೆಯಲ್ಲಿ ವ್ಯವಸ್ಥಿತ ಉತ್ಖನನ ನಡೆಸಿ ಬೃಹತ್ ಶಿಲಾಯುಗ ಮತ್ತು ಆದಿ ಚಾರಿತ್ರಿಕ ಕುರುಹುಗಳನ್ನು ಬೆಳಕಿಗೆ ತಂದರು. ನಂತರ ೧೯೪೦ರಲ್ಲಿ ಬ್ರಹ್ಮಗಿರಿಯಲ್ಲಿ[೧೬] ನವಶಿಲಾಯುಗ, ತಾಮ್ರ ಶಿಲಾಯುಗ ಮತ್ತು ಆದಿ ಚಾರಿತ್ರಿಕ ಕುರುಹುಗಳನ್ನು ಶೋಧಿಸಿದರು. ಇದೇ ಸ್ಥಳದಲ್ಲಿ ಭಾರತೀಯ ಪುರಾತತ್ವ ಇಲಾಖೆಯ ಮಹಾನಿರ್ದೇಶಕರಾಗಿದ್ದ, ಮಾರ್ಟಿಮರ್ ವ್ಹೀಲರ್ ಅವರು ೧೯೪೭ರಲ್ಲಿ ಮರು ಉತ್ಖನನ ಕೈಗೊಂಡು ನೂತನ ಶಿಲಾಯುಗ, ಬೃಹತ್ ಶಿಲಾಯುಗ ಹಾಗೂ ಶಾತವಾಹನರ ಕಾಲದ ಅವಶೇಷಗಳನ್ನು ಪತ್ತೆಹಚ್ಚಿದರು.[೧೭] ಅವರ ಈ ಶೋಧನೆಯು ಪುರಾತತ್ವ ಅಧ್ಯಯನದಲ್ಲಿ ಮಹತ್ವದ ಶೋಧವೆನಿಸಿ ಇತರೆ ನೆಲೆಗಳಲ್ಲಿ ಸಮಾಧಿ ರಚನೆ ಮತ್ತು ಕಾಲಮಾನ ತಿಳಿಯಲು ಇದು ಮಾದರಿಯಾಯಿತು. ನಂತರ ೧೯೪೮ರಲ್ಲಿ ಬಿ. ಸುಬ್ಬರಾವ್ ಅವರು ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ನೆಲೆಯಲ್ಲಿ ನಡೆಸಿದ ಉತ್ಖನನದಲ್ಲಿ ಸೂಕ್ಷ್ಮಶಿಲಾಯುಗ, ನವಶಿಲಾಯುಗ, ಬೃಹತ್ ಶಿಲಾಯುಗ ಹಾಗೂ ಆಂಧ್ರಸಂಸ್ಕೃತಿಯ ಹಂತಗಳನ್ನು ಪರಿಶೋಧಿಸಿದರು.

೧೯೫೪ರಲ್ಲಿ ಬಾಲಕೃಷ್ಣ ಥಾಪರ್(ಬಿ.ಕೆ.ಥಾಪರ್) ಅವರು ಮಸ್ಕಿಯಲ್ಲಿ ಎಂಟು ಬೃಹತ್ ಶಿಲಾಸಮಾಧಿಗಳನ್ನು ಉತ್ಖನನಮಾಡಿ, ನವ–ತಾಮ್ರ ಶಿಲಾಯುಗ, ತಾಮ್ರ–ಬೃಹತ್ ಶಿಲಾಯುಗ ಹಾಗೂ ಆಂಧ್ರ ಸಂಸ್ಕೃತಿ ಹೀಗೆ ವಿವಿಧ ಸಾಂಸ್ಕೃತಿಕ ಹಂತಗಳನ್ನು ಶೋಧಿಸಿದರು.[೧೮] ತದನಂತರ

೧೯೫೭ರಲ್ಲಿ ಪುರಾತತ್ವಜ್ಞರಾದ ಎಂ. ಶೇಷಾದ್ರಿಯವರು ಬೆಂಗಳೂರು ಜಿಲ್ಲೆಯ ಜಡಿಗೇನಹಳ್ಳಿ ಉತ್ಖನನ ಕೈಗೊಂಡು ಬೃಹತ್ ಶಿಲಾಸಮಾಧಿ ಒಂದರಲ್ಲಿ ಮಣ್ಣಿನ ಶವಪೆಟ್ಟಿಗೆ, ಮತ್ತೊಂದರಲ್ಲಿ ತ್ರಿಶೂಲ ಮತ್ತು ಗಂಟೆಯನ್ನು ಶೋಧಿಸಿದರು. ತದನಂತರ ೧೯೫೭–೧೯೫೯ರಲ್ಲಿ ಮೈಸೂರು ಜಿಲ್ಲೆಯ ಟಿ.ನರಸೀಪುರದಲ್ಲಿ[೧೯] ಮೂರು ವರ್ಷಗಳ ಕಾಲ ನಿರಂತರ ಉತ್ಖನನ ನಡೆಸಿ ನವಶಿಲಾಯುಗ, ನವಶಿಲಾ–ತಾಮ್ರಯುಗ, ಬೃಹತ್ ಶಿಲಾಯುಗ ಸಾಂಸ್ಕೃತಿಕ ಹಂತದ ಕುರುಹುಗಳನ್ನು ಪರಿಶೋಧಿಸಿದರು. ೧೯೬೩–೬೪ರಲ್ಲಿ ಧಾರವಾಡ ಜಿಲ್ಲೆಯ ಹಳ್ಳೂರಿನಲ್ಲಿ ಎಂ.ಎಸ್ ನಾಗರಾಜರಾವ್ ಅವರು ನವಶಿಲಾಯುಗ ಮತ್ತು ಬೃಹತ್ ಶಿಲಾಯುಗದ ಸಾಂಸ್ಕೃತಿಕ ಹಂತಗಳನ್ನು ಗುರುತಿಸಿದರು.[೨೦] ೧೯೬೪–೬೫ರಲ್ಲಿ ಅ.ಸುಂದರ ಅವರು ಬಿಜಾಪುರ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ತೇರದಾಳ–ಹಳಿಂಗಳಿ ಜೋಡಿ ನಿವೇಶನದಲ್ಲಿ ನಾಲ್ಕು ಬೃಹತ್ ಶಿಲಾಸಮಾಧಿಗಳನ್ನು ಉತ್ಖನನ ಮಾಡಿದರು. ಆ ಮೂಲಕ ಅಧಿಕ(+)ಚಿಹ್ನೆ ಆಕಾರದ ಸಮಾಧಿ ಹಾದಿಗಳುಳ್ಳ ವಿಶೇಷ ಸಮಾಧಿಗಳನ್ನು ಗುರುತಿಸಿದರು.[೨೧] ಆ ಸಮಾಧಿಗಳಲ್ಲಿ ದೊರೆತ ವಸ್ತುಗಳನ್ನು ಸಮಗ್ರವಾಗಿ ಅಧ್ಯಯನಕ್ಕೆ ಒಳಪಡಿಸಲಾಯಿತು.

೧೯೬೭–೬೮ರಲ್ಲಿ ಎಸ್.ಆರ್. ರಾವ್ ಅವರು ಪುರಾತತ್ವ ಸರ್ವೇಕ್ಷಣಾ ಇಲಾಖೆಯ ದಕ್ಷಿಣ ಮತ್ತು ಪಶ್ಚಿಮ ವಿಭಾಗದ ವತಿಯಿಂದ ಬೆಳಗಾವಿ ಜಿಲ್ಲೆಯ ಹನೂರಿನಲ್ಲಿ ಬೃಹತ್ ಶಿಲಾಯುಗದ ದೊಡ್ಡದಾದ ತುಂಡುಕಲ್ಲಿನ ದಿನ್ನೆಯನ್ನು ಉತ್ಖನನ ಮಾಡಿದರು.[೨೨] ಈ ದಿನ್ನೆಯ ಮಧ್ಯದಲ್ಲಿ ಮೂರು ಪ್ರತ್ಯೇಕ ದುಂಡುಕಟ್ಟೆಗಳು ಗೋಚರಿಸಿದವು. ಇವುಗಳಲ್ಲಿ ಎರಡು ಕೋಣೆ ಸಮಾಧಿಗಳಿಗೆ ಮಾತ್ರ ದಾರಿಯನ್ನು ರಚಿಸಲಾಗಿತ್ತು. ಚೌಕಾಕಾರದ ತಳವುಳ್ಳ ಮತ್ತು ಮೇಲೆ ಕಂಡಿಯುಳ್ಳ ತಾಮ್ರದ ಗಂಟೆಯು ಸಹ ದೊರಕಿತು. ನಂತರ ೧೯೭೧ರಲ್ಲಿ ಪುರಾತತ್ವಜ್ಞರಾದ ಕೆ.ಕೆ.ಸುಬ್ಬಯ್ಯನವರು ತಮ್ಮ ಪಿಎಚ್.ಡಿ ಸಂಶೋಧನೆಗಾಗಿ ಕೊಡಗಿನ ಹೆಗ್ಗಡೆಹಳ್ಳಿಯಲ್ಲಿ ನಾಲ್ಕು ಬೃಹತ್ ಶಿಲಾಸಮಾಧಿಗಳನ್ನು ಉತ್ಖನನ ಮಾಡಿದರು. ಇವರು ೧೯೭೪–೭೫ರಲ್ಲಿ ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲ್ಲೂಕಿನ 'ಹೆಗ್ಗಡೆಹಳ್ಳಿ'ಯಲ್ಲಿ ಆರು ಶಿಲಾಸಮಾಧಿಗಳನ್ನು ೧೯೭೬–೭೭ ಮತ್ತು ೧೯೮೪ರಲ್ಲಿ ಮೈಸೂರು ಜಿಲ್ಲೆಯ ಕಾವೇರಿ ನದಿ ಬಲದಂಡೆಯಲ್ಲಿರುವ ಪಿರಿಯಾಪಟ್ಟಣ ತಾಲ್ಲೂಕಿನ ಕೊಪ್ಪದಲ್ಲಿ ಇಪ್ಪತ್ತೊಂಭತ್ತು ಶಿಲಾಸಮಾಧಿಗಳನ್ನು ಶೋಧನೆ ಮಾಡಿದರು.[೨೩] ಕೊಪ್ಪದ ಉತ್ಖನನದಲ್ಲಿ ಗುಂಡಿ ಸಮಾಧಿಗಳು, ಕಂಡಿಕೋಣೆ ಸಮಾಧಿಗಳು, ಆಯತಾಕಾರದ ಕೋಣೆ ಸಮಾಧಿಗಳು ಬೆಳಕಿಗೆ ಬಂದವು. ಅವುಗಳಲ್ಲಿ ಒಂದು ಚಿಕ್ಕ ಮಗುವಿನ ಸಮಾಧಿಯೂ ಸಹ ಕಂಡುಬಂದಿವೆ. ಆಯತಾಕಾರದ ಸಮಾಧಿಯೊಂದರ ತಳಭಾಗದಲ್ಲಿ ಸ್ವಲ್ಪ ಎತ್ತರಕ್ಕೆ ಮಾತ್ರ ಎರಡು ಸಮಾನ ಭಾಗಗಳನ್ನಾಗಿ ವಿಂಗಡಿಸಲಾಗಿತ್ತು. ಉತ್ಖನನದಲ್ಲಿ ಅಪಾರ ಸಂಖ್ಯೆಯ ವಿವಿಧ ಆಕಾರದ ವರ್ಣದ ಮಡಕೆಗಳು ಲಭ್ಯವಾಗಿದ್ದು ಅವು ವೈವಿಧ್ಯಮಯವಾಗಿವೆ.

೧೯೭೯–೮೦ರಲ್ಲಿ ಹರಿಹರ ತಾಲ್ಲೂಕಿನ ಕೊಮಾರನಹಳ್ಳಿಯಲ್ಲಿ ಬೃಹತ್ ಶಿಲಾಯುಗದ ಕೆಲವು ಸಮಾಧಿಗಳನ್ನು ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯ ಪುರಾತತ್ವ ಇಲಾಖೆಯು ಉತ್ಖನನ ನಡೆಸಿತು. ಮುಖ್ಯವಾಗಿ ಶವಕುಣಿ ಮತ್ತು ತುಂಡುಕಲ್ಲಿನ ದಿನ್ನೆಗಳನ್ನು ಅಗೆಯಲಾಯಿತು. ಅವುಗಳಲ್ಲಿ ಮಾನವನ

ಅಸ್ಥಿಮಡಕೆಗಳು, ಕಬ್ಬಿಣದ ಉಪಕರಣಗಳು, ಚಿತ್ರಿತ ಮಡಕೆಗಳು ಗೋಚರವಾದವು.[೨೪] ೧೯೮೭–೮೮ರಲ್ಲಿ ರಾಜ್ಯ ಪುರಾತತ್ವ ಇಲಾಖೆಯು ವಿದೇಶಿ ವಿದ್ವಾಂಸರನ್ನು ಉತ್ಖನನ ಕಾರ್ಯದಲ್ಲಿ ಸಂಯೋಜಿಸಿಕೊಂಡು ಓಹಿಯೋದ ಕ್ಲೀವ್‌ಲ್ಯಾಂಡ್ ವಿಶ್ವವಿದ್ಯಾಲಯದ ಮಾನವಶಾಸ್ತ್ರ ವಿಭಾಗದ ಜಿಮ್ ಜಿ. ಷಫರ್ ಮತ್ತು ಅವರ ಸಂಗಡಿಗರಾದ ಡೈಯಾನೆ ಎ. ಅಚ್ಚನ್ ಸ್ವೀನ್ ಸ್ವಾನ್ಸಿ ಎಂ, ಪಾರ್ಕ್ಸ್ ಡಗ್ಲಾಸ್ ಓ ಡಬ್ಲೂ, ದಿಬ್ಬೆ ಮತ್ತು ಕಿರ್‌ಸ್ಟೀನ್ ಅವರ ಸಹಯೋಗದಲ್ಲಿ ರಾಜ್ಯ ಪುರಾತತ್ವ ಇಲಾಖೆಯ ಶ್ರೀ ಬಾಲಸುಬ್ರಮಣ್ಯಂ ಅವರ ಜೊತೆಗೂಡಿ ರಾಯಚೂರು ಜಿಲ್ಲೆಯ 'ವಟಗಲ್' ಎಂಬಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಯನ್ನು ಉತ್ಖನನ ಮಾಡಿದರು.[೨೫]

ಕರ್ನಾಟಕದಲ್ಲಿ ಮೇಡೋಸ್ ಟೇಲರ್, ಎಂ.ಎಸ್. ನಾಗರಾಜ್‌ರಾವ್, ಅ.ಸುಂದರ, ಡಿ.ವಿ.ದೇವರಾಜ್ ಮೊದಲಾದವರು ಈ ಕ್ಷೇತ್ರದಲ್ಲಿ ಸಂಶೋಧನೆಗಳನ್ನು ನಡೆಸಿದ್ದಾರೆ. ಉತ್ತರ ಕನ್ನಡ ಜಿಲ್ಲೆಯೂ ಸೇರಿದಂತೆ ಎಲ್ಲಾ ಜಿಲ್ಲೆಗಳಲ್ಲಿ ಒಟ್ಟು ೧೪೪೦ಕ್ಕೂ ಹೆಚ್ಚು ಬೃಹತ್ ಶಿಲಾಯುಗ ನೆಲೆಗಳು ಅಥವಾ ಕಬ್ಬಿಣಯುಗದ ಕಂಡುಬಂದಿವೆ. ಅವುಗಳಲ್ಲಿ ೨೭೬ ವಸತಿ ನೆಲೆಗಳು ಹಾಗೂ ೧೧೬೪ಕ್ಕೂ ಹೆಚ್ಚು ಸ್ಮಶಾನ ನೆಲೆಗಳಾಗಿವೆ.[೨೬] ಈ ಸಂಸ್ಕೃತಿಯ ನೆಲೆಗಳು ಗಷ್ಟುಕಲ್ಲು ಮತ್ತು ಗ್ರಾನೈಟ್ ಶಿಲೆಯ ಬೆಟ್ಟ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡುಬಂದಿವೆ. ಮುಖ್ಯವಾಗಿ ಬೆಳಗಾವಿ ಜಿಲ್ಲೆಯ ಮಧ್ಯಭಾಗ, ಬಾಗಲಕೋಟೆ, ಬಿಜಾಪುರ ಮತ್ತು ಗುಲ್ಬರ್ಗ, ಯಾದಗಿರಿ, ರಾಯಚೂರು, ಕೊಪ್ಪಳ, ಬಳ್ಳಾರಿ, ಚಿತ್ರದುರ್ಗ, ತುಮಕೂರು, ಕೋಲಾರ, ಬೆಂಗಳೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಂಶೋಧಿಸಿದ ನೆಲೆಗಳು ಕಂಡುಬಂದಿವೆ. ಮಲೆನಾಡು, ಅರೆಮಲೆನಾಡು ಭಾಗಗಳಲ್ಲಿಯೂ ಸಹ ಬೆರಳಣಿಕೆಯಲ್ಲಿ ಈ ಸಂಸ್ಕೃತಿಯ ನೆಲೆಗಳು ದೊರೆತಿರುವುದನ್ನು ಗಮನಿಸಬಹುದು. ಅಧ್ಯಯನ ದೃಷ್ಟಿಯಿಂದ ಉತ್ತರ ಕರ್ನಾಟಕದ ನೆಲೆಗಳು ದಕ್ಷಿಣ ಕರ್ನಾಟಕದ ನೆಲೆಗಳಿಗಿಂತ ಹೆಚ್ಚು ಆಶಾದಾಯಕವಾದ ಸಂಗತಿಗಳನ್ನು ಪ್ರಚುರಪಡಿಸುವಲ್ಲಿ ಸಫಲವಾಗಿವೆಯೆಂದು ಅಭಿಪ್ರಾಯಿಸಬಹುದು.

ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಸಮಾಧಿ ನೆಲೆಗಳು ಮತ್ತು ವಸತಿ ನೆಲೆಗಳು ಕಂಡುಬಂದಿದ್ದು ಅವುಗಳಲ್ಲಿ ಕೆಲವು ನೆಲೆಗಳ ಉತ್ಖನನವೂ ನಡೆದಿದೆ. ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ರಾಜಘಟ್ಟ, ಕೊಡುಗು ಜಿಲ್ಲೆಯ ಹೆಗ್ಗಡೆಹಳ್ಳಿ, ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ನಿಡಗಟ್ಟ, ಶಿವಮೊಗ್ಗ ಜಿಲ್ಲೆಯ ನಿಲುಸುಗಲ್, ಸೂಳೆಬೈಲುನಲ್ಲಿಯೂ ಈ ಸಂಸ್ಕೃತಿಯ ಅವಶೇಷಗಳು ದೊರೆತಿವೆ. ಹಾವೇರಿ ಜಿಲ್ಲೆಯ ಭೈರವನಪಾದ, ಚೌಡಯ್ಯನದಾನಪುರ, ಕೋಲಾರ ಜಿಲ್ಲೆಯ ಗರುಡನಹಳ್ಳಿ, ಹಾಸನ ಜಿಲ್ಲೆಯ ಉಲ್ಲೇನಹಳ್ಳಿ, ತುಮಕೂರು ಜಿಲ್ಲೆಯ ಯಲ್ಲಪ್ಪನಾಯಕನಹಳ್ಳಿ, ಕತ್ತಿರಾಜನಹಳ್ಳಿಯಲ್ಲಿರುವ ನೆಲೆಗಳಲ್ಲಿ ಈ ಸಂಸ್ಕೃತಿಯ ಕುರುಹುಗಳು ಬೆಳಕಿಗೆ ಬಂದಿವೆ.[೨೭] ಅಲ್ಲದೆ ಉಡುಪಿ ಜಿಲ್ಲೆಯ ಬೊಮ್ಮರಬೆಟ್ಟು, ಉತ್ತರಕನ್ನಡ ಜಿಲ್ಲೆಯ ಕಂತ್ರಾಜಿ, ಬೆಳಗಾವಿ ಜಿಲ್ಲೆಯ ಕೊಣ್ಣೂರು, ಚಿತ್ರದುರ್ಗ ಜಿಲ್ಲೆಯ ಚಿಪ್ಪಿನಕೆರೆ, ತಮ್ಮಟಕಲ್ಲು, ನಂದನ ಹೊಸೂರು, ಬೂದಿಪುರ, ಗಂಜಿಗಟ್ಟೆ, ಜಂಪಣ್ಣನಾಯಕನ ಕೋಟೆ, ಇಂಗಳದಾಳ್, ಕೂನಬೇವು, ಚಿಕ್ಕಮದುರೆ, ಬೊಗ್ಗಲರಂಗವ್ವನಹಳ್ಳಿ

ನೆಲೆಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಕಲ್ಗೋರಿ ಹಾಗೂ ಇತರೆ ಅವಶೇಷಗಳು ದೊರೆತಿವೆ.[೨೮] ಮೇಲ್ಕಾಣಿಸಿದ ಈ ಎಲ್ಲಾ ನೆಲೆಗಳಲ್ಲಿ ಸತ್ತವರ ಜ್ಞಾಪಕಾರ್ಥವಾಗಿ ನಿರ್ಮಿಸಿದ ಶಿಲಾಸಮಾಧಿಗಳು ಅಧಿಕ ಸಂಖ್ಯೆಯಲ್ಲಿ ಕಂಡುಬಂದಿವೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲೂ ಸಹ ಇಂತಹ ನೆಲೆಗಳನ್ನು ರೆವೆರೆಂಡ್ ಕೇಯಿಸ್, ಮೆಡೋಸ್ ಟೇಲರ್, ಎಫ್.ಆರ್.ಅಲ್ಚಿನ್, ಜೀಯಾವುದ್ದೀನ್ ಯಜ್ದಾನಿ, ಸಿ.ಜಿ. ಪಿಲ್ಲೇ, ರಾಬರ್ಟ್ ಬ್ರೂಸ್‌ಫುಟ್, ಬಿ.ಸುಬ್ಬರಾವ್, ಅ.ಸುಂದರ, ಲಕ್ಷ್ಮಣ್ ತೆಲಗಾವಿ, ಆರ್.ಎಂ.ಷಡಕ್ಷರಯ್ಯ, ಕೆ.ಪಿ.ಪೂಣಚ್ಚ, ರವಿ ಕೋರಿಶೆಟ್ಟರ್, ಬಾಲಸುಬ್ರಹ್ಮಣ್ಯ, ವಾಸುದೇವ ಬಡಿಗೇರ, ಸಿ.ಎಸ್. ವಾಸುದೇವನ್, ಹೆಚ್.ತಿಪ್ಪೇಸ್ವಾಮಿ, ವಿರೂಪಾಕ್ಷಿ ಪೂಜಾರಹಳ್ಳಿ, ಎಸ್.ಕೆ.ಮೇಲ್ಕರ್, ಶರಣಬಸಪ್ಪ ಕೋಲ್ಕಾರ, ಉಲ್ಲಾನಹಳ್ಳಿ ಜಯಣ್ಣ, ಆರ್.ಮಂಜನಾಯ್ಕ್, ಮೋಹನ.ಆರ್, ಕೆ.ಲಿಂಗಣ್ಣಸ್ವಾಮಿ, ಟಿ.ರಂಗನಾಥ ಮೊದಲಾದವರು ಈ ಕ್ಷೇತ್ರದಲ್ಲಿ ಪುರಾತತ್ವ ನೆಲೆಗಳನ್ನು ಬೆಳಕಿಗೆ ತಂದಿದ್ದಾರೆ. ವಿವಿಧ ವಿಶ್ವವಿದ್ಯಾಲಯಗಳ ಸಂಶೋಧಕರು, ವಿದ್ವಾಂಸರು ಹಾಗೂ ಹವ್ಯಾಸಿ ಸಂಶೋಧಕರು ಉದ್ದೇಶಿತವಾಗಿ ಇಲ್ಲವೆ ಆಕಸ್ಮಿಕವಾಗಿ ಶೋಧಿಸಿದ ಶಿಲಾಸಮಾಧಿಗಳು, ಆಯುಧೋಪಕರಣಗಳು, ಮಡಕೆಗಳು, ಗೀರುಚಿತ್ರಗಳು ಅಧ್ಯಯನಕ್ಕೆ ಸಾಕ್ಷಾಧಾರಗಳಾಗಿವೆ.

### ೪.೨. ಬೃಹತ್ ಶಿಲಾಯುಗ ಸಂಸ್ಕೃತಿ

ಆದಿಮ ಸಮಾಜದ ಜನರು ವಿವಿಧ ಕಾಲಘಟ್ಟಗಳಲ್ಲಿ ನಿತ್ಯಬದುಕಿಗಾಗಿ ನಿರಂತರ ಅಲೆದಾಡುತ್ತಿದ್ದರು. ಆದರೆ ನವಶಿಲಾಯುಗದ ವೇಳೆಗೆ ಒಂದು ಕಡೆ ನೆಲೆನಿಂತು ಆರಂಭಿಕ ಕೃಷಿಯಲ್ಲಿ ತೊಡಗಿ, ಬೃಹತ್ ಶಿಲಾಯುಗದ ವೇಳೆಗೆ ಅದರಲ್ಲಿ ಯಶಸ್ವಿಯನ್ನು ಪಡೆದು ಸ್ವಾವಲಂಭಿಗಳಾಗಿ ಬದುಕುವುದನ್ನು ರೂಢಿಸಿಕೊಂಡರು. ಈ ಬೃಹತ್ ಶಿಲಾಸಮಾಧಿ ಎಂಬ ಪದವನ್ನು ವಿವರಣಾತ್ಮಕವಾಗಿ ಪ್ರಾಕ್ತನಶಾಸ್ತ್ರಜ್ಞರು ಉಪಯೋಗಿಸುವರು. ದೊಡ್ಡ ಮತ್ತು ಒರಟಾದ ಶಿಲೆಗಳಿಂದ ಶಿಲಾಸಮಾಧಿಗಳನ್ನು ಯುರೋಪಿನ ಮೆಡಿಟೇರಿಯನ್ ಸಮುದ್ರ ಪ್ರದೇಶದಲ್ಲಿ ನಿರ್ಮಿಸುತ್ತಿದ್ದುದರಿಂದ ಇದನ್ನು 'ಮೆಗಾಲಿಥಿಕ್ ಕಲ್ಚರ್' ಅಥವಾ 'ಬೃಹತ್ ಶಿಲಾಯುಗ ಸಂಸ್ಕೃತಿ' ಎಂದು ಕರೆಯಲಾಗಿದೆ. 'ಮೆಗಾಲಿಥಿಕ್' ಎಂಬ ಪದವು ಗ್ರೀಕ್ ಮೂಲದ 'ಮೆಗಾಸ್' ಮತ್ತು ಲಿಥೋಸ್ ಎಂಬ ಎರಡು ಪದಗಳಿಂದ ನಿಷ್ಪತ್ತಿಯಾಗಿದೆ. 'ಮೆಗಾ ಎಂದರೆ,' 'ಬೃಹತ್' ಅಥವಾ 'ದೊಡ್ಡ' ಎಂತಲೂ 'ಲಿಥಿಕ್' ಎಂದರೆ, ಕಲ್ಲು(ಶಿಲೆ) ಎಂದರ್ಥ.[೨೯] ಅಂದರೆ, 'ಬೃಹತ್ ಗಾತ್ರದ ಕಲ್ಲುಗಳು' ಎಂದಾಗುತ್ತದೆ.

ಸಾಮಾನ್ಯವಾಗಿ ಬೃಹತ್ ಗಾತ್ರದ ಕಲ್ಲುಗಳಿಂದ ನಿರ್ಮಿಸಿದ ಕಲ್ಲಿನ ರಚನೆಗಳು ಶಿಲಾಸಮಾಧಿಗಳಾಗಿದ್ದರೆ, ಅವು ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರುತ್ತವೆ. ಈ ಸಂಸ್ಕೃತಿಯ ಜನರು ಮರಣ ಹೊಂದಿದಾಗ, ವ್ಯಕ್ತಿಯ ಶವವನ್ನು ದೊಡ್ಡ ದೊಡ್ಡ ಕಲ್ಲುಬಂಡೆಗಳಿಂದ ಸಮಾಧಿಯನ್ನು ನಿರ್ಮಿಸಿ ಅದರಲ್ಲಿ ಶವವನ್ನು ಇಟ್ಟು ಹೂಳುವುದರ ಮೂಲಕ ಅಂತ್ಯಸಂಸ್ಕಾರ ಅಥವಾ ಶವಸಂಸ್ಕಾರ

ಮಾಡುತ್ತಿದ್ದರು ಇಲ್ಲವೇ ಸತ್ತವರ ಸ್ಮರಣಾರ್ಥವಾಗಿ ನೆನಪಿನ ಸ್ಮಾರಕಗಳನ್ನು ನಿರ್ಮಿಸುತ್ತಿದ್ದರು. ಈ ಪದ್ಧತಿಯು ನವಶಿಲಾಯುಗ ಮತ್ತು ಶಿಲಾ–ತಾಮ್ರಯುಗದ ನಂತರ ಪ್ರಚಲಿತಕ್ಕೆ ಬಂದಿತ್ತೆಂದು ತಜ್ಞರ ಅಭಿಪ್ರಾಯವಾಗಿದೆ.

ಭಾರತದ ಮಟ್ಟಿಗೆ ಬೃಹತ್ ಶಿಲಾಯುಗ ಸಂಸ್ಕೃತಿಯು ವಿವಿಧ ಪ್ರದೇಶ ಹಾಗೂ ವಿಭಿನ್ನ ಕಾಲಘಟ್ಟಗಳಲ್ಲಿ ಹೇಗೆ ಬೆಳೆದು ಬಂದಿದೆ ಎಂದು ತಿಳಿಯಲು ಆಯಾ ಪ್ರದೇಶ ಮತ್ತು ಕಾಲಘಟ್ಟಗಳ ಸ್ಥಳ ಪರಿಶೋಧನೆ ಮಾಡಲಾಗಿದೆ. ಈ ಸಂಸ್ಕೃತಿಯ ಅವಶೇಷಗಳನ್ನು ಪತ್ತೆಹಚ್ಚಿದ ದಿನದಿಂದ ಇಂದಿನವರೆಗೆ ದೇಶಿಯ ಹಾಗೂ ವಿದೇಶಿಯ ಪುರಾತತ್ವಜ್ಞರು ದೇಶದ ನಾನಾ ಭಾಗಗಳಲ್ಲಿ ಹೊಸ ಹೊಸ ನೆಲೆಗಳನ್ನು ಸಂಶೋಧನೆ ನಡೆಸುವುದರ ಮೂಲಕ ಈ ಜನರ ವಸತಿ, ಸಾಮಾಜಿಕ, ಆರ್ಥಿಕ, ಧಾರ್ಮಿಕ ನಂಬಿಕೆ, ಶವಸಂಸ್ಕಾರ ಪದ್ಧತಿ ಮತ್ತು ಇನ್ನಿತರೆ ವಿಚಾರಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಆದರೂ ಸಹ ಎಲ್ಲರೂ ಒಪ್ಪುವಂತಹ ನಿಖರವಾದ ವಿಚಾರಗಳ ಬಗೆಗೆ ಸಂಶೋಧನೆ ನಡೆಯಬೇಕಾಗಿದೆ.

ಈ ಸಂಸ್ಕೃತಿಯ ಜನರು ಬೆಟ್ಟದ ತಪ್ಪಲು ಇಲ್ಲವೆ ಬೆಟ್ಟದ ಸಮತಟ್ಟು ಪ್ರದೇಶಗಳಲ್ಲಿ ವರ್ತುಲಾಕಾರದ ಮತ್ತು ಆಯತಾಕಾರದ ಮಣ್ಣಿನ ತಡಕೆ ಗೋಡೆಗಳ ಹುಲ್ಲಿನ ಇಳಿಜಾರು ಮಾಡಿದ ಮನೆಗಳನ್ನು ನಿರ್ಮಿಸಿಕೊಂಡು ಜೀವನ ಸಾಗಿಸುತ್ತಿದ್ದರು. ಆ ಜನರು ಜೀವನ ನಿರ್ವಹಣೆಗಾಗಿ ಪಶುಸಂಗೋಪನೆ, ಬೇಟೆ ಮತ್ತು ಕೃಷಿಯನ್ನು ಅವಲಂಬಿಸಿದ್ದರು. ಕೃಷಿಯು ಇವರ ಮುಖ್ಯ ಕಸುಬು ಆಗಿದ್ದರಿಂದ ಕಬ್ಬಿಣದ ನೇಗಿಲಕುಳ, ಕುಡಗೋಲು, ಭರ್ಚಿ, ಕತ್ತಿ, ಬಾಣದ ಮೊನೆಗಳು ಮತ್ತು ಇತರ ಆಯುಧೋಪಕರಣಗಳು ತಾವೇ ತಯಾರಿಸಿಕೊಳ್ಳುತ್ತಿದ್ದರು. ಇದಕ್ಕೆ ಪೂರಕವೆನ್ನುವಂತೆ 'ಹಿರೇಬೆಣಕಲ್ಲನಲ್ಲಿರುವ ಬೃಹತ್ ಶಿಲಾಸಮಾಧಿ ನೆಲೆಯಲ್ಲಿ' ವಿಶೇಷವಾಗಿ ಒಂದನೇ ಗವಿ ವರ್ಣಚಿತ್ರದಲ್ಲಿ[೩೦] ಹಲವು ಪ್ರಕಾರದ ಕಬ್ಬಿಣದ ಆಯುಧಗಳನ್ನು ಹಿಡಿದಿರುವ ಮನುಷ್ಯರು ಪ್ರಾಣಿಗಳನ್ನು ಬೇಟೆಯಾಡುವ ದೃಶ್ಯ ಮೊದಲಾದವುಗಳ ಚಿತ್ರಣವಿದ್ದು ಅದು ಇವರ ವೃತ್ತಿ ಮತ್ತು ಪ್ರವೃತ್ತಿಯನ್ನು ಸೂಚಿಸುತ್ತದೆ. ಈ ಸಂಸ್ಕೃತಿಯ ಜನರಿಗೆ ಭತ್ತ, ರಾಗಿ, ಮೊದಲಾದ ಕಾಳುಕಡಿಗಳ ಪರಿಚಯವಿತ್ತು ಎಂಬುದನ್ನು ಹೆಗ್ಗಡೆಹಳ್ಳಿ ನೆಲೆಯಲ್ಲಿ ದೊರೆತ ಮಣ್ಣಿನ ಪಾತ್ರೆಯಲ್ಲಿ ಭತ್ತದ ಹೊಟ್ಟು ಹಾಗೂ ರಾಗಿ ಕಾಳು ದೊರೆತಿವೆ. ಈ ಭಾಗದ ಶಿಲಾಸಮಾಧಿಗಳಲ್ಲಿ ದೊರೆತ ಪ್ರಾಣಿಗಳ ಮೂಳೆ ಅವಶೇಷಗಳಿಂದ ಅಂದಿನ ಜನರು ವಿವಿಧ ಪ್ರಾಣಿಗಳನ್ನು ಸಾಕುತ್ತಿದ್ದರು ಎಂಬುದು ತಿಳಿದುಬರುತ್ತದೆ. ಈ ಸಂಸ್ಕೃತಿಯ ಜನರು ಸರ್ವೇಸಾಮಾನ್ಯವಾಗಿ ಕುದುರೆಯನ್ನು ಬಳಸುತ್ತಿದ್ದರೆಂಬುದು ಜಡಿಗೇನಹಳ್ಳಿಯ ಶಿಲಾಸಮಾಧಿಯಲ್ಲಿ ದೊರೆತ ಕುದುರೆ ಬಾಯಿಗೆ ಹಾಕುವ ಉಪಕರಣ ಮತ್ತು ಹಿರೇಬೆಣಕಲ್ಲಿನ ಗವಿವರ್ಣಚಿತ್ರದಲ್ಲಿ ಕುದುರೆ ಸವಾರಿ ಚಿತ್ರಗಳು ಸೂಚಿಸುತ್ತವೆ.[೩೧]

ಬೃಹತ್ ಶಿಲಾಯುಗದ ಜನರು ಗೃಹ ಕೈಗಾರಿಕೆಗಳಂತಹ ಕಸುಬುಗಳಾದ ತಕ್ಕಲಿಯಿಂದ ನೂಲುವುದು, ಚಾಪೆ ಹೆಣೆಯುವುದನ್ನು ತಿಳಿದಿದ್ದರು ಎಂಬುದಕ್ಕೆ ಸಮಾಧಿಯೊಂದರಲ್ಲಿ ದೊರೆತ ದೊಡ್ಡ ಗುಡಾಣದಂತಹ ಅಸ್ಥಿ ಪಾತ್ರೆಯ ತಳಭಾಗದಲ್ಲಿ ಹೆಣೆದ ಚಾಪೆಯ ಮುದ್ರೆಯು ತಿಳಿಸುತ್ತದೆ. ಹಾಗೂ

ಪ್ರಶಸ್ಥ, ಅರೆ ಪ್ರಶಸ್ಥ ಶಿಲೆಗಳಿಂದ ತಯಾರಿಸಿದ ಆಭರಣಗಳು ಈ ಸಂಸ್ಕೃತಿಯ ಜನರು ಕುಶಲಕರ್ಮಿಗಳಾಗಿದ್ದರು ಎನ್ನುವುದಕ್ಕೆ ಸಾಕ್ಷಿಯಾಗಿವೆ. ಅಂದಿನ ಜನರು ಕಬ್ಬಿಣದ ಅದಿರಿನಿಂದ ಲೋಹವನ್ನು ಕರಗಿಸುವ ತಂತ್ರಜ್ಞಾನವನ್ನು ತಿಳಿದಿದ್ದರು. ಈ ತಂತ್ರಜ್ಞಾನ ಭಾರತದಾದ್ಯಂತ ಪಸರಿಸಿತು. ವಿಶ್ವಾಸ ಗೋಗ್ಟೆಯವರ ನಾಯ್‌ಕುಂಡ ನೆಲೆಯ ಅಧ್ಯಯನದಿಂದ ಬೃಹತ್ ಶಿಲಾಯುಗದ ಜನರು 'ಒಂದು ಕೆ.ಜಿಯಷ್ಟು ಅದಿರಿನಿಂದ ಸು.೩೫೦ ಗ್ರಾಂ ಪರಿಶುದ್ಧ ಕಬ್ಬಿಣವನ್ನು ಪಡೆಯುವ ಪರಿಣಿತಿ ಹೊಂದಿದ್ದರು' ಎಂಬುದು ತಿಳಿದುಬರುತ್ತದೆಂದು ಅಭಿಪ್ರಾಯಿಸುತ್ತಾರೆ.[೩೨] ಹೀಗೆ ಕಬ್ಬಿಣದ ಬಳಕೆಯನ್ನು ಕಂಡುಕೊಂಡ ಮಾನವ ಕಲ್ಲಿನ ಉಪಕರಣಗಳನ್ನು ತಯಾರಿಸುವುದನ್ನು ನಿಲ್ಲಿಸಿದ. ಇದರಿಂದ ಶಿಲೆಗಳ ಬಳಕೆ ಕೊನೆಗೊಂಡು ಲೋಹದ ಉಪಕರಣಗಳನ್ನು ಬಳಸಲು ಪ್ರಾರಂಭವಾಯಿತು. ಈ ಕಾರಣದಿಂದಲೇ ದಕ್ಷಿಣ ಭಾರತದ ಈ ಬೃಹತ್ ಶಿಲಾಯುಗ ಸಂಸ್ಕೃತಿಯನ್ನು 'ಕಬ್ಬಿಣಯುಗ ಸಂಸ್ಕೃತಿ' ಎಂದು ಕರೆಯಲಾಯಿತು. ಕರ್ನಾಟಕದಲ್ಲಿ ಕೊಮಾರನಹಳ್ಳಿ, ತಡಕನಹಳ್ಳಿ, ಹಳಿಂಗಳಿ, ಗಾಜೂರು, ಹಳ್ಳೂರು ಮೊದಲಾದ ನೆಲೆಗಳಲ್ಲಿ ಕಬ್ಬಿಣ ತಯಾರಿಕ ಘಟಕಗಳು ಕಂಡುಬಂದಿದ್ದು ಅವು ಈ ಸಂಸ್ಕೃತಿಯ ಜನರಿಗೆ ಅದಿರನ್ನು ಕರಗಿಸಿ ಕಬ್ಬಿಣವನ್ನು ತಯಾರಿಸುವ ತಂತ್ರಜ್ಞಾನದಲ್ಲಿ ಪರಿಣಿತಿ ಪಡೆದಿದ್ದರೆಂಬುದು ಸ್ಪಷ್ಟವಾಗುತ್ತದೆ.[೩೩]

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬಳ್ಳಾರಿ ಜಿಲ್ಲೆಯ ಹಾಲಸಾಗರ, ಹುರುಳಿಹಾಳು, ತಿಮ್ಮವ್ವನಹಳ್ಳಿ, ಶಿವಗಂಗೆಹಾಳೂರು, ಚಕ್ಕೆಮಂಡಿ, ನಡುವಲವಲಹಳ್ಳಿ, ಓಬಳಾಪುರ, ಮಾರಮ್ಮನಹಳ್ಳಿ, ಮತ್ತಾಜನಹಳ್ಳಿ, ಬೊಮ್ಮನಗುಂಡು, ಯಶವಂತನಗರ, ಚಿಲುಮೆಹಳ್ಳಿ, ಚಿಲಕನಹಟ್ಟಿ, ಗೊಲ್ಲರಹಳ್ಳಿ, ನಂದಿಬಂಡೆ ಹಾಗೂ ಕೊಪ್ಪಳ ಜಿಲ್ಲೆಯ ತಾವರೆಗೇರ, ಲಿಂಗನಬಂಡಿ, ಹಿರೇಬೆಣಕಲ್ಲು ನೆಲೆಗಳಲ್ಲಿ ಕಬ್ಬಿಣ ತಯಾರಕ ಘಟಕಗಳಿದ್ದವು ಎಂಬುದಕ್ಕೆ ಕಬ್ಬಿಣದ ಕಿಟ್ಟು, ಮಣ್ಣಿನಿಂದ ಮಾಡಿದ ಕೊಳವೆ ಭಾಗಗಳು ದೊರೆತಿವೆಯಾದರೂ ಇವುಗಳ ನಿರ್ದಿಷ್ಟ ಕಾಲಮಾನವನ್ನು ಗುರುತಿಸಲಾಗಿಲ್ಲ. ಈ ಬಗ್ಗೆ ವೈಜ್ಞಾನಿಕ ಅಧ್ಯಯನದ ಅವಶ್ಯಕತೆ ಇದೆ. ಈ ಸಂಸ್ಕೃತಿಯ ಜನರು ದಿನನಿತ್ಯ ಬಳಕೆಯ ವಸ್ತುಗಳಾದ ಲೇಪನವುಳ್ಳ ಮಡಕೆಗಳು ಹಾಗೂ ತೆಳ್ಳನೆಯ ಲೇಪನವಿದ್ದ ಹೊಳಪು ರಹಿತ ಮಡಕೆಗಳು ಹಾಗೂ ದೊಡ್ಡ ದೊಡ್ಡ ಪಾತ್ರೆಗಳನ್ನು ಉಪಯೋಗಿಸುತ್ತಿದ್ದರು. ಸಣ್ಣ ಮತ್ತು ಮಧ್ಯಮ ಪ್ರಮಾಣದ ಮಡಕೆಗಳು, ಬಟ್ಟಲುಗಳನ್ನು ಚಕ್ರದ ಸಹಾಯದಿಂದ ಮತ್ತು ದೊಡ್ಡ ಗಾತ್ರದ ಗುಡಾಣಗಳನ್ನು ಹಂತ ಹಂತವಾಗಿ ಕೈಯಿಂದ ತಯಾರಿಸಿಕೊಳ್ಳುತ್ತಿದ್ದರು. ಈ ಸಂಸ್ಕೃತಿಯಲ್ಲಿ ಕಂಡುಬರುವ ಮಡಕೆಗಳು, ಕಾಂತಿಮಯ ಕೆಂಪು ಲೇಪನವಿರುವ ತೆಳು ಲೇಪನದ ಮುಸುಕು ಪಾತ್ರೆಗಳು, ಹೊಳಪಾದ ಕೆಂಪು ದ್ವಿವರ್ಣ ಮತ್ತು ಪೂರ್ಣ ಕಪ್ಪು ಬಣ್ಣದ ಮಡಿಕೆಗಳೆಂದು ವಿಂಗಡಿಸಲಾಗಿದೆ.

ತುಂಗಾಭದ್ರ ಮೇಲ್ದಂಡೆ ಪ್ರದೇಶದಲ್ಲಿ ದೊರೆತಿರುವ ಕಪ್ಪು ಹಾಗೂ ಕಪ್ಪು-ಕೆಂಪು ಮಡಕೆಗಳಲ್ಲಿ ಬಿಳಿ ಬಣ್ಣದ ರೇಖಾಚಿತ್ರಗಳಿವೆ. ಈ ಚಿತ್ರಗಳು ಸರಳವಾದವುಗಳಾಗಿವೆ. ಸಣ್ಣ ಮತ್ತು ಮಧ್ಯಮ ಪ್ರಮಾಣದ ಮಡಿಕೆಗಳ ಮೇಲೆ ಅಪರೂಪವಾಗಿ ಗೀಚಿರುವ ಚಿಹ್ನೆಗಳಿದ್ದು ಅವುಗಳನ್ನು ಆಂಗ್ಲ

ಭಾಷೆಯಲ್ಲಿ 'ಗ್ರೆಫಿಟ್ಟಿ' ಎಂದು ಕರೆಯುತ್ತಾರೆ.[೩೪] ಸಾಮಾನ್ಯವಾಗಿ ಇಂತಹ ಗೀರು ಚಿತ್ರಗಳಿರುವ ಮಡಕೆಗಳು ಅಧ್ಯಯನ ಪ್ರದೇಶದಲ್ಲಿ ಕಂಡುಬರುತ್ತವೆ. ಒಂದೊಂದು ಮಡಕೆಗಳ ಮೇಲೆ ವಿಶೇಷವಾಗಿ ಎರಡು ರೇಖೆಗಳಿರುವುದನ್ನು ಕಾಣಬಹುದು. ಈ ರೀತಿಯ ಗೀರು ಚಿತ್ರಗಳನ್ನು ಹಲವು ವಿದ್ವಾಂಸರು ಅಧ್ಯಯನ ಮಾಡಿದ್ದಾರೆ. ಆದರೆ ಅವುಗಳ ಬಗ್ಗೆ ವಿದ್ವಾಂಸರಲ್ಲಿ ಒಮ್ಮತದ ಅಭಿಪ್ರಾಯವಿಲ್ಲ. ಈ ಹಂತದ ಕಪ್ಪು–ಕೆಂಪು ದ್ವಿವರ್ಣದ ಮಡಕೆಗಳ ತಯಾರಿಕೆಯನ್ನು ಕುರಿತಾಗಿ ವಿದ್ವಾಂಸರು ವೈಜ್ಞಾನಿಕ ವಿಶ್ಲೇಷಣೆಯನ್ನು ಕಂಡುಕೊಂಡಿದ್ದಾರೆ. ಇದರಲ್ಲಿ ಕುಂಬಾರ ಹಸಿಮಣ್ಣಿನಿಂದ ಮಾಡಿದ ಮಡಕೆಯನ್ನು ಬಿಸಿಲಿಗೆ ಒಣಗಿಸಿ ಅವುಗಳನ್ನು ತಲೆಕೆಳಗಾಗಿಟ್ಟು ಕೆಳಭಾಗ ಮುಚ್ಚಿ ಸುಟ್ಟಿದ್ದರಿಂದ ಗಾಳಿಗೆ ಒಡ್ಡಿದ ತಳದ ಹೊರಭಾಗವು ಕೆಂಪಾಗಿಯೂ, ಮುಚ್ಚಿದ ಭಾಗ ಮತ್ತು ಒಳಭಾಗವೂ ಕಪ್ಪಾಗಿರುತ್ತದೆ ಎಂಬ ನಿರ್ಧಾರ ತಾಳಲಾಗಿದೆ. ಇಲ್ಲವೇ ಮಡಕೆಯನ್ನು ಒಂದು ಸಲ ಬಟ್ಟಿಯಲ್ಲಿ ಸುಟ್ಟನಂತರ ಅದಕ್ಕೆ ಬೇಕಾದ ಭಾಗಕೆಲ್ಲ ಕಪ್ಪು ಬಣ್ಣವನ್ನು ಲೇಪನ ಮಾಡಿ ಪುನಃ ಮತ್ತೊಂದು ಸಲ ಬಟ್ಟಿಯಲ್ಲಿ ಸುಟ್ಟಿದ್ದರಿಂದ ಮಡಕೆಗಳಲ್ಲಿ ಎರಡು ರೀತಿಯ ಬಣ್ಣ ಮೂಡಿರುತ್ತದೆ ಎಂಬ ಮತ್ತೊಂದು ನಿರ್ಧಾರಕ್ಕೆ ಬರಲಾಗಿದೆ.[೩೫] ಹೀಗೆ ಕುಂಬಾರ ಮಡಕೆ ತಯಾರಿಕೆಯಲ್ಲಿ ತನ್ನ ಕೌಶಲ್ಯವನ್ನು ಉಪಯೋಗಿಸಿರುವುದು ಈ ಕಾಲದ ಮಡಕೆಗಳಲ್ಲಿ ಕಾಣಬಹುದು. ಇಂತಹ ದ್ವಿವರ್ಣದ ಮಡಕೆಗಳು ಹರಪ್ಪ ನಾಗರಿಕತೆ ಹಂತದಲ್ಲೂ ತಯಾರಾಗುತ್ತಿದ್ದವೆಂಬ ವಿವರಗಳು ಪ್ರಕಟವಾಗಿವೆ.

ಬೃಹತ್ ಶಿಲಾಯುಗ ಸಂಸ್ಕೃತಿಯ ಜನರ ಮತ್ತೊಂದು ಲಕ್ಷಣಗಳಲ್ಲಿ ಅಲಂಕಾರಿಕ ವಸ್ತುಗಳ ತಯಾರಿಕೆಯೂ ಒಂದು. ಹಿಂದಿನ ಸಂಸ್ಕೃತಿಯ ಜನರಂತೆ ಈ ಜನರು ಪೋಣಿಸಿದ ಮಣಿಗಳ ಸರಗಳನ್ನು ತೊಡುತ್ತಿದ್ದರು. ಅವು ಅಗೇಟ್, ಕಾರ್ನೀಲಿಯ, ಜಾಸ್ಪರ್ ಅಪರೂಪವಾಗಿ ಚರ್ನೋರ್ರೈಟ್ ಲ್ಯಾಪೀಜ್‌ಲಜೂಲಿ(ನೀಲ) ಮೊದಲಾದ ಉತ್ತಮ ಜಾತಿಯ ಕಲ್ಲಿನ ಮಣಿಗಳಿಂದ ತಯಾರಿಸಿಕೊಳ್ಳುತ್ತಿದ್ದರು. ಅಧ್ಯಯನ ಪ್ರದೇಶದಲ್ಲಿರುವ ಬಳ್ಳಾರಿ ಜಿಲ್ಲೆಯ ಗುಡೇಕೋಟೆಯಲ್ಲಿ(ಕೂಡ್ಲಿಗಿ ತಾಲೂಕು) ಯು.ಜಯಣ್ಣ ಅವರು ಜಾಸ್ಪರ್‌ನಿಂದ ತಯಾರಿಸಿದ ಮಣಿಗಳನ್ನು ಶೋಧಿಸಿದ್ದಾರೆ.[೩೬] ಕುರುಗೋಡು ನೆಲೆಯಲ್ಲಿ ಸುಡಾವೆ ಮಣ್ಣಿನಿಂದ ತಯಾರಿಸಿದ ಎರಡು ಮಣಿಗಳು ಮತ್ತು ಸಿಯಾಟೈಟ್‌ನಿಂದ ತಯಾರಿಸಿದ ಒಂದು ಮಣಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿವೆ. ಹಾಗೂ ಅಪರೂಪವಾಗಿ ಚಿನ್ನದಿಂದಲೂ ತಯಾರಿಸಿದ ಮಣಿಗಳ ಸರಗಳನ್ನು ಈ ಕಾಲದ ಜನರು ಧರಿಸುತ್ತಿದ್ದರು. ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿಯ ಒಂದು ಶಿಲಾಸಮಾಧಿಯಲ್ಲಿ ಚಿನ್ನದ ಮಣಿಗಳು ದೊರೆತಿವೆ. ಇವುಗಳು ಸಣ್ಣ ಸಣ್ಣ ಕೊಳವೆ ಆಕಾರದಲ್ಲಿದ್ದು ಈಗಲೂ ಸಹ ಇಂತಹ ಮಣಿಗಳನ್ನು ಗ್ರಾಮೀಣ ಜನರು ಧರಿಸುತ್ತಾ ಅವುಗಳನ್ನು 'ಕೋವಿಗಳೆಂದು' ಕರೆಯುತ್ತಾರೆ. ತೀರ ಸಾಮಾನ್ಯ ಜನರು ಮಣ್ಣಿನ ಸರಗಳನ್ನು ಧರಿಸುತ್ತಿರಬೇಕು. ಮೇಲ್ವರ್ಗದ ಜನತೆ ಮಾತ್ರ ಚಿನ್ನದ ಮಣಿಸರವನ್ನು ಅಲಂಕಾರಿಕ ಆಭರಣಗಳಾಗಿ ಧರಿಸುತ್ತಿದ್ದರೆಂದು ತಜ್ಞರಾದ ಅ.ಸುಂದರ ಅವರು ಅಭಿಪ್ರಾಯಪಟ್ಟಿದ್ದಾರೆ.[೩೭]

ಧಾರ್ಮಿಕ ವಿಧಿಗಳಲ್ಲಿ ಭಾಗವಹಿಸುತ್ತಿದ್ದ ಮಹಿಳೆಯರು ಅಲ್ಲಿ ಸೇರಿದ ವ್ಯಕ್ತಿಗಳು ಅಪರೂಪವಾಗಿ ತಮ್ಮ ತಮ್ಮ ನಗ್ನ ದೇಹಗಳನ್ನು ವಿವಿಧ ರೀತಿಯ ರೇಖಾಚಿತ್ರಗಳಿಂದ ಧಾರ್ಮಿಕ ಕಟ್ಟುಪಾಡುಗಳಿಗೆ ಅನುಗುಣವಾಗಿ ಅಲಂಕರಿಸಿಕೊಳ್ಳುತ್ತಿದ್ದರು ಎಂಬುದನ್ನು ಹಿರೇಬೆಣಕಲ್ಲು ನೆಲೆಯಲ್ಲಿನ ಒಂದು ಗವಿಯಲ್ಲಿ ಕಂಡುಬರುವ ರೇಖಾಚಿತ್ರಗಳಿಂದ ಗುರುತಿಸಬಹುದು. ಈ ಸಂಸ್ಕೃತಿಯ ಜನರು ಕಲಾಕ್ಷೇತ್ರಕ್ಕೂ ಸಹ ವಿಶಿಷ್ಟ ಕೊಡುಗೆ ನೀಡಿದ್ದರು ಎಂಬುದಕ್ಕೆ ಗವಿವರ್ಣಚಿತ್ರ ಮತ್ತು ಬಯಲು ಬಂಡೆಚಿತ್ರಗಳಿಂದ ತಿಳಿಯಬಹುದು. ಹಿರೇಬೆಣಕಲ್ಲು, ಬಿಳೆಬಾವಿ, ಮಲ್ಲಾಪುರ, ಕಪ್ಪಗಲ್ಲು, ತೆಕ್ಕಲಕೋಟೆ, ಅಪ್ಪಯ್ಯನಹಳ್ಳಿ, ರಾಜಾಪುರ, ಹಾಲಸಾಗರ, ದೇವರಟ್ಟಿ, ಗುಡೇಕೋಟೆ, ಕುರುಗೋಡು, ಸಂಗನಕಲ್ಲು ಮೊದಲಾದ ನೆಲೆಗಳಲ್ಲಿ ಇಂತಹ ಕಲಾತ್ಮಕ ನೆಲೆಗಳು ದೊರೆತಿವೆ. ಇವುಗಳಲ್ಲಿ ಸಾಕಷ್ಟು ಧಾರ್ಮಿಕ ವಿಧಿ-ವಿಧಾನಗಳಿಗೆ ಸಂಬಂಧಿಸಿವೆ.

೧೯೬೧ರಲ್ಲಿ ಅ.ಸುಂದರ ಅವರು ಚಿಕ್ಕರಾಮಪುರ ಸಮೀಪದ 'ಒನಕೆ ಕಿಂಡಿ' ಎಂಬ ಸ್ಥಳದಲ್ಲಿ (ಗಂಗಾವತಿ ತಾಲ್ಲೂಕು) ಅತ್ಯಂತ ಸ್ವಾರಸ್ಯಕರವಾದ ಬೃಹತ್ ಶಿಲಾಯುಗ ಸಂಸ್ಕೃತಿಯ 'ಕಲ್ಲುವೃತ್ತ ಸಮಾಧಿ ಚಿತ್ರ'ವನ್ನು ಶೋಧಿಸಿ ವಿಶ್ಲೇಷಣಾತ್ಮಕ ಸಂಶೋಧನ ಲೇಖನವನ್ನು ಪ್ರಕಟಿಸಿದರು.[೩೮] ಇದೇ ಚಿತ್ರವನ್ನು ಮರು ಅಧ್ಯಯನ ಮಾಡಿರುವ ಟಿ.ಎಂ ಕೇಶವ ಮತ್ತು ಜಿ.ಎಸ್. ನರಸಿಂಹನ್ ಮೊಲಾದವರು ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಎಂಬ ಗ್ರಂಥದಲ್ಲಿ ಇದೊಂದು ಪ್ರಾಗೈತಿಹಾಸಿಕ ನಕ್ಷೆಯೇ? ಎಂದು ತರ್ಕಿಸಿದ್ದಾರೆ.[೩೯]

ಮಲ್ಲಾಪುರದ ಗವಿ ವರ್ಣಚಿತ್ರದಲ್ಲಿ ಎರಡು ಕಾಲುಗಳನ್ನು ಅಗಲಿಸಿ ಸ್ವಲ್ಪ ಕುಗ್ಗಿದ ನಿಂತ ಭಂಗಿಯಲ್ಲಿರುವ ಒಂದು ನಗ್ನ ಮನುಷ್ಯನ ೨.ಮೀ ಎತ್ತರ ಚಿತ್ರವಿದ್ದು, ಮುಖ ಮೈಯಲ್ಲಿ ರೇಖಾ ಚಿತ್ರದಿಂದ ತುಂಬಿ ಹೋಗಿದೆ. ರಟ್ಟೆಗಳನ್ನು ಅಡ್ಡಲಾಗಿ ಹಿಡಿದು ಕೈಗಳು ಮೇಲಕ್ಕೆತ್ತಿವೆ. ಆದ್ದರಿಂದ ಈ ವ್ಯಕ್ತಿಯು ಸಂತಾನ ಅಭಿವೃದ್ಧಿಗೋಸ್ಕರ ಧಾರ್ಮಿಕ ವಿಧಿಯ ನೃತ್ಯದಲ್ಲಿ ಭಾಗವಹಿಸಿದಂತೆ ತೋರುತ್ತದೆ.[೪೦] ಹಂಪಿಯ ವರ್ಣಚಿತ್ರದಲ್ಲಿ ಒಬ್ಬ ಸ್ತ್ರೀಯು ಸೇರಿದಂತೆ ನಾಲ್ಕಾರು ಜನರು ನೃತ್ಯದಲ್ಲಿ ತೊಡಗಿರುವಂತೆ ಕಂಡುಬಂದಿದೆ. ಇವಲ್ಲದೆ ನೆರಳಿನಾಕೃತಿಯ ಹಲವಾರು ಚಿತ್ರಗಳಿವೆ. ಕುದುರೆ ಸವಾರರು, ವಿವಿಧ ಆಯುಧಗಳನ್ನು ಧರಿಸಿದ ಬೇಟೆಗಾರರು, ಯೋಧರ ಚಿತ್ರಗಳು ಇಂತಹ ಗವಿಗಳಲ್ಲಿವೆ. ಹಿರೇಬೆಣಕಲ್‌ನಲ್ಲಿನ ಒಂದು ಗವಿಯಲ್ಲಿ ಒಬ್ಬ ವ್ಯಕ್ತಿಯು ಬಾಗಿದ ಕೋಡುಗಳಂತೆ ಶಿರಸ್ತ್ರಾಣ ಮತ್ತು ಬಾಲವನ್ನು ಧರಿಸಿ ನೃತ್ಯಮಾಡುವ ಚಿತ್ರಗಳು ಅಪರೂಪದ ಚಿತ್ರಗಳಾಗಿವೆ.[೪೧] ಇಂತಹ ಧಾರ್ಮಿಕ ಆಚರಣೆಯ ಚಿತ್ರಗಳು ಬಳ್ಳಾರಿ ಜಿಲ್ಲೆಯ ಗುಡೇಕೋಟೆ ಸಮೀಪದ ಸನ್ಯಾಸಪ್ಪ ಕೆರೆ ದಂಡೆಯಲ್ಲಿರುವ ಹುಟ್ಟು ಬಂಡೆಯ ಮೇಲಿವೆ. ನಗ್ನ ಮಾನವಾಕೃತಿಯ ಚಿತ್ರದಲ್ಲಿ ತನ್ನ ಎರಡೂ ಕೈಗಳನ್ನು ಸಮಾನಾಂತರವಾಗಿ ಚಾಚಿರುವಂತೆ ಚಿತ್ರಿಸಲಾಗಿದೆ. ಹಾಗೂ ಬೆಟ್ಟದ ಸಮೀಪದಲ್ಲಿರುವ ದೊಡ್ಡ ದೊಡ್ಡ ಬಂಡೆಗಳ ಮೇಲೆ ಮಾನವಾಕೃತಿಯ ಚಿತ್ರಗಳಿವೆ. ಅದೇ ರೀತಿ ಕೂಡ್ಲಿಗಿ ತಾಲ್ಲೂಕಿನ ಮಾಳೆಹಳ್ಳಿಯ ಧವಳಪ್ಪನ ಗುಂಡಿನ ಮಧ್ಯದಲ್ಲಿ ಜಿಂಕೆ ಹಾಗೂ ಹಾವಿನ ಕುಟ್ಟು

ಚಿತ್ರಗಳನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗುರುತಿಸಲಾಗಿದೆ. ಹಂಪಿ ಪರಿಸರದಲ್ಲಿಯೂ ಸಹ ಈ ಬಗೆಯ ವರ್ಣಚಿತ್ರಗಳು ಹಲವು ಕಡೆ ಕಂಡುಬಂದಿವೆ. ಹೀಗೆ ವಿವಿಧ ತಂತ್ರಗಳಿಂದ ಹಲವು ಪ್ರಕಾರಗಳಲ್ಲಿ ಸಾಂಕೇತಿಕವಾಗಿಯೂ ಮತ್ತು ನೈಜವಾಗಿಯೂ ಚಿತ್ರಗಳನ್ನು ಬಿಡಿಸುವ ಈ ಜನರ ಕುಶಲತೆ ಈ ಸಂಸ್ಕೃತಿ ಜನರ ಪ್ರಮುಖ ಲಕ್ಷಣವಾಗಿದ್ದವುಗಳೆಂದು ಅಭಿಪ್ರಾಯಿಸಬಹುದು.

ಬೃಹತ್ ಶಿಲಾಯುಗದ ಜನರು ಧಾರ್ಮಿಕ ವೈಶಿಷ್ಟ್ಯತೆಯನ್ನು ಹೊಂದಿದವರಾಗಿದ್ದರು ಎಂಬುದು ಅವರು ರಚಿಸಿರುವ ಬೃಹದಾಕಾರದ ಕಲ್ಲಿನ ಗೊಂಬೆಗಳು ಸೂಚಿಸುತ್ತವೆ. ಚಪ್ಪಟೆಕಲ್ಲಿನ ನೆರಳಿನಲ್ಲಿ ಮಾನವಾಕೃತಿಯನ್ನು ಹೋಲುವ ಕಲ್ಗೊಂಬೆಯನ್ನು ರಚಿಸಲಾಗಿದ್ದು, ಅವುಗಳಿಗೆ ಯಾವುದೇ ರೀತಿಯ ಲಕ್ಷಣಗಳಿರುವುದಿಲ್ಲ. ಹಾಗೂ ಮೈಯನ್ನು ಕೆತ್ತಿರುವುದಿಲ್ಲ. ಇಂತಹ ಗೊಂಬೆಗಳು ಕರ್ನಾಟಕ, ತಮಿಳುನಾಡು, ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಕಂಡುಬಂದಿವೆ. ಈ ರೀತಿಯ ಮಾನವಾಕೃತಿಯ ಗೊಂಬೆಗಳು ಕರ್ನಾಟಕದಲ್ಲಿ ಒಟ್ಟು ಆರು ಕಡೆಗಳಲ್ಲಿ ಕಂಡುಬಂದಿವೆ. ಅವುಗಳಲ್ಲಿ ಕೊಪ್ಪಳ ಜಿಲ್ಲೆಯ ಹಿರೇಬೆಣಕಲ್ಲು, ಕಲ್ಲಪ್ಪನಕ್ಯಾಂಪ್, ಅಗೋಲಿ[೪೨](ಗಂಗಾವತಿ ತಾಲೂಕು), ಐಹೊಳೆ,[೪೩](ಬಾಗಲಕೋಟೆ ಜಿಲ್ಲೆ) ಹಾಗೂ ಬಳ್ಳಾರಿ ಜಿಲ್ಲೆಯ ಕುಮತಿ, ಹುಲಿಕುಂಟೆ,[೪೪] (ಕೂಡ್ಲಿಗಿ ತಾಲೂಕು) ನೆಲೆಗಳಲ್ಲಿವೆ. ಇವುಗಳಲ್ಲಿ ಐಹೊಳೆಯ ಗೊಂಬೆಯು ತೀರ ಸಾಂಕೇತಿಕವಾಗಿದೆ. ಇದು ಅರ್ಧಗೋಲಾಕೃತಿಯಲ್ಲಿದ್ದು ತಲೆ, ಕಿರಿದಾದ ಕಂಠ, ಮುಂಚಾಚಿದ ಮೊಂಡುಭುಜಗಳು ಮತ್ತು ನೀಳವಾದ ಮುಂಡ, ಚೂಪಾದ ಬುಡವನ್ನು ಹೊಂದಿದೆ. ಹಿರೇಬೆಣಕಲ್ಲಿನ ಮಾನವಾಕೃತಿಯ ತಲೆ ದೊಡ್ಡದಾಗಿದ್ದು, ಮೂರನೆಯ ಎರಡು ಭಾಗವು ಭೂಮಿಯಲ್ಲಿ ಹುಗಿದಿದೆ. ಒಬ್ಬ ಮನುಷ್ಯನು ರಟ್ಟೆಗಳನ್ನು ಅಡ್ಡ ಚಾಚಿ ಕೈಗಳನ್ನು ಮೇಲೆತ್ತಿ ನಿಂತಂತೆ ಒಂದು ಶಿಲಾಸಮಾಧಿ ಬಳಿ ನಿರ್ಮಿಸಲಾಗಿದೆ. ಆದರೆ ಹುಲಿಕುಂಟೆ ಮತ್ತು ಕುಮತಿ ಮಾನವಾಕೃತಿಯ ಶಿಲೆಗಳು ಅಪರೂಪದ ಮಾನವಾಕೃತಿಯ ಕಲ್ಗೊಂಬೆಗಳನ್ನಿಸಿವೆ.

ಕುಮತಿ ಮತ್ತು ಹುಲಿಕುಂಟೆಯ ಮಾನವಾಕೃತಿಗಳನ್ನು ಬಹು ಸೂಕ್ಷ್ಮವಾಗಿ ಗಮನಿಸಿದರೆ, ಎಡಭಾಗದಲ್ಲಿರುವ ಗೊಂಬೆಯು ಸ್ತ್ರೀಯದಾಗಿದ್ದು, ಸೊಂಟದ ಭಾಗವು ಚಿಕ್ಕದಾಗಿದೆ. ಸೊಂಟದ ಕೆಳಗಿನ ಭಾಗ ದಪ್ಪವಾಗಿದೆ. ಆದರೆ ಬಲ ಭಾಗದ ಶಿಲ್ಪ ಎತ್ತರವಾಗಿದ್ದು, ಸೊಂಟದ ಭಾಗ ದಪ್ಪವಾಗಿದೆ. ಆದ್ದರಿಂದ ಈ ಎರಡೂ ಮಾನವಾಕೃತಿಗಳು ಸ್ತ್ರೀ ಪುರುಷರನ್ನು ಸಾಂಕೇತಿಸುತ್ತವೆ. ಇಂತಹ ನಿರ್ಮಿತಿಗಳು ತಮಿಳುನಾಡಿನ ಮೊಟ್ಟೂರು ಹಾಗೂ ಆಂಧ್ರಪ್ರದೇಶದಲ್ಲಿಯೂ ಸಹ ಕಂಡುಬಂದಿವೆ. ತಮಿಳುನಾಡಿನ ಮೊಟ್ಟೂರಿನ ಕಲ್ಲುಗೊಂಬೆಯು ವೃತ್ತಸಮಾಧಿಯ ಒಂದು ಭಾಗವಾಗಿದ್ದಿತು ಎಂದು ಉತ್ಖನನದಿಂದ ಕಂಡುಕೊಂಡ ಫಲಿತಾಂಶಗಳಿಂದ ತಿಳಿದುಬರುತ್ತದೆ.[೪೫] ಆಂಧ್ರಪ್ರದೇಶದ ಒಂದು ಕಲ್ಗೋರಿಯಲ್ಲಿ ತ್ರಿಶೂಲ ಮತ್ತು ಜೇವರ್ಗಿ, ಅಂದೋಲ, ಚಿಕ್ಕನಹಳ್ಳಿ, ಮೊದಲಾದವುಗಳಲ್ಲಿ ಧಾರ್ಮಿಕ ಆಚರಣಾ ಸಾಮಾಗ್ರಿಗಳು ದೊರೆತಿರುವುದು ಗಮನಾರ್ಹ ಸಂಗತಿಯಾಗಿದೆ. ಇಂತಹ ಮಾನವಾಕೃತಿಯ ಶಿಲೆಗಳನ್ನು ಪ್ರಾದೇಶಿಕವಾಗಿ ಪಾಂಡವರಕಲ್ಲು, ರಾಕ್ಷಸಗಲ್ಲು, ರಕ್ಕಸಗಲ್ಲು, ಬುಡಕಟ್ಟು ಜನರು, ಡೆಮನ್ಸ್(Demns), ಪಿಗ್ಮೀಸ್(Pygmies) ಎಂಬ ಸ್ಥಳೀಯವಾಗಿ ವಿಭಿನ್ನ ಹೆಸರುಗಳಿಂದ ಕರೆಯಲಾಗುತ್ತದೆ.[೪೬]

ಪುರಾತತ್ವ ವಿದ್ವಾಂಸರಾದ ಅ.ಸುಂದರ ಅವರು ಕುಮತಿಯ ಗೊಂಬೆಗಳು ಪಂಚಪಾಂಡವರನ್ನು ನಿರ್ದೇಶಿಸುತ್ತವೆ ಎಂದಿದ್ದಾರೆ. ಈ ಗೊಂಬೆಗಳು ಬೃಹತ್ ಶಿಲಾ ಸಂಸ್ಕೃತಿಯ ಧಾರ್ಮಿಕ ನಂಬಿಕೆ, ಭಾವನೆ ಮತ್ತು ಪರಂಪರೆಯನ್ನು ಸೂಚಿಸುವ ಆಕಾರವಾಗಿರುವುದಲ್ಲದೆ ಕರ್ನಾಟಕದ ಮೂರ್ತಿ ಶಿಲ್ಪದ ಪೂರ್ವಭಾವಿ ಹಂತವನ್ನು ಸೂಚಿಸುತ್ತವೆ ಎಂಬ ಅಭಿಪ್ರಾಯ ಹೊಂದಿದ್ದಾರೆ. ಜೊತೆಗೆ ಇದುವರೆಗೂ ಪರಿಶೀಲಿಸಿದ ಬೃಹತ್ ಶಿಲಾಗೋರಿಗಳಿಗಿಂತಲೂ ಅಪರೂಪದ ನಿರ್ಮಿತಿಗಳಾಗಿವೆ. ಹಾಗೂ ಆ ಸಮಾಜದ ಜನರು ಹೊಂದಿರುವ ನಿರ್ಮಾಣ ಕಾರ್ಯಗಳಲ್ಲಿರುವ ಸರಳ ಹಾಗೂ ಚಾರಿತ್ರಿಕ ಕುಶಲತೆಯನ್ನು ಎತ್ತಿತೋರಿಸುತ್ತವೆ ಎಂಬ ಅಭಿಪ್ರಾಯ ಹೊಂದಲಾಗಿದೆ.[೪೭] ಆದರೆ ಎಲ್. ಶ್ರೀನಿವಾಸ್ ಅವರು ಹಂಪಿ ಪರಿಸರದ ಆದಿಮಾನವನ ನೆಲೆಗಳು ಎಂಬ ಪುಸ್ತಕದಲ್ಲಿ ಶ್ರೀ ನುಂಕೇಶ್ವರ ದೇವರ ಶಾಪದಿಂದಾಗಿಯೇ ರಾಕ್ಷಸರು ಕಲ್ಲುಗಳಾಗಿ ನಿಂತಿರುವುದು ಎಂಬ ಅಭಿಪ್ರಾಯವು ಸಮಂಜಸವಲ್ಲ ಎಂಬ ಅನಿಸಿಕೆಯನ್ನು ವ್ಯಕ್ತಪಡಿಸುತ್ತಾ ಶ್ರೀ ನುಂಕೇಮಲೇಶ್ವರ ಮತ್ತು ಮಲ್ಲಿಕಾರ್ಜುನ ಮೊದಲಾದ ದೇವಾಲಯಗಳಿಗೆ ಕದಂಬರು ದತ್ತಿ ಬಿಟ್ಟ ಬಗ್ಗೆ ಶಾಸನಗಳು ಮತ್ತು ಕೆಲವು ವ್ಯಕ್ತ ಆಕರಗಳಿಂದ ತಿಳಿದುಬರುತ್ತದೆ. ಹಾಗಾಗಿ ಇಲ್ಲಿ ಗಮನಿಸಬಹುದಾದ ಸಂಗತಿ ಏನೆಂದರೆ ಶ್ರೀನುಂಕೇಭೈರವೇಶ್ವರ ಕದಂಬರ ಆರಾಧ್ಯ ದೈವವೆಂದು ತಿಳಿಯುವುದರಿಂದ ಪ್ರಸ್ತುತ ದೇವತಾ ಪುರುಷನ ಶಾಪದಿಂದಾಗಿ ಅಥವಾ ಬಾಣ ಪ್ರಯೋಗದಿಂದ ಇಂಥಾ ಆಕೃತಿಗಳು ನಿರ್ಮಾಣವಾಗಿಲ್ಲ, ಬದಲಾಗಿ ನುಂಕಪ್ಪ ಬೃಹತ್ ಶಿಲಾಯುಗ ಕಾಲದ ಪ್ರಮುಖ ನಾಯಕನಾಗಿರಬೇಕು. ಅವನು ಕುಮತಿ, ಹುಲಿಕುಂಟೆ ಪ್ರದೇಶಗಳಿಗೆ ಬೇಟೆಗಾಗಿ ಬಂದಿರಬೇಕು. ಅಲ್ಲಿ ನೆಲಸಿದ್ದ ಸ್ಥಳೀಯ ಜನರು ಹೊಸ ಮನುಷ್ಯನೊಡನೆ ಹೋರಾಟಕ್ಕೆ ಇಳಿದಿರಬೇಕು. ಪ್ರಾಯಶಃ ಶ್ರೀ ನುಂಕೇಶ್ವರ ಬಹಳ ಬಲಿಷ್ಠನಿದ್ದು, ಈ ಎರಡು ಪ್ರದೇಶಗಳಲ್ಲೂ ತನ್ನ ವಿರುದ್ಧ ಹೋರಾಟಕ್ಕೆ ಬಂದವರನ್ನು ಕೊಂದಿರಬೇಕು ಎಂದಿದ್ದಾರೆ[೪೮](ಆದಿಮ ಸಮಾಜಗಳಲ್ಲಿ ತಮ್ಮ ಜನರನ್ನು ಹೊರತುಪಡಿಸಿ ಅಂದರೆ ಹೊಸ ಮನುಷ್ಯರು ತಾವಿದ್ದ ಪ್ರದೇಶಕ್ಕೆ ಬಂದರೆ, ಅವರೊಡನೆ ಯುದ್ಧಕ್ಕೆ ಇಳಿಯುವುದು ಸಾಮಾನ್ಯವಾಗಿತ್ತು). ಹಾಗಾಗಿ ಅಲ್ಲಿ ಎಷ್ಟು ಜನಸತ್ತರೋ ಅವರೆಲ್ಲರ ಸ್ಮರಣೆಗೆ ಮಾನವಾಕಾರದ ಶಿಲ್ಪಗಳನ್ನು ನಿಲ್ಲಿಸಿರಬಹುದಾ? ಹಾಗೂ ಅವು ನೋಡಲು ವಿಚಿತ್ರವಾಗಿ ಗೋಚರಿಸುವುದರಿಂದ ಈ ರೀತಿ ಐತಿಹ್ಯವನ್ನು ಜನ ಹುಟ್ಟು ಹಾಕಿದರಾ? ಎಂಬ ಪ್ರಶ್ನೆ ಕಾಡುತ್ತದೆ. ಈ ಶಿಲೆಗಳು ದಕ್ಷಿಣ ಭಾರತದ ಇತರೆ ನೆಲೆಗಳಲ್ಲಿ ದೊರೆಯುವ ನಿಲುಸುಗಲ್ಲುಗಳೋಪಾದಿಯಲ್ಲಿದ್ದು, ಇವು ಮಾನವಾಕೃತಿಯಲ್ಲಿ ಇರುವುದರಿಂದ ಪುರಾತತ್ವ ಅಧ್ಯಯನದಲ್ಲಿ ಹೆಚ್ಚು ಮಹತ್ವವನ್ನು ಪಡೆದುಕೊಂಡಿವೆ. ಆದರೆ ವ್ಯಕ್ತವಾದ ಅಭಿಪ್ರಾಯಗಳಿಗೆ ನೀಡಬಹುದಾದ ಸಮಂಜಸ ಉತ್ತರವೆಂದರೆ ಬೃಹತ್ ಶಿಲಾಯುಗದ ಜನರು ಸತ್ತಾಗ ಸಮಾಧಿ ಮಾಡುವ ವಿಧಾನವು ತುಂಬಾ ಪ್ರಾಮುಖ್ಯತೆ ಪಡೆದಿತ್ತು. ಅಂಥ ವಿಧಾನಗಳಲ್ಲಿ ಇದೊಂದು ಪ್ರಕಾರವೆಂದು ತರ್ಕಿಸಬಹುದು. ಬಹುಶಃ ಆ ಸಮಾಜದ ಹಿರಿಯ ಮುಖಂಡ ಸತ್ತಾಗ ಅವನ ನೆನಪಿಗಾಗಿ ಸ್ಮಾರಕವನ್ನು ಅದೇ ಆಕಾರದಲ್ಲಿ ಮಾಡಿ ನಿಲ್ಲಿಸಿರಬೇಕು. ಪ್ರಾಯಶಃ ಅಂದಿನ ಸಮಾಜದ ಧಾರ್ಮಿಕ ನಂಬಿಕೆಗಳಲ್ಲಿ ಇಂಥಾ ಸಂಗತಿಯು ಒಂದಾದ ವಿಷಯವಾಗಿದೆ ಎಂಬುದೇ ಹೆಚ್ಚು ಸೂಕ್ತ.

ಪ್ರಸ್ತುತ ಈ ಎರಡೂ ನೆಲೆಗಳಲ್ಲಿರುವ ಮಾನವಾಕೃತಿ ಕಲ್ಗೊಂಬೆಗಳು ನಿಧಿಗಳ್ಳರಿಂದ ಹಾಳಾಗುತ್ತಿರುವುದು ಶೋಚನೀಯ ಸಂಗತಿಯಾಗಿದೆ. ಈ ಎರಡು ನೆಲೆಗಳಲ್ಲಿ ಹೆಚ್ಚಿನ ಅಧ್ಯಯನಕ್ಕೆ ಅಂದರೆ ಭೂ ಉತ್ಖನನಕ್ಕೆ(Excavation) ಒಳಪಡಿಸಿದಾಗ ಮತ್ತಷ್ಟು ಹೊಸ ಸಂಗತಿಗಳು ಬೆಳಕಿಗೆ ಬರುವ ಸಾಧ್ಯತೆಯಿದೆ. ಅಲ್ಲದೆ ಇವು ಅಂದಿನ ಜನರ ಧಾರ್ಮಿಕ ನಂಬಿಕೆಯನ್ನು ಸೂಚಿಸುತ್ತವೆ ಎಂದು ಹೇಳಬಹುದು.

**೪.೩ ಐತಿಹ್ಯ ಮತ್ತು ನಂಬಿಕೆ ಆಚರಣೆಗಳು**

ಬೃಹತ್ ಶಿಲಾಯುಗ ಸಂಸ್ಕೃತಿಯ ನಿರ್ಮಿತಿಗಳ ಬಗ್ಗೆ ಯಾವುದೇ ಲಿಖಿತ ಆಕರಗಳು ಲಭ್ಯವಿಲ್ಲವಾದರೂ ಹಲವು ರೀತಿಯ ಐತಿಹ್ಯಗಳು, ಕಥೆಗಳು ಜನಸಾಮಾನ್ಯರ ಬಾಯಲ್ಲಿ ಮೌಖಿಕ ಆಕರಗಳಾಗಿ ಉಳಿದುಕೊಂಡಿವೆ. ಇವುಗಳು ಅಧಿಕೃತ ದಾಖಲೆಗಳಾಗಿಲ್ಲದಿದ್ದರೂ ಪರೋಕ್ಷವಾಗಿ ಇವುಗಳಲ್ಲಿ ಅಡಗಿರುವ ಕೆಲವು ವಿವರಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಸಂಪ್ರದಾಯಭರಿತ ಭಾರತದಲ್ಲಿ ದಂತಕಥೆಗಳ ನಾಯಕರು ಬೃಹತ್ ಶಿಲಾಯುಗದ ಸ್ಮಾರಕಗಳ ನಿಮಾತೃಗಳೆಂದು ನಂಬಲಾಗಿದೆ. ಅದರಲ್ಲೂ ವಿಶೇಷವಾಗಿ ಕಲ್ಲನೆ(ಡಾಲ್ಮೆನ್ಸ್), ಕಲ್ಲುವೃತ್ತ ಸಮಾಧಿಗಳು(ಡಾಲ್ಮೆಡ್ ಸಿಟ್ಸ್) ಅಂತೆಯೇ ಈ ಸ್ಮಾರಕಗಳನ್ನು ಆಂಧ್ರಪ್ರದೇಶ, ತಮಿಳುನಾಡು ಮತ್ತು ಕರ್ನಾಟಕ ಒಳಗೊಂಡಂತೆ ಪ್ರಾದೇಶಿಕವಾಗಿ ಪಾಂಡವರಗಲ್ಲು, ಪಾಂಡವರ ಮನೆ, ಪಾಂಡವಕವಿಲ್[೪೯] ಎಂಬ ವಿಭಿನ್ನ ಹೆಸರುಗಳಿಂದ ಕರೆಯಲಾಗುತ್ತದೆ.

'ಪಾಂಡವರಗಲ್ಲು' ಅಂದರೆ, ಮಹಾಭಾರತ ಕಾವ್ಯಗಳಲ್ಲಿ ಬರುವ ಪಾಂಡವರ ಗುಡಿಗಳೆಂದರ್ಥ. ತೆಲುಗಿನಲ್ಲಿ 'ಗಲ್ಲು' ಎಂದರೆ 'ಕಲ್ಲು' ಎಂಬ ಅರ್ಥವಿದೆ. ತಮಿಳು ಭಾಷೆಯಲ್ಲಿ 'ಪಾಂಡವಕವಿಲ್' ಎಂದು ಕರೆಯಲಾಗುತ್ತದೆ. ಅಂದರೆ, 'ಪಾಂಡವರ ದೇವಾಲಯಗಳೆಂಬ' ಅರ್ಥವಿದೆ. ಬ್ರಹ್ಮಗಿರಿ, ಸಂಗನಕಲ್ಲು, ಹಿರೇಬೆಣಕಲ್ಲುಗಳ ಸುತ್ತಮುತ್ತಲಿನ ಪರಿಸರದಲ್ಲಿ ಬೃಹತ್ ಶಿಲಾಸಮಾಧಿಗಳನ್ನು 'ಮೌರ್ಯರ ಮನೆಗಳು ಮತ್ತು ಕುಬ್ಜರ ಮನೆಗಳೆಂದು ಕರೆಯಲಾಗುತ್ತದೆ. ಮೋರೆಯರ ಅಂಗಡಿ ಅಥವಾ ಮೋರೆಯರ ಅಗಸಿ ಕೆಲವು ಕಡೆ ಪಾಂಡವರಮನೆ, ತೇರದಾಳ, ಹಳಂಗಳಿ, ಕೊಣ್ಣೂರುಗಳಲ್ಲಿ ಮುನಿವಾಸದ ಗುಹೆಗಳೆಂತಲೂ, ಮೊಳಕಾಲ್ಮೂರು ಪರಿಸರದಲ್ಲಿ ತೆಲುಗಿನಲ್ಲಿ ಮೋರೆಯರ ಹಿಂಡ್ಲು ಎಂತಲೂ ಕರೆಯಲಾಗುತ್ತದೆ.

ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನ ಮಸ್ಕಿನ್ಹಾಳ ಎಂಬ ಹಳ್ಳಿಯಲ್ಲಿ ಶಿಲಾವರ್ತುಲಗಳನ್ನು 'ಮೋರೇರ ಅಂಗಡಿ', 'ಮೋರಿಮಟ್ಟಿನ ಖಣಿ' ಎಂತಲೂ ಕರೆಯಲಾಗುತ್ತದೆ. ಈ ಎಲ್ಲಾ ಐತಿಹ್ಯಗಳ ಹಿನ್ನೆಲೆಯಿಂದ ಅಭಿಪ್ರಾಯಿಸುವುದಾದರೆ ಈ ಪ್ರದೇಶದಲ್ಲಿ ಬಹಳ ವರ್ಷಗಳ ಹಿಂದೆ 'ಮೊರಿಯರ್ಸ್' ಎಂಬ ಸಮುದಾಯ ಕೂಡ ಬಂದು ನೆಲೆಸಿತು ಎಂಬ ಅಭಿಪ್ರಾಯಗಳು ವ್ಯಕ್ತವಾಗಿರುವುದನ್ನು ಗಮನಿಸಬಹುದು. ಐತಿಹಾಸಿಕವಾಗಿ ಮೇಲಿನ ಪ್ರದೇಶವು ಮೌರ್ಯ ಸಾಮ್ರಾಜ್ಯದ

ದಕ್ಷಿಣ ಭಾಗವಾಗಿತ್ತು ಎಂಬುದು ಗಮನಾರ್ಹ. ಮೌರ್ಯ ಸಾಮ್ರಾಜ್ಯದ ಸ್ಥಾಪಕನಾದ ಚಂದ್ರಗುಪ್ತ ಮೌರ್ಯರು 'ಮುರ' ಎಂಬ ಶೂದ್ರ ಮಹಿಳೆಯಲ್ಲಿ ಜನಿಸಿದನು. ಮುರ ಮತ್ತು ದಮ್ಮ ಎಂಬ ಈ ರಾಣಿಯರು 'ಮಾರಿಯನ್' ಬುಡಕಟ್ಟಿನಿಂದ ಬಂದವರು. ಈ ಬುಡಕಟ್ಟಿನ ಜನಾಂಗಕ್ಕೂ ಮೌರ್ಯರ ರಾಜಮನೆತನಕ್ಕೂ ವೈವಾಹಿಕ ಸಂಬಂಧವಿತ್ತು. ವಿಶಾಖದತ್ತನು ರಚಿಸಿದ 'ಮುದ್ರಾರಾಕ್ಷಸ' ಎಂಬ ನಾಟಕ ಕೃತಿಯಲ್ಲಿ ಚಂದ್ರಗುಪ್ತ ಮೌರ್ಯ ಮನೆತನಕ್ಕೆ ತನ್ನ ತಾಯಿ ಕಡೆಯಿಂದ 'ಮೌರ್ಯ' ಎಂಬ ಹೆಸರು ಬಂದಿದೆ ಎಂಬ ಉಲ್ಲೇಖವಿದೆ.

ಕರ್ನಾಟಕದಲ್ಲಿ ಕಂಡುಬರುವ ಕೆಲವೊಂದು ಶಾಸನಗಳು ಮೊರೆಯುವರು ಒಂದು ಸಮುದಾಯವಾದರೆ ಮೌರ್ಯರು ಒಂದು ರಾಜವಂಶದವರೆಂದು ಉಲ್ಲೇಖಿಸುತ್ತವೆ. ಮಹಾವಂಶದ (Mahavamsa Tika) ಪ್ರಕಾರ 'ಮೌರ್ಯ' ಎಂಬ ರಾಜವಂಶವು ಪೀಪಲಿವನದ ಮೌರ್ಯರು ಎಂಬ ಮೂಲದಿಂದ ಬಂದಿದೆ. ಮೊರೆಯ ಎಂದರೆ, ಹರ್ಷದಾಯಕ ಅಥವಾ ಸಂತೋಷಭರಿತ ಜನರಿಂದ ತುಂಬಿದ ನಾಡು ಎಂದಾಗುತ್ತದೆ. ಅಲ್ಲದೆ ಮೊರ ಎಂಬ ಪ್ರಾಕೃತ ಶಬ್ದದ ಅರ್ಥ ನವಿಲು ಎಂದರ್ಥ.[೩೦] ಮೊರಿಯ ಎಂದರೆ, ನವಿಲುಗಳು ಪ್ರತಿಧ್ವನಿಸುವ ನಾಡಿನಲ್ಲಿ ವಾಸಿಸುವ ಜನರು ಎಂದರ್ಥವಾಗುತ್ತದೆ. ಅಲ್ಲದೇ ನವಿಲು ಬೇಟೆಯ ಸಂಬಂಧವಾಗಿಯೂ ಇಂಥ ವಿಚಾರವನ್ನು ಗಮನಿಸಬಹುದು. ಅಲ್ಲದೇ ಮಯೂರ ರೂಢನಾದ ಕಾರ್ತಿಕೇಯನ ಸಂಬಂಧಿಸಿದ ಸಂಗತಿಗಳನ್ನು ಕೂಡ ಪರಿಶೀಲಿಸಬೇಕಾಗುತ್ತದೆ. ಇದಕ್ಕೆ ಪೂರಕವಾಗಿ ಹಿರೇಬೆನಕಲ್ಲು, ಪಿಕ್ಲಿಹಾಳ್ ವರ್ಣಚಿತ್ರಗಳಲ್ಲಿ ಆಯುಧ ಈಟಿ (ಭರ್ಜಿ)ಯಾಗಿದ್ದು, ಬ್ರಹ್ಮಗಿರಿಯ ಬೃಹತ್ ಶಿಲಾಸಮಾಧಿಗಳಲ್ಲಿ ಈಟಿಗಳು ದೊರೆತಿವೆ. ಅಲದೇ ನವಿಲು ಚಿತ್ರಗಳು ಮೂಡಿಬಂದಿವೆ. ಈ ದೃಷ್ಟಿಯಿಂದ ಈ ಜನರು ಕಾರ್ತೀಕೆಯನ ಭಕ್ತಾದಿಗಳಾಗಿರಬಹುದು? ಎಂಬ ವಿಚಾರವು ಚರ್ಚಾರ್ಹವಾದುದು. ಈ ಎಲ್ಲಾ ಅಂಶಗಳಿಂದ ಬೃಹತ್ ಶಿಲಾಸಮಾಧಿಗಳು ಮೊರೆಯರಿಗೆ ಸಂಬಂಧಿಸಿದವುಗಳಾಗಿವೆ.

ಬೃಹತ್ ಶಿಲಾಸಮಾಧಿಯ ಮೊರೆವರಿಗೂ ಪೀಪಲಿವನದ ಮೊರೆಯರಿಗೆ ಇರುವ ಸಂಬಂಧವನ್ನು ಕಲ್ಪಿಸುತ್ತಾ ಬೃಹತ್ ಶಿಲಾಸಮಾಧಿ ನಿರ್ಮಾತೃಗಳು ಮೊರೆವರು ನಿರ್ಮಿಸಿದ ಒಂದು ವಿಧವೆಂದು ಅಭಿಪ್ರಾಯಿಸಲಾಗಿದೆ. ಅವರು ಹಿರೇಬೆನಕಲ್ಲು ಮತ್ತು ಬ್ರಹ್ಮಗಿರಿ ಪ್ರದೇಶಗಳಲ್ಲಿ ವಾಸಿಸರಬಹುದು. ಅಂದರೆ ಈ ಎರಡು ನೆಲೆಗಳು ಅವರ ಆದಿ ನೆಲೆಗಳಾಗಿರಬಹುದು. ಮೌರ್ಯರ ಆಳ್ವಿಕೆಯ ಅವಧಿಯಲ್ಲಿ ಮೊರೆವರೆಂಬ ಜನಾಂಗವು ಈ ಪ್ರದೇಶದ ಸಾಮಾನ್ಯವರ್ಗವಾಗಿದ್ದಿತ್ತೆಂಬುದು ಅ.ಸುಂದರ ಅವರ ಅಭಿಪ್ರಾಯಗಳಾಗಿವೆ.[೩೧]

ಕುಮತಿಯಲ್ಲಿರುವ ಮಾನವಾಕೃತಿಗಳ ಬಗ್ಗೆ ಸ್ಥಳೀಯ ಜನರು ಐತಿಹ್ಯ ಮತ್ತು ದಂತ ಕಥೆಗಳನ್ನು ಹೊಂದಿದ್ದಾರೆ. ರಕಸಕಲ್ಲು, ರಾಕ್ಷಸಗಲ್ಲು, ರಕ್ಕಸಗಲ್ಲು, ರಕ್ಷಿಸಿಕಲ್ಲುಗಳೆಂದು ಈ ಪ್ರದೇಶವನ್ನು ರಕ್ಕಸ ಮಟ್ಟಿ, ರಕ್ಷಿಸಿ ಮಟ್ಟಿಯೆಂದು ಕರೆಯುತ್ತಾರೆ. ಅನಾದಿಕಾಲದಿಂದಲೂ ಜನಪದರಲ್ಲಿ ನಂಬಿಕೆಯ ಹೇಳಿಕೆಯೊಂದು ಉಳಿದುಕೊಂಡುಬಂದಿದೆ. ಹಿಂದೆ ಶ್ರೀಭೈರವೇಶ್ವರ ಎಂಬ ದೇವತಾಪುರುಷನು

ಬೇಟೆಗಾಗಿ ಬಂದ ಸಂದರ್ಭದಲ್ಲಿ ರಕ್ಕಸರು ಅಡ್ಡಿಪಡಿಸಿದ್ದರಿಂದ ಅವರನ್ನು ಕಲ್ಲುಗಳಾಗುವಂತೆ ಆ ದೇವತಾ ಪುರುಷನು ಶಾಪ ನೀಡಿದ್ದರಿಂದಾಗಿ ಅವು ಕಲ್ಲುಗಳಾಗಿವೆ. ರಾಕ್ಷಸರಿಗೆ ಶಾಪಕೊಟ್ಟಿದ್ದರಿಂದಾಗಿ ಅವು ಕಲ್ಲುಗಳಾಗಿ, ಜನಮಾನಸದಲ್ಲೂ 'ರಾಕ್ಷಸಕಲ್ಲು' ಎಂಬುದು ಜನರ ನಂಬಿಕೆಯಾಗಿ ಉಳಿದಿದೆ. ಇವುಗಳ ಬಗ್ಗೆ ಶ್ರೀ ಅಜ್ಜನಮುನಿ ವಿರಚಿತ ಶ್ರೀ ಕಾಲಭೈರವೇಶ್ವರ ಅರ್ಥಾತ್ ಶ್ರೀ ನುಂಕೇಮಲೆ ಸಿದ್ದೇಶ್ವರ ಎಂಬ ಯಕ್ಷಗಾನ ಬಯಲಾಟದಲ್ಲಿಯೂ ಇವುಗಳ ಪ್ರಸ್ತಾಪವಿದೆ. ಮಾನವಾಕೃತಿಗಳಿಗೆ ಇಂದಿಗೂ ಶ್ರಾವಣ ಮಾಸದಲ್ಲಿ ಹೋಳಿಗೆ ಎಡೆ ಇಟ್ಟು ನೈವೇಧ್ಯ ಮಾಡಲಾಗುತ್ತದೆ. ಆದರೆ ಹುಲಿಕುಂಟೆಯ ಮಾನವಾಕೃತಿಗಳಿಗೆ ಯಾವುದೇ ತರಹದ ನೈವೇದ್ಯ ಮಾಡಲಾಗುವುದಿಲ್ಲ. ಇತ್ತೀಚೆಗೆ ಎಚ್.ಚಂದ್ರಶೇಖರ ಅವರು ಕುಮತಿ ಮತ್ತು ಹುಲಿಕುಂಟೆ ಮಾನವಾಕೃತಿಯಗಳ ಬಗ್ಗೆ ಬಹುಮುಖಿ ಅಧ್ಯಯನ ಮಾಡಿರುವ ಅವರು ಕೊಡಗು ಜಿಲ್ಲೆಯ 'ಎರವರು' ಎಂಬ ಬಡಕಟ್ಟು ಜನಾಂಗದಲ್ಲಿ ಮೃತರ ಬಗ್ಗೆ ನಡೆಸುವ ವಿಶಿಷ್ಟ ಆಚರಣೆಯ ಬಗ್ಗೆ ವಿವರಿಸಿದ್ದಾರೆ. ಆ ಜನಾಂಗದಲ್ಲಿ ಯಾರಾದರೂ ಮೃತರಾದರೆ ಇಡೀ ಜನಾಂಗ ತಮ್ಮ ಜನಾಂಗದ ನಾಯಕ 'ಭಾತ'ನ ನಿರ್ದೇಶನದಲ್ಲಿ ಒಂದೊಂದು ಖ್ಯಾದ್ಯ ವಸ್ತುಗಳನ್ನು ಬಾಳೆಯ ಎಲೆಯ ಮೇಲೆ ಇಟ್ಟು ಪೂಜೆ ಮಾಡಿ ನೈವೇದ್ಯ ಸಲ್ಲಿಸುತ್ತಾರೆ. ನಂತರ ವಕ್ತಿಯೋರ್ವನ ಸಮಾಧಿಯ ಮೇಲೆ ಅಕ್ಕಿ ಕಾಳನ್ನು ಮಾನವಾಕೃತಿಯಲ್ಲಿ ಸಿಂಗರಿಸುತ್ತಾರೆ. ಕೊನೆಯಲ್ಲಿ ಎಲ್ಲರೂ ಸಾಮೂಹಿಕ ಭೋಜನ ಮಾಡಿ ನರ್ತಿಸುವ ಸಂಪ್ರದಾಯವಿದೆ ಎಂದು ತಿಳಿಸಿದ್ದಾರೆ.[೫೨] ಈ ಸಂಸ್ಕೃತಿಯ ಜನರು ಲೌಕಿಕ ವಿಚಾರಗಳಿಗಿಂತ ಅಲೌಕಿಕ ವಿಚಾರಗಳಲ್ಲಿ ಹೆಚ್ಚು ನಂಬಿಕೆಯುಳ್ಳವರಾಗಿದ್ದು, ಸ್ವರ್ಗ ನರಕದ ಕಲ್ಪನೆಯನ್ನು ಹೊಂದಿದ್ದರು. ವ್ಯಕ್ತಿ ಸಾವನಪ್ಪಿದ ನಂತರ ಆತ್ಮವು ತಮ್ಮೊಟ್ಟಿಗೆ ಸುಳಿದಾಡುತ್ತಿರುತ್ತೆ ಎಂಬ ನಂಬಿಕೆಯುಳ್ಳವರಾಗಿದ್ದರು ಎಂಬುದು ಅವರ ಕಲ್ಗೋರಿಗಳಿಂದ ಅರಿಯಬಹುದಾಗಿದೆ.

ಮೆಡೋಸ್ ಟೇಲರ್ ಅವರು ೧೮೫೦ರ ಸಂದರ್ಭದಲ್ಲಿ ಗುಲ್ಬರ್ಗ ಜಿಲ್ಲೆಯ ಶಹಾಪೂರ ತಾಲ್ಲೂಕಿನ ಭೀಮರಾಯನ ಗುಡಿ ಎಂದು ಕರೆಯಲ್ಪಡುವ ಊರು ಈ ಹಿಂದೆ 'ಅಮ್ಲಾಪುರ ಹನುಮಾನ' ಎಂದು ಕರೆಯಲ್ಪಡುತ್ತಿತ್ತು. ಈ ದೇವಾಲಯದ ಹತ್ತಿರದಲ್ಲಿದ್ದ ಪ್ರಾಗೈತಿಹಾಸಿಕ ನೆಲೆಯನ್ನು ಗುರುತಿಸುತ್ತಾನೆ. ಒಟ್ಟು ೧೯೦ ಅಡಿ ಉದ್ದ ಹಾಗೂ ೧೬೦ ಅಡಿ ಅಗಲ ವಿಸ್ತೀರ್ಣದ ಈ ಪುರಾತನ ನೆಲೆಯಲ್ಲಿ ಸುಮಾರು ೬೦೦ಕ್ಕೂ ಹೆಚ್ಚು ಶಿಲಾಬಂಡೆಗಳಿವೆ. ಕಪ್ಪು ಶಿಲೆಯ ಬಂಡೆಗಳು ಗಾತ್ರದಲ್ಲಿ ಚಿಕ್ಕದಾಗಿದ್ದು, ಇವುಗಳನ್ನು ಮಧ್ಯದ ಸಾಲುಗಳಾಗಿ ಜೋಡಿಸಲಾಗಿದ್ದು, ಅದರಂತೆ ಗ್ರಾನೈಟ್ ಶಿಲೆಯ ಬಂಡೆಗಳು ದೊಡ್ಡಗಾತ್ರದಲ್ಲಿದ್ದು, ಇವುಗಳ ಕೊನೆಯ ಸಾಲುಗಳಾಗಿ ಇರಿಸಲಾಗಿವೆ. ಈ ವಿಶಿಷ್ಟ ಜೋಡಣೆಗಳನ್ನು ಟೇಲರ್ ಕುತೂಹಲದಿಂದ ವೀಕ್ಷಿಸಿ, ಅಲ್ಲಿನ ಪೂಜಾರಿಯನ್ನು ವಿಚಾರಿಸುತ್ತಾನೆ. ಅಮ್ಲಾಪರ ಹನುಮಾನ ಗುಡಿಯ ಪೂಜಾರಿಯು ಸ್ವಾರಸ್ಯಕರವಾದ ದಂತಕತೆಯನ್ನು ಟೇಲರ್‌ಗೆ ನಿರೂಪಿಸಿದನು. 'ಸ್ಥಳೀಯ ದೇವರಾದ ಹನುಮಂತನ ಶಾಪ ಮತ್ತು ಪವಾಡದಿಂದಾಗಿ ಕುರಿಗಳು ಹಾಗೂ ದನಗಳು ಶಿಲೆಯ ಬಂಡೆಗಳಾಗಿ ಪರಿವರ್ತನೆಗೊಂಡಿವೆ' ಎಂಬ ಕಥೆಯನ್ನು

ಟೇಲರ್ ದಾಖಲಿಸಿದ್ದಾನೆ.[೫೩] ಹೀಗೆ ಕರ್ನಾಟಕದಲ್ಲಿ ಕಂಡುಬರುವ ಬೃಹತ್ ಶಿಲಾಸಮಾಧಿಗಳ ಪ್ರಾದೇಶಿಕ ಐತಿಹ್ಯಗಳಿಗೂ ಐತಿಹಾಸಿಕ ಸತ್ಯಗಳಿಗೂ ಒಂದಕ್ಕೊಂದು ಸಂಬಂಧವಿದೆ ಎಂಬುದು ಸ್ಪಷ್ಟವಾಗುತ್ತದೆ.

**೪. ಸಮಾಧಿ ಪ್ರಕಾರಗಳು**

ಬೃಹತ್ ಶಿಲಾಯುಗದ ಜನರ ಜೀವನ ವಿಧಾನವನ್ನು ಅನುಸರಿಸುತ್ತಿದ್ದ ಶವಸಂಸ್ಕಾರ ಪದ್ಧತಿಯು ಪ್ರಮುಖ ಆಕರವಾಗಿದೆ. ಈ ಕಾಲದ ಮಾನವ ಸಾವನಪ್ಪಿದ ನಂತರ ಶವವನ್ನು ದೊಡ್ಡ ದೊಡ್ಡ ಚಪ್ಪಡಿಕಲ್ಲುಗಳನ್ನು ಬಳಸಿ ಶಿಲಾಸಮಾಧಿಗಳನ್ನು ನಿರ್ಮಿಸಿ ಅದರಲ್ಲಿಟ್ಟು ಹೂಳುವ ಪದ್ದತಿಯನ್ನು ರೂಢಿಸಿಕೊಂಡರು. ಈ ಸಂಸ್ಕೃತಿಯ ಜನರು ಅನುಸರಿಸುತ್ತಿದ್ದ ಶವಸಂಸ್ಕಾರ ಪದ್ದತಿ ಕುರಿತಂತೆ ಪುರಾತತ್ವಜ್ಞರು ಮೂರು ವಿಧಗಳಾಗಿ ಗುರುತಿಸಿದ್ದಾರೆ. ಅವುಗಳಲ್ಲಿ

೧. ಸತ್ತ ವ್ಯಕ್ತಿಯ ದೇಹವನ್ನು ಸುಡುವುದು.

೨. ಸತ್ತ ವ್ಯಕ್ತಿಯ ದೇಹವನ್ನು ನಿರ್ದಿಷ್ಟ ಜಾಗದಲ್ಲಿ ಹೂಳುವುದು.

೩. ನಿರ್ಜನವಾದ ಪ್ರದೇಶಗಳಲ್ಲಿ ಕೆಲದಿನಗಳವರೆಗೆ ಸತ್ತ ವ್ಯಕ್ತಿಯ ಶವವನ್ನು ಇಟ್ಟು ದೇಹದ ಮಾಂಸವನೆಲ್ಲಾ ಪ್ರಾಣಿ-ಪಕ್ಷಿಗಳು ತಿಂದ ನಂತರ ಅಳಿದುಳಿದ ಮೂಳೆಗಳನ್ನು ಹೂಳುವುದು. ಇಂತಹ ನೂರಾರು ಶಿಲಾಸಮಾಧಿಗಳು ವಿವಿಧ ಪ್ರದೇಶಗಳಲ್ಲಿ ಹಲವು ಪ್ರಕಾರಗಳಲ್ಲಿವೆ. ದಕ್ಷಿಣ ಭಾರತದಲ್ಲಿ ಕಂಡುಬರುವ ಬೃಹತ್ ಶಿಲಾಸಮಾಧಿಗಳ ಮಾದರಿಗಳು ಅಥವಾ ಪ್ರಕಾರಗಳನ್ನು ಈ ಕೆಳಕಂಡಂತೆ ವರ್ಗೀಕರಿಸಲಾಗಿದೆ.

**I. ಗುಹಾಂತರ ಸಮಾಧಿಗಳು (Rock-Cut Caves)**

ಈ ಮಾದರಿಯ ಶಿಲಾಸಮಾಧಿಗಳು ಪಶ್ಚಿಮ ಕರಾವಳಿಯ ದಕ್ಷಿಣ ಭಾಗದಲ್ಲಿವೆ. ಇವುಗಳನ್ನು ಮೃದುವಾದ ಲ್ಯಾಟರೈಟ್ ಶಿಲೆಗಳಲ್ಲಿ ತೆಗೆಯಲಾಗಿರುತ್ತದೆ. ಇಂತಹ ಸಮಾಧಿಗಳು ವಿಶಿಷ್ಟವಾಗಿದ್ದು, ಹೆಚ್ಚಾಗಿ ಕೇರಳ ರಾಜ್ಯದ ಕೊಚ್ಚಿನ್ ಮತ್ತು ಮಲಬಾರ್[೫೪] ಪ್ರದೇಶಗಳಲ್ಲಿ ಕಂಡುಬರುತ್ತವೆ. ಅಷ್ಟೇ ಅಲ್ಲದೇ ಭಾರತದ ಇತರ ಭಾಗಗಳಲ್ಲಿಯೂ ಕಂಡುಬರುತ್ತವೆ. ಆದರೂ ಅವು ನಂತರದ ಕಾಲಮಾನಕ್ಕೆ ಸೇರಿದ್ದು ವಿವಿಧ ಉದ್ದೇಶಗಳಿಗೆ ಬಳಸಲಾಗುತ್ತಿತ್ತು. ಆದರೆ ಕೇರಳ ಪ್ರದೇಶದಲ್ಲಿ ಸಿಗುವ ಕುರುಹುಗಳು ನಿಶ್ಚಿತವಾಗಿ ಬೃಹತ್ ಶಿಲಾಯುಗದ ಜನರ ಅಂತ್ಯ ಕ್ರಿಯೆಗೆ ಸಂಬಂಧಿಸಿದವು ಎಂದು ಅಭಿಪ್ರಾಯಿಸಲಾಗಿದೆ. ಕೇರಳದಲ್ಲಿ ಅಂತ್ಯಕ್ರಿಯೆಗೆ ತೋಡಿದ ಕುಣಿಗಳು ಸ್ಥೂಲವಾಗಿ ಆಯಾತಾಕಾರ ಅಥವಾ ಚೌಕವನ್ನು ಒಳಗೊಂಡಿರುತ್ತವೆ. ಬಂಡೆಯನ್ನು ಲಂಬವಾಗಿ ಕತ್ತರಿಸಿ ನೆಲಕ್ಕೆ ಇಳಿಯಲು ಮೆಟ್ಟಿಲುಗಳನ್ನು ನಿರ್ಮಿಸಲಾಗಿರುತ್ತದೆ. ಕುಣಿಯ ಲಂಬಮುಖಗಳಲ್ಲಿ ಒಂದು ಕಡೆ ಪ್ರವೇಶದ್ವಾರವನ್ನು ಕೆತ್ತಲಾಗಿರುತ್ತದೆ. ಸಾಮಾನ್ಯವಾಗಿ ಈ ರೀತಿಯ ಸಮಾಧಿಗಳು ನೆಲದಿಂದ ಮೇಲಿರುತ್ತವೆ. ಇವು

ಅರ್ಧ ವೃತ್ತಾಕಾರ, ಅಯತಾಕಾರದಲ್ಲಿ ಕೊನೆಗೊಳ್ಳುತ್ತದೆ. ಕೆಲವೊಂದು ಸಮಾಧಿಗಳಲ್ಲಿ ಪ್ರವೇಶ ದ್ವಾರಗಳು ಮುಂಭಾಗದಲ್ಲಿವೆ. ಈ ಗುಹಾಂತರ ಸಮಾಧಿಗಳಲ್ಲಿ ನಾಲ್ಕು ವಿಧಗಳಿವೆ.

೧. ಕೇಂದ್ರ ಕಂಬವಿರುವ ಗುಹಾಂತರ ಸಮಾಧಿಗಳು (Caves with a central pillar)

೨. ಕೇಂದ್ರ ಕಂಬವಿಲ್ಲದ ಗುಹಾಂತರ ಸಮಾಧಿಗಳು(Caves without pillar)

೩. ಮುಚ್ಚಳವಿರುವ ಸಮಾಧಿಗಳು(Caves with a top opening)

೪. ಬಹುಕೋಣೆಯ ಮಾದರಿಗಳು(Multi chambered caves)

II. ಹುಡ್ ಸ್ಟೋನ್ಸ್ ಮತ್ತು ಟೋಪಿಕಲ್ಲು(Hood Stones and Hat Stones) ಇವುಗಳಲ್ಲಿ ಎರಡು ವಿಧಗಳಿವೆ.

೧. ಕುಳಿಸಮಾಧಿ(Pit barial) ಮೇಲೆ ಹುಡ್‌ಸ್ಟೋನ್ ಮತ್ತು ಟೋಪಿಕಲ್ಲು ಇದ್ದು ನೆಲದಡಿಯಲ್ಲಿ ಶವಸಂಸ್ಕಾರ ಮಾಡಿರುವುದು ವೃತ್ತದಲ್ಲಿರುತ್ತದೆ.

೨. ಆಯತಾಕಾರವಿರುವ ಇಲ್ಲವೆ ಉದ್ದ ಆಯತಾಕಾರವಾಗಿರುವ(oblong) ಹುಡ್‌ಸ್ಟೋನ್ ಮತ್ತು ಟೋಪಿಕಲ್ಲುಗಳು ಎಂಬ ಮಾದರಿಗಳಿವೆ.

III. ನಿಲುಸುಗಲ್ಲುಗಳು(Menhirs), ಇವುಗಳಲ್ಲಿ ಮೂರು ವಿಧಗಳಿವೆ.

೧. ನಿಲುಸುಗಲ್ಲುಗಳು(Menhirs), ೨. ಜೋಡಣೆಗಳು(Alignment), ೩. ಅವೆನ್ಸ್(Avenes). ನಿಲುಸುಗಲ್ಲುಗಳೊಂದಿಗೆ ಜೋಡಣೆಗಳು(Alignment) ನಿಕಟ ಸಂಬಂಧ ಹೊಂದಿದ್ದು, ಸಾಲಾಗಿ ನಿಲ್ಲಿಸಿರುವ ನಿಲಸುಗಲ್ಲುಗಳ ಸರಣಿಯನ್ನು ಒಳಗೊಂಡಿರುತ್ತವೆ. ಇಂತಹ ಜೋಡಣೆಗಳು ಗುಲ್ಬರ್ಗಾ ಜಿಲ್ಲೆಯ ಸುರಪುರ ತಾಲ್ಲೂಕು ಹಾಗೂ ರಾಯಚೂರು ಜಿಲ್ಲೆಯಲ್ಲಿಯೂ ವರದಿಯಾಗಿವೆ. ಎಫ್.ಆರ್. ಅಲ್ಚಿನ್ ಅವರು ನಲವತ್ತೂರು ನೆಲೆಗಳಲ್ಲಿ ಇಂಥ ಲಕ್ಷಣಗಳನ್ನು ಗಮನಿಸಿದ್ದಾರೆ. ಇವುಗಳಲ್ಲಿ ಕೆಲವು ೧೪ರಿಂದ ೧೬ ಅಡಿಯ ವರೆಗೂ ಮತ್ತು ಒಂದು ನೆಲಕ್ಕೆ ಬಿದ್ದ ೨೫ ಅಡಿ ಉದ್ದದ ಏಕ ಶಿಲೆಯು ಕಂಡುಬಂದಿದೆ ಎಂದು ದಾಖಲಿಸಿದ್ದಾರೆ. ಅವೆನ್ಸ್(Avenes) ಎರಡೂ ಬದಿಗೆ ನಿಲ್ಲಿಸಿದ ಕಲ್ಲುಗಳು. ಇವು ದಖನ್ ಪ್ರದೇಶಗಳಲ್ಲಿ ಕಂಡುಬಂದರೆ ಅಲೈನ್‌ಮೆಂಟ್‌ಗಳು ಗುಲ್ಬರ್ಗ ಜಿಲ್ಲೆಯ ಸುರಪುರ ತಾಲ್ಲೂಕಿನಲ್ಲಿ ಕಂಡುಬಂದಿವೆ.

IV. ಡಾಲ್ಮೆನೆಡ್ ಸಿಸ್ಟ್(Dolmenoid cist) ದೊಡ್ಡ ದೊಡ್ಡ ಕಲ್ಲುಗಳನ್ನು ವೃತ್ತಾಕಾರದಲ್ಲಿಟ್ಟು ಅವುಗಳ ಮಧ್ಯ ಚಿಕ್ಕ ಚಿಕ್ಕ ಕಲ್ಲುಗಳನ್ನು ನೆಟ್ಟು ವೃತ್ತಾಕಾರದ ಕೇಂದ್ರದ ಮಧ್ಯದಲ್ಲಿ ಮೇಲ್ನೋಟಕ್ಕೆ ಕಾಣುವಂತೆ ಕಲ್ಮನೆಯ ರಚನೆಯಿದ್ದು ಅದರ ಅಡಿಯಲ್ಲಿ ಅಂತರ್ಗತ ಶವಪೆಟ್ಟಿಗೆ ಇರುತ್ತದೆ. ಇದನ್ನು ಡಾಲ್ಮೆನೆಡ್ ಸಿಸ್ಟ್[೫೫] ಎಂದು ಕರೆಯಲಾಗುತ್ತದೆ. ಇದರಲ್ಲಿ ಎರಡು ವಿಧಗಳಿವೆ.

೧. ಶಿಲಾವೃತ್ತಸಹಿತ ಕಲ್ಮನೆ ಸಮಾಧಿ(Dolmenoid cist) ಒರಟುಕಲ್ಲುಗಳನ್ನು ವೃತ್ತಾಕಾರದಲ್ಲಿಟ್ಟು ಅದರ ಮಧ್ಯದಲ್ಲಿ ಅಂತರ್ಗತ ಶವ ಪೆಟ್ಟಿಗೆಯನ್ನು ನಿರ್ಮಿಸಲಾಗಿರುತ್ತದೆ.

೨. ಮುಚ್ಚಳ ಕಲ್ಲಿರುವ ಸಿಸ್ಟ್ ಮಾದರಿಗಳು(Cist with cap stones) ಮುಚ್ಚಳ ಕಲ್ಲಿರುವ ಸಿಸ್ಟ್ ಸಮಾಧಿಗಳನ್ನು ಮತ್ತೆ ಎರಡು ಉಪ ಮಾದರಿಗಳಾಗಿ ವಿಂಗಡಿಸಲಾಗಿದೆ.

ಅ. ಕಂಡಿಕೋಣೆ ಅಥವಾ ಹಾದಿಕೋಣೆ(Passage Tombs)

ಆ. ಕಂಡಿಕೋಣೆ ಇಲ್ಲದ ಅಥವಾ ಹಾದಿ ಇಲ್ಲದ ಅಂತರ್ಗತ ಶವ ಪೆಟ್ಟಿಗೆಗಳು(Without Passage)

V. ಕೈರನ್ ವೃತ್ತಗಳು (Cairn circle)

ಶಿಲಾವರ್ತುಲ ಸಮಾಧಿಗಳ ಮುಖ್ಯ ಲಕ್ಷಣವೆಂದರೆ ದೊಡ್ಡ ದೊಡ್ಡ ಕಲ್ಲುಗಳನ್ನು ವೃತ್ತಕಾರದಲ್ಲಿಟ್ಟು ಅದರ ಮಧ್ಯ ಚಿಕ್ಕಕಲ್ಲುಗಳನ್ನು ನೆಟ್ಟಿರುತ್ತಾರೆ. ಅದನ್ನು ಅಗೆದರೆ ಅಂತರ್ಗತ ಶವಪೆಟ್ಟಿಗೆ ಸಿಗಬಹುದು. ಇಲ್ಲವೆ 'ಶವಕುಳಿ(Pitcircle), ಸ್ಯಾರ್ಕೋಪೋಗಾಸ್, ಅರ್ನ್‌ಬರಿಯಲ್' ಲಭಿಸಬಹುದು.೫೬ ಇವುಗಳೆಲ್ಲಾ ಆಧರಿಸಿ ಕೈರನ್ ವೃತ್ತಗಳನ್ನು ಮೂರು ವಿಧಗಳಾಗಿ ವರ್ಗೀಕರಿಸಲಾಗಿದೆ.

೧. ಶವಕುಳಿ ಸಮಾಧಿ ಅಥವಾ ಸಮಾಧಿ ಗುಂಡಿಗಳು(Pit circle)

೨. ಸ್ಯಾರ್ಕೋಪೋಗಾಸ್(Sarcophages)

೩. ಅರ್ನ್‌ಬರಿಯಲ್(Urn burial)

VI. ಶವಕುಳಿ ಸಮಾಧಿಗಳು (Pit circles) ಭೂಮಿಯ ಮೇಲ್ಭಾಗದಲ್ಲಿ ನೋಡಲು ಏನು ಕಾಣುವುದಿಲ್ಲ. ನೆಲದಲ್ಲಿ ಆಳವಾದ ಗುಂಡಿಯೊಂದನ್ನು ಅಗೆದು ಅದರ ತಳ ಭಾಗದಲ್ಲಿ ಅಸ್ತಿಗಳನ್ನು ಬಲಿವಸ್ತುಗಳನ್ನು ಇಟ್ಟು ಮಣ್ಣಿನಿಂದ ಮುಚ್ಚುತ್ತಿದ್ದರು. ಅನಂತರ ಕೆಲವು ಬಾರಿ ಜಲ್ಲಿಕಲ್ಲಿನ ರಾಶಿಮಾಡಿ ಅದರ ಸುತ್ತಲೂ ಶಿಲಾವರ್ತುಲವನ್ನು ನಿರ್ಮಿಸಲಾಗಿರುತ್ತದೆ. ನೆಲವನ್ನು ಅಗೆದಾಗ ಮಾತ್ರ ಈ ರೀತಿಯ ಸಮಾಧಿಯ ರಚನೆ ಕಂಡುಬರುತ್ತವೆ.

VII. ಬ್ಯಾರೋಸ್(Barrows) ವೃತ್ತಾಕಾರ, ಉದ್ದ ಆಯತಾಕಾರ, ಚೌಕಾಕಾರದಲ್ಲಿ ಮಣ್ಣಿನ ದಿಬ್ಬವಿರುತ್ತದೆ. ಈ ದಿಬ್ಬದ ಅಡಿಯಲ್ಲಿ ಅಂತ್ಯ ಸಂಸ್ಕಾರ ಮಾಡಲಾಗಿರುತ್ತದೆ. ಕರ್ನಾಟಕದಲ್ಲಿ ಬೃಹತ್‌ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದಂತೆ ಈ ಹಿಂದೆ ಏಳು ಪ್ರಕಾರದ ಶಿಲಾಸಮಾಧಿಗಳನ್ನು ಗುರುತಿಸಲಾಗಿತ್ತು ಆದರೆ ಅ.ಸುಂದರ ಅವರು ಹೊಸದಾಗಿ ಮೂರು ಪ್ರಕಾರದ ಶಿಲಾ ಸಮಾಧಿಗಳನ್ನು ಸೇರಿಸಿದರು. ಇದರಿಂದ ಕರ್ನಾಟಕದಲ್ಲಿ ಒಟ್ಟು ಹತ್ತು ಪ್ರಕಾರದ ಬೃಹತ್ ಶಿಲಾಸಮಾಧಿಗಳು ವಿವಿಧ ನೆಲೆಗಳಲ್ಲಿ ಕಂಡುಬಂದಿವೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**೧. ಹಾದಿಕೋಣೆ ಸಮಾಧಿಗಳು**

ಹಾದಿಕೋಣೆ ಸಮಾಧಿಗಳ ರಚನೆಯು ತುಂಬಾ ಸರಳವೆಂಬಂತೆ ಕಂಡುಬಂದರೂ ಕೌಶಲ್ಯತೆಯಿಂದ ಕೂಡಿರುತ್ತವೆ. ಇಂತಹ ಸಮಾಧಿಗಳಲ್ಲಿ ಎರಡನೆಯ ಬಾರಿಗೆ ಶವಸಂಸ್ಕಾರ ಮಾಡಲಾಗಿರುತ್ತದೆ. ಹಾದಿಕೋಣೆಗಳು ಚೌಕಾಕಾರವಾಗಿದ್ದು ಒಂದು ಮೇಜಿನ ರೂಪದಲ್ಲಿ ಕಾಣುತ್ತವೆ. ಇವು ನೆಲದ

ಮೇಲೆ ಹಾಗೂ ಭೂಮಿಯಲ್ಲಿ ಅಂತರ್ಗತವಾಗಿರುತ್ತವೆ. ನಾಲ್ಕು ಬದಿಗಳಲ್ಲಿ ದೊಡ್ಡ ಚಪ್ಪಡಿಗಳನ್ನು ಲಂಬವಾಗಿ ನಿಲ್ಲಿಸಿ ಮೇಲೆ ದೊಡ್ಡದಾದ ಚಪ್ಪಡಿಕಲ್ಲನ್ನು ಛತ್ರಿಕಲ್ಲಾಗಿ ಇಟ್ಟಿರುತ್ತಾರೆ. ಸಾಧಾರಣವಾಗಿ ೧ ೧/೨ ಮೀ.ಉದ್ದ ಮತ್ತು ೨ ೧/೨ ಮೀ. ಅಗಲ ಹಾಗೂ ೧ ½ ಮೀ. ಎತ್ತರವಿರುತ್ತದೆ. ಈ ಸಮಾಧಿಗಳಿಗೆ ದಕ್ಷಿಣದ ಬದಿಯಲ್ಲಿ ಎರಡು ಕಲ್ಲುಗಳನ್ನು ಮಧ್ಯದಲ್ಲಿ ಅಂತರ್‌ವಿಟ್ಟು ಲಂಬವಾಗಿ ನಿಲ್ಲಿಸಿದ ಎರಡು ಬದಿಯಲ್ಲಿ ನೆಟ್ಟಿರುತ್ತಾರೆ. ದಕ್ಷಿಣಾಭಿಮುಖವಾಗಿ ಹಾದಿಯಿರುತ್ತದೆ. ಈ ಹಾದಿಕೋಣೆ ಸಮಾಧಿಗಳಲ್ಲಿ ಎರಡು ಉಪ ಮಾದರಿಗಳಿವೆ.[೫೭]

೧. ಕಲಾದಗಿ ಉಪಮಾದರಿಯ ಶಿಲಾಸಮಾಧಿಗಳು ಸಾಮಾನ್ಯವಾಗಿ ಸಣ್ಣ ಪ್ರಮಾಣದಲ್ಲಿರುತ್ತವೆ. ಆದ್ದರಿಂದ ಇದರ ಬದಿಯಲ್ಲಿದ್ದ ಹಾದಿಯೂ ಕೂಡ ಚಿಕ್ಕದಾಗಿರುತ್ತದೆ. ಕಲಾದಗಿಯಲ್ಲಿ ಕೋಣೆಯನ್ನು ಸುತ್ತುವರೆದ ವೃತ್ತ ಕಟ್ಟೆಯಲ್ಲಿ ಹದಿಮೂರು ಕಲ್ಲುಗುಂಡುಗಳಿರುವುದು ಕೌತುಕದ ವಿಷಯ ಮತ್ತು ಕೋಣೆಯ ಹಾದಿಯು ವೃತ್ತದಲ್ಲಿ ಕೊನೆಗೊಳ್ಳುತ್ತದೆ.

೨. ಕೊಣ್ಣೂರು ಉಪಮಾದರಿಯ ಶಿಲಾಸಮಾಧಿಗಳಲ್ಲಿ ಕೆಲವು ಗಮನಾರ್ಹ ಅಂಶಗಳಿವೆ. ಗೊಡಚನ್‌ಮಲ್ಕಿ ಮತ್ತು ಗುಮಚನಮರಡಿಯಲ್ಲಿಯ ಕೋಣೆಗಳಿಗೆ ಒಂದಕ್ಕಿಂತ ಹೆಚ್ಚು ಸುತ್ತು ಶಿಲಾಕಟ್ಟೆಗಳಿದ್ದು, ಒಳಗಿನ ಕಟ್ಟೆಯನ್ನು ನುಣುಪಾಗಿ ಕಟೆದ ಜಂಬಿಟ್ಟಿಗೆಗಳಿಂದ ನಿರ್ಮಿಸಲಾಗಿರುತ್ತದೆ. ನುಣುಪಾಗಿ ಕಟೆದಿರುವ ಕಲ್ಲುಗಳಿಂದ ವೃತ್ತವೂ ಪೂರ್ಣಗೊಂಡಿರುತ್ತದೆ. ಈ ಉಪ ಮಾದರಿಯ ಶಿಲಾಸಮಾಧಿಗಳನ್ನು ಶೇದಿಕಲ್ಲು, ಕೆಂಪುಮರಳಿನ ಗಷ್ಟುಕಲ್ಲು ಹಾಗೂ ನೇರಳೆ ಬಣ್ಣದ ಛಾಯೆಯುಳ್ಳ ಬಿಳಿ ಬೆಣಚುಕಲ್ಲಿನ ತುಂಡುಗಳಿಂದ ಆಕರ್ಷಕವಾಗಿ ನಿರ್ಮಿಸಿರುವ ಉದಾರಹಣೆಗಳು ಹುಣಸಗಿ ನೆಲೆಯಲ್ಲಿವೆ.[೫೮] ಆದರೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಬಗೆಯ ಶಿಲಾಸಮಾಧಿಗಳು ಕಂಡುಬರುವುದಿಲ್ಲ.

**೨. ಕಂಡಿಕೋಣೆ ಸಮಾಧಿಗಳು**

ಕಂಡಿಕೋಣೆ ಸಮಾಧಿಗಳು ನಾಲ್ಕು ಪ್ರಕಾರದ ಪೆಟ್ಟಿಗೆ ಹಾಗೂ ಒಂದು ಮೇಜಿನ ಆಕಾರದಲ್ಲಿರುತ್ತದೆ. ಇವುಗಳು ಹಾದಿಕೋಣೆ ಸಮಾಧಿಗಳನ್ನು ಹೋಲುತ್ತಿದ್ದು. ಹೆಚ್ಚು ಕಡಿಮೆ ಅಷ್ಟೇ ಸುತ್ತಳತೆ ಹಾಗೂ ಉದ್ದಗಲಗಳಿರುತ್ತವೆ. ನಾಲ್ಕು ಬದಿಗೂ ಒಂದಕ್ಕೊಂದು ಅನಿಸಿ ಲಂಬವಾಗಿ ಕಲ್ಲುಚಪ್ಪಡಿಗಳನ್ನು ನೆಟ್ಟಿರುತ್ತಾರೆ. ಮತ್ತು ಅವುಗಳ ಮೇಲೆ ಅಗಲವಾದ ಬಂಡೆಯಿಂದ ಮುಚ್ಚಲಾಗಿರುತ್ತದೆ. ಹಿರೇಬೆಣಕಲ್ಲು, ಅಗೋಲಿ ನೆಲೆಗಳಲ್ಲಿರುವ ಸಮಾಧಿಗಳಲ್ಲಿ ಕಂಡಿಯು ಚಪ್ಪಡಿಕಲ್ಲಿನ ಮಧ್ಯಭಾಗದಲ್ಲಿದೆ ಅಲ್ಲದೆ ಸಮಾಧಿಯ ಪಾರ್ಶ್ವದ ಮೂಲೆಯಲ್ಲಿವೆ. ವಿಶೇಷವಾಗಿ ಪೂರ್ವದಿಕ್ಕಿಗೆ ಲಂಬವಾಗಿ ನಿಲ್ಲಿಸಿದ ಚಪ್ಪಡಿಕಲ್ಲಿಗೆ ಕಂಡಿಯನ್ನು ನಿರ್ಮಿಸಲಾಗಿರುತ್ತದೆ. ಇಂತಹ ಸಮಾಧಿಗಳಲ್ಲಿ ಎರಡನೆಯ ಬಾರಿಗೆ ಶವಸಂಸ್ಕಾರ ಮಾಡಲಾಗಿರುತ್ತದೆ ಎಂಬ ಅಭಿಪ್ರಾಯಗಳಿವೆ. ಕಿಂಡಿಯು ವೃತ್ತಾಕಾರವಾಗಿಯೂ, ಇನ್ನೂ ಕೆಲವುಕಡೆ ಇಂಗ್ಲಿಷ್‌ನ 'U' ಅಕ್ಷರದ ಆಕಾರದಲ್ಲಿರುತ್ತವೆ. ಅಧ್ಯಯನ ಪ್ರದೇಶದಲ್ಲಿ 'U'

ಅಕ್ಷರದ ಕಿಂಡಿರುವ ಸಮಾಧಿಗಳು ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿಯಲ್ಲಿ ಮಾತ್ರ ವರದಿಯಾಗಿದೆ.[೫೯] ಆದರೆ ಕಿಂಡಿಯ ಬಗ್ಗೆ ವಿದ್ವಾಂಸರಲ್ಲಿ ಒಮ್ಮತದ ಅಭಿಪ್ರಾಯಗಳಿಲ್ಲ. ಒಂದೊಂದು ಶಿಲಾಸಮಾಧಿಯಲ್ಲಿ ಒಂದಕ್ಕಿಂತ ಹೆಚ್ಚು ವ್ಯಕ್ತಿಗಳ ಅಸ್ತಿ ಅವಶೇಷಗಳಿರುವುದು ಪತ್ತೆಯಾಗಿದೆ. ಇದರ ಜೊತೆಗೆ ಕಬ್ಬಿಣದ ಆಯುಧಗಳು, ಮಣ್ಣಿನ ಮಡಕೆಗಳು, ಅಪರೂಪದ ವಸ್ತುಗಳು ಮತ್ತು ಕಲ್ಲಿನ ಮಣಿಗಳು ದೊರೆತಿವೆ. ಹಾದಿಕೋಣೆ ಮತ್ತು ಕಂಡಿಕೋಣೆ ಸಮಾಧಿಗಳು ಬಹುಮಟ್ಟಿಗೆ ಹೊರಗಿನಿಂದ ವಲಸೆ ಬಂದ ಜನರು ನಿರ್ಮಿಸಿದವರೆಂದು ಪುರಾತತ್ವಜ್ಞರು ಅಭಿಪ್ರಾಯಿಸಿದ್ದಾರೆ. ಇವುಗಳ ಪ್ರಭಾವದಿಂದ ಹೊರಗಿನಿಂದ ವಲಸೆಬಂದ ಜನರ ಪ್ರಭಾವದಿಂದ ಆರಂಭದಲ್ಲಿದ್ದ ಸ್ಥಳೀಯ ಜನರು(ಶಿಲಾ-ತಾಮ್ರಯುಗ) ತಮ್ಮ ಸಮಾಜದ ಜನರ ಶವಸಂಸ್ಕಾರದಲ್ಲಿ ಕ್ರಮೇಣ ಕಲ್ಲುಚಕ್ಕೆಗಳಿಂದ ಶಿಲಾಸಮಾಧಿಗಳನ್ನು ಭದ್ರಪಡಿಸುವುದನ್ನು ಪ್ರಾರಂಭಿಸಿರೆಂಬುದು ತಿಳಿದುಬರುತ್ತದೆ. ಈ ಅಂಶವು ಮಸ್ಕಿಯ ಬೃಹತ್ ಶಿಲಾ ಸಮಾಧಿಗಳ ಉತ್ಖನನದಿಂದ ವ್ಯಕ್ತವಾಗುತ್ತದೆ. ಈ ರೀತಿಯ ಕಂಡಿಕೋಣೆ ಸಮಾಧಿಗಳು ತಮಿಳುನಾಡು, ಆಂಧ್ರಪ್ರದೇಶದಲ್ಲಿ ಬೆಳಕಿಗೆ ಬಂದಿವೆ. ಕರ್ನಾಟಕದಲ್ಲಿರುವ ಕಂಡಿಕೋಣೆ ಶಿಲಾಸಮಾಧಿಗಳನ್ನು ಐಹೊಳೆ, ರಾಜನಕೋಳೂರು, ಹಿರೇಬೆಣಕಲ್ಲು, ಬ್ರಹ್ಮಗಿರಿ ಎಂಬ ನಾಲ್ಕು ಉಪಮಾದರಿಗಳಾಗಿ ವಿಂಗಡಿಸಲಾಗಿದೆ.[೬೦] ಮುಖ್ಯವಾಗಿ ಗಂಗಾವತಿ ತಾಲ್ಲೂಕಿನ ಹೆಚ್.ಜಿ ರಾಮುಲುನಗರದ ಎದುರಿಗೆ ಇರುವ ಬೆಟ್ಟದಲ್ಲಿನ ಶಿಲಾಸಮಾಧಿಗಳು, ಕುಮತಿ, ಹಳೆಕರೆ, ಗುಡೇಕೋಟೆ ಹಾಗೂ ಮೊಳಕಾಲ್ಮೂರಿನ ನುಂಕೆಮಲೆಗಳಲ್ಲಿ ಕಂಡುಬರುವ ಶಿಲಾಸಮಾಧಿಗಳಲ್ಲಿ ಕಂಡಿಕೋಣೆಗಳು ಪೂರ್ವದಿಕ್ಕಿಗೆ ಇದ್ದರೂ ಆ ಸಮಾಧಿಗಳು ಭೂಮಿಯಲ್ಲಿ ಅಂತರ್ಗತವಾಗಿರದೆ ಭೂಮಿಯ ಮೇಲಿವೆ. ಆದರೆ ಚಿಕ್ಕಬೆಣಕಲ್ಲು ನೆಲೆಯಲ್ಲಿ ಅಂತರ್ಗತವಾಗಿರುವ ಸಮಾಧಿಯಲ್ಲಿ ಕಂಡಿಯಿದೆ.

**೩. ಕಲ್ಲುವೃತ್ತಗಳು(Stone circles)**

ಆಂಧ್ರಪ್ರದೇಶದ ಅನಂತಪುರ ಜಿಲ್ಲೆ ದಕ್ಷಿಣ ಕರ್ನಾಟಕದ ಕೋಲಾರ, ಮೈಸೂರು, ಮಂಡ್ಯ, ಹಾಸನ, ಚಿಕ್ಕಮಂಗಳೂರು, ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಗಳಲ್ಲದೆ ಉತ್ತರ ಕರ್ನಾಟಕದ ಕೆಲವು ನೆಲೆಗಳಲ್ಲಿ ದೊರೆತಿವೆ. ಅಧ್ಯಯನ ಪ್ರದೇಶವಾದ ಬಳ್ಳಾರಿ ಜಿಲ್ಲೆಯ ಸಂಗನಕಲ್ಲು, ತೆಕ್ಕಲಕೋಟೆ, ನಿಟ್ಟೂರು ಮತ್ತು ಕೊಪ್ಪಳ ಜಿಲ್ಲೆಯ ತಾವರೆಗೇರ, ತಿಪ್ಪನಾಳ, ಗುಡೂರು, ಬಸರಿಹಾಳಗಳಲ್ಲಿ ಈ ರೀತಿಯ ಸಮಾಧಿಗಳು ಕಂಡುಬಂದಿದ್ದು ಇವು ಮಸ್ಕಿ, ಬ್ರಹ್ಮಗಿರಿ ಉತ್ಖನನಗಳಲ್ಲಿ ತೋರಿದ ಬೃಹತ್ ಶಿಲಾ ಸಮಾಧಿಯನ್ನು ಕ್ರಮವಾಗಿ ಹೋಲುತ್ತವೆ.[೬೧]

**೪. ಚಕ್ಕೆಕಲ್ಲುಗಳಿಂದ ತುಂಬಿದ ಕಲ್ಲುವೃತ್ತಗಳು**

ಕರ್ನಾಟಕದಲ್ಲಿ ಈ ಬಗೆಯ ಸಮಾಧಿಗಳು ಹೆಚ್ಚಾಗಿ ಕಂಡುಬರುತ್ತವೆ. ಈ ಮಾದರಿಯ ಸಮಾಧಿಗಳ ನಾಲ್ಕು ದಿಕ್ಕಿಗೆ ಚಪ್ಪಡಿ ಕಲ್ಲುಗಳನ್ನು ಒಂದಕ್ಕೊಂದು ಆನಿಸಿ ನಿಲ್ಲಿಸಲಾಗಿರುತ್ತದೆ. ಅದರ ಮಧ್ಯ ಶವಸಂಸ್ಕಾರ ಮಾಡಲಾಗಿರುತ್ತದೆ. ಈ ಸಮಾಧಿಗಳಿಗೆ ಛತ್ತಿಯ ಮೇಲೆ ಚಪ್ಪಡಿಕಲ್ಲು ಇರುವುದಿಲ್ಲ.

ಇವುಗಳು ಭೂಮಿಯ ಮೇಲ್ಮಟ್ಟದಲ್ಲಿ ಹೆಚ್ಚಾಗಿದ್ದು ಕೆಲವೊಮ್ಮೆ ನೆಲದಲ್ಲಿ ನಾಲ್ಕು ದಿಕ್ಕಿಗೆ ಒಂದ್ಕೊಂದು ಆನಿಸಿ ಚಪ್ಪಡಿಕಲ್ಲುಗಳನ್ನು ಭೂ ಮಟ್ಟದಿಂದ ಮೇಲಕ್ಕೆ ಎತ್ತರಿಸಲಾಗಿರುತ್ತದೆ. ಆಯತಾಕಾರ ಇಲ್ಲವೆ ಸ್ವಸ್ತಿಕ್ ಆಕಾರದಲ್ಲಿರುತ್ತವೆ. ಇಂತಹ ಸಮಾಧಿಗಳು ಹಾಲಸಾಗರ, ಮಡಕಲಕಟ್ಟೆ, ಅಗೋಲಿ, ಹೇಮಗುಡ್ಡ ನೆಲೆಗಳಲ್ಲಿ ಕಂಡುಬಂದಿವೆ.

**೫. ವರ್ತುಲ ಗಡ್ಡೆಗಳು**

ಭೂಮಿಯ ಮೇಲೆ ವರ್ತುಲಾಕಾರದಲ್ಲಿ ಸ್ವಲ್ಪ ಮೇಲೆ ಹೆಚ್ಚಾದಂತೆ ಗೋಚರಿಸುತ್ತವೆ. ಇವುಗಳನ್ನು ಮಣ್ಣು ಮತ್ತು ತುಂಡು ಶಿಲೆಗಳಿಂದ ನಿರ್ಮಿಸಲಾಗಿರುತ್ತದೆ. ಇಂತಹ ಸಮಾಧಿಗಳು ಅಧ್ಯಯನ ಕ್ಷೇತ್ರದಲ್ಲಿ ಇದುವರೆಗೂ ಕಂಡುಬಂದಿಲ್ಲ.

**೬. ಶವಕುಣಿಗಳು**

ಶವಸಂಸ್ಕಾರ ಮಾಡುವ ಮೊದಲು ಕುಣಿಯನ್ನು ತೆಗೆದು ನೆಲ ಮತ್ತು ಗೋಡೆಗಳನ್ನು ತಟ್ಟಿ ಸಮಮಾಡಿ ಮರಳು ಮತ್ತು ಸುಣ್ಣದ ಪದರುಗಳನ್ನು ನಿರ್ಮಿಸಿ ಶವಸಂಸ್ಕಾರವನ್ನು ಮಾಡಲಾಗುತ್ತಿತ್ತು. ಇವು ಮೇಲ್ನೋಟಕ್ಕೆ ವೃತ್ತಾಕಾರದಲ್ಲಿದ್ದು, ಶವಕುಣಿಗಳ ಮೇಲ್ಭಾಗದಲ್ಲಿ ವೃತ್ತಾಕಾರವಾಗಿ ದೊಡ್ಡ ದೊಡ್ಡ ದುಂಡು ಶಿಲೆಗಳನ್ನು ನೆಟ್ಟಿರುತ್ತಿದ್ದು ಆ ದುಂಡು ಶಿಲೆ ವೃತ್ತಗಳು ಒಂದು ಅಥವಾ ಅದಕ್ಕಿಂತಲೂ ಹೆಚ್ಚು ಇರಬಹುದು. ಕೆಲವೊಂದು ಸಮಾಧಿಗಳಿಗೆ ನೆಟ್ಟ ದುಂಡು ಶಿಲೆಯ ಹೊರಬದಿಯಲ್ಲಿ ಚಪ್ಪಡಿಕಲ್ಲುಗಳನ್ನು ನೆಟ್ಟಿರುತ್ತಾರೆ.

**೭. ನಿಲುಸುಗಲ್ಲುಗಳು**

ಬೃಹತ್ ಶಿಲಾಸಮಾಧಿ ಪ್ರಕಾರಗಳಲ್ಲಿ ನಿಲುಸುಗಲ್ಲು ಸಮಾಧಿಗಳು ಸಹ ಮುಖ್ಯವಾಗಿವೆ. ಆದರೆ ಇವುಗಳ ಬಗ್ಗೆ ಪೂರ್ಣ ಪ್ರಮಾಣದ ಅಧ್ಯಯನ ಕೊರತೆ ಇದ್ದು, ಇವು ನೆನಪಿನ ಕಲ್ಲು ಅಥವಾ ಸಮಾಧಿಗಳ ಒಂದು ಭಾಗವೇ ಎಂಬುದರ ಬಗ್ಗೆ ಸಂಶೋಧಕರಲ್ಲಿ ಜಿಜ್ಞಾಸೆಗಳಿವೆ. ಸಾಮಾನ್ಯವಾಗಿ ನಿಲುಸುಕಲ್ಲುಗಳು ಅನಿರ್ದಿಷ್ಟ ಆಕಾರವನ್ನು ಹೊಂದಿರುತ್ತವೆ. ಬಟ್ಟಲಾಕೃತಿಯಲ್ಲಿ ಶವಸಂಸ್ಕಾರ ಮಾಡಿ ದಫನು ಮಾಡುವಾಗ ಇಡುವ ಸಾಮಗ್ರಿಗಳನ್ನೆಲ್ಲಾ ಅದರೊಳಗಿಟ್ಟು ಅದರ ಮೇಲೆ ಒಂದು ನಿಲುಸುಗಲ್ಲನ್ನು ನೆಡುತ್ತಿದ್ದರೆಂದು ಅ.ಸುಂದರ ಅವರು ಅಭಿಪ್ರಾಯಪಡುತ್ತಾರೆ.[೨] ಹೀಗೆ ನಿಲ್ಲಿಸಿರುವ ನಿಲುಸುಗಲ್ಲುಗಳು ದೊಡ್ಡ ಪ್ರಮಾಣದಲ್ಲಿರಬಹುದು. ಇಲ್ಲವೇ ಚಿಕ್ಕ ಪ್ರಮಾಣದಲ್ಲಿರಬಹುದು. ಈ ರೀತಿಯ ನಿಲುಸುಗಲ್ಲನ್ನು ನಿಲ್ಲಿಸುವಾಗ ಆ ಕಲ್ಲಿನ ಪ್ರಮಾಣಕ್ಕನುಗುಣವಾಗಿ ಶೇ ೭೫–೮೦ರಷ್ಟು ಕಲ್ಲನ್ನು ನೆಲದ ಮೇಲಿರುವಂತೆ ಹೂಳಲಾಗಿರುತ್ತದೆ.

ಕರ್ನಾಟಕದ ಬೇರೆ ಬೇರೆ ಕಡೆಗಳಲ್ಲಿ ಈ ನಿಲಸುಗಲ್ಲುಗಳು ಕಂಡುಬಂದಿವೆ. ಹೀಗೆ ಮೇಲೆ ತಿಳಿಸಿದ ಪ್ರತಿಯೊಂದು ಶಿಲಾಸಮಾಧಿ ಮಾದರಿಗಳು ಬೇರೆ ಬೇರೆ ಕಾಲಘಟ್ಟಗಳಲ್ಲಿ ಸ್ವತಂತ್ರವಾಗಿ ಹುಟ್ಟಿ ಬೆಳೆಯಲಿಲ್ಲ ಕೆಲವು ಮಾದರಿಗಳಲ್ಲಿ ಒಂದಕ್ಕೊಂದು ಸಂಬಂಧವಿದ್ದು ಒಂದು ಮಾದರಿಯಿಂದ

ಇನ್ನೊಂದು ಮಾದರಿಯು ಬೆಳೆದಿರುವ ಸಾಧ್ಯತೆಗಳಿವೆ. ಮಾರ್ಟಿಮರ್ ವೀಲ್ಹರ್, ವಿ.ಡಿ ಕೃಷ್ಣಸ್ವಾಮಿ, ಬಿ.ಕೆ.ಗುರುರಾಜರಾವ್, ಅ.ಸುಂದರ ಮೊದಲಾದವರು ಕರ್ನಾಟಕದಲ್ಲಿನ ಬೃಹತ್ ಶಿಲಾಸಮಾಧಿಗಳನ್ನು ಗುರುತಿಸಿ ವಿವಿಧ ಪ್ರಕಾರಗಳಾಗಿ ವಿಂಗಡಿಸಿದ್ದಾರೆ. ಈ ಹಿಂದೆ ಮಾಡಿದ ವಿ.ಡಿ ಕೃಷ್ಣಸ್ವಾಮಿಯವರ ವರ್ಗೀಕರಣವನ್ನು ಮತ್ತೊಮ್ಮೆ ಪರಿಶೀಲಿಸಿದ ಅ.ಸುಂದರ ಮೊದಲಾದವರು ೧೯೭೪ರಲ್ಲಿ ಇಡೀ ಕರ್ನಾಟಕಕ್ಕೆ ಸಂಬಂಧಿಸಿದಂತೆ ಹೊಸದಾಗಿ 'ಕೋಣೆ ಸಮಾಧಿಗಳು(Passage Tombs), ಕೋಣೆಗಳಿಲ್ಲದ ಸಮಾಧಿಗಳು(Without Passage), ಬೃಹತ್ ಸಾಲುಗಲ್ಲುಗಳು' ಎಂಬ ಮೂರು ಮಾದರಿಗಳನ್ನು ಗುರುಸಿದ್ದಾರೆ.

ಇತ್ತೀಚೆಗೆ ಉದಯರವಿ ಎಸ್. ಮೂರ್ತಿ ಅವರು ಬೃಹತ್ ಶಿಲಾಯುಗದ ನಿರ್ಮಿತಿಗಳನ್ನು ಸಮಾಧಿ(Sepulchral) ಮತ್ತು ಸ್ಮರಣಾರ್ಥವಾಗಿ ನೆಟ್ಟಂತಹ ಸ್ಮಾರಕ(Non-sepulchral)ಗಳೆಂದು ಎರಡು ಪ್ರಕಾರಗಳಾಗಿ ವಿಂಗಡಿಸಿದ್ದಾರೆ.[೬೩] ಸಮಾಧಿ(Sepulchral) ಪ್ರಕಾರಗಳಲ್ಲಿ ಕುಳಿಸಮಾಧಿಗಳು(Pit burials), ಸಾರ್ಕೋಫೋಗಾಸ್(Sarcophagus), ಶಿಲಾವೃತ್ತಸಹಿತ ಕಂಡಿಕೋಣೆ ಸಮಾಧಿ(Dolmenoid cist with porthole) ಅರ್ನ್ ಬರಿಯಲ್ (Urn burials)ಗಳೆಂಬ ಮಾದರಿಗಳಿವೆ. ಸ್ಮರಣಾರ್ಥವಾಗಿ ನೆಟ್ಟಂತಹ ಸ್ಮಾರಕಗಳಲ್ಲಿ(Non-sepulchral) ಕಂಡಿಕೋಣೆ(Port-holed Dolmen), ನಿಲುಸುಗಲ್ಲು(Menhir), ಕಲ್ಲು ಜೋಡಣೆ(Stone Alignment) ಹಾಗೂ ಅವೆನ್ಸ(Avenes)ಗಳನ್ನು ಗುರುತಿಸಿದ್ದಾರೆ.

ಹಾದಿಕೋಣೆ ಅಥವಾ ಕಂಡಿಕೋಣೆ ಸಮಾಧಿಗಳು ಬಹುಮಟ್ಟಿಗೆ ಹೊರಗಿನಿಂದ ಬಂದ ಜನರ ನಿರ್ಮಿತಿಗಳಾಗಿವೆ. ಆದ್ದರಿಂದ ಈ ಸಂಸ್ಕೃತಿಯನ್ನು ಉತ್ಖನನಕಾರರು ಇಂಟ್ರೂಸಿವ್(Intrusive) ಸಂಸ್ಕೃತಿ ಎಂದು ಕರೆದಿದ್ದಾರೆ. ಇದರಿಂದಾಗಿ ಮೂಲದಲ್ಲಿ ಇದ್ದಂತಹ ಸ್ಥಳೀಯ ಶಿಲಾ-ತಾಮ್ರಯುಗದ ಜನರು ತಮ್ಮ ಸಮಾಜದ ಶವಸಂಸ್ಕಾರದಲ್ಲಿ ಕ್ರಮೇಣ ಕಲ್ಲುಚಕ್ಕೆಗಳಿಂದ ಕೂಡಿದ ಸಮಾಧಿಗಳನ್ನು ಭದ್ರಮಾಡುವುದನ್ನು ಪ್ರಾರಂಭಿಸಿದರೆಂದು ತಿಳಿದುಬರುತ್ತದೆ. ಕಲ್ಲುವೃತ್ತಗಳು, ಆಯತಾಕಾರದ ಸಮಾಧಿಗಳನ್ನು ನಿರ್ಮಾಣ ಮಾಡುವ ಕಲೆಯು ಶಿಲಾ-ತಾಮ್ರಯುಗ ಹಂತದಿಂದ ಆರಂಭವಾಯಿತೆಂದು ನಂಬಲಾಗಿದೆ. ಕಬ್ಬಿಣದ ಬಳಕೆ ಪ್ರಾರಂಭವಾದ್ದರಿಂದ ಶಿಲಾಸಮಾಧಿಗಳನ್ನು ನಿರ್ಮಿಸುವ ಕಲೆ ಆರಂಭವಾಯಿತೆಂದು ಅಭಿಪ್ರಾಯಿಸಬಹುದು. ಹೀಗೆ ಶಿಲಾಸಮಾಧಿಗಳ ನಿರ್ಮಾಣವನ್ನು ದೊಡ್ಡ ಪ್ರಮಾಣದಲ್ಲಿ ವೈವಿಧ್ಯಮಯವಾಗಿ ರಚನೆ ಮಾಡಲಾಯಿತು. ಕೆಲವು ಕಡೆ ಸಾಮಾನ್ಯವಾಗಿ ಕಂಡುಬರುವ ಶಿಲಾಸಮಾಧಿಗಳು ಮಧ್ಯಮ ವರ್ಗದವುಗಳಾಗಿದ್ದು ತೇರದಾಳ, ಹಳಿಂಗಳಿಯಲ್ಲಿಯ ಕೆಲವು ಸಮಾಧಿಗಳು ಜನನಾಯಕರ ಶಿಲಾಸಮಾಧಿಗಳಾಗಿ ಕಂಡುಬಂದಿವೆ. ಸಾವಣದುರ್ಗದ ಏಕಕೇಂದ್ರದ ಏಳುವೃತ್ತದ ಕಂಡಿಕೋಣೆ ಸಮಾಧಿಯು ಅಲ್ಲಿಯ ಒಬ್ಬ ಜನನಾಯಕನದು ಇದ್ದಿರಬಹುದೆಂದು ಊಹಿಸಲಾಗಿದೆ. ಇನ್ನೂ ಕೆಲವು ನೆಲೆಗಳಲ್ಲಿ ಒಂದು ಭಾಗದಲ್ಲಿ ಒಂದೇ ಪ್ರಕಾರದ ಶಿಲಾಸಮಾಧಿ ಕಂಡುಬಂದರೆ, ಮತ್ತೊಂದು ಭಾಗದಲ್ಲಿ ವಿಭಿನ್ನ ಪ್ರಕಾರದ ಶಿಲಾಸಮಾಧಿಗಳಿವೆ. ಈ ರೀತಿಯ

ನಿರ್ಮಿತಿಗಳು ಬೃಹತ್ ಶಿಲಾಯುಗ ಸಂಸ್ಕೃತಿಯ ಜನರ ಸಾಮಾಜಿಕ ಮತ್ತು ಧಾರ್ಮಿಕ ನಂಬಿಕೆಗಳ ಬಗ್ಗೆ ಬೆಳಕು ಚೆಲ್ಲುತ್ತವೆ. ಅಂದಿನ ಜನರು ಪುನರ್‌ಜೀವನದಲ್ಲಿ ನಂಬಿಕೆಯುಳ್ಳವರಾಗಿದ್ದು ಮನುಷ್ಯ ಸಾವನಪ್ಪಿದ ನಂತರ ಆತ್ಮವು ಮರುಹುಟ್ಟು ಪಡೆದುಕೊಳ್ಳುತ್ತದೆ ಎಂಬ ನಂಬಿಕೆಯುಳ್ಳವರಾಗಿದ್ದರು ಎಂಬುದಕ್ಕೆ ಶಿಲಾನಿರ್ಮಿತಿಗಳೇ ಸಾಕ್ಷಿಯಾಗಿವೆ.

**ಕೊನೆ ಟಿಪ್ಪಣಿ**

೧. ಸುಂದರ ಅ., ೧೯೭೫, ದಿ ಅರ್ಲಿ ಛೇಂಬರ್ ಟೋಂಬ್ಸ್ ಆಫ್ ಸೌಥ್ ಇಂಡಿಯಾ, ಪು. ೧.

೨. ಅದೇ ಪು. ೪.

೩. ಶರ್ಮ ಜಿ. ಆರ್., ಮೆಗಾಲಿಥಿಕ್ ಕಲ್ಚರ್ಸ್ ಆಫ್ ದಿ ನಾರ್ದರ್ನ್ ವಿಂಧ್ಯಾಸ್, ಪು. ೪೭೭-೪೮೦.

೪. ಅದೇ, ಪು. ೪೭೭-೪೮೦.

೫. ಇಂ. ಆ. ರಿ, ೧೯೮೩-೮೪, ಪು.೫೯-೬೦.

೬. ಹೈಮನ್ ಡೊರ್ಪ್ ಸಿ., ಮೆಗಾಲಿಥಿಕ್ ರಿಚ್ಯುಯಲ್ ಅಮಾಂಗ್ ದಿ ಗದಬಸ್ ಅಂಡ್ ಬೊಂದೊಸ್ ಆಫ್ ಓರಿಸ್ಸಾ ಜಿ.ಎಸ್.ಐ ಸಂ. ೧೯, ಪು. ೧೪೯-೮೭.

೭. ಗುಪ್ತ ಸಿ.ಎಸ್., ಮೆಗಾಲಿಥಿಕ್ ಕಲ್ಚರ್ಸ್ ಆಫ್ ಸೌತ್ ಕೋಸಲ, ಇಂಡಿಯನ್ ಆರ್ಕಿಯಾಲಾಜಿಕಲ್ ನ್ಯೂ ಪರ್ಸ್‌ಪೆಕ್ಟಿವ್, ಪು. ೨೬೪-೨೬೭.

೮. ಗುರುರಾಜ ರಾವ್ ಬಿ.ಕೆ., ೧೯೭೨, ದಿ ಮೆಗಲೆಥಿಕ್ ಕಲ್ಚರ್ ಇನ್ ಸೌಥ್ ಇಂಡಿಯಾ, ಪು. ೨೩೭.

೯. ಅದೇ ಪು. ೨೧೭.

೧೦. ಅದೇ ಪು. ೨೧೮.

೧೧. ಅದೇ ಪು. ೨೧೮.

೧೨. ಶ್ರೀನಿವಾಸನ್ ಕೆ.ಆರ್., ದಿ ಮೆಗಾಲಿಥಿಕ್ ಬರಿಯಲ್ಸ್ ಅಂಡ್ ಅರ್ನ-ಫೀಲ್ಡ್ ಆಫ್ ಸೌಥ್ ಇಂಡಿಯಾ ಇನ್ ದಿ ಲೈಟ್ ತಮಿಳು ಲಿಟರೇಚರ್ ಅಂಡ್ ಟ್ರಡಿಷನ್, ಏನ್ಸಿಯಂಟ್ ಇಂಡಿಯಾ, ಸಂ.೨, ಪು. ೯-೧೬.

೧೩. ಥಾಪರ್ ಬಿ.ಕೆ., ಪೊರ್ಕಾಳಂ(೧೯೪೮), ಎಕ್ಸಕವೇಶನ್ ಅಟ್ ಎ ಮೆಗಾಲಿಥಿಕ್ ಅರ್ನ-ಬರಿಯಲ್, ಏನ್ಸಿಯಂಟ್ ಇಂಡಿಯಾ ಸಂ. ೮, ಪು. ೩-೧೬.

೧೪. ದೇವುಪತ್ತಾರ್, ಮಹಾದೇವ ಬಾಬ ಮೆಡೋಸ್ ಟೇಲರ್, ಪು. ೩೨-೩೩

೧೫. ಕೃಷ್ಣಮೂರ್ತಿ ಎಂ.ಎಸ್., ೨೦೧೨, ಕರ್ನಾಟಕದಲ್ಲಿ ಪುರಾತತ್ವ ಉತ್ಖನನಗಳು, ಇ.ದ.ಪು. ೧೨-೧೩, ಪು. ೩೧.

೧೬. ವೀಲರ್ ಆರ್.ಇ.ಎಮ್., ೧೯೪೭-೪೮, ಬ್ರಹ್ಮಗಿರಿ ಅಂಡ್ ಚಂದ್ರವಳ್ಳಿ, ಏನ್ಶಿಯಂಟ್ ಇಂಡಿಯಾ, ನಂ.೪, ಪು. ೨೭೦-೨೭೧.

೧೭. ಸುಬ್ಬರಾವ್, ಬಿ., ೧೯೪೮, ಸ್ಟೋನ್ ಏಜ್ ಕಲ್ಚರ್ ಆಫ್ ಬಳ್ಳಾರಿ, ಪು. ೫.

೧೮. ಥಾಪರ್ ಬಿ.ಕೆ., ಮಸ್ಕಿ-೧೯೫೪, 'ಎ ಚಾಲ್ಕೋಲಿಥಿಕ್ ಸೈಟ್ ಆಫ್ ದ ಸರ್ದನ್ ಡೆಕ್ಕನ್', ಏನ್ಷಿಯಂಟ್ ಏಷ್ಯಾ, ನಂ, ೧೩, ಪು. ೧೪೨.

೧೯. ಶೇಷಾದ್ರಿ ಎಂ., ೧೯೫೮, ರಿಪೋರ್ಟ್ ಆನ್ ದ ಎಕ್ಸ್‌ವೇಶನ್ ಅಟ್ ಟಿ ನರಸೀಪುರ, ಪು. ೪೮.

೨೦. ನಾಗರಾಜರಾವ್ ಎಂ, ಎಸ್., ೧೯೭೨, ಪ್ರೋಟೊ ಹಿಸ್ಟಾರಿಕ್ ಕಲ್ಚರ್ಸ್ ಆಫ್ ದ ತುಂಗಭದ್ರ ವ್ಯಾಲಿ, ಪು. ೧೦.

೨೧. ಸುಂದರ ಅ., (ಸಂ), (ಮರು ಮುದ್ರಣ), ೨೦೧೮, ಕರ್ನಾಟಕ ಚರಿತ್ರೆ(ಸಂ.೧), ಪು. ೨೨೦.

೨೨. ಕೃಷ್ಣಮೂರ್ತಿ ಎಂ.ಎಸ್., ೨೦೧೨, ಕರ್ನಾಟಕದಲ್ಲಿ ಪುರಾತತ್ವ ಉತ್ಖನನಗಳು, ಇ.ದ.ಪು, ೧೨-೧೩, ಪು. ೧೮.

೨೩. ದೇವರಾಜ ಡಿ.ವಿ., ಜೋಷಿ ಎನ್.ಎ., ಪಾಟೀಲ್ ಸಿ.ಎಸ್., ಗಂಗಾಧರ ಟಿ.ಎಸ್., ೧೯೯೬, ಹೆಗ್ಗಡೆಹಳ್ಳಿ ಎ ರಿಪೋರ್ಟ್ ಆನ್ ಮೆಗಾಲಿಥಿಕ್ ಎಕ್ಸಕವೇಷನ್; ೧೯೯೫, ಡೈರಕ್ಟರ್ ಆಫ್ ಆರ್ಕಿಯಾಲಾಜಿ ಅಂಡ್ ಮ್ಯೂಸಿಯಮ್ಸ್, ಮೈಸೂರು, ಪು. ಸಂ, ೧-೧೦: ಅಂಬಳಿಕೆ ಹಿರಿಯಣ್ಣ, ೨೦೦೯, ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ, ಪು. ೬೭೨.

೨೪. ಇಂ.ಆ.ರಿ, ೧೯೮೦-೮೧, ಪು. ೨೬.

೨೫. ಇಂ.ಆ.ರಿ, ೧೯೮೮-೮೯, ಪು. ೨೬.

೨೬. ವಿದ್ವಾಂಸರಾದ ಕೆ.ಬಿ. ಶಿವತಾರಕ್ ಅವರು ಕರ್ನಾಟಕದಲ್ಲಿ ಇದುವರೆಗೆ ಒಟ್ಟು ೧೪೪೦ ಕ್ಕೂ ಹೆಚ್ಚು ಬೃಹತ್ ಶಿಲಾಯುಗದ ನೆಲೆಗಳು ಬೆಳಕಿಗೆ ಬಂದಿವೆ. ಅವುಗಳಲ್ಲಿ ೧೧೬೪ಕ್ಕೂ ಹೆಚ್ಚು ಸ್ಮಶಾನ ನೆಲೆಗಳು ಮತ್ತು ೨೭೬ ವಸತಿ ನೆಲೆಗಳಿವೆ ವರದಿಯಾಗಿವೆಯೆಂದು ತಿಳಿಸಿದರು.

೨೭. ಸುಂದರ ಅ., ಪೂರ್ವೋಕ್ತ, ಪು. ೨೨೧.

೨೮. ಸುಂದರ ಅ., ೧೯೯೪, ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ, ಪು. ೪೪.

೨೯. ರಾವ್ ಕೆ.ಪಿ., ೧೯೮೮, ಡೆಕ್ಕನ್ ಮೆಗಾಲಿಥಿಸ್, ಪು. ೧,

೩೦. ಸುಂದರ ಅ., (ಸಂ), ೨೦೧೮, ಪೂರ್ವೋಕ್ತ, ಪು. ೨೩೦.

೩೧. ಸುಂದರ ಅ., ೧೯೯೪, ಪು. ೧೭೮.

೩೨. ಅಂಬಳಿಕೆ ಹಿರಿಯಣ್ಣ, (ಪ್ರ.ಸಂ.), ೨೦೦೯, ಪೂರ್ವೋಕ್ತ, ಪು. ೬೭೨.

೩೩. ಸುಂದರ ಅ., (ಸಂ), ೨೦೧೮, ಪೂರ್ವೋಕ್ತ, ಪು. ೨೨೫.

೩೪. ಜಯಣ್ಣ ಯು., ೨೦೦೩, ಮೊಳಕಾಲ್ಮೂರು ತಾಲ್ಲೂಕಿನ ಪುರಾತತ್ವೀಯ ಪರಿಸರ, ಪು. ೧೧೮.

೩೫. ಸುಂದರ ಅ., (ಸಂ), ೨೦೧೮, ಪೂರ್ವೋಕ್ತ, ಪು. ೨೨೬-೨೨೭.

೩೬. ಜಯಣ್ಣ ಯು., ೨೦೦೩, ಪೂರ್ವೋಕ್ತ, ಪು. ೧೧೯.

೩೭. ಸುಂದರ ಅ., (ಸಂ), ೨೦೧೮, ಪೂರ್ವೋಕ್ತ, ಪು. ೨೨೮.

೩೮. ಗೋಪಾಲ್ ಆರ್., (ಸಂ.), ೨೦೧೦, ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೨೩.

೩೯. ಅದೇ, ಪು. ೨೩.

೪೦. ಸುಂದರ ಅ.,(ಸಂ), ೨೦೧೮, ಪೂರ್ವೋಕ್ತ, ಪು. ೨೨೯.

೪೧. ಶರಣಬಸಪ್ಪ ಕೋಲ್ಕಾರ, ೨೦೧೬, ಗಂಗಾವತಿ ತಾಲ್ಲೂಕಿನ ನವಶೋಧಿತ ಬೃಹತ್ ಶಿಲಾಯುಗದ ನೆಲೆಗಳು ಮತ್ತು ಕಲ್ಗೋರಿಗಳು, ಇ.ದ.ಸಂ.೩೨, ಪು. ೦೧-೦೬,

೪೨. ಅದೇ, ಪು. ೦೧-೦೬,

೪೩. ಸುಂದರ ಅ., (ಸಂ), ೨೦೧೮, ಪೂರ್ವೋಕ್ತ, ಪು. ೨೩೧.

೪೪. ತಿಪ್ಪೇಸ್ವಾಮಿ ಹೆಚ್., ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು, ಇ.ದ.ಸಂ. ೧೪, ಪು. ೧೯.

೪೫. ಸುಂದರ ಅ., (ಸಂ), ೨೦೧೮, ಪೂರ್ವೋಕ್ತ, ಪು. ೨೩೧.

೪೬. ರಾವ್ ಕೆ.ಪಿ., ಡೆಕ್ಕನ್ ಮೆಗಾಲಿಥ್ಸ್, ಪು. ೩.

೪೭. ಸುಂದರ ಅ., (ಸಂ), ೨೦೧೮, ಪೂರ್ವೋಕ್ತ, ಪು. ೨೩೧-೨೩೨.

೪೮. ಶ್ರೀನಿವಾಸ್ ಎಲ್., ೨೦೧೧, ಹಂಪಿ ಪರಿಸರದ ಆದಿ ಮಾನವನ ನೆಲೆಗಳು, ಪು. ೧೧೩.

೪೯. ರಾವ್ ಕೆ.ಪಿ., ಪೂರ್ವೋಕ್ತ, ಪು.೩.

೫೦. ಜಯಣ್ಣ ಯು., ಪೂರ್ವೋಕ್ತ, ಪು. ೧೭೮.

೫೧. ಸುಂದರ ಅ., ಪೂರ್ವೋಕ್ತ, ಪು. ೧೭೮-೧೭೯.

೫೨. ಚಂದ್ರಶೇಖರ್ ಎಚ್., ೨೦೧೫, ಕೂಡ್ಲಿಗಿ ತಾಲ್ಲೂಕಿನ ಮಾನವಾಕೃತಿಯ ಶಿಲಾ ಶಿಲ್ಪಗಳು ಮತ್ತು ಬೃಹತ್ ಕಲ್ಗೋರಿಯ ಬಹುಮುಖಿ ಅಧ್ಯಯನ. ಇ.ದ.ಸಂ.೩೦, ಪು. ೨೬-೨೮.

೫೩. ದೇವುಪತ್ತಾರ್, ಪೂರ್ವೋಕ್ತ, ಪು. ೩೨-೩೩.

೫೪. ಗುರುರಾಜರಾವ್ ಬಿ.ಕೆ., ಪೂರ್ವೋಕ್ತ, ಪು. ೨೪೨.

೫೫. ಅದೇ, ಪು. ೨೩೬.

೫೬. ಅದೇ, ಪು. ೨೩೮.

೫೭. ಅದೇ, ಪು. ೨೩೯.

೫೮. ಅದೇ, ಪು. ೨೪೨.

೫೯. ಅದೇ, ಪು. ೨೪೫.

೬೦. ಕರ್ನಾಟಕ ಭಾರತಿ, ಸಂಪುಟ ೧, ಸಂಚಿಕೆ ೧ ಪು. ೬೭-೬೮.

೬೧. ಸುಂದರ ಅ., ೧೯೭೫, ಪೂರ್ವೋಕ್ತ, ಪು. ೪೦.

೬೨. ಸುಂದರ ಅ., ಪೂರ್ವೋಕ್ತ, ಪು. ೩೦೧.

೬೩. ಉದಯ ರವಿ ಎಸ್ ಮೂರ್ತಿ, ೧೯೯೪, ಮೆಗಾಲಿಥಿಕ್ ಕಲ್ಚರ್ ಆಫ್ ಸೌಥ್ ಇಂಡಿಯಾ ಸೋಷಿಯೋ-ಎಕಾನಾಮಿಕ್ ಪರ್ಸ್‌ಪೆಕ್ಟಿವ್ಸ್, ಪು. ೧-೨.

# ಅಧ್ಯಾಯ : ಐದು

# ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದ ಬೃಹತ್ ಶಿಲಾಯುಗ ನೆಲೆಗಳು

ಬೃಹತ್ ಶಿಲಾಯುಗದ ನೆಲೆಗಳು ಸಾಮಾನ್ಯವಾಗಿ ಬೆಟ್ಟ-ಗುಡ್ಡಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಸುಲಭವಾಗಿ ದೊರಕುವ ಕಲ್ಲುಚಪ್ಪಡಿಗಳ ಗುಂಡುಗಳು ದೊರೆಯಬಹುದಾದ ಪ್ರದೇಶದಲ್ಲಿವೆ. ಈ ಸಂಸ್ಕೃತಿಯ ಜನಸಮುದಾಯದ ಯಾವುದೇ ಪ್ರಕಾರದ ಮನೆಗಳು ಅಥವಾ ಲೌಕಿಕ ಕಟ್ಟಡಗಳು ತಿಳಿದುಬಂದಿಲ್ಲ. ಏಕೆಂದರೆ ಈ ಸಂಸ್ಕೃತಿಯ ಆದಿ ಭಾಗದ ಜನರು ಬಹುಮಟ್ಟಿಗೆ ಅಲೆಮಾರಿ ಜೀವನವನ್ನು ನಡೆಸುತ್ತಿದ್ದರಿಂದ ಲೌಕಿಕ ಕಟ್ಟಡಗಳು ಇದುವರೆಗೂ ಬೆಳಕಿಗೆ ಬಂದಿಲ್ಲ. ಆದರೆ ಬೆಟ್ಟ-ಗುಡ್ಡಗಳ ಸಮತಟ್ಟಾದ ತಪ್ಪಲುಗಳಲ್ಲು ಹಾಗೂ ಶಿಲಾಮಯ ಬರಡು ಭೂಮಿಗಳನ್ನು ಶವಸಂಸ್ಕಾರಕ್ಕೆ ಮೀಸಲಿಡುತ್ತಿದ್ದರಿಂದ ಇಂತಹ ಸ್ಥಳದಲ್ಲಿ ಶಿಲಾಸಮಾಧಿಗಳು ಹೆಚ್ಚಾಗಿ ಕಂಡುಬರುತ್ತವೆ. ಕೃಷಿಗೆ ಯೋಗ್ಯವಾದ ಭೂಮಿಯಲ್ಲಿ ಇಂತಹ ನಿರ್ಮಿತಿಗಳು ಕಂಡುಬರುವುದು ವಿರಳವೆನಿಸಿದೆ. ಬೆಟ್ಟ-ಗುಡ್ಡಗಳ ತಪ್ಪಲಿನಲ್ಲಿ ಬೃಹತ್ ಶಿಲಾಗೋರಿ ನೆಲೆಗಳು ಕಂಡುಬಂದರೆ ಆ ಜನರ ವಾಸ್ತವ್ಯದ ನೆಲೆಗಳು ಬೆಳಕಿಗೆ ಬಂದಿರುವುದು ತೀರ ಕಡಿಮೆ.

ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಕಂಡುಬರುವ ಬೃಹತ್ ಶಿಲಾಯುಗದ ನೆಲೆಗಳನ್ನು ಎರಡು ಭಾಗಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಅವುಗಳಲ್ಲಿ ೧. ವಸತಿ ಮತ್ತು ಸ್ಮಶಾನ ನೆಲೆಗಳು ೨. ಸ್ಮಶಾನ ನೆಲೆಗಳು.

### ೫.೧. ವಸತಿ ಮತ್ತು ಸ್ಮಶಾನ ನೆಲೆಗಳು

'ವಸತಿ'ಎಂದರೆ, 'ಮನೆ' ಎಂಬರ್ಥ ಹೊಂದಿದೆ. ಕರ್ನಾಟಕದಾದ್ಯಂತ 'ವಸತಿ' ಎಂಬ ಪದಕ್ಕೆ ಪರ್ಯಾಯವಾಗಿ ಮನೆ, 'ವಾಸಸ್ಥಾನ' ಗೂಡು, ಆಶ್ರಯಸ್ಥಾನ ಇತ್ಯಾದಿ ಪದಗಳು ಬಳಕೆಯಾಗುತ್ತವೆ. 'ವಸ್' ಎಂಬ ಧಾತುವಿನಿಂದ 'ವಾಸ್ತು' ಎಂಬ ಶಬ್ದವು ಉತ್ಪತ್ತಿಯಾಗಿದೆ. 'ವಾಸ್ತು' ಎಂದರೆ 'ವಾಸಿಸು' ಎಂದರ್ಥ. 'ವಾಸ್ತು' ಎಂದರೆ, ವಸ್ತುಗಳಿಂದ ನಿರ್ಮಿತವಾದುದು ಎಂಬ ಅರ್ಥವಿರುವಂತೆ ತೋರುತ್ತದೆ. ಕೇವಲ ಕಟ್ಟಡದ ನಿರ್ಮಾಣಗಳಿಗೆ ಮಾತ್ರವಲ್ಲದೆ, ಪಟ್ಟಣ ನಿರ್ಮಾಣದ ಯೋಜನೆ, ಉದ್ಯಾನವನಗಳು, ರಸ್ತೆಗಳು ಈ ಪದದ ವ್ಯಾಪ್ತಿಗೆ ಒಳಪಟ್ಟಿದೆ. ಸಾಮಾನ್ಯವಾಗಿ ವಾಸದ ಮನೆಗಳಿಗೆ

ವಸತಿ ಮನೆಗಳೆಂದು ಕರೆಯಬಹುದು. ಕೆಲವು ಸಲ ಒಂದೇ ಮನೆಯನ್ನು 'ವಸತಿ' ಎಂದು ಪರಿಗಣಿಸಬಹುದು.

ಶಿಲಾಯುಗದಲ್ಲಿ ಮಾನವನು ಮಳೆ, ಗಾಳಿ, ಬಿಸಿಲು ಮತ್ತು ಕಾಡು ಮೃಗಗಳಿಂದ ರಕ್ಷಣೆ ಪಡೆಯಲು ನಿಸರ್ಗ ನಿರ್ಮಿತ ಗುಹೆಗಳು, ಕಲ್ಲಾಸರೆಗಳು ಹಾಗೂ ಬೃಹತ್ತಾದ ಮರದ ಪೊಟರೆ ಇತ್ಯಾದಿ ಎಡೆಗಳಲ್ಲಿ ವಾಸಿಸತೊಡಗಿದನು. ಇದು ಮಾನವ ಪ್ರಕೃತಿಯೊಂದಿಗೆ ಹೊಂದಿಕೊಂಡು ಬದುಕಲು ಯತ್ನಿಸಿದ ಪ್ರಾರಂಭಿಕ ಹಂತವೆಂದು ಹೇಳಬಹುದು. ಪ್ರಾರಂಭದಲ್ಲಿ ಯಾವುದೇ ಬಗೆಯ ರಚನೆಗಳನ್ನು ಮಾಡದೇ ಪ್ರಕೃತಿದತ್ತವಾದ ಸ್ಥಳಗಳನ್ನು ತನ್ನ ವಾಸದ ತಾಣವಾಗಿಸಿಕೊಂಡನು. ಅಂತಹ ಪ್ರಾರಂಭಿಕ ಕಾಲಘಟ್ಟದಿಂದ ಕಾಲಾನುಕ್ರಮದಲ್ಲಿ ತಾನು ವಿಕಾಸ ಹೊಂದುತ್ತಾ ಹಂತ ಹಂತವಾಗಿ ತನ್ನ ವಸತಿನೆಲೆಯ ವಿಕಸನಕ್ಕೆ ಕಾರಣೀಭೂತನಾದನು. ನೈಸರ್ಗಿಕ ಕಾರಣಗಳಿಂದ ಗುಡಿಸಲು ಇಟ್ಟಿಗೆಯ ಮನೆ, ಕಲ್ಲಿನ ಮನೆ, ನಿರ್ಮಿಸುವುದರೊಂದಿಗೆ ಹಟ್ಟಿಗಳಿಂದ (ರೊಪ್ಪಗಳಿಂದ) ನಗರೀಕರಣದವರೆಗೆ ತನ್ನ ವ್ಯಾಪ್ತಿ ವಿಸ್ತರಿಸಿದನು.

ಹಳೆಯ ಶಿಲಾಯುಗ ಕಾಲದಿಂದಲೂ ಮಾನವನ ವಸತಿ ನೆಲೆಗಳು ಕಂಡುಬರುತ್ತವೆ. ಭಾರತದಲ್ಲಿ ಮೊಟ್ಟ ಮೊದಲಿಗೆ ಮಧ್ಯಪ್ರದೇಶದ ಭೀಂಬೆಟ್ಕದಲ್ಲಿ ಸುಮಾರು ಇನ್ನೂರಕ್ಕೂ ಹೆಚ್ಚು ನೈಸರ್ಗಿಕ ಗುಹೆಕಲ್ಲಾಸರೆಗಳು ಕಂಡುಬಂದಿರುವ ವಿವರಗಳು ದಾಖಲಾಗಿವೆ. ಅವುಗಳಲ್ಲಿ ಹಳೆಯ ಶಿಲಾಯುಗದ ಮಾನವ ತಯಾರಿಸಿದ ಹಲವು ಉಪಕರಣಗಳು ದೊರಕಿವೆ. ಇಲ್ಲಿ ದೊರೆತ ಉಪಕರಣಗಳು ಕಲ್ಲಿನ ಕೊಡಲಿ, ಹೆರೆಚಕ್ಕೆಗಳು, ಚಕ್ಕೆಗಳು ಇನ್ನೂ ಮುಂತಾದ ಉಪಕರಣಗಳು ಲಭ್ಯವಾಗಿರುವುದರಿಂದ ಈ ನೆಲೆಯನ್ನು 'ಕೈಗಾರಿಕ ಕೇಂದ್ರ'ವೆಂದು ಗುರುತಿಸಲಾಗಿದೆ.[೧] ಅಲ್ಲದೆ ಮಹಾರಾಷ್ಟ್ರದ ನೇವಾಸ, ಸಂಗಾಓ (ಉತ್ತರ ವಾಯುವ್ಯ) ಆಂಧ್ರ ಪ್ರದೇಶದ ಕರ್ನೂಲ್‌ನಲ್ಲಿ ಆದಿಹಳೆಯ ಶಿಲಾಯುಗದ ವಸತಿಗಳು ದೊರಕಿರುವ ವರದಿಗಳು ಪ್ರಕಟವಾಗಿವೆ.

ಕರ್ನಾಟಕದಲ್ಲಿಯೂ ಸಹ ಇಂತಹ ಹಲವು ವಸತಿನೆಲೆಗಳು ಪತ್ತೆಯಾಗಿದ್ದು, ಅವುಗಳಲ್ಲಿ ಗುಲ್ಬರ್ಗಾ ಜಿಲ್ಲೆಯ ಸುರಪುರ ತಾಲೂಕಿನ ಹುಣಸಗಿ ಹಳ್ಳದಲ್ಲಿರುವ ನೆಲೆಯು ಒಂದಾಗಿದೆ. ಕೃಷ್ಣನದಿಯ ಉಪನದಿಯ ಹುಣಸಗಿಹಳ್ಳ[೨]ದಲ್ಲಿ ಕಲದೇವನಹಳ್ಳಿ, ವಜ್ಜಾಳ, ಸಡಬ, ತೆಗ್ಗಿನಹಳ್ಳಿ ಮೊದಲಾದ ಒಟ್ಟು ಇಪ್ಪತ್ತೈದು ನೆಲೆಗಳು ಪತ್ತೆಯಾಗಿವೆ. ನೈಸರ್ಗಿಕವಾಗಿ ಕಲ್ಲಿನ ಪೊಟರೆ ಅಥವಾ ಕಲ್ಲಾಸರೆಯನ್ನು ಅಂದಿನ ಜನರು ತಮ್ಮ ವಾಸದ ನೆಲೆಗಳನ್ನಾಗಿ ಮಾಡಿಕೊಂಡಿದ್ದರು. ಕೈಗೊಡಲಿ, ಮಚ್ಚು, ಸುತ್ತಿಗೆ, ಭರ್ಚಿ, ಮೊನೆ, ಹೆರೆಯುವ ಚಕ್ಕೆ ಹಾಗೂ ಶೇದಿಕಲ್ಲಿನಿಂದ ತಯಾರಿಸಿದ ಉಪಕರಣಗಳು ದೊರೆತಿವೆ. ಮತ್ತೊಂದು ನೆಲೆಯಲ್ಲಿ ಕೆಂಮಣ್ಣಿನ ಚಿಕ್ಕ ಚಿಕ್ಕ ಹೆಂಟೆಗಳು ಕಂಡುಬಂದಿವೆ. ಅದು ಅಂದಿನ ಜನರಿಗೆ ಬಣ್ಣದ ಪರಿಚಯವಿತ್ತು ಎಂಬುದನ್ನು ಸೂಚಿಸುತ್ತದೆ. ಹುಣಸಗಿ ಮತ್ತು ಭೀಂಬೆಟ್ಕ ಪ್ರದೇಶಗಳಲ್ಲಿ ಕಂಡುಬರುವ ಕುರುಹುಗಳಲ್ಲಿ ಗಮನಿಸಬಹುದಾದ ಮುಖ್ಯ ಅಂಶಗಳೆಂದರೆ ಅಲ್ಲಿರುವ ಹಲವು ನೆಲೆಗಳು ಒಂದಕ್ಕೊಂದು ಹತ್ತಿರವಿದ್ದು, ಅವುಗಳ ಸಾಂದ್ರತೆಯು ಅಧಿಕವಾಗಿದೆ. ಗುಲ್ಬರ್ಗ ಜಿಲ್ಲೆಯಲ್ಲಿರುವ

ಯಡಿಯಾಪುರ ಮತ್ತು ಫತೇಪುರ ಗ್ರಾಮಗಳಲ್ಲಿ ಬಿಳಿಬಣ್ಣದ ಗಚ್ಚು ಶೇದಿ ನೆಲೆ ಮತ್ತು ಜೇಡಿಮಣ್ಣಿನ ಉಪಕರಣಗಳು ಕಂಡುಬಂದಿವೆ. ಕೆಲವು ಭಾಗಗಳಲ್ಲಿ ಗ್ರಾನೈಟ್, ನೀಸ್ ಶಿಲೆಯ ಮತ್ತು ಗರಸು ಕಣಗಳ ಉಪಕರಣಗಳಾದ ಕೈಗೊಡಲಿಗಳು, ದೊಡ್ಡ ಚಕ್ರ, ಮಚ್ಚು, ಸೀಳುಗತ್ತಿಗಳು ಪತ್ತೆಯಾಗಿವೆ. ಇಂತಹ ಕುರುಹುಗಳು ಬಾಗಲಕೋಟೆ ಜಿಲ್ಲೆಯ ಅನಗವಾಡಿ ಹಳ್ಳದ ದಡದಲ್ಲಿ ಗಷ್ಪುಮರಳುಗಲ್ಲಿನಲ್ಲಿ ಕಂಡುಬಂದಿವೆ. ಮುಖ್ಯವಾಗಿ ಕ್ವಾರ್ಟ್‌ಜೆಟ್ ಕೊಡಲಿ, ಮಚ್ಚು, ಹರೆಯುವ ಚಕ್ಕೆ ಮುಂತಾದ ಉಪಕರಣಗಳು ಈ ನೆಲೆಯಲ್ಲಿರುವುದನ್ನು ದಾಖಲಿಸಲಾಗಿದೆ.[೩] ಇದೇ ರೀತಿ ಬಳ್ಳಾರಿಯಿಂದ ಈಶಾನ್ಯಕ್ಕೆ ಇರುವ ಸಣ್ಣರಸಮ್ಮ ಬೆಟ್ಟದಲ್ಲಿ ಕ್ವಾರ್ಟ್‌ಜೆಟ್‌ಕಲ್ಲಿನ ಮತ್ತು ಡೊಲರೈಟ್ ಕಲ್ಲಿನ ಚಕ್ಕೆಗಳು, ಮೊನಚುಗಳು, ಹರೆಯುವ ಚಕ್ಕೆಗಳು, ತಿರುಳುಗಲ್ಲುಚಕ್ಕೆಗಳು ಶೋಧವಾಗಿದ್ದರಿಂದ ಭಾರತದ ಭೂಭಾಗವು ಕೂಡ ಮಾನವನ ಪ್ರಾಚೀನ ವಾಸ್ತವ್ಯ ನೆಲೆಗಳ್ಲೊಂದು ಎಂಬ ಮಹತ್ವದ ಸಂಗತಿಗೆ ಸಾಕ್ಷಿಯಾಯಿತೆಂಬ ವಿವರಗಳು ದಾಖಲಾಗಿರುವುದುಂಟು.

ಮಾನವ ವಾಸಮಾಡುವ ನಿರ್ದಿಷ್ಟ ಸ್ಥಳಕ್ಕೆ ವಸತಿ, ವಸತಿ ಗೃಹ, ವಾಸದ ಮನೆ ಇತ್ಯಾಧಿಯಾಗಿ ಗುರುತಿಸಲಾಗುತ್ತದೆ. ವಾಸದ ನೆಲೆಗಳನ್ನು ಗುರುತಿಸಲು ಕೆಲವು ಲಕ್ಷಣಗಳಿವೆ. ಸಾಮಾನ್ಯವಾಗಿ ವಸತಿ ನೆಲೆಗಳಲ್ಲಿ ತನ್ನ ಆಹಾರಕ್ಕಾಗಿ ಉಪಯೋಗಿಸಿದ ವಸ್ತುಗಳು ಮತ್ತು ರಕ್ಷಣೆಗಾಗಿ ತಯಾರಿಸಿದ ಉಪಕರಣಗಳು ದೊರೆಯುತ್ತವೆ. ಇಂತಹ ನೆಲೆಗಳಿಗೆ ಪೂರಕವಾಗುವ ಮಡಕೆಗಳು, ಸುಟ್ಟಮಣ್ಣು, ಬೂದಿ, ಇದ್ದಿಲು ಇನ್ನೂ ಮೊದಲಾದ ಪ್ರಾಕ್ತನಾವಶೇಷಗಳು ಆಯಾಕಾಲಘಟ್ಟಕ್ಕೆ ಸಂಬಂಧಿಸಿದ ಸಾಂಸ್ಕೃತಿಕ ಕುರುಹುಗಳ ನಿವೇಶನಗಳಲ್ಲಿ ದೊರೆಯುತ್ತವೆ. ವಸತಿ ನೆಲೆಗಳ ಸುತ್ತಮುತ್ತಲಿನ ಪರಿಸರದಲ್ಲಿಯೇ ಸಮಾಧಿ ಅವಶೇಷಗಳು ಸಹ ಕಂಡುಬಂದಿದ್ದು ಅಂತಹ ನೆಲೆಗಳನ್ನು ವಸತಿ ಮತ್ತು ಸ್ಮಶಾನ ನೆಲೆಗಳೆಂದು ಗುರುತಿಸಲಾಗಿದೆ. ಅಧ್ಯಯನ ಪ್ರದೇಶದಲ್ಲಿರುವ ವಸತಿ ಮತ್ತು ಸ್ಮಶಾನ ನೆಲೆಗಳನ್ನು ಈ ಕೆಳಗಿನಂತೆ ಕಟ್ಟಿಕೊಡಲಾಗಿದೆ.

**ಸಂಗನಕಲ್ಲು**

ಬಳ್ಳಾರಿ ನಗರದಿಂದ ೫ ಕಿ.ಮೀ ದೂರದಲ್ಲಿ ಈಶಾನ್ಯ ದಿಕ್ಕಿನಲ್ಲಿ ಸಂಗನಕಲ್ಲು ನೆಲೆಯಿದೆ. ೧೮೭೨ರಲ್ಲಿ ವಿಲಿಯಂ ಫ್ರೇಜರ್ ಅವರು 'ನವಿಲುಗುಡ್ಡ' ಎಂಬ ಸ್ಥಳದಲ್ಲಿ ಮೊಟ್ಟಮೊದಲಿಗೆ ನೂತನ ಶಿಲಾಯುಗದ ಅವಶೇಷಗಳನ್ನು ಬೆಳಕಿಗೆ ತಂದರು.[೪] ಇವು ಕರ್ನಾಟಕದ ಪ್ರಾಗೈತಿಹಾಸಿಕ ನೆಲೆಗಳಲ್ಲಿ ಅತ್ಯಂತ ಮಹತ್ವದ ಶೋಧನೆಗಳೆನಿಸಿದವು. ಇಲ್ಲಿನ ಸಣ್ಣರಸಮ್ಮ ಗುಡ್ಡದ ತುದಿಯು ಗ್ರಾನೈಟ್(ಕಣಶಿಲೆ) ಬಂಡೆಗಲ್ಲುಗಳಿಂದ ಕೂಡಿದೆ. ೧೯೪೬ರಲ್ಲಿ ಹೆಚ್.ಡಿ ಸಂಕಾಲಿಯ ಮಾರ್ಗದರ್ಶನದಲ್ಲಿ ಬಿ.ಸುಬ್ಬರಾವ್ ಅವರು ಉತ್ಖನನ ಕೈಗೊಂಡು ಮೂರು ಸಾಂಸ್ಕೃತಿಕ ಹಂತಗಳನ್ನು ಗುರುತಿಸಿದರು. ಅವುಗಳಲ್ಲಿ ಬೆಣಚುಕಲ್ಲಿನ ಉಪಕರಣಗಳು ಪ್ರಧಾನವಾಗಿರುವ ಸೂಕ್ಷ್ಮಶಿಲಾಯುಗದ ಎರಡು ಉಪಹಂತಗಳನ್ನು ನವಶಿಲಾಯುಗ ಹಾಗೂ ನವಶಿಲಾಯುಗ-ಬೃಹತ್ ಶಿಲಾಯುಗದ ಸಂಯೋಜನೆಗೊಂಡಿರುವುದನನ್ನು ಗುರುತಿಸಿದರು. ಆದರೆ ಜೆಡ್.ಎ. ಅನ್ಸಾರಿ, ಎಂ.ಎಸ್ ನಾಗರಾಜ್

ಅವರು ನವಶಿಲಾಯುಗ ಜನರ ಜೀವನದ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿ ಸಂಗ್ರಹಿಸಲು ಇಲ್ಲಿ ೧೯೬೪–೬೫ರಲ್ಲಿ ಉತ್ಖನನ ಕೈಗೊಂಡು ಮೇಲಿನ ಮೂರು ಹಂತಗಳಲ್ಲದೆ, ಸೂಕ್ಷ್ಮ ಶಿಲಾಯುಗಕ್ಕೂ ಮುಂಚಿನ ಹಂತವನ್ನು ಸಂಕಾಲಿಯ ಅವರೇ ಗುರುತಿಸಿದರು. ಇದರಲ್ಲಿ ಸಿದ್ದಶಿಲೆ, ದೊಡ್ಡ ಅಲಗು ಹಾಗೂ ಚಕ್ಕೆಗಳಿದ್ದವು.

ನವಶಿಲಾಯುಗದ ಆರಂಭ ಹಂತದಲ್ಲಿ ಮೂರು ತಡಿಕೆ ಮನೆಯ ನೆಲಗಟ್ಟುಗಳು, ಮಸುಕಾದ ಬೂದು ಬಣ್ಣದ ಮಣ್ಪಾತ್ರೆ, ಉಜ್ಜಿ ನಯಗೊಳಿಸಿದ ಕೊಡಲಿಗಳು, ಬೆನಚುಕಲ್ಲು, ಚರ್ಟ, ಚಾಲ್ಸೆಡೊನಿಯ ಅಲಗು ಸಮುಚ್ಚಯಗಳು ಕಂಡುಬಂದಿವೆ. ನೆಲಗಟ್ಟುಗಳು ವೃತ್ತಾಕಾರವಾಗಿದ್ದು, ಸುತ್ತಲೂ ಆಧಾರಗಂಬಗಳ ಗುಳಿಗಳಿದ್ದವು. ಅಂದಿನ ಜನರು ಗ್ರಾನೈಟ್ ಬಂಡೆಗಳ ನಡುವಿನ ಜಾಗವನ್ನೇ ಸಮತಟ್ಟಾಗಿಸಿಕೊಂಡು ತಡಿಕೆಮನೆಗಳನ್ನು ನಿರ್ಮಿಸಿಕೊಂಡಿದ್ದರು.[೫] ನೆಲೆಯ ಮೇಲ್ಮೈಯಲ್ಲಿ ಕೆಲವು ತಾಮ್ರದ ವಸ್ತುಗಳು ಹಾಗೂ ಇನ್ನಿತರೆ ವಸ್ತು ಅವಶೇಷಗಳು ಸಹ ದೊರೆತಿವೆ. ಇಲ್ಲಿ ಕೈಯಿಂದ ಮಾಡಿದ ನವಶಿಲಾಯುಗದ ಮಣ್ಪಾತ್ರೆಗಳೊಂದಿಗೆ ಬೃಹತ್ ಶಿಲಾಯುಗ ಸಂಸ್ಕೃತಿಯ ಕಪ್ಪು–ಕೆಂಪು ದ್ವಿವರ್ಣದ ಪಾತ್ರೆ, ಕಪ್ಪು ಹಾಗೂ ಕೆಂಪೂ ಪಾತ್ರೆಗಳು, ವಿವಿಧ ಬಗೆಯ ಧಾನ್ಯಗಳು ದೊರೆತವು. ಇದರಿಂದ ಈ ನೆಲೆಯಲ್ಲಿ ಸೂಕ್ಷ್ಮ ಶಿಲಾಯುಗ ಹಂತದ ನೆಲೆಯಲ್ಲಿ ನವಶಿಲಾಯುಗ ಹಾಗೂ ಬೃಹತ್ ಶಿಲಾಯುಗ ಹಂತದ ಸಾಂಸ್ಕೃತಿಕ ಅವಶೇಷಗಳು ಶೋಧವಾದವು. ಇದರಿಂದ ಈ ನೆಲೆಯು ಪ್ರಾಚೀನ ಕಾಲದಿಂದ ಹೊಂದಿರಬಹುದಾದ ಸಾಂಸ್ಕೃತಿಕ ನಿರಂತರತೆಯನ್ನು ಗುರುತಿಸಬಹುದು. ಸಂಗನಕಲ್ಲು ನೆಲೆಯ ಸುತ್ತಮುತ್ತ ಬೃಹತ್ ಶಿಲಾಯುಗದ ಸಮಾಧಿಗಳಾದ ನಿಲುಸುಗಲ್ಲುಗಳು ಮತ್ತು ಕಲ್ಲುವೃತ್ತ ಸಮಾಧಿಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪ್ರತ್ಯಕ್ಷವಾಗಿ ಗಮನಿಸಿ ಅವುಗಳು ಹೊಂದಿರಬಹುದಾದ ವ್ಯಾಪ್ತಿಯನ್ನು ಪರೀಕ್ಷಿಸಲಾಗಿದೆ. ಇದರಿಂದ ಸಂಗನಕಲ್ಲು ನೆಲೆಯು ಸಹ ವಸತಿ ಮತ್ತು ಸ್ಮಶಾನ ನೆಲೆ ಎಂದು ದೃಢವಾಗುತ್ತದೆ.

**ಕುರುಗೋಡು**

ಬಳ್ಳಾರಿಯಿಂದ ೩೦ ಕಿ.ಮೀ ದೂರದಲ್ಲಿದ್ದು, ಉತ್ತರ ಅಕ್ಷಾಂಶ ೧೫'೨೦'೫೫ ಹಾಗೂ ಪೂರ್ವ ರೇಖಾಂಶ ೭೬'೫೦'೧೭'ರ ನಡುವೆ ಹರಡಿಕೊಂಡಿದೆ. ಸಮುದ್ರಮಟ್ಟದಿಂದ ಸು. ೪೬೦ ಮೀ ಎತ್ತರದಲ್ಲಿದೆ. ಅತಿ ಗರಿಷ್ಟವಾದ ಬೆಟ್ಟದ ಎತ್ತರ ೫೯೯ ಮೀಟರ್ ಇದೆ. ಈ ಗ್ರಾಮದ ಸಂಗಮೇಶ್ವರ ದೇವಾಲಯದ ಹಿಂಬದಿಯಲ್ಲಿ ಹಾಗೂ ಬೆಟ್ಟದ ಮೇಲೆ ಬೃಹತ್ ಶಿಲಾಯುಗ ಸಂಸ್ಕೃತಿಯ ವೃತ್ತಾಕಾರದ ಸಮಾಧಿಗಳು ಬೆಳಕಿಗೆ ಬಂದಿದ್ದು ಆದರೆ ಈ ದಿನಗಳಲ್ಲಿ ಅವುಗಳಲ್ಲಿರುವ ಬಹುತೇಖ ಕುರುಹುಗಳು ನಾನಾ ಕಾರಣಗಳಿಂದಾಗಿ ಸಂಪೂರ್ಣ ಹಾಳಾಗಿವೆ ಎಂಬುದು ತುಂಬಾ ಖೇದಕರ ಸಂಗತಿ. ಆದರೆ ಈ ಸಂಸ್ಕೃತಿಯ ಮೃತಪಾತ್ರೆಗಳು ಹೇರಳವಾಗಿ ದೊರಕಿವೆ. ಇಲ್ಲಿನ ಬೃಹತ್ ಶಿಲಾಯುಗದ ನೆಲೆಗಳನ್ನು ಸಾಗುವಳಿ ಮಾಡಿ ವ್ಯವಸಾಯ ಯೋಗ್ಯ ಭೂಮಿಗಳನ್ನಾಗಿ ಪರಿವರ್ತಿಸಿರುವುದನ್ನು ಕಾಣಬಹುದು. ಇಲ್ಲಿದ್ದ ಸಮಾಧಿಗಳು ಬೃಹತ್ ಶಿಲೆಗಳನ್ನು ಒಂದರಪಕ್ಕದಲ್ಲಿ

ಒಂದನ್ನಿಟ್ಟು ಮಧ್ಯದಲ್ಲಿ ಕಲ್ಲಿನ ಚಕ್ಕೆಗಳಿಂದ ತುಂಬಿರುವಂತವು. ಈ ಗ್ರಾಮದ ಹಾಲುಬಾವಿಯ ಬಳಿಯು ಕೂಡಾ ಶಿಲಾಸಮಾಧಿಗಳಿದ್ದವೆಂದು ವರದಿಯಾಗಿವೆ. ಆದರೆ ಅವು ಸಹ ಸಂಪೂರ್ಣ ಹಾಳಾಗಿದ್ದು ಕಲ್ಲಿನ ಅವಶೇಷಗಳನ್ನು ಮಾತ್ರ ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ.

೨೦೧೧ರಲ್ಲಿ ಮಹದೇವಯ್ಯನವರ ನೇತೃತ್ವದಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯು ನಡೆಸಿದ ಉತ್ಖನನ ಸಂದರ್ಭದಲ್ಲಿ ಬೂದಿಕೊಳ್ಳ, ಬಾಳೆಕೊಳ್ಳ, ಮುದುಗನ ಮೂಲೆಯಲ್ಲಿ ಹಲವು ಪ್ರಾಚ್ಯಾವಶೇಷಗಳು ದೊರಕಿವೆ. ಅವು ಮೂರೂ ಹಂತಕ್ಕೆ ಸಂಬಂಧಪಟ್ಟವುಗಳಾಗಿದ್ದು, ಮೊದಲ ಹಂತದಲ್ಲಿ ನವಶಿಲಾಯುಗಕ್ಕೆ ಸಂಬಂಧಪಟ್ಟ ಉಜ್ಜಿನಯಗೊಳಿಸಿದ ಕಲ್ಲಿನಕೊಡಲಿ, ಕೈಯಿಂದ ಮಾಡಿದ ಮಡಕೆ ಭಾಗಗಳಿವೆ. ಎರಡನೆಯ ಹಂತದಲ್ಲಿ ಶಿಲಾ ತಾಮ್ರಯುಗಕ್ಕೆ ಸಂಬಂಧಪಟ್ಟ, ಚಕ್ರದ ಸಹಾಯದಿಂದ ತಯಾರಿಸಿದ ವಿವಿಧ ಬಗೆಯ ಮಡಕೆಯ ಭಾಗಗಳು, ಸುಡಾವೆಮಣ್ಣಿನ ವಸ್ತುಗಳಾದ ಮಣಿಗಳು, ಗೂಳಿ, ನಾಯಿ, ಪಕ್ಷಿ, ಹೆಣ್ಣಿನ ಗೊಂಬೆಗಳು(ಮಾತೃದೇವತೆ), ಚಿನ್ನದ ಸುರುಳಿಯಾಕಾರದ ಉಂಗುರ ಹಾಗೂ ತಾಮ್ರದ ಬಳೆ, ಚಿಕಣಿ ಕೊಡಲಿ ದೊರಕಿರುವುದನ್ನು ವರದಿಗಳಲ್ಲಿ ದಾಖಲಿಸಲಾಗಿದೆ.[೬]

ವೃತ್ತಾಕಾರದಲ್ಲಿ ನಿರ್ಮಸಿದ ಕಲ್ಲಿನ ಮನೆ ಪ್ರತಿ ಜಗಲಿಯ ಪಶ್ಚಿಮ ಮೂಲೆಯಲ್ಲಿ ಸುಟ್ಟಧಾನ್ಯಗಳ ಕುಳಿ ಹೊಂದಿರುವ ವೃತ್ತಾಕಾರದ ಜಗಲಿಯನ್ನು ಕೆಂಪು ಜೇಡಿಮಣ್ಣಿನಿಂದ ತಯಾರಿಸಲಾಗಿದೆ. ಕಲ್ಲಿನ ತುಂಡುಗಳು ಮತ್ತು ಮುರಿದ ಪಾತ್ರೆಗಳಿವೆ. ಜಗಲಿಯ ಪರಿಧಿಯಲ್ಲಿ ಯಾವುದೇ ಕುಳಿಗಳು ಕಂಡುಬಂದಿಲ್ಲ. ಮೂರನೆಯ ಹಂತದಲ್ಲಿ ಕಬ್ಬಿಣಯುಗಕ್ಕೆ ಸಂಬಂಧಪಟ್ಟ ಕಪ್ಪು, ಕೆಂಪು ವರ್ಣದ ಮಡಕೆಗಳು, ಕಪ್ಪು ವರ್ಣದ ಮಡಕೆಗಳು, ಕೆಂಪು ವರ್ಣದ ಮಡಿಕೆಗಳು ಕಂಡುಬಂದಿದ್ದು, ಅವುಗಳು ಭಕ್ಷಗಳು, ಬಟ್ಟಲು, ಕುಂಭ ಇತ್ಯಾದಿ. ಕಬ್ಬಿಣದ ವಸ್ತುಗಳಾದ ಸಣ್ಣ ಉಳಿ, ಮೊಳೆ ಮುಂತಾದವು ಈ ಹಂತದಲ್ಲಿ ದೊರಕಿವೆ. ಕೆಲವು ಸಮಾಧಿಗಳಲ್ಲಿ ಒಂದಕ್ಕಿಂತ ಹೆಚ್ಚು ವ್ಯಕ್ತಿಯ ಅಸ್ಥಿ ಅವಶೇಷಗಳು ಕಂಡುಬಂದಿವೆ. ಇಲ್ಲಿನ ನೈಸರ್ಗಿಕ ಗವಿಗಳಲ್ಲಿ ಹಾಗೂ ಶಿಲಾಶ್ರಯಗಳಲ್ಲಿ ವರ್ಣಚಿತ್ರಗಳು, ಬಯಲು ಬಂಡೆಯ ಮೇಲೆ ಕಲ್ಲಿನಿಂದ ಕೊರೆದು ರಚಿಸಿದ ರೇಖಾಚಿತ್ರಗಳು ಕಂಡುಬಂದಿದ್ದೂ ಅಂದಿನ ಮಾನವನ ವರ್ಣಚಿತ್ರಕಲೆಯನ್ನು ತಿಳಿಯಲು ಸಹಾಯಕವಾಗಿದೆ. ಒಟ್ಟಿನಲ್ಲಿ ಕುರುಗೋಡಿನಲ್ಲಿ ನವಶಿಲಾಯುಗದಿಂದ ಹಿಡಿದು ಬೃಹತ್ ಶಿಲಾಯುಗದವರೆಗಿನ ಮೂರು ಸಾಂಸ್ಕೃತಿಕ ಹಂತದ ಕುರುಹುಗಳು ದೊರಕಿವೆ. ಇಲ್ಲಿ ನವಶಿಲಾಯುಗ ಕಾಲದಿಂದಲೂ ಮಾನವನ ವಸತಿ ನೆಲೆಯನ್ನಾಗಿ ರೂಪುಗೊಂಡಿರುವುದು ಉತ್ಖನನದಿಂದ ತಿಳಿದುಬರುತ್ತದೆ. ನಂತರ ಶಿಲಾ–ತಾಮ್ರಯುಗದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಮಾನವ ಸುಧಾರಣೆಯಾಗಿದ್ದನೆಂಬುದಕ್ಕೆ ಲಭ್ಯವಾಗಿರುವ ಆಕರಗಳಿಂದ ಸ್ಪಷ್ಟವಾಗುತ್ತದೆ. ಶಿಲಾ–ತಾಮ್ರಯುಗದ ನಂತರದಲ್ಲಿ ನೆಲೆಸಿದ ಬೃಹತ್ ಶಿಲಾಯುಗದ ಜನರು ಕೃಷಿ ಚಟುವಟಿಕೆಯಲ್ಲಿ ಅಭಿವೃದ್ಧಿ ಹೊಂದಿದ್ದರು ಎಂಬುದು ಉತ್ಖನನದಲ್ಲಿ ದೊರೆತ ಸಾಮಗ್ರಿಗಳಿಂದ ತಿಳಿಯುತ್ತದೆ.

### ಕಪ್ಪಗಲ್ಲು

ಬಳ್ಳಾರಿ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರದಿಂದ ಉತ್ತರಕ್ಕೆ ೧೨ ಕಿ.ಮೀ ದೂರದಲ್ಲಿ ಈ ಕಪ್ಪಗಲ್ಲು ನೆಲೆಯಿದೆ. ಇದು ಹಗರಿ ನದಿಯ ಪಶ್ಚಿಮಕ್ಕೆ ನವಿಲುಗುಡ್ಡದ ಬಳಿ ಇದೆ. ಈ ಗುಡ್ಡದ

ಬುಡದಲ್ಲಿಯೇ ನೂತನ ಶಿಲಾಯುಗ ಬೂದಿದಿನ್ನೆಗಳಿವೆ. ಈ ದಿನ್ನೆಗಳ ಕಾಲಮಾನದ ಬಗ್ಗೆ ವಿದ್ವಾಂಸರಲ್ಲಿ ಒಮ್ಮತದ ಅಭಿಪ್ರಾಯವಿಲ್ಲ. ಕ್ಯಾಪ್ಟನ್ ನ್ಯೂಬೋಲ್ಡ್ ಮತ್ತು ಆರ್.ಬಿ. ಫೂಟ್ ಅವರು ೧೮೩೬ರಲ್ಲಿ ಮೊದಲ ಭಾರಿಗೆ ನೂತನ ಶಿಲಾಯುಗದ ಅವಶೇಷಗಳನ್ನು ಶೋಧಿಸಿದರು.[೭] ಇದು ನೂತನ ಶಿಲಾಯುಗ ಸಂಸ್ಕೃತಿಯ ವಾಸ್ತವ್ಯದ ನೆಲೆಯಾಗಿದ್ದು, ಕೊಡಲಿ, ಉಳಿ, ಕೆತ್ತುಳಿ, ಸುತ್ತಿಗೆ, ಅರೆಕಲ್ಲು, ಚಕ್ಕೆ ಹೆರಚಕ್ಕೆಗಳು ಶಿಲೋಪಕರಣಗಳನ್ನು ತಯಾರಿಸುವ ಕೇಂದ್ರವಾಗಿತ್ತೆಂದು ತಿಳಿಯುತ್ತದೆ. ನವಿಲು ಗುಡ್ಡದ ತಪ್ಪಲಿನಲ್ಲಿ ಬೂದಿ ದಿಬ್ಬಗಳು ಕಂಡುಬಂದಿದ್ದು ಅವುಗಳನ್ನು ೧೯೬೦ರ ದಶಕದಲ್ಲಿ ಉತ್ಖನನ ನಡೆಸಿ ನೂತನ ಶಿಲಾಯುಗ ಸಂಸ್ಕೃತಿಗೆ ಸೇರದವುಗಳೆಂದು ಸ್ಪಷ್ಟಪಡಿಸಿದ್ದಾರೆ. ಅಲ್ಲದೇ ಹಲವಾರು ನಿರ್ದಿಷ್ಟ ವಿಷಯಗಳು ಹಾಗೂ ಈ ಸಂಸ್ಕೃತಿಯ ಕುರಿತಾದ ಸಾಕ್ಷಿಗಳು ಕಂಡುಬಂದಿವೆ ಎಂಬುದನ್ನು ದಾಖಲಿಸಲಾಗಿದೆ.

೧೯೬೫ರಲ್ಲಿ ಆರ್.ಜಿ ಮಜುಮ್‌ದಾರ್, ಎಸ್.ಎನ್. ರಾಜಗುರು ಅವರು ಉತ್ಖನನ ಮಾಡಿ ವರದಿ ಪ್ರಕಟಿಸಿದರು. ಇಂಥ ಸಂಶೋಧನೆಗಳಿಂದ ಬೂದಿ ದಿನ್ನೆಗಳು ನೂತನ ಶಿಲಾಯುಗ ಸಂಸ್ಕೃತಿಗೆ ಸೇರಿದವು ಎಂಬುದನ್ನು ಮತ್ತಷ್ಟು ದೃಢಪಡಿಸಲು ಸಾಧ್ಯವಾಯಿತು. ಉತ್ಖನನದ ಮೇಲಿನ ಸ್ತರದಲ್ಲಿ ಬೃಹತ್ ಶಿಲಾಯುಗದ ಸಂಸ್ಕೃತಿಯ ಅವಶೇಷಗಳು ಸ್ವಲ್ಪ ಪ್ರಮಾಣದಲ್ಲಿ ದೊರತಿವೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನೆಲೆಯ ವ್ಯಾಪ್ತಿಯನ್ನು ಪರಿಶೀಲಿಸಲಾಯಿತು. ಆದರೆ ಇಲ್ಲಿ ಬೃಹತ್ ಶಿಲಾಯುಗದ ಶಿಲಾಸಮಾಧಿಗಳು, ವರ್ಣಚಿತ್ರಗಳು, ರೇಖಾಚಿತ್ರಗಳು ಕಂಡುಬಂದಿದ್ದು ಅವುಗಳು ನಿರಂತರವಾಗಿ ನಡೆಯುತ್ತಿರುವ ಕಲ್ಲು ಗಣಿಗಾರಿಕೆ, ಕೃಷಿ ಚಟುವಟಿಕೆಗಳಿಗೆ ಸಿಲುಕಿ ನಾಶದ ಎಡೆಗೆ ತಲುಪಿವೆ. ಕೆಲವು ನಿಲಸುಗಲ್ಲುಗಳು ಮಾತ್ರ ಸುಸ್ಥಿತಿಯಲ್ಲಿರುವುದನ್ನು ಕ್ಷೇತ್ರಕಾರ್ಯದಲ್ಲಿ ಗುರುತಿಸಲಾಗಿದೆ. ಕಪ್ಪಗಲ್ಲು ಗ್ರಾಮದ ನೈರುತ್ಯ ದಿಕ್ಕಿನಲ್ಲಿ ಏಳು ನಿಲುಸುಗಲ್ಲುಗಳಿದ್ದವೆಂದು ತೋರುತ್ತದೆ. ಆದರೆ ಪ್ರಸ್ತುತ ಅವುಗಳಲ್ಲಿ ಐದು ನಿಲುಸುಗಲ್ಲುಗಳು ಮಾತ್ರ ಕಂಡುಬಂದಿದ್ದು, ಅವುಗಳಲ್ಲಿ ಎರಡು ಮಾತ್ರ ಸುಸ್ಥಿತಿಯಲ್ಲಿವೆ. ಎಡ ಭಾಗದಲ್ಲಿರುವ ನಿಲುಸುಗಲ್ಲಿನ ಅಳತೆಯು ನೆಲಮಟ್ಟದಿಂದ ಎತ್ತರ ೯ ಅಡಿ, ಆಳದಲ್ಲಿ ಸುಮಾರು ೩ ಅಡಿ ಇದೆ. ಇದರ ಸುತ್ತಳತೆ ೫.೫ ಅಡಿ, ಎದೆ ಭಾಗ ೩.೩ ಅಡಿಯಿದೆ. ಬಲಭಾಗದಲ್ಲಿರುವ ಮತ್ತೊಂದು ನಿಲುಸುಗಲ್ಲು ನೆಲಮಟ್ಟದಿಂದ ಎತ್ತರ ೯ ಅಡಿ ಇದ್ದು, ಅಗಲ ೪.೪ ಅಡಿ ಇದೆ. ಅದೇ ರೀತಿ ನೆಲಕ್ಕೆ ಬಿದ್ದಿರುವ ಕಲ್ಲು ೭.೩ ಅಡಿ ಉದ್ದ ಹಾಗೂ ೨.೫ ಅಡಿ ಅಗಲವಿದೆ. ಮತ್ತೊಂದು ೧೦ ಅಡಿ ಉದ್ದ, ೩ ಅಡಿ ಅಗಲ ವಿದೆ. ಎಡಕ್ಕೆ ಬಿದ್ದಿರುವ ಕಲ್ಲು ೧೦ ಅಡಿ ಉದ್ದ ಹಾಗೂ ೪.೪ ಅಡಿ ಅಗಲವಾಗಿದೆ. ಈ ನಿಲುಸುಗಲ್ಲುಗಳು ನೋಡಲು ಅಲೈನ್‌ಮೆಂಟ್‌ಗಳಂತೆ ಸಾಲಾಗಿ ನಿಲ್ಲಿಸಿರುವುದನ್ನು ಗಮನಿಸಿದರೆ ಈ ರೀತಿಯಾದ ನಿಲುಸುಗಲ್ಲುಗಳು ವಿಭೂತಿಹಳ್ಳಿ(ಶಹಾಪುರ ತಾಲೂಕು) ಹೊರತು ಪಡಿಸಿ ಬೇರೆಲ್ಲೂ ಕಂಡುಬಂದಿಲ್ಲ. ಇದೇ ಸ್ಥಳದಿಂದ ಸ್ವಲ್ಪ ಅಂತರದಲ್ಲಿರುವ ಬೀರಪ್ಪ ಬಂಡೆಯ ಮೇಲೆ ವಿವಿಧ ಪ್ರಾಣಿ, ಪಕ್ಷಿಗಳ ಕೆಂಪು ವರ್ಣಚಿತ್ರಗಳಿರುವುದನ್ನು ಗುರುತಿಸಲಾಗಿದೆ. ಹಾಗಾಗಿ ಇದರಿಂದ ಈ ನೆಲೆಯು ಪ್ರಾಗೈತಿಹಾಸಿಕ ಮಹತ್ವ ಹೊಂದಿದ ನೆಲೆಯಾಗಿತ್ತು ಎಂಬುದರಲ್ಲಿ ಯಾವ ಅನುಮಾನಗಳಿಲ್ಲ.

**ತೆಕ್ಕಲಕೋಟೆ**

ಬಳ್ಳಾರಿ ಜಿಲ್ಲಾ ಕೇಂದ್ರದಿಂದ ಉತ್ತರಕ್ಕೆ ೪೪ ಕಿ.ಮೀ. ದೂರದಲ್ಲಿ ತೆಕ್ಕಲಕೋಟೆ ಗ್ರಾಮವಿದೆ. ತುಂಗಭದ್ರ ನದಿ ಪರಿಸರದಲ್ಲಿರುವ ಈ ಗ್ರಾಮದ ನೈರುತ್ಯ ದಿಕ್ಕಿನಲ್ಲಿ ಹುಡೇದ ಗುಡ್ಡ ಎಂಬ ಬೆಟ್ಟದಲ್ಲಿ ನವಶಿಲಾಯುಗದ ಸಂಸ್ಕೃತಿಯ ೧೯ ವಾಸದ ನೆಲೆಗಳು ಬೆಳಕಿಗೆ ಬಂದಿವೆ.೮ ಈ ನೆಲೆಯಲ್ಲಿ ೧೯೧೬ರಲ್ಲಿ ರಾಬ್ರಟ್ ಬ್ರೂಸ್‌ಫೂಟ್ ಅವರು ಕೆಲ ಅವಶೇಷಗಳನ್ನು ಶೋಧಿಸಿದ್ದರು. ನಂತರ ೧೯೬೩ರಲ್ಲಿ ಕೆ.ಸಿ. ಮಲ್ಹೋತ್ರ ಮತ್ತು ಎಂ.ಎಸ್ ನಾಗರಾಜರಾವ್ ಅವರ ನಿರ್ದೇಶನದಲ್ಲಿ ನಡೆಸಿದ ಉತ್ಖನನದ ವರದಿಗಳಿಂದ ತಿಳಿದುಬಂದಿರುವ ಸಂಗತಿಗಳೆಂದರೆ ಈ ನೆಲೆಯಲ್ಲಿ ನವಶಿಲಾಯುಗದ ಜನರ ಚಟುವಟಿಕೆಗಳಿದ್ದು ಆ ಸಮುದಾಯದ ಜೀವನ ಬಗ್ಗೆ ಸ್ಪಷ್ಟ ತಿಳಿಯಲು ಸಾಧ್ಯವಾಗಿದೆ. ೧೯೬೪ರಲ್ಲಿ ಸ್ನಾತಕೋತ್ತರ ಪರಿಶೋಧನ ಸಂಸ್ಥೆ, ಪುಣೆ ಮತ್ತು ಕನ್ನಡ ಅಧ್ಯಯನ ಸಂಸ್ಥೆ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಇವರ ಸಂಯುಕ್ತ ಆಶ್ರಯದಲ್ಲಿ ಹಾಗೂ ಹೆಚ್.ಡಿ ಸಂಕಾಲಿಯ ಅವರ ಮಾರ್ಗದರ್ಶನದಲ್ಲಿ ನಡೆಸಿದ ಉತ್ಖನನ ವೇಳೆಯಲ್ಲಿ ತಾಮ್ರದ ಸುರಳಿ, ಕಲ್ಲಿನ ಕಿಡಲಿ, ಜಿಂಕೆಯ ಕವಲುಕೊಂಬು ಮಡಕೆಗಳು, ಬ್ಲೇಡ್‌ಗಳು, ಸ್ಪಟಿಕದ ಶಿಲೆ ಹಾಗೂ ಚಿನ್ನದ ಮಗ್ರಿಪಟ್ಟಿ, ಕಲ್ಲುಮುಳ್ಳುಗಳು, ಬೂದು ವರ್ಣದ ಮಡಕೆಗಳು, ಕಪ್ಪು–ಕೆಂಪು, ಕಂದು ವರ್ಣದ ಕಪ್ಪು ಮಿಶ್ರಿತ ಮಡಕೆಗಳು ಶೋಧವಾಗಿರುವುದನ್ನು ವರದಿಗಳಲ್ಲಿ ಪ್ರಕಟಿಸಲಾಗಿದೆ.

ತೆಕ್ಕಲಕೋಟೆ ಗುಡ್ಡದಲ್ಲಿ ಹಲವು ನೈಸರ್ಗಿಕ ಗುಹೆಗಳಿವೆ. ಅವುಗಳನ್ನು ನವಶಿಲಾಯುಗದ ಜನರು ಉಪಯೋಗಿಸುತ್ತಿದ್ದರೆಂಬುದಕ್ಕೆ ಆ ಗುಹೆಗಳಲ್ಲಿರುವ ಕೆಂಪು ವರ್ಣಚಿತ್ರಗಳೇ ಸಾಕ್ಷಿ. ಇಲ್ಲಿ ಚಿತ್ರಿಸಿರುವ ಗೂಳಿ ಮತ್ತು ಮಾನವನ ಚಿತ್ರಗಳು ಶೈಲಿಯಲ್ಲಿ ತಾಮ್ರ ಶಿಲಾಯುಗದ ಮಡಕೆಗಳ ಮೇಲಿರುವ ಚಿತ್ರಗಳನ್ನು ಹೋಲುತ್ತವೆ. ಇಲ್ಲಿನ ಗುಹೆಯೊಂದರಲ್ಲಿ ಮುಖ್ಯಸ್ಥನೊಬ್ಬನು ಪ್ರಾಣಿಯ ಮೇಲೆ ಕುಳಿತು ಬೇಟೆಗೆ ಹೊರಟಿರುವಂತೆ ತೋರುತ್ತದೆ. ಅನಂತರ ಕೈ ಕೈ ಹಿಡಿದು ಸಾಮೂಹಿಕ ನೃತ್ಯ ಮಾಡುತ್ತಿರುವ ಚಿತ್ರಣವಿದೆ. ಇದರಲ್ಲಿ ಚಿತ್ರಿಸಿರುವಂತೆ ಮನುಷ್ಯರ ಚಿತ್ರಗಳನ್ನು ಬೋಯಾ(ಬೇಡರಹಟ್ಟಿ) ಗುಡಿಸಲಿನ ಗೋಡೆಗಳ ಹೊರಭಾಗವನ್ನು ಕೆಂಪು ಮಣ್ಣಿನಿಂದ(ಸುರಮ) ಚಿತ್ರಿಸಿದ್ದಾರೆ. ಈ ಚಿತ್ರಗಳಲ್ಲಿ ವ್ಯಕ್ತಿಗಳು ದುಷ್ಟಶಕ್ತಿಗಳನ್ನು ಹೊರಗಿಡುತ್ತಾರೆಂಬುದು ಅವರ ನಂಬಿಕೆ. ಇದೇ ರೀತಿ ತೆಕ್ಕಲಕೋಟೆಯ ಬೋಯಾ(ಬೇಡರು) ಜನರ ಗುಡಿಸಲುಗಳು ನವಶಿಲಾಯುಗ ಕಾಲದ ಗುಡಿಸಲುಗಳಂತೆಯೇ ಕಂಡುಬಂದಿವೆ. ಉತ್ಖನನ ವರದಿಯಂತೆ ಒಂದು ಸಮಾಧಿಯಲ್ಲಿ ಮೂರು ಜನರ ಅಸ್ಥಿಯ ಅವಶೇಷಗಳು ಕಂಡುಬಂದಿರುವುದರ ಉಲ್ಲೇಖವಿದೆ. ಮೊದಲನೆಯದು ಈ ಸ್ಥಳದ ಅತ್ಯಂತ ಪ್ರಾಚೀನ ಹಂತ. ಈ ಕಾಲದ ನಯ ಮಾಡಿದ ಕಲ್ಲಿನ ಕೊಡಲಿಗಳು ಚಕಮಖಿ ಕಲ್ಲಿನ ಉಪಕರಣಗಳು, ತಾಮ್ರದ ಎಲುಬಿನ ಆಯುಧಗಳು, ಬಂಗಾರದ ಆಭರಣಗಳು ಹಲವು ವಿಧದ ಮಣಿಗಳು, ಕಂದು ಬಣ್ಣದ ಹೊಳಪಿನ ಮಣ್ಣು ಪಾತ್ರೆಗಳೂ ಉತ್ಖನನದಲ್ಲಿ ದೊರೆತಿವೆ. 'ಹಿರೇಹರ್ಲ'[೯] ಎಂಬ ಗುಡ್ಡ ಪ್ರದೇಶದಲ್ಲಿ ಕಬ್ಬಿಣಯುಗದ ಜನರು ನೆಲೆಸಿದ್ದ ಆಧಾರಗಳು ದೊರೆತಿವೆ. ಈ ಕಾಲದ ಕೆಲವು ಶವಕುಣಿಗಳು ಇದ್ದವೆಂದು ಸ್ಥಳೀಯರು

ಉಲ್ಲೇಖಿಸುತ್ತಾರೆ. ಆದರೆ ಅವುಗಳು ಸಧ್ಯದ ಸ್ಥಿತಿಯಲ್ಲಿ ನಾಶವಾಗಿ ಆ ಸ್ಥಳವನ್ನು ಕೃಷಿ ಭೂಮಿಯನ್ನಾಗಿ ಮಾಡಲಾಗಿರುವುದನ್ನು ಗಮನಿಸಬಹುದು.

**ಹಾಲಸಾಗರ**

ಕೂಡ್ಲಿಗಿ ತಾಲೂಕು ಕೇಂದ್ರದಿಂದ ಪೂರ್ವದಿಕ್ಕಿಗೆ ೩೫ ಕಿ.ಮೀ ದೂರದಲ್ಲಿ ಹಾಲಸಾಗರ ಗ್ರಾಮವಿದೆ. ಬಳ್ಳಾರಿ ಜಿಲ್ಲಾ ಕೇಂದ್ರದಿಂದ ದಕ್ಷಿಣಕ್ಕೆ ೪೫ ಕಿ.ಮೀ ದೂರದಲ್ಲಿರುವ ಈ ಗ್ರಾಮದಲ್ಲಿ ಪ್ರಾಗಿತಿಹಾಸ ಕಾಲದ ಮಾನವನು ವಾಸಿಸಿರುವ ಕುರುಹುಗಳು ದೊರಕಿವೆ. ಅಪ್ಪೇನಹಳ್ಳಿ ಗ್ರಾಮ ಪಂಚಾಯಿತಿಗೆ ಸೇರಿರುವ ಈ ಗ್ರಾಮ ಪರಿಸರವೂ ಭೌಗೋಳಿಕವಾಗಿ ಸಮೃದ್ಧವಾದುದು. ಈ ಪ್ರದೇಶದಲ್ಲಿ ದೊಡ್ಡ ದೊಡ್ಡ ಬಂಡೆಗಳನ್ನು ಹೊತ್ತ ನಿಸರ್ಗ ನಿರ್ಮಿತ ಬೆಟ್ಟಗಳು, ಗುಹೆಗಳು ಮಳೆಗಾಲದಲ್ಲಿ ತುಂಬಿ ಹರಿಯುವ ಹಳ್ಳ, ಕೆರೆ, ತೊರೆಗಳು, ಫಲವತ್ತಾದ ಭೂಭಾಗವು ಇಲ್ಲಿನ ಪರಿಸರವನ್ನು ಸಮೃದ್ಧಗೊಳಿಸಿವೆ. ಗುಡೇಕೋಟೆ ಬೆಟ್ಟಸಾಲನ್ನು ಹೊಂದಿರುವ ಈ ಸ್ಥಳವು ಪ್ರಾಗಿತಿಹಾಸ ಕಾಲದಿಂದಲೂ ಮಾನವ ನೆಲೆಯಾಗಿ ಬೆಳೆದುಬರಲು ಸಾಧ್ಯವಾಗಿದೆ. ಇಂತಹ ಭೌಗೋಳಿಕ ಪರಿಸರದಲ್ಲಿ ೧೮೪೮-೫೦ರಲ್ಲಿ ಬಳ್ಳಾರಿ ಜಿಲ್ಲೆಯ ಕಲೆಕ್ಟರ್ ಆಗಿದ್ದ ಸಿ.ಜೆ. ಪಿಲ್ಲೇ ಅವರು ಕರ್ನಲ್ ಮೆಡೋಸ್ ಟೇಲರ್ ಸಲಹೆಯಂತೆ ಮೊಟ್ಟಮೊದಲಿಗೆ ಬೃಹತ್ ಶಿಲಾಯುಗದ ಸಮಾಧಿಗಳನ್ನು ಪತ್ತೆಹಚ್ಚಿದನು.[೧೦] ಇಲ್ಲಿ ಸುಮಾರು ೨೦೦ಕ್ಕೂ ಹೆಚ್ಚು ಸಮಾಧಿಗಳಿರುವುದನ್ನು ಗುರುತಿಸಿ ವರದಿ ಮಾಡಿದನು. ೧೯೪೧ರಲ್ಲಿ ಮೆಡೋಸ್ ಟೇಲರ್ ಬರೆದು ಪ್ರಕಟಿಸಿದ ಮೆಗಲಿಥಿಕ್ ಟೋಮ್ಸ್ ಇನ್ ಏನ್ಸಿಯಂಟ್ ರಿಮೆನ್ಸ್ ಇನ್ ದಖ್ಖನ್ ಎಂಬ ಕೃತಿಯಲ್ಲಿ ಪ್ರಕಟವಾಗಿವೆ. ಪ್ರಸ್ತುತ ಕ್ಷೇತ್ರಕಾರ್ಯ ಸಂದರ್ಭದಲ್ಲಿಯು ಸಹ ನೆಲೆ ಪರಿಶೀಲನೆ ಮಾಡಲಾಗಿದೆ.

೧. ಲಕ್ಷ್ಮಯ್ಯನವರ ಜಮೀನಿನಲ್ಲಿ ಬೃಹತ್ ಶಿಲಾಯುಗದ ವಿವಿಧ ಶಿಲಾಸಮಾಧಿಗಳು, ಕಪ್ಪು, ಕೆಂಪು ವರ್ಣದ ಮಡಕೆ ಭಾಗಗಳು ಹಾಗೂ ಕಬ್ಬಿಣದ ಕಿಟ್ಟ, ಕುಲುಮೆಯ ಮೂಸೆಯ ಭಾಗಗಳು ಕಂಡುಬಂದಿವೆ. ಈ ಸಮಾಧಿಗಳು ಸ್ವಸ್ತಿಕ್ ಆಕಾರದಲ್ಲಿದ್ದು ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿವೆ.

೨. ಮಲ್ಲಪ್ಪನ ಬೆಟ್ಟದ ಮೇಲೆ ಪೂರ್ವ ಭಾಗದಲ್ಲಿ ಒಂದು ಕಡೆ ಐದು ಬೃಹತ್ ಶಿಲಾ ಸಮಾಧಿಗಳು ಇವೆ. ಇವುಗಳು ಹಾಳಾಗಿದ್ದು ನೆಟ್ಟಕಲ್ಲುಗಳು ಮತ್ತು ಹಾಸುಬಂಡೆಗಳು ಸುತ್ತಲೂ ಇವೆ. ಕಲ್ಲು ಚಪ್ಪಡಿಗಳನ್ನು ಕೂಡ ಕಾಣುತ್ತೇವೆ. ಕಲ್ಲು ಚಪ್ಪಡಿಯು ಎರಡು ಭಾಗವಾಗಿದ್ದು ಅದರಲ್ಲಿ ಉತ್ತರದಲ್ಲಿರುವ ಕಲ್ಲು ಚಪ್ಪಡಿಯು ೧೬೦ ಸೆಂ. ಮೀ ಅಗಲ, ೨೯೦ ಸೆಂ, ಮೀ ಉದ್ದ ಮತ್ತು ೧೦. ಸೆಂ, ಮೀಟರ್ ದಪ್ಪ ಉಳ್ಳದ್ದಾಗಿದೆ.

೩. ಮಲ್ಲಪ್ಪನ ಬೆಟ್ಟದ ಉತ್ತರದ ಕೆಳಭಾಗದಲ್ಲಿನ ಇಳಿಜಾರು ಪ್ರದೇಶದಲ್ಲಿ ಪಾಲಯ್ಯ ತಂದೆ ಸಣ್ಣ ಲಿಂಗಯ್ಯನವರ ಹೊಲದಲ್ಲಿ ಕೆಲವು ಸಮಾಧಿಗಳಿವೆ. ಈ ಸಮಾಧಿಯ ಪಶ್ಚಿಮಕ್ಕೆ ಸುಮಾರು ಐವತ್ತು ಮೀಟರ್ ದೂರದಲ್ಲಿ ಮತ್ತೊಂದು ಸಮಾಧಿಯಿದೆ. ಅದನ್ನು ಸ್ಥಳೀಯರು ನುಂಕಪ್ಪನ

ಪಾದ ಎಂದು ಕರೆಯುತ್ತಾರೆ.[೧೧] ಈ ಶಿಲಾ ಸಮಾಧಿ ರಚನೆಯನ್ನು ಗ್ರಾಮದಲ್ಲಿ ದೊರಕುವ ಚಪ್ಪಡಿ ಕಲ್ಲುಗಳನ್ನು ಬಳಸಿ ನಿರ್ಮಾಣ ಮಾಡಲಾಗಿದೆ. ಒಟ್ಟು ಮೂರು ಸ್ಥಳಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ನೆಲಕೋಣೆ ಸಮಾಧಿಗಳು, ಹಾದಿಕೋಣೆ ಸಮಾಧಿಗಳು, ಕಂಡಿಕೋಣೆ ಸಮಾಧಿಗಳು ಕಂಡುಬಂದಿವೆ. ಇಲ್ಲಿ ದೊರಕಿರುವ ಶಿಲಾಕೊಡಲಿ ಹಾಗೂ ಬೂದು ಬಣ್ಣದ ಮಡಕೆಗಳಿಂದ ತಿಳಿಯಬಹುದಾದ ಸಂಗತಿ ಏನೆಂದರೆ ಈ ನೆಲೆಯಲ್ಲಿ ನವಶಿಲಾಯುಗ ಕಾಲದಿಂದಲೂ ಮಾನವ ವಾಸವಾಗಿದ್ದ ಎಂಬ ಸ್ಪಷ್ಟವಾದ ಅಭಿಪ್ರಾಯಗಳಿಗೆ ಪೂರಕ ಸಾಕ್ಷಿಗಳಾಗಿ ನಿಂತಿವೆ. ಹಾಗೂ ಇಲ್ಲಿನ ಕೋಡೆಗುಡ್ಡ ಪರಿಸರದಲ್ಲಿ ಈ ಸಂಸ್ಕೃತಿಯ ವಸತಿ ಕುರುಹುಗಳಾದ ಮಸೆಯುವ ಕಲ್ಲುಗಳು, ಮಡಕೆಗಳು, ಉಪಕರಣಗಳು ದೊರಕಿವೆ. ಬೃಹತ್ ಶಿಲಾಯುಗದಲ್ಲಿ ಈ ನೆಲೆಯು ಹೆಚ್ಚು ವಿಸ್ತಾರಗೊಂಡಿರುವುದು. ಇದಕ್ಕೆ ಪುಷ್ಠಿ ಎಂಬಂತೆ ಬೇರೆ ಬೇರೆ ಸ್ಥಳಗಳಲ್ಲಿ ಕಂಡುಬಂದಿರುವ ಶಿಲಾಸಮಾಧಿಗಳು, ಕಬ್ಬಿಣದ ಕಿಟ್ಟ ಮತ್ತು ಮೂಸೆಯಂತಹ ಕುರುಹುಗಳಿಂದ ಇದು ದೃಢವಾಗುತ್ತದೆ. ಇಲ್ಲಿ ವಿವಿಧ ಬಗೆಯ ವರ್ಣಚಿತ್ರಗಳು, ರೇಖಾಚಿತ್ರಗಳು ಗವಿಗಳಲ್ಲಿ ಕಂಡುಬಂದಿವೆ. ಇಲ್ಲಿನ ಗವಿಕಲ್ಲಾಸರೆಯಲ್ಲಿ ವಸತಿಯ ಕುರುಹುಗಳಾದ ಕಪ್ಪು ಕೆಂಪು ವರ್ಣದ ಮಡಕೆಗಳು ಸುಟಮಣ್ಣು, ಬೂದಿ ಮೊದಲಾದವುಗಳು ದೊರಕಿರುವುದರಿಂದ ಇದು ಈ ಸಂಸ್ಕೃತಿಯ ವಸತಿ ಮತ್ತು ಸ್ಮಶಾನ ನೆಲೆಯೆಂದು ಗುರುತಿಸಲಾಗಿದೆ.

**ಹಿರೇಬೆಣಕಲ್ಲು**

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕು ಕೇಂದ್ರದಿಂದ ದಕ್ಷಿಣಕ್ಕೆ ೧೧ ಕಿ.ಮೀ ಹಾಗೂ ಕೊಪ್ಪಳ ಜಿಲ್ಲಾ ಕೇಂದ್ರದಿಂದ ೨೮ಕಿ.ಮೀ ಅಂತರದಲ್ಲಿ ಹಿರೇಬೆಣಕಲ್ಲು ನೆಲೆಯು ಕೇಂದ್ರಿಕೃತಗೊಂಡಿದೆ. ಸುಮಾರು ಮೂರು ಚದರ ಕಿ.ಮೀ ವಿಸ್ತೀರ್ಣದಲ್ಲಿ ಹರಡಿಕೊಂಡಿರುವ ಈ ನೆಲೆಯು ದಕ್ಷಿಣ ಭಾರತದ ಅತಿ ದೊಡ್ಡ ಬೃಹತ್ ಶಿಲಾಯುಗದ ನೆಲೆ ಎಂದು ಪ್ರಸಿದ್ದಿ ಪಡೆದಿರುವುದು. ಇದರ ಸುತ್ತಲೂ ಎತ್ತರದ ಬೆಟ್ಟಗುಡ್ಡಗಳ ಸಾಲುಗಳಿಂದ ಆವೃತಗೊಂಡಿರುವ ಬೃಹತ್ ಬಂಡೆಗಳ ರಾಶಿಯ ಮಧ್ಯದಲ್ಲಿ ಜನವಸತಿಗೆ ಯೋಗ್ಯವಾದ ಅಸಂಖ್ಯಾತ ಗವಿಗಳು, ಕಲ್ಲಾಸರೆಗಳಿವೆ. ಭಾರತದ ಬೃಹತ್ ಶಿಲಾಯಗದ ನೆಲೆಗಳಲ್ಲಿ ಒಂದೆನಿಸಿರುವ ಈ ನೆಲೆಯನ್ನು ರೆ.ಜಿ. ಕೆಯಿಸ್ ಅವರು ಮೊಟ್ಟಮೊದಲ ಬಾರಿಗೆ ಶೋಧಿಸಿದರು. ಈ ಸಂಗತಿಯನ್ನು ೧೮೩೫ರ ರಾಯಲ್ ಏಷ್ಯಾಟಿಕ್ ಸೊಸೈಟಿ, ಬಾಂಬೆ ಶಾಖೆಯು ಪ್ರಕಟಿಸಿದ ಜರ್ನಲ್ ಸಂಪುಟ ೪ರಲ್ಲಿ ಕರ್ನಲ್ ಮೆಡೊಸ್ ಟೇಲರ್ ಅವರು ಈ ನೆಲೆಯ ಕುರಿತ ವಿವರಗಳನ್ನು ದಾಖಲಿಸಿದರು. ಇಂಥ ಮಹತ್ವದ ಪ್ರಕಟಣೆಗಳೊಂದಿಗೆ ಕರ್ನಾಟಕದಲ್ಲಿ ಬೃಹತ್ ಶಿಲಾಯುಗದ ನೆಲೆಗಳ ಅಧ್ಯಯನ ಪ್ರಾರಂಭವಾಯಿತು ಎಂಬ ಅಭಿಪ್ರಾಯಗಳು ದಾಖಲಾಗಿರುವುದುಂಟು.[೧೨] ೧೯೬೪-೬೮ರಲ್ಲಿ ಅ.ಸುಂದರ ಅವರು ನೆಲೆ ಪರಿಶೀಲನೆಯಲ್ಲಿ ಸು. ಎಂಟು ಗವಿಚಿತ್ರಗಳನ್ನು, ಎರಡು ವಸತಿನೆಲೆಗಳನ್ನು ಪತ್ತೆಹಚ್ಚಿದರು.[೧೩] ಈ ನೆಲೆಯಲ್ಲಿ ಸಮೃದ್ದವಾಗಿದ್ದ ಸಾಂಸ್ಕೃತಿಕ ವಸ್ತುಗಳನ್ನು ಸಂಶೋಧನಾ ವಲಯಕ್ಕೆ ಪರಿಚಯಿಸಿದರು. ಇವುಗಳಲ್ಲಿ ಮುಖ್ಯವಾಗಿ

ಇದರಲ್ಲಿ ಬೃಹತ್ ಶಿಲಾಯುಗ ಪೂರ್ವದ ಉಪಕರಣಗಳು, ಕಬ್ಬಿಣ ಕಿಟ್ಟ, ನವಶಿಲಾಯುಗದ ಮಡಕೆಗಳು, ಬೃಹತ್ ಶಿಲಾಯುಗ ಮತ್ತು ಆದಿ ಇತಿಹಾಸ ಕಾಲದ ಉಪಕರಣಗಳನ್ನು ಶೋಧಿಸಿದ್ದಾರೆ. ೨೦೦೩-೦೪ರಲ್ಲಿ ಪುರಾತತ್ವ ಇಲಾಖೆಯು ಇಲ್ಲಿರುವ ವಸತಿನೆಲೆಯಲ್ಲಿ ಸಣ್ಣ ಪ್ರಮಾಣದ ಉತ್ಖನನ ನಡೆಸಿದೆ. ಸ್ಥಳೀಯವಾಗಿ ದುರ್ಗದ ದಡಿ ಎಂದು ಕರೆಯುವ ಬಿಳಿ-ಬೂದು ವರ್ಣದ ಕಲ್ಲಿನ ಬೆಟ್ಟದ ಮೇಲೆ ಸುಮಾರು ೧.೧/೨ ಕಿ. ಮೀ ಉದ್ದಗಲದಷ್ಟು ವಿಸ್ತಾರವಾದ ಸಮತಟ್ಟಿನ ಪ್ರದೇಶದ ಮೂರು ಸ್ಥಳಗಳಲ್ಲಿ ೪೪೪ ಬೃಹತ್ ಶಿಲಾಸಮಾಧಿಗಳನ್ನು ವರದಿ ಮಾಡಲಾಗಿದೆ. ಆದರೆ ಪ್ರಸ್ತುತ ನೆಲೆಯಲ್ಲಿ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಗಮನಿಸಿರುವ ವಿಷಯವೆಂದರೆ, ಪ್ರಸ್ತುತ ಈ ಪ್ರದೇಶದಲ್ಲಿ ೪೪೪ಕ್ಕೂ ಅಧಿಕ ಶಿಲಾಸಮಾಧಿಗಳಿರುವುದು ಖಚಿತವಾಯಿತು. ಸ್ಥಳೀಯರು ಇಲ್ಲಿನ ಶಿಲಾಸಮಾಧಿಗಳನ್ನು 'ಮೋರೆಯರ ಮನೆ' ಅಥವಾ 'ಮೋರೆಯರ ಅಂಗಡಿ'ಗಳೆಂದು ಕರೆಯುತ್ತಾರೆ. ಇಲ್ಲಿನ ಕಲ್ಮನೆಗಳನ್ನು ವಿವಿಧ ಪ್ರಕಾರಗಳಲ್ಲಿ ನಿರ್ಮಿಸಲಾಗಿದೆ. ದೊಡ್ಡವರಿಂದ ಹಿಡಿದು ಚಿಕ್ಕ ಮಕ್ಕಳ ಸಮಾಧಿಗಳಿರುವುದು ಈ ನೆಲೆಯ ಇನ್ನೊಂದು ವಿಶೇಷವೆನಿಸಿದೆ. ನೆಲೆಯ ಪಶ್ಚಿಮ ಭಾಗದ ಮೊದಲನೆಯ ಸ್ಥಳದಲ್ಲಿರುವ ವಿವರಗಳೆಂದರೆ, ಅರ್ಧ ಹುಗಿದ ವೃತ್ತಕಂಡಿ ಇರುವ ಆಯತಾಕಾರದ ಶಿಲಾಸಮಾಧಿಗಳಿದ್ದರೆ, ಅದರ ಮುಂದೆ ನೆಲದ ಮೇಲೆ ನಿರ್ಮಿಸಿದ ಪೆಟ್ಟಿಗೆ ಆಕಾರದ ಸಮಾಧಿಗಳಿವೆ. ಇವುಗಳ ಮುಂದಿನ ಸ್ಥಳದಲ್ಲಿ ನೆಲದಲ್ಲಿ ಹುಗಿದ ಅರ್ಧ ಹುಗಿದು ನಿರ್ಮಿಸಿದ ಚೌಕಾಕಾರದ ಕಂಡಿಕೋಣೆ ಸಮಾಧಿಗಳಿವೆ.[೧೪]

ಒಂದು ಪ್ರಕಾರದ ಕಲ್ಮನೆಯನ್ನು ನೆಲದ ಮೇಲೆಯೇ ಸ್ವಸ್ತಿಕ್ ವಿನ್ಯಾಸದಲ್ಲಿ ರಚಿಸಲಾಗಿದೆ. ಇದರಲ್ಲಿ ವೃತ್ತ, ಅರ್ಧವೃತ್ತಾಕಾರ, ಅಥವಾ ತ್ರಿಕೋನ, ಚೌಕಾಕಾರದ ದೊಡ್ಡ ಕಂಡಿಯು ಮಧ್ಯದಲ್ಲಿಯೋ ಅಥವಾ ಕೆಳ ಅಂಚಿನಲ್ಲಿರುತ್ತದೆ. ಪೂರ್ವ ಅಥವಾ ಪಶ್ಚಿಮ ಬದಿಯಲ್ಲಿ ನಿಲುಸುಗಲ್ಲಿರಬಹುದು. ಕಲ್ಮನೆಯಲ್ಲಿ ಸುತ್ತಲೂ ಕಲ್ಲುತುಂಡುಗಳನ್ನು ಸೇರಿಸಿ ಅದರ ಸುತ್ತಲೂ ಒಂದರ ಪಕ್ಕದಲ್ಲೊಂದರಂತೆ ಮೇಲಿನ ಅಡ್ಡ ಚಪ್ಪಡಿಗೆ ಆನಿಸಿ ದೊಡ್ಡ ಚಪ್ಪಡಿಗಳನ್ನು ನಿಲ್ಲಿಸಿರಲಾಗಿರುತ್ತದೆ. ಕೆಲವೂ ಸಲ ಅಪರೂಪವಾಗಿ ಹೀಗೆ ನಿಲ್ಲಿಸಿದ ಕಲ್ಲುಚಪ್ಪಡಿಗಳಲ್ಲಿ ಒಂದು ಕೈಯನ್ನು ಮೇಲಕ್ಕೆತ್ತಿದ ಮನುಷ್ಯನ ಸೂಕ್ಷ್ಮ ಸ್ವರೂಪವನ್ನು ಕಾಣುತ್ತೇವೆ. ಇದೇ ಸ್ಥಳದಲ್ಲಿರುವ ಶಿಲಾಸಮಾಧಿಯೊಂದರಲ್ಲಿ ವಿರುದ್ಧ ದಿಕ್ಕಿಗೆ ಅಡ್ಡ ಬಾಗಿದ ಎರಡು ಕೊಂಬೆಯ ದೊಡ್ಡ ನಿಲುಸುಕಲ್ಲು ಒಂದು ಶಿಲಾಸಮಾಧಿಗೆ ಒರಗಿ ನಿಂತಿದೆ. ಬೆಟ್ಟದ ಮೇಲೆ ಕಲ್ಮನೆಗಳ ಪಕ್ಕದಲ್ಲಿ ನೀರಿನ ಕೊಳವನ್ನು ನಿರ್ಮಿಸಲಾಗಿದೆ. ಇದರ ಪಕ್ಕದಲ್ಲಿ ಬೃಹತ್ ಬಂಡೆಗಳನ್ನು ಕತ್ತರಿಸಿರುವ ಕಲ್ಲಿನ ರಾಶಿಯಿದೆ.

ಸ್ಥಳೀಯವಾಗಿ ದೊರಕುವ ಗ್ರಾನೈಟ್ ಬಂಡೆಗಳನ್ನು ಕತ್ತರಿಸಿ ವೈವಿಧ್ಯಮಯವಾದ ಶಿಲಾನಿರ್ಮಿತಿಗಳನ್ನು ನಿರ್ಮಿಸುವ ತಾಂತ್ರಿಕ ಕೌಶಲವುಳ್ಳ ಜನಸಮುದಾಯ ಇದಾಗಿತ್ತು ಎಂದು ತೋರುತ್ತದೆ. ಗ್ರಾನೈಟ್‌ನ್ನು ಇಂದು ಚಪ್ಪಡಿ ಎಬ್ಬಿಸುವಂತೆ ಅಂದಿನ ಜನರು ಮಾಡುತ್ತಿದ್ದಿರಬೇಕು. ಅಂದರೆ, ಆಣೆಗಳನ್ನು ರಂಧ್ರದಲ್ಲಿಟ್ಟು ಹೊಡೆಯುವುದು. ಅದರ ಮೇಲೆ ಕುದಿಯುವ ನೀರನ್ನು

ಸುರಿಯುವುದು. ಬಳಿಕ ಕಬ್ಬಿಣದ ಸಲಾಕೆಯಂತಹ ಉಪಕರಣಗಳಿಂದ ಮೀಟುವುದು ಆಗ ಬಂಡೆ ಸೀಳಿ ಚಪ್ಪಡಿ ಮೇಲೇಳುತ್ತದೆ. ಇಂತಹ ತಂತ್ರಜ್ಞಾನವನ್ನು ಅಂದಿನ ಜನರು ತಿಳಿದಿದ್ದರೆಂಬುದು ತುಂಬಾ ಮಹತ್ವವೆನಿಸುತ್ತದೆ. ಬೃಹತ್ ಕಲ್ಲುಚಪ್ಪಡಿಯನ್ನು ಎಬ್ಬಿಸುವ ಮತ್ತು ಅವುಗಳಿಂದ ಶಾಶ್ವತವಾಗಿ ಉಳಿಯುವ ಶಿಲಾನಿರ್ಮಿತಿಗಳು ಎಂಥವರನ್ನೂ ಬೆರಗುಗೊಳಿಸುತ್ತದೆ. ಈ ನೆಲೆಯ ಸಮೀಪ ಬೆಟ್ಟದ ತಪ್ಪಲಿನಲ್ಲಿ ಮತ್ತು ತಳವಾರನ ಮೂಲೆ ಎಂಬ ಸ್ಥಳದಲ್ಲಿ ಬೃಹತ್ ಶಿಲಾಸಂಸ್ಕೃತಿ ಸಮುದಾಯಗಳ ಜನವಾಸ್ತವ್ಯದ ನೆಲೆಗಳಿವೆ ಎಂಬ ವರದಿಗಳು ಪ್ರಕಟವಾಗಿವೆ.೧೫ಈ ಪ್ರದೇಶದ ಬೆಟ್ಟದ ಸಾಲುಗಳಲ್ಲಿ ಚಿತ್ರಿತ ಗವಿಗಳು, ಬೃಹತ್ ಶಿಲಾಯುಗ ಸಂಸ್ಕೃತಿಯ ಶಿಲಾಸಮಾಧಿಗಳು ಅಧಿಕವಾಗಿವೆ. ಅ.ಸುಂದರ, ಶರಣಬಸಪ್ಪ ಕೋಲ್ಕಾರ, ಮೋಹನ್ ಆರ್, ಅವರು ಇಲ್ಲಿನ ಗವಿವರ್ಣ ಚಿತ್ರಗಳನ್ನು ಅಧ್ಯಯನ ಮಾಡಿ ಅವುಗಳ ಮಹತ್ವವನ್ನು ವಿದ್ವತ್ ಲೋಕಕ್ಕೆ ಹೆಚ್ಚು ಪ್ರಚುರವಾಗುವಂತೆ ವಿವರಗಳನ್ನು ಪ್ರಕಟಿಸಿದ್ದಾರೆ.

**ತಾವರಗೇರ**

ಕುಷ್ಟಗಿ ತಾಲೂಕು ಕೇಂದ್ರದಿಂದ ೨೪ ಕಿ.ಮೀ ಹಾಗೂ ಕೊಪ್ಪಳ ಜಿಲ್ಲಾ ಕೇಂದ್ರದಿಂದ ಈಶಾನ್ಯಕ್ಕಿಗೆ ೯೦ ಕಿ.ಮೀ ದೂರದಲ್ಲಿ ತಾವರಗೇರಾ ನೆಲೆಯಿದೆ. ಮಸ್ಕಿಯಿಂದ ೨೩ ಕಿ.ಮೀ ನೈರುತ್ಯಕ್ಕೆ ಕಂಡುಬರುವ ಲಿಂಗಸೂಗೂರು– ಗಂಗಾವತಿ ಮಧ್ಯದ ಮುಖ್ಯ ರಸ್ತೆಯ ದಕ್ಷಿಣ ಮತ್ತು ಪೂರ್ವಕ್ಕೆ ಗ್ರಾನೈಟ್ ಗುಡ್ಡಗಳ ಶ್ರೇಣಿಗಳಿವೆ. ಈ ಬೆಟ್ಟಗಳನ್ನು ಸ್ಥಳೀಯವಾಗಿ 'ಗಾಣಗಿತ್ತಿಗುಡ್ಡ', 'ಜಟ್ಟಿನಮರಡಿ', 'ಅಲ್ಲನಮರಡಿ', 'ಮಾನಪ್ಪಯ್ಯಗುಡ್ಡ,' 'ತಿಮ್ಮಪ್ಪಯ್ಯಗುಡ್ಡ', 'ಕರಡಿಗುಡ್ಡ', 'ಬಿಳಿಗುಡ್ಡ,' 'ಒಂಟೆಗುಡ್ಡ', 'ಆನೆಗುಡ್ಡ' ಎಂಬ ಹೆಸರುಗಳಿಂದ ಕರೆಯುವ ರೂಢಿಯಿದೆ. ಉತ್ತರದ ಗ್ರಾನೈಟ್ ಬೆಟ್ಟಗಳ ಸಮತೋಲನದಲ್ಲಿ ತಿಮ್ಮಪ್ಪಯ್ಯ ಮತ್ತು ಮಾನಪ್ಪಯ್ಯನ ಗುಡ್ಡಗಳ ನಡುವೆ ಇರುವ ಕಣಿವೆಯನ್ನು 'ಸಂತೇಬಜಾರ್ ಡೊಣಿ' ಎಂದು ಕರೆಯಲಾಗುತ್ತದೆ.

ಪುರಾತತ್ವಜ್ಞರಾದ ಅ.ಸುಂದರ ಅವರು ಈ ನೆಲೆಯಲ್ಲಿ ಆರಂಭಿಕ ಇತಿಹಾಸಕಾಲದ ಕಪ್ಪು–ಕೆಂಪು ವರ್ಣದ ಮಡಕೆಗಳು ಹಾಗೂ ಕೆಂಪು ಮಿಶ್ರಿತ ರೆಸೆಟ್ಟ ಲೇಪಿತ ಮಡಕೆಗಳನ್ನು ಗುರುತಿಸಿ, 'ದಿ ಅರ್ಲಿ ಚೇಂಬರ್ ಟೋಂಬ್ಸ್ ಆಫ್ ಸೌತ್ ಇಂಡಿಯಾ' ಎಂಬ ಕೃತಿಯಲ್ಲಿ ದಾಖಲಿಸಿದ್ದಾರೆ.[೧೫] ಇಲ್ಲಿನ ಗಾಣಗಿತ್ತಿ ಗುಡ್ಡದ ಉತ್ತರ ಭಾಗ ಮತ್ತು ದಕ್ಷಿಣದ ಭಾಗದಲ್ಲಿ ಕಲ್ಲಾಸರೆಗಳಲ್ಲಿ ವರ್ಣಚಿತ್ರಗಳು ಹಾಗೂ ಪಶ್ಚಿಮದಲ್ಲಿರುವ ಸು. ಅರ್ಧ ಎಕರೆ ವಿಸ್ತೀರ್ಣದ ಜಮೀನಿನಲ್ಲಿ ಅದಿರುಗಳ ಉಂಡೆಗಳನ್ನು ಕರಗಿಸಿರುವ ವಸ್ತುಗಳಾದ ಕಬ್ಬಿಣದ ಕಿಟ್ಟ, ಮೂಸೆಯಂತಹ ಅವಶೇಷಗಳು ಇರುವುದರಿಂದ ಇದೊಂದು 'ಕಬ್ಬಿಣ ಕರಗಿಸುವ ಸ್ಥಳ'ವಾಗಿತ್ತೆಂದು ಅಭಿಪ್ರಾಯಿಸಿದ್ದಾರೆ. ಮುಖ್ಯವಾಗಿ ಅಲ್ಲನಮರಡಿಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಏಳು ಕಲ್ಲುಗುಪ್ಪೆ ಸಮಾಧಿಗಳನ್ನು(cairn stone circles) ಪತ್ತೆಹಚ್ಚಿ ಅವುಗಳ ಅಳತೆ ವಿನ್ಯಾಸವನ್ನು ವಿವರಿಸಿದ್ದಾರೆ.[೧೬]

ಒಂದು ಕಲ್ಲುಗುಪ್ಪೆ ಸಮಾಧಿಯ ವೃತ್ತದ ವ್ಯಾಸವು ೬.೫೦ ಮೀ, ಇದ್ದು ಅದರೊಳಗೆ ಗ್ರಾನೈಟ್ ಶಿಲೆಗಳನ್ನು ಬಳಸಲಾಗಿದೆ. ಅವುಗಳು ಒಂದಕ್ಕೊಂದು ಹತ್ತಿರದಲ್ಲಿ ಇರಿಸಲ್ಪಟ್ಟಿವೆ. ಹಾಗೂ

ಆಯಾತಕಾರದಲ್ಲಿ ಚೇಂಬರ್ ಇದ್ದು. ಅದು ೩.೩೦ ಮೀ, ಉದ್ದ ೩.೭೦ ಮೀ, ಅಗಲವಾಗಿದೆ. ಇದ್ದಕ್ಕೆ ಬಳಸಿರುವ ಕಲ್ಲುಗಳು ಒಂದರಿಂದ ಎರಡು ಮೀಟರ್‌ನಷ್ಟು ಉದ್ದವಾಗಿವೆ. ಮತ್ತೊಂದು ಸಮಾಧಿಯು ಜಟ್ಟಿನಗುಡ್ಡದ ಪೂರ್ವಭಾಗದಲ್ಲಿ ಆನೇರ್ ವೆಂಕಣ್ಣರ ಕೃಷಿ ಜಮೀನಿನಲ್ಲಿದೆ. ಈ ಕಲ್ಲುವೃತ್ತ ಸಮಾಧಿ(cairn stone circle)ಯು ವೃತ್ತದಿಂದ ೭.೫೦ ಮೀಟರ್ ವ್ಯಾಸವನ್ನು ಬಾಹ್ಯವಾಗಿ ಹೊಂದಿದೆ. ವೃತ್ತದ ಒಳಭಾಗದಲ್ಲಿ ದಕ್ಷಿಣದ ಕೊನೆವರೆಗೆ ೭೦ ಸೆಂ, ಮೀ ಉದ್ದ ಮತ್ತು ೫೦ ಸೆಂ, ಮೀಟರ್ ಆಂತರಿಕ ವಿನ್ಯಾಸವನ್ನು ಹೊಂದಿದೆ. ಇದಕ್ಕೆ ೩೦ ಸೆಂ, ಮೀಟರ್ ಅಳತೆಯ ಎರಡು ಗ್ರಾನೈಟ್‌ಕಲ್ಲುಗಳನ್ನು ಬಳಸಿ ನಿರ್ಮಿಸಲಾಗಿದೆ. ಕೊನೆಯದಾಗಿ ಮಾನಪ್ಪಯ್ಯಗುಡ್ಡದ ದಕ್ಷಿಣದಲ್ಲಿರುವ ಕೃಷಿ ಜಮೀನಿನಲ್ಲಿ ಡಬಲ್‌ಸ್ಟೋನ್ ಸರ್ಕಲ್ ಸಮಾಧಿಯನ್ನು ಗುರುತಿಸಿ, ಅದರ ಅಳತೆ ವಿನ್ಯಾಸವನ್ನು ವಿವರಿಸಿದ್ದಾರೆ. ಈ ಕಲ್ಲುವೃತ್ತ ಸಮಾಧಿಯ ವೃತ್ತದ ವ್ಯಾಸವೂ ೫ ಮೀಟರ್, ವೃತ್ತದ ಒಳಭಾಗದಲ್ಲಿ ದಕ್ಷಿಣದ ಕೊನೆಯವರೆಗೆ ೯೦ ಸೆಂ.ಮೀ ಉದ್ದ ಮತ್ತು ೬೦ ಸೆಂ. ಮೀಟರ್ ಅಗಲದ ಆಂತರಿಕ ವಿನ್ಯಾಸ ಒಳಗೊಂಡಿದೆ.[೧೭]

ಪ್ರಸ್ತುತ ನೆಲೆಯಲ್ಲಿ ಶಿಲಾಸಮಾಧಿಗಳು ಸಂಪೂರ್ಣವಾಗಿ ನಾಶಹೊಂದಿದ್ದು, ವರ್ಣಚಿತ್ರಗಳು, ರೇಖಾಚಿತ್ರಗಳು ಇಂದಿಗೂ ಉಳಿದುಕೊಂಡಿವೆ. ಇಲ್ಲಿನ ಕಲ್ಲಾಸರೆಯಲ್ಲಿ ಹನ್ನೆರಡು ಜಿಂಕೆಗಳನ್ನು ಚಿತ್ರಿಸಲಾಗಿದ್ದು, ಅವೆಲ್ಲವುಗಳು ಒಂದರ ಹಿಂದೆ ಒಂದರಂತೆ ಮುಂದಕ್ಕೆ ಸಾಗುತ್ತಿವೆ ಎಂಬಂತೆ ಚಿತ್ರಿಸಲಾಗಿದೆ. ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಹೊಸದಾಗಿ ಮಾನಪ್ಪಯ್ಯ ಗುಡ್ಡದ ಪೂರ್ವಕ್ಕೆ ಇರುವ ದೊಡ್ಡ ಬಂಡೆಯ ದಕ್ಷಿಣಾಭಿಮುಖವಾಗಿರುವ ಎತ್ತರದ ಗೋಡೆಯ ಮೇಲೆ ಕಲ್ಲಿನಿಂದ ಕೊರೆದ ಉದ್ದನೆಯ ಕೊಂಬುಗಳುಳ್ಳ ಜಿಂಕೆಯ ಚಿತ್ರಗಳನ್ನು ಗುರುತಿಸಲಾಗಿದೆ. ಇದರ ತಳಭಾಗದಲ್ಲಿರುವ ಗವಿಯಲ್ಲಿ ವಸತಿ ಅವಶೇಷಗಳಾದ ಮಡಕೆಗಳು, ಸುಟ್ಟಮಣ್ಣು ಹಾಗೂ ಗವಿಯ ಭಿತ್ತಿಯಲ್ಲಿ ಐದು ಕೊಂಬುಗಳುಳ್ಳ ಜಿಂಕೆ, ಗೂಳಿ ಮತ್ತಿತರ ಪ್ರಾಣಿ ಚಿತ್ರಗಳನ್ನು ಗುರುತಿಸಲಾಗಿದೆ.[೧೮] ಈ ಎಲ್ಲಾ ಕುರುಹುಗಳಿಂದ ತಾವರೆಗೇರವು ಬೃಹತ್ ಶಿಲಾಯುಗದ 'ವಸತಿ ಮತ್ತು ಸ್ಮಶಾನ ನೆಲೆ' ಎಂದು ದೃಢವಾಗುತ್ತದೆ.

**ಆಗೋಲಿ**

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕು ಕೇಂದ್ರದಿಂದ ವಾಯುವ್ಯ ದಿಕ್ಕಿಗೆ ೩೦.ಕಿಮೀ ಅಂತರದಲ್ಲಿ ಆಗೋಲಿ ಗ್ರಾಮವಿದೆ. ಈ ಗ್ರಾಮದ ಉತ್ತರ ಬದಿಯ ಬೆಟ್ಟ ಸಾಲುಗಳಲ್ಲಿ ಮೂರು ಕಡೆ ಬೃಹತ್ ಶಿಲಾಯುಗದ ಸಮಾಧಿಗಳಿವೆ. ಇವುಗಳಿಗೆ ಸ್ಥಳೀಯರು ಮೋರೆಯರ ಕಲ್ಲು ಎಂದು ಕರೆಯುತ್ತಾರೆ. ಯರಡೋಣಿ ಲಿಂಗಪ್ಪ ಎಂಬುವರ ಸು. ೫ ಎಕರೆ ವಿಸ್ತಾರವಾದ ಜಮೀನಿನಲ್ಲಿ ಶಿಲಾಸಮಾಧಿಗಳು ಇದ್ದವೆಂದು ಸ್ಥಳೀಯರು ತಿಳಿಸುವರು. ಪ್ರಸ್ತುತ ಅವುಗಳನೆಲ್ಲಾ ನಾಶಮಾಡಿ ಈ ನೆಲೆಯನ್ನು ಪೂರ್ಣ ಪ್ರಮಾಣದಲ್ಲಿ ಕೃಷಿ ಭೂಮಿಯಾಗಿ ಬಳಸಲಾಗುತ್ತಿದೆ. ಆದಾಗ್ಯೂ ಇಡೀ ಪ್ರದೇಶದಲ್ಲಿ ಸಮಾಧಿಯ ಅವಶೇಷಗಳು ಹರಡಿದ್ದು ನೂರಾರು ಸಮಾಧಿಗಳಿದ್ದವೆಂಬುದಕ್ಕೆ ಸಾಕ್ಷಿಯಾಗಿವೆ. ಈ ಅವಶೇಷಗಳ

ಜೊತೆಗೆ ಪೂರ್ವಬದಿಯ ನೈಸರ್ಗಿಕ ಹಾಸುಬಂಡೆಯೊಂದರ ಮೇಲೆ ಅಸಮಭುಜ ಶಿಲಾಕೋಣೆಯೊಂದು ಮಾತ್ರ ತಕ್ಕಮಟ್ಟಿಗೆ ಸುಸ್ಥಿತಿಯಲ್ಲಿದೆ. ಸು. ೯ ಮೀ. ಎತ್ತರ ಹಾಗೂ ೭ ಮೀ. ಉದ್ದ ಅಗಲವಾಗಿದ್ದು, ಹಿರೇಬೆಣಕಲ್ಲು ಶಿಲಾಕೋಣೆಯನ್ನು ಹೋಲುತ್ತದೆ. ನಾಲ್ಕುಕಡೆ ನಾಲ್ಕು ದೊಡ್ಡ ದೊಡ್ಡ ಬಂಡೆಗಳನ್ನಿಟ್ಟು ಅವುಗಳ ಮೇಲೆ ವೃತ್ತಾಕಾರದ ಕಲ್ಲುಚಪ್ಪಡಿಯನ್ನು ಈ ಕೋಣೆಯನ್ನು ನಿರ್ಮಿಸಲಾಗಿದೆ. ಒಂದು ಬದಿಯ ಬಂಡೆಯಲ್ಲಿ ನೆಲಹಂತದಲ್ಲಿ ಅರೆ ವೃತಾಕಾರದಲ್ಲಿ ಕಂಡಿಯಿದೆ. ಈ ಶಿಲಾಕೋಣೆಯ ಬಂಡೆಗಳನ್ನು ಸ್ವಸ್ತಿಕ್ ತಲವಿನ್ಯಾಸದಲ್ಲಿ ನಿಲ್ಲಿಸಲಾಗಿದೆ. ಏಕೆಂದರೆ ಬಂಡೆಗಳು ಒಂದಕ್ಕೊಂದು ಆಧಾರವಾಗಿ ನಿಲ್ಲಲು ಸಹಾಯಕವಾಗಿರಲು ಈ ರೀತಿಯ ತಂತ್ರ ಅನುಸರಿಸುತ್ತಿದ್ದರು. ಬಹಳ ವಿಶೇಷವಾಗಿ ಇಂದಿಗೂ ಸಹ ಯರಡೋಣಿ ಲಿಂಗಪ್ಪ ಕುಟುಂಬದವರು ಕಲ್ಲು ಚಪ್ಪಡಿಯನ್ನಿಟ್ಟು ಬಳಸಿ 'ಮೋರೆಯರ ಪ್ರತೀಕವಾಗಿ ಸಣ್ಣಗುಡಿಯನ್ನು ನಿರ್ಮಿಸಿ ಅವರ ನೆನಪಿಗಾಗಿ ಹಬ್ಬಹರಿದಿನಗಳಂದು ಪೂಜೆಮಾಡುವ ಪ್ರತೀತಿಯನ್ನು ರೂಡಿಸಿಕೊಂಡಿದ್ದಾರೆ. ಇದೇ ನೆಲೆಯ ಪೂರ್ವಕ್ಕೆ ಸುಮಾರು ೧ ಕಿ.ಮೀ ಅಂತರದಲ್ಲಿ ಶರಣಪ್ಪ ನಾಯಕ ತಿಪ್ಪನಾಳು ಅವರ ಹೊಲದಲ್ಲಿ ಮತ್ತೊಂದು ಶಿಲಾಸಮಾಧಿ ನೆಲೆಯಿದೆ. ಅಲ್ಲಿ ನೂರಾರು ಶಿಲಾಸಮಾಧಿಗಳನ್ನು ಕಿತ್ತುಹಾಕಿ ಜಮೀನಿನ ಬದುಗಳಿಗೆ ಬಳಸಲಾಗಿದೆ.[೧೯] ಇವುಗಳಲ್ಲದೆ ಈ ಜಮೀನಲ್ಲಿ ನವಶಿಲಾಯುಗ ಕಾಲದ ಉಜ್ಜಿನಯಗೊಳಿಸಿರುವ ಮೂರು ಕೊಡಲಿಗಳು ದೊರೆತಿವೆ. ನೂರಾರು ಬೂದುಬಣ್ಣದ ಹಾಗೂ ಕಪ್ಪು, ಕೆಂಪು ವರ್ಣದ ಮಡಕೆ ಚೂರುಗಳು ಕಂಡುಬಂದಿದ್ದು ಅವುಗಳು ಅಧ್ಯಯನಕ್ಕೆ ಪ್ರಮುಖ ಆಕರಗಳಾಗಿವೆ. ಈ ಎಲ್ಲಾ ಅಂಶಗಳಿಂದ ತಿಳಿಯಬಹುದಾದ ಬಹುಮುಖ್ಯ ಅಂಶಗಳೆಂದರೆ ಈ ಪ್ರದೇಶವು ನವಶಿಲಾಯುಗ ಕಾಲದಿಂದ ಬೃಹತ್ ಶಿಲಾಯುಗದವರೆಗಿನ ಜನವಸತಿಯ ಕಾರ್ಯಚಟುವಟಿಕೆಗಳ ಪ್ರಮುಖ ನೆಲೆಯಾಗಿತ್ತು ಎಂಬುದನ್ನು ಉಲ್ಲೇಖಿಸಬಹುದು.

**ಬಿಳೇಬಾವಿ**

ಕೊಪ್ಪಳ ತಾಲ್ಲೂಕಿನಲ್ಲಿ ಕಂಡುಬರುವ ಬೃಹತ್ ಶಿಲಾಯುಗದ ನೆಲೆಗಳಲ್ಲಿ ಬಿಳೇಬಾವಿ ಕೂಡ ಒಂದು. ಇದು ಹಿರೇಬೆಣಕಲ್ ನೆಲೆಯಿಂದ ನೈರುತ್ಯ ದಿಕ್ಕಿಗೆ ೨೦ ಕಿ.ಮೀ ದೂರದಲ್ಲಿದೆ. ಇಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ನೂರಕ್ಕೂ ಹೆಚ್ಚು ಶಿಲಾಸಮಾಧಿಗಳು ಕಂಡುಬಂದಿವೆ. ಅವುಗಳಲ್ಲಿ ಹತ್ತಕ್ಕೂ ಹೆಚ್ಚು ಸ್ವಸ್ತಿಕ್ ಆಕಾರದ(cist circls) ಸಮಾಧಿಗಳಾದರೆ, ಇಪ್ಪತ್ತೈದಕ್ಕೂ ಹೆಚ್ಚು ಸಮಾಧಿಗಳು ಬಹುಭುಜಾಕೃತಿಯ ಕೋಣೆ(polygonal chamber) ಪ್ರಕಾರದವು. ಎರಡನೆಯ ಪ್ರಕಾರದ ಸಮಾಧಿಗಳು ಆಯತಾಕಾರದ ಅಥವಾ ಬಹುಪಾಲು ಬಹುಭುಜಾಕೃತಿಯಿಂದ ಕೂಡಿವೆ. ಇವುಗಳು ಯಾವುದೇ ಮಾನದಂಡಗಳಿಗೆ ಅನುಗುಣವಾಗಿರುವುದಿಲ್ಲ. ಇವು ೪೦ ಸೆಂ. ಮೀ ನಿಂದ ಹಿಡಿದು ೯೦ ಸೆಂ. ಮೀ ಗಿಂತ ಕಡಿಮೆ ಸರಾಸರಿ ಎತ್ತರದಿಂದ ಕೂಡಿವೆ.[೨೦] ಗೋಡೆಗಳನ್ನು ಏರಿಸುವುದರ ಮೂಲಕ ಸಣ್ಣ ಅಂತರಗಳು ಮತ್ತು ಅನಿಯಮಿತ ಸ್ಥಳಗಳನ್ನು ಅಥವಾ ಮೇಲ್ಭಾಗದಲ್ಲಿ ಮುಚ್ಚಲ್ಪಟ್ಟಿರುವ ದೊಡ್ಡ ಬಂಡೆಯು ಅಸಮನಾದ ದಪ್ಪ ಮತ್ತು ಆಕಾರವನ್ನು ಹೊಂದಿರುವಂತೆ ರಚನೆ ಮಾಡಲಾಗಿವೆ.

ಸಾಮಾನ್ಯವಾಗಿ ಯಾವುದೇ ದಿಕ್ಕಿನ ಒಂದು ಬದಿಯಲ್ಲಿ ಇದು ತೆರೆದಿರುತ್ತದೆ. ಪ್ರತೀ ಸಮಾಧಿಗಳಲ್ಲೂ ದೊಡ್ಡದಾದ ಅಳತೆಗಳಲ್ಲಿ ಭಿನ್ನವಾಗಿರುತ್ತವೆ. ಇಲ್ಲಿನ ಒಂದು ದೊಡ್ಡ ಸಮಾಧಿಯ ಅಳತೆಯು ೧೦ ಅಡಿ ಉದ್ದ ಹಾಗೂ ೮ ಅಡಿ ಅಗಲ ವಿಸ್ತೀರ್ಣದಿಂದ ಕೂಡಿದೆ.

ಸ್ಥಳೀಯರು ಸಮಾಧಿಗಳಿರುವ ಬೆಟ್ಟವನ್ನು 'ಮೋರೆಯರ ಹನುಮಪ್ಪನ ಬೆಟ್ಟ' ಎಂದು ಕರೆಯುವರು. ಬೆಟ್ಟದಲ್ಲಿ ನೂರಕ್ಕೂ ಹೆಚ್ಚು ಮೊರೆಯರ ಮನೆಗಳಿದ್ದವೆಂದು, ಅವುಗಳನ್ನು ಇಲ್ಲಿನ ಜನರು ಇತ್ತೀಚೆಗೆ ಕಟ್ಟಡಗಳ ನಿರ್ಮಾಣಕ್ಕಾಗಿ ಬಳಸಲು ಮತ್ತು ಸಮಾಧಿಗಳಲ್ಲಿ ನಿಧಿ ಇರುವುದೆಂದು ಭಾವಿಸಿ ಕಿತ್ತು ಹಾಳು ಮಾಡಿದರೆಂದು ಸ್ಥಳೀಯ ವಕ್ತೃ ಹನುಮಂತಪ್ಪ ಅವರು ತಿಳಿಸಿದರು. ಇಲ್ಲಿರುವ ಬಹುತೇಕ ಸಮಾಧಿಗಳು ಸಂಪೂರ್ಣವಾಗಿ ಹಾಳಾಗಿರುವುದನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಬೆಟ್ಟದ ಮೇಲ್ಭಾಗದಲ್ಲಿ ಮಾತ್ರ ಕೆಲವು ಸಮಾಧಿಗಳು ಉಳಿದುಕೊಂಡಿದ್ದು. ಅವುಗಳು ನಿರ್ದಿಷ್ಟ ಅಳತೆಯನ್ನು ಹೊಂದಿಲ್ಲದಿರುವುದನ್ನು ಗುರುತಿಸಲಾಗಿದೆ. ಅಲ್ಲದೇ ಇಲ್ಲಿನ ಕಲ್ಲಾಸರೆಗಳಲ್ಲಿ ಕೆಂಪು ಮತ್ತು ಬಿಳಿ ವರ್ಣದ ಚಿತ್ರಗಳಿವೆ. ಅವುಗಳಲ್ಲಿ ಒಂದು ಹಸುವಿನಂತ ಪ್ರಾಣಿ, ಎತ್ತುಗಳ ಮೂರು ಚೌಕಮಂಡಲಗಳು, ಮೂರು ಹೂಗಿಡದ ಚಿತ್ರಗಳು ಮುಖ್ಯವಾಗಿವೆ. ಬಿಳಿಬಣ್ಣದ ಮನುಷ್ಯಾಕೃತಿ ಮತ್ತು ಎತ್ತಿನ ಚಿತ್ರವೂ ಇದೆ. ಮಂಡಲದ ಚಿತ್ರಗಳಿಂದ ತಿಳಿದುಬರುವ ಮುಖ್ಯ ಸಂಗತಿ ಏನೆಂದರೆ, ಅಂದಿನ ಜನರಿಗೆ ಧಾರ್ಮಿಕ ನಂಬಿಕೆ ಆಚರಣೆಗಳಿದ್ದವು ಎಂಬುದರ ಸಾಕ್ಷಿಗಳಾಗಿ ತೋರುತ್ತವೆ. ಮತ್ತು ಹೂ ಬಿಟ್ಟಿರುವ ಸಸ್ಯವನ್ನು ಸೂಚಿಸುವ ಚಿತ್ರವೂ ಅವರಲ್ಲಿ ಸೌಂದರ್ಯ ಪ್ರಜ್ಞೆ ಇತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಎರಡನೆಯ ಕಲ್ಲಾಸರೆಯೂ ಮೋರೆಯರ ಬೆಟ್ಟದ ಕೆಳಭಾಗದಲ್ಲಿರುವ ಒಂದು ಸ್ವತಂತ್ರ ಗುಂಡೊಂದರ ಕೆಳಭಾಗದಲ್ಲಿರುವ ಪೊಳ್ಳಾದ ಆಸರೆಯ ಮೇಲ್ಛಾವಣೆಯಲ್ಲಿ ಕೆಂಪು ಮತ್ತು ಬಿಳಿಬಣ್ಣದ ಚಿತ್ರಗಳಿವೆ.[೨೧] ಈ ಚಿತ್ರಗಳಲ್ಲಿ ಕುದುರೆ ಸವಾರ ಸೂರ್ಯ, ಮಂಡಲ, ವೃತ್ತ, ಎತ್ತುಗಳ ಚಿತ್ರಗಳು ಪ್ರಮುಖವಾಗಿವೆ. ಒಂದರೊಳಗೊಂದರಂತೆ ಮೂರು ಅಸಮ ವೃತ್ತಗಳನ್ನೊಳಗೊಂಡ ಸೂರ್ಯನ ಚಿತ್ರದ ಕೊನೆಯ ಬಾಹ್ಯ ರೇಖೆಗೆ ಸುತ್ತಲೂ ಸೂರ್ಯನ ಕಿರಣಗಳಂತೆ ರೇಖೆಗಳನ್ನು ಎಳೆಯಲಾಗಿದೆ. ವೃತ್ತದ ಒಳಗೆ ಚೌಕವು ಇದ್ದು ಅದರ ನಾಲ್ಕು ಮೂಲೆಗಳಿಂದ ರೇಖೆಯನ್ನು ಎಳೆಯಲಾಗಿದೆ. ಎತ್ತಿನ ಚಿತ್ರಗಳು ನಾಲ್ಕು ಕಾಲು, ಬಾಲ, ಕೋಡುಗಳ ರಚನೆಯಿಂದ ಕೂಡಿವೆ. ಅಲ್ಲಲ್ಲಿ ಅಸ್ಪಷ್ಟವಾಗಿ ಗೋಚರಿಸುವ ಕೆಂಪು ಬಿಳಿವರ್ಣದ ಚಿತ್ರಗಳಿವೆ. ಬೆಟ್ಟದ ಮೇಲೆ ಮತ್ತು ಕೆಳಗೆ ನೀರಿನ ಡೋಣಿಗಳಿವೆ. ಸುತ್ತಲೂ ದೊಡ್ಡ ದೊಡ್ಡ ಗ್ರಾನೈಟ್ ಬಂಡೆಗಳಿವೆ. ಇಂತಹ ಭೌಗೋಳಿಕ ಪರಿಸರದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ವಾಸ್ತವ್ಯ ಹೊಂದಿರುವುದು ಗಮನಾರ್ಹವಾದುದು.

**ಕಡೇಬಾಗಿಲು**

ಗಂಗಾವತಿ ತಾಲ್ಲೂಕು ಕೇಂದ್ರದಿಂದ ದಕ್ಷಿಣಕ್ಕೆ ೧೦. ಕಿ.ಮೀ ಹಾಗೂ ಕೊಪ್ಪಳ ಜಿಲ್ಲಾ ಕೇಂದ್ರದಿಂದ ೪೦ ಕಿ.ಮೀ ದೂರದಲ್ಲಿ ಕಡೇಬಾಗಿಲು ನೆಲೆಯಿದೆ. ಇಲ್ಲಿಂದ ಸುಮಾರು ೨ ಕಿ.ಮೀ. ದೂರದಲ್ಲಿ ಆನೆಗೊಂದಿ ಇದೆ. ಇಲ್ಲಿನ ಭೌಗೋಳಿಕ ಪರಿಸರವು ಕಣಶಿಲೆಯ ಬೆಟ್ಟದ ಸಾಲಿನಲ್ಲಿದ್ದು, ತುಂಗಾಭದ್ರಾ

ನದಿಯು ಅದರ ಸಮೀಪದಲ್ಲಿ ವಾಯುವ್ಯದಿಂದ ಆಗ್ನೇಯ ದಿಕ್ಕಿಗೆ ಹರಿಯುತ್ತದೆ. ಇದು ದಖ್ಖನ್ ಪ್ರಸ್ಥಭೂಮಿ ಧಾರವಾರ್ ಕ್ರೇಟನ್(ಧಾರವಾಡ ಶಿಲಾಸಮೂಹ) ಮತ್ತು ಪಶ್ಚಿಮ ಧಾರವಾರ್ ಕ್ರೇಟನ್ ಶಿಲಾಸಮೂಹವನ್ನು ಬೇರ್ಪಡಿಸುವ ಸ್ಥಳದಲ್ಲಿದೆ. ಇಲ್ಲಿ ವಾರ್ಷಿಕವಾಗಿ ಸರಾಸರಿ ೫೦೦ ಮಿ.ಮೀ ಮಳೆಯಾಗುತ್ತದೆ. ಮಳೆಯ ಪ್ರಮಾಣವು ಮುಂಗಾರಿನ ಮೇಲೆ ಆಧಾರಿಸಿದ್ದು, ಅದು ಏಕರೂಪತೆಯನ್ನು ಹೊಂದಿಲ್ಲ. ಈ ಪರಿಸರದಲ್ಲಿ ಜೂನ್‌ನಿಂದ ಅಕ್ಟೋಬರ್ ಅವಧಿಯವರೆಗೆ ಮಳೆಗಾಲವಿರುತ್ತದೆ. ಇಲ್ಲಿ ಕುರುಚಲು ಗಿಡಗಳು, ಮುಳ್ಳಿನ ಮರಗಳು ಮತ್ತು ವಿವಿಧ ಸಸ್ಯವರ್ಗಗಳು ಬೆಳೆದಿವೆ. ಇಲ್ಲಿಯ ಪರಿಸರದಲ್ಲಿ ಪ್ರಾಗಿತಿಹಾಸ ಕಾಲದ ಹಲವು ಅವಶೇಷಗಳು ದೊರಕಿವೆ. ವಿಜಯನಗರ ಕಾಲದಲ್ಲಿ ನಿರ್ಮಿಸಿದ ಕೋಟೆ ಮತ್ತು ಅದರ ಪ್ರವೇಶ ದ್ವಾರದಿಂದ ಈ ಗ್ರಾಮಕ್ಕೆ ಕಡೇಬಾಗಿಲು ಎಂಬ ಸ್ಥಳನಾಮ ಬಂದಿರುವ ಸಾಧ್ಯತೆ ಇದೆ. 'ಕಡೇ' ಎಂದರೆ 'ಕೊನೆ,' 'ಅಂತಿಮ' ಎಂಬರ್ಥವಿದೆ. ಆನೆಗೊಂದಿ ಗ್ರಾಮದಿಂದ ಇಲ್ಲಿಗೆ ಬಂದರೆ, ಇದು ಕಡೆಯ ಭಾಗವಾಗುತ್ತದೆ. ವಿಜಯನಗರ ಕಾಲದಲ್ಲಿ ರಾಜಧಾನಿಯಾಗಿದ್ದ, ಆನೆಗೊಂದಿಯಿಂದ ಉತ್ತರಕ್ಕೆ ಸಾಗಿದರೆ ಇದು ಕೊನೆಯದಾಗಿರುವ ಕೋಟೆ ಬಾಗಿಲಾಗಿರುವುದರಿಂದ ಇದಕ್ಕೆ ಅನ್ವರ್ಥವಾಗಿ ಈ ಸ್ಥಳನಾಮ ಬಂದಿರುವ ಸಾಧ್ಯತೆಗಳನ್ನು ಅಲ್ಲಗಳೆಯಲಿಕ್ಕಾಗದು.

ಕಡೇಬಾಗಿಲು ಪರಿಸರವು ಬೃಹತ್ ಶಿಲಾಯುಗ ಅಥವಾ ಕಬ್ಬಿಣಯುಗದ ದೊಡ್ಡ ವಾಸ್ತವ್ಯದ ನೆಲೆಯಾಗಿದೆ.[೨೨] ಇಲ್ಲಿನ ಗವಿಗಳಲ್ಲಿ ಕಪ್ಪು-ಕೆಂಪು ವರ್ಣದ ಮಡಕೆಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದಿವೆ. ಹಾಗೂ ಇಲ್ಲಿನ ಗವಿಯೊಂದರಲ್ಲಿ ಕಲ್ಲುಗುಪ್ಪೆಯೊಂದು ಕಂಡುಬಂದಿದ್ದು ಪ್ರಾಯಶಃ ಇದು ಅಂದಿನ ಜನರ ಶವಸಂಸ್ಕಾರದ ಕುರುಹುವಾಗಿರುವ ಸಾಧ್ಯತೆಯಿದೆ. ಅಲ್ಲದೇ ಇಲ್ಲಿನ ಕಲ್ಲಾಸರೆಯಲ್ಲಿ ಎರಡು ಸಾಲಿನಲ್ಲಿ ಮನುಷ್ಯರ ವರ್ಣಚಿತ್ರಗಳಿದ್ದು ಮೇಲ್ಭಾಗ ಮತ್ತು ಕೆಳಭಾಗದಲ್ಲಿ ಪ್ರಾಣಿ ಚಿತ್ರಗಳಿವೆ. ಈ ಗ್ರಾಮದ ಪೂರ್ವಕ್ಕಿರುವ ಗುಡ್ಡದ ಮೇಲೆ ಶಿಕಾಗೋ ವಿಶ್ವವಿದ್ಯಾಲಯ, ಮಿಚಿಗನ್ ವಿಶ್ವವಿದ್ಯಾಲಯ ಮತ್ತು ಕರ್ನಾಟಕ ರಾಜ್ಯ ಸರ್ಕಾರದ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯವು ವ್ಯಾಪಕ ಕ್ಷೇತ್ರಕಾರ್ಯ ಮತ್ತು ಉತ್ಖನನವನ್ನು ೨೦೦೪-೦೫ನೇ ಸಾಲಿನಿಂದ ಕೈಗೊಂಡಿತು. ಇದರ ಫಲವಾಗಿ ಹಲವು ಹೊಸ ವಿಷಯಗಳು ಬೆಳಕಿಗೆ ಬಂದಿವೆ. ನೆಲೆಯ ಆಸುಪಾಸಿನಲ್ಲಿ ನವಶಿಲಾಯುಗ ಕಾಲದ (ಕ್ರಿ.ಪೂ. ೩೦೦೦-೧೨೦೦) ಕೃಷಿ, ಪಶುಸಂಗೋಪನೆ ಹಾಗೂ ಅದಕ್ಕೆ ಸಂಬಂಧಿಸಿದ ದನಗಾಹಿ ಆರ್ಥಿಕ ವ್ಯವಸ್ಥೆಯು ಇದ್ದಿತು. ಅದಕ್ಕೆ ಪೂರಕವಾಗಿ ದನಗಳ ಮೂಳೆಗಳು ದೊರಕಿದ್ದು ಅವುಗಳ ವಿಶ್ಲೇಷಣೆಯು ಹಲವು ಹೊಸ ಸಂಗತಿಗಳನ್ನು ಹೊರಹಾಕಿವೆ. ಮುಖ್ಯವಾಗಿ ಎತ್ತುಗಳನ್ನು ಕೃಷಿಗಾಗಿ ಮತ್ತು ಹಸುಗಳನ್ನು ಹಾಲಿಗಾಗಿ ಬಳಸಿಕೊಂಡಿರುವುದು ಗಮನಾರ್ಹ.

ಕುರಿ, ಮೇಕೆ, ನಾಯಿ, ನೀರೆಮ್ಮೆ ಮುಂತಾದ ಪ್ರಾಣಿಗಳನ್ನು ಪಳಗಿಸಿ ಸಾಕು ಪ್ರಾಣಿಗಳನ್ನಾಗಿಸಿಕೊಂಡಿರುವುದು ತಿಳಿದು ಬಂದಿದೆ. ಇಲ್ಲಿನ ಶವಕುಣಿಗಳಲ್ಲಿ ಸಾಕು ಪ್ರಾಣಿಗಳನ್ನು ಹೂತಿರುವುದು ಕಂಡುಬಂದಿದೆ. ಬೃಹತ್ ಶಿಲಾಯುಗ ಸಂಸ್ಕೃತಿಯ ಆರ್ಥಿಕತೆಯ ಕೆಲವು ವಿಷಯಗಳನ್ನು

ಹೊರತುಪಡಿಸಿ, ಇದಕ್ಕೂ ಪೂರ್ವದಲ್ಲಿದ್ದ ದನಗಾಹಿ, ಸಂಸ್ಕೃತಿಯ ಸ್ಥಿತಿಗತಿಗಳನ್ನು ಹೋಲುವ ಸಂಗತಿಗಳನ್ನು ಬಾವರ್ ಮತ್ತಿತರ ವಿದ್ವಾಂಸರುಗಳು ದೃಢಪಡಿಸಿದ್ದಾರೆ. ಬೇಟೆಯಾಡುವ ಕ್ರಮವಿದ್ದರೂ, ಪ್ರಾಣಿಗಳನ್ನು ಪಳಗಿಸಿಕೊಂಡು ಬಳಸಿರುವುದು ತಿಳಿದು ಬರುತ್ತದೆ. ದನಗಳನ್ನು ಅಧಿಕವಾಗಿ ಪಳಗಿಸಿಕೊಂಡು ವ್ಯವಸಾಯಕ್ಕೆ ಬಳಸಿರುವುದು ವಿವಿಧ ಅಧ್ಯಯನಗಳಿಂದ ತಿಳಿದು ಬರುತ್ತದೆ. ಬಾವರ್ ಅವರು ಈ ಪ್ರದೇಶದಲ್ಲಿ ನಡೆಸಿದ ಉತ್ಖನನದಲ್ಲಿ ದೊರಕಿರುವ ಪ್ರಾಣಿಗಳ ಅವಶೇಷಗಳನ್ನು ೨೦೦೬ರಲ್ಲಿ ಅಧ್ಯಯನ ನಡೆಸಿರುತ್ತಾರೆ. ಸಸ್ತನಿ ಪ್ರಾಣಿಗಳಾದ ದನಗಳು, ಇಲಿಗಳು ಮತ್ತು ವನ್ಯ ಮೃಗಗಳ ಮೂಳೆಗಳು ದೊರೆತಿವೆ. ಇವುಗಳಷ್ಟೇ ಅಲ್ಲದೇ ಇತರೆ ಪ್ರಾಣಿಗಳಾದ ಮೀನುಗಳು, ಆಮೆಗಳು, ಮತ್ತು ಕೆಲವು ಪಕ್ಷಿಗಳ ಪಳೆಯುಳಿಕೆಗಳು ದೊರಕಿವೆ.

೨೦೦೭ರಲ್ಲಿ ಸಿ.ಎಸ್ ವಾಸುದೇವನ್ ಅವರು ಕಡೇಬಾಗಿಲು ಗ್ರಾಮ ಪರಿಸರದಲ್ಲಿ ಕೈಗೊಂಡಿದ್ದ ಕ್ಷೇತ್ರಕಾರ್ಯದಲ್ಲಿ ಕಬ್ಬಿಣಯುಗ ಮತ್ತು ನವಶಿಲಾಯುಗ ಕಾಲದ ಕುರುಹುಗಳನ್ನು ಹೊರತುಪಡಿಸಿ ಆದಿ ಇತಿಹಾಸಕಾಲ ಮತ್ತು ಅದರ ತರುವಾಯ ಕಾಲಘಟ್ಟಗಳ ಅವಶೇಷಗಳನ್ನು ಪತ್ತೆಹಚ್ಚಿದ್ದಾರೆ.[೨೩] ಈ ಗ್ರಾಮದ ಪೂರ್ವಕ್ಕೆ ಇರುವ ಬೆಟ್ಟದ ಕೆಳಭಾಗಗಳಲ್ಲಿ, ತುಂಗಾಭದ್ರ ನದಿ ದಂಡೆಯಲ್ಲಿ ಆದಿ ಇತಿಹಾಸ ಕಾಲಕ್ಕೆ ಸೇರಿದ ರಸೆಟ್ ಲೇಪಿತ ಮಡಕೆಗಳು, ಕಪ್ಪು-ಕೆಂಪು ದ್ವಿವರ್ಣದ ಮಡಕೆಗಳನ್ನು ಶೋಧಿಸಿದರು. ನಂತರ ವಿದ್ವಾಂಸರಾದ ಕಾಜಲೆ ಮತ್ತು ಮೋರಿಸನ್ ಅವರುಗಳು, ಇಲ್ಲಿನ ತುಂಗಭದ್ರ ನದಿಯ ಪ್ರವಾಹದ ನೆಲೆಗಟ್ಟಿನಲ್ಲಿ ಬೃಹತ್ ಶಿಲಾಯುಗ ಮತ್ತು ಆದಿ ಇತಿಹಾಸ ಕಾಲಘಟ್ಟದ ಸಂಸ್ಕೃತಿಯ ಜನರು ವಸತಿಯ ನೆಲೆಗಳನ್ನಾಗಿಸಿಕೊಂಡಿದ್ದರು ಎಂದು ವಿವರಿಸುತ್ತಾರೆ. ಇಂತಹ ವಿವರಗಳನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿಯೂ ಸಹ ಪ್ರತ್ಯಕ್ಷವಾಗಿ ಗಮನಿಸಿ ಅದು ಹೊಂದಿರಬಹುದಾದ ವ್ಯಾಪ್ತಿಯನ್ನು ಪರೀಕ್ಷಿಸಲಾಗಿದೆ. ಒಟ್ಟಾರೆ ಗಮನಿಸಿದಾಗ ಈ ನೆಲೆಯ ಮುಖ್ಯ ಕೊರತೆ ಎಂದರೆ ಬೃಹತ್ ಶಿಲಾಯುಗದ ಜನರು ಯಾವುದೇ ಪ್ರಕಾರದ ಮನೆಗಳು ಅಥವಾ ಲೌಕಿಕ ಕಟ್ಟಡಗಳನ್ನು ಹೆಚ್ಚಾಗಿ ಬಳಸುತ್ತಿದ್ದರು ಎಂಬುದಕ್ಕೆ ಪೂರಕ ಸಾಕ್ಷಿಗಳು ತಿಳಿದುಬಂದಿಲ್ಲ. ಈ ಸಂಸ್ಕೃತಿಯ ಆದಿಭಾಗದ ಜನರು ಬಹುಮಟ್ಟಿಗೆ ಅಲೆಮಾರಿ ಜೀವನ ನಡೆಸುತ್ತಿದ್ದರು. ವೈವಿಧ್ಯಮಯ ಶಿಲಾಗೋರಿಗಳನ್ನು ಕಟ್ಟುತ್ತಿದ್ದ ಇವರಿಗೆ ತಮ್ಮ ಮನೆಗಳನ್ನು ದೊಡ್ಡ ಪ್ರಮಾಣದಲ್ಲಿ ಕಟ್ಟಲು ಆಗಲೇ ಇಲ್ಲ. ಪ್ರಾಯಶಃ ಇವರ ಪರಂಪರೆ, ಕಟ್ಟುಕಟ್ಟಳೆಗಳು ಮತ್ತು ಜೀವನ ಶೈಲಿ ಅಂತಹ ವಾಸ್ತವ್ಯದ ನಿರ್ಮಿತಿಗಳಿಗೆ ಪ್ರಚೋದನೆ ನೀಡಿರಲಿಲ್ಲವೆಂದು ತೋರುತ್ತದೆ. ಇಲ್ಲವೇ ಬೇಗ ನಶಿಸಿ ಹೋಗುವ ಪರಿಕರಗಳಿಂದ ಮನೆಗಳನ್ನು ನಿರ್ಮಿಸುತ್ತಿದ್ದರು. ಹಾಗಾಗಿ ಪ್ರತಿಪಾದಿಸಲು ಕಾರಣೀಭೂತ ಅಂಶಗಳು ಈ ಸಂಸ್ಕೃತಿಯ ವಾಸ್ತವ್ಯದ ನೆಲೆಗಳಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲವೆಂದೇ ಅಭಿಪ್ರಾಯಿಸಬಹುದು. ಅಲ್ಲದೇ ಇಂತಹ ವಾಸ್ತವ್ಯದ ನೆಲೆಗಳ ಕುರಿತು ಹೆಚ್ಚಿನ ಪ್ರಮಾಣದಲ್ಲಿ ಉತ್ಖನನ ಕಾರ್ಯಗಳು ನಡೆದಿರುವುದು ಕೂಡ ಅತಿ ಕಡಿಮೆಯೆಂದೇ ಭಾವಿಸಬಹುದು.

ಅಧ್ಯಯನ ಪ್ರದೇಶದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಐದು ಮತ್ತು ಕೊಪ್ಪಳ ಜಿಲ್ಲೆಯಲ್ಲಿ ಐದು ನೆಲೆಗಳು ಸೇರಿ ಒಟ್ಟು ಹತ್ತು ವಸತಿನೆಲೆಗಳು ಕಂಡುಬಂದಿವೆ. ಅವುಗಳಲ್ಲಿ ಏಳು ನೆಲೆಗಳು ಮಾತ್ರ ಉತ್ಖನನಕ್ಕೆ

ಒಳಪಟ್ಟಿವೆ. ಇನ್ನು ಮೂರು ನೆಲೆಗಳು ಅನ್ವೇಷಣೆ ನೆಲೆಗಳಾಗಿವೆ. ಬಹುತೇಕ ಇಂತಹ ವಾಸ್ತವ್ಯದ ನೆಲೆಗಳು ನೂತನ ಶಿಲಾಯುಗ ಸಂಸ್ಕೃತಿಯ ಕೊನೆಯ ಭಾಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಆದಿ ಭಾಗದ ಸಂಯುಕ್ತ ಹಂತದಲ್ಲಿರುವುದು ಕ್ಷೇತ್ರ ಅನ್ವೇಷಣೆ ಮತ್ತು ಉತ್ಖನನ ವರದಿಗಳಿಂದ ದೃಢವಾಗಿದೆ.

**೨. ಸ್ಮಶಾನ ನೆಲೆಗಳು**

ಬೃಹತ್ ಶಿಲಾಸಂಸ್ಕೃತಿಯ ಜನರ ನಿತ್ಯ ಜೀವನದ ಯಾವುದೇ ಪ್ರಕಾರದ ನಿರ್ಮಿತಿಗಳು ತಿಳಿದುಬರದಿದ್ದರೂ ಇವರ ವಿವಿಧ ಪ್ರಕಾರದ ಕಲ್ಮನೆಗಳು ಸಾವಿರಾರು ನೆಲೆಗಳಲ್ಲಿವೆ. ಈ ಶಿಲಾ ನಿರ್ಮಿತಿಗಳು ಅವರ ಅದ್ಭುತ ಸಾಧನೆ ಎಂದು ಹೇಳಬಹುದು. ಈ ಸಂಸ್ಕೃತಿಯ ಜನರು ಶವಸಂಸ್ಕಾರಕ್ಕೆ ಹೆಚ್ಚಿನ ಮಹತ್ವ ನೀಡಿದ್ದರು ಎಂಬುದು ಶಿಲಾ ನಿರ್ಮಿತಿಗಳಿಂದ ತಿಳಿದುಬರುತ್ತದೆ. ಸಹಜವಾಗಿಯೇ ಬೆಟ್ಟ-ಗುಡ್ಡಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಕಲ್ಲು ಬಂಡೆಗಳು, ಚಪ್ಪಡಿಗಳು ದೊರೆಯಬಹುದಾದ ಸನ್ನಿವೇಶದಲ್ಲಿಯೇ ಬೃಹತ್ ಶಿಲಾಸಮಾಧಿಗಳ ನೆಲೆಗಳಿರುವುದು ಸಾಮಾನ್ಯ. ಸಾಧ್ಯವಾದಷ್ಟು ಮಟ್ಟಿಗೆ ಬೆಟ್ಟ-ಗುಡ್ಡಗಳ ಸಮತಟ್ಟು ಇವುಗಳ ತಪ್ಪಲು ಪ್ರದೇಶ ಅಥವಾ ಹೆಚ್ಚು ಶಿಲಾಮಯವಾದ ಬರಡು ಭೂಮಿಗಳನ್ನು ಶಿಲಾಸಮಾಧಿ ನಿರ್ಮಾಣಕ್ಕೆ ಮೀಸಲಾಗಿಡುತ್ತಿದ್ದರು. ಕೃಷಿಗೆ ಯೋಗ್ಯವಾದ ಭೂಮಿಯಲ್ಲಿ ಇಂತಹ ನಿರ್ಮಿತಿಗಳಿರುತ್ತಿರಲಿಲ್ಲ. ಈ ಜನರ ವಾಸ್ತವ್ಯದ ನೆಲೆಗಳಿಗಿಂತ ಸ್ಮಶಾನ ನೆಲೆಗಳೇ ಹೆಚ್ಚು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲೂ ಹಲವು ಸ್ಮಶಾನ ನೆಲೆಗಳು ಕಂಡುಬಂದಿದ್ದು ಅವುಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

**ಹೆಚ್.ಜಿ ರಾಮುಲು ನಗರ**

ಗಂಗಾವತಿಯಿಂದ ೧೫ ಕಿ.ಮೀ ದೂರದಲ್ಲಿ ಎಮ್ಮಿಗುಡ್ಡವಿದೆ. ಅದಕ್ಕೆ ಎದುರಿನ ಬೆಟ್ಟದ ಮೇಲೆ ಅಂದರೆ ಹೆಚ್.ಜಿ ರಾಮುಲು ನಗರದ ಪಶ್ಚಿಮ ದಿಕ್ಕಿನಲ್ಲಿ ಕಂಡುಬರುವ ಬೆಟ್ಟದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಸಮಾಧಿ ನೆಲೆಯಿದೆ. ಇಲ್ಲಿ ೪೦ಕ್ಕೂ ಹೆಚ್ಚು ಸಮಾಧಿಗಳಿದ್ದು, ಅವುಗಳು ಮೂರು ಪ್ರಕಾರದಲ್ಲಿವೆ.[೨೪] ಕಂಡಿಕೋಣೆ ಸಮಾಧಿ, ಆಯತಾಕಾರದ ಶವಕುಣಿಗಳು, ಕಂಡಿರಹಿತ ಶಿಲಾಸಮಾಧಿಗಳಾಗಿವೆ. ಆಯತಾಕಾರದ ಶವಕುಣಿಗಳಲ್ಲಿ ಶವವನ್ನು ಹೂಳಿ ಸುತ್ತಲೂ ಶಿಲಾಫಲಕಗಳಿಂದ ಸ್ವಸ್ತಿಕ್ ವಿನ್ಯಾಸದಲ್ಲಿ ಸಮಾಧಿಗಳನ್ನು ನಿರ್ಮಿಸಲಾಗಿದೆ. ಕಂಡಿಕೋಣೆ ಸಮಾಧಿಗಳು ಕನಿಷ್ಟ ೫ ಅಡಿ ಎತ್ತರವಾಗಿವೆ. ಇದೇ ರೀತಿಯಾಗಿ ಕಂಡಿರಹಿತ ಸಮಾಧಿಗಳು ಕೂಡ ೭ ಅಡಿ ಎತ್ತರವಾಗಿರುವವು. ಇವು ಹಿರೇಬೆಣಕಲ್ಲು ಮಾದರಿಯ ಸಮಾಧಿಗಳನ್ನು ಹೋಲುತ್ತವೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬಹುತೇಕ ಸಮಾಧಿಗಳು ಹಾಳಾಗಿರುವುದನ್ನು ಗಮನಿಸಲಾಗಿದೆ. ಕೆಲವೇ ಕೆಲವು ಮಾತ್ರ ಅಧ್ಯಯನಕ್ಕೆ ಯೋಗ್ಯವಾಗಿವೆ. ಈ ನೆಲೆಯ ಪಕ್ಕದಲ್ಲಿ ಒಂದು ಎಕರೆಯಷ್ಟು ವಿಶಾಲವಾದ ಬಯಲಿದ್ದು, ಈ ಸಂಸ್ಕೃತಿಯ ಜನರು ಆ ಬಯಲನ್ನು ಕೃಷಿಚಟುವಟಿಕೆಗೆ ಬಳಸಿರುವ ಸಾಧ್ಯತೆಯಿದೆ. ಅಲ್ಲದೆ ವಸತಿ

ಅವಶೇಷಗಳಿಗಿಂತ ಶವಕುಣಿಗಳು ಲಭಿಸಿರುವುದರಿಂದ ಇದು ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂದು ಹೇಳಬಹುದು.

### ಮಲ್ಲಾಪುರ

ಗಂಗಾವತಿ ತಾಲ್ಲೂಕಿನಿಂದ ದಕ್ಷಿಣಕ್ಕೆ ೧೦ ಕಿ.ಮೀ ಹಾಗೂ ಕೊಪ್ಪಳ ಜಿಲ್ಲಾ ಕೇಂದ್ರದಿಂದ ೪೬ ಕಿ.ಮೀ ದೂರದಲ್ಲಿ ಮಲ್ಲಾಪುರವಿದೆ. ಗ್ರಾಮದಿಂದ ವಾಯುವ್ಯಕ್ಕೆ ೧.೫ ಕಿ.ಮೀ ಅಂತರದಲ್ಲಿ ಅ.ಸುಂದರ ಅವರು ಬೃಹತ್ ಶಿಲಾಯುಗದ ಸಮಾಧಿಗಳನ್ನು ಶೋಧಿಸಿದ್ದಾರೆ. ಈ ಸ್ಥಳವನ್ನು 'ಸಣ್ಣ ಮೋರೆಯರ ತಟ್ಟಿ' ಎಂದು ಕರೆಯಲಾಗುತ್ತದೆ. ಇದೇ ಪರಿಸರದ ಮದ್ದಿನ ಮನೆ ಗುಡ್ಡದಲ್ಲಿ ಮುವತ್ತಕ್ಕೂ ಅಧಿಕ ಶಿಲಾಸಮಾಧಿ ಅವಶೇಷಗಳಿವೆ. ಇವುಗಳೆಲ್ಲವೂ ನೆಲದಡಿಯ ಶವಕುಣಿಗಳಾಗಿವೆ. ಅಲ್ಲದೇ ಕಂಡಿಕೋಣಿ ಸಮಾಧಿಗಳು ಸಹ ಕಂಡುಬಂದಿದ್ದು, ಅವುಗಳನ್ನು ಸಂಪೂರ್ಣವಾಗಿ ನಾಶಗೊಳಿಸಲಾಗಿದೆ. ಈ ಸಂಸ್ಕೃತಿಗೆ ಸೇರಿದ ಕಪ್ಪು, ಕೆಂಪು ವರ್ಣದ ಮಡಕೆಚೂರುಗಳು(ಬಿ.ಆರ್.ಡಬ್ಲ್ಯೂ) ಅಲ್ಲಲ್ಲಿ ಕಂಡುಬಂದಿವೆ. ಹಾಗೇಯೇ ವಾಣಿವೀರಭದ್ರೇಶ್ವರ ದೇವಾಸ್ಥಾನದ ಹಿಂಬದಿಯಲ್ಲಿರುವ (ದಕ್ಷಿಣಕ್ಕೆ ಇರುವ ಬೆಟ್ಟದಲ್ಲಿ) ಕರಿಮಟ್ಟಿಗುಡ್ಡದಲ್ಲಿ ವಿವಿಧ ಪ್ರಾಣಿಗಳ ರೇಖಾಚಿತ್ರಗಳು, ೧೦ಕ್ಕಿಂತಲೂ ಹೆಚ್ಚು ನೆಲಹಂತದ ಸಮಾಧಿಗಳಿವೆ.[೨೫] ಬಹುತೇಕ ಸಮಾಧಿಗಳು ಹಾಳಾಗಿದ್ದು, ಅದರಲ್ಲಿ ಒಂದು ಮಾತ್ರ ಸುಸ್ಥಿತಿಯಲ್ಲಿದೆ. ಇದು ೫.೬ ಅಡಿ ಉದ್ದ, ೨.೯ ಅಡಿ ಅಗಲವಾಗಿದೆ. ಇದನ್ನು ನಾಲ್ಕು ಚಪ್ಪಡಿಯನ್ನು ಬಳಸಿ ನಿರ್ಮಿಸಲಾಗಿದೆ. ಆದರೆ ಸದ್ಯ ಮೂರು ಕಲ್ಲುಗಳು ಮಾತ್ರ ಉಳಿದಿವೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಈ ಪ್ರದೇಶವು ಬೃಹತ್ ಶಿಲಾಯುಗದ ಸ್ಮಶಾನ ನೆಲೆಯಾಗಿತ್ತು ಎಂಬುದರಲ್ಲಿ ಯಾವ ಅನುಮಾನಗಳಿಲ್ಲವೆಂದೇ ಹೇಳಬಹುದು.

### ಕಲ್ಲಪ್ಪನ ಕ್ಯಾಂಪ್

ಗಂಗಾವತಿಯಿಂದ ನೈರುತ್ಯಕ್ಕೆ ಸುಮಾರು ೬ ಕಿ.ಮೀ ದೂರದಲ್ಲಿ ಕಲ್ಲಪ್ಪನ ಕ್ಯಾಂಪ್ ಎಂಬ ಹೆಸರಿನ ವಸತಿ ಪ್ರದೇಶವಿದೆ. ಈ ವಸತಿ ಗ್ರಾಮಕ್ಕೆ ಹೊಂದಿಕೊಂಡಂತೆ ಪಶ್ಚಿಮ ದಿಕ್ಕಿನಲ್ಲಿ ಸಮಾಧಿ ನೆಲೆಯಿದೆ. ಸದ್ಯ ಇಲ್ಲಿಯ ಸಮಾಧಿಗಳನ್ನು ಸಂಪೂರ್ಣವಾಗಿ ನಾಶಗೊಳಿಸಿದ್ದು, ಆ ಜಾಗದಲ್ಲಿ ಉಳುಮೆ ಮಾಡಲಾಗುತ್ತದೆ. ಈ ನೆಲೆಯಲ್ಲಿ ಕೆಂಪು–ಕಪ್ಪು ಬಣ್ಣದ ಮಡಕೆಯ(ಬಿ.ಆರ್.ಡಬ್ಲ್ಯೂ) ಅವಶೇಷಗಳು ದೊರೆಯುತ್ತವೆ. ಹಾಗೂ ಇದೇ ಗ್ರಾಮದಲ್ಲಿ ಒಂದು ಮಾನವಾಕೃತಿ ಶಿಲೆ ಅಥವಾ ಕಲ್ಗೊಂಬೆ (Anthropomarphic) ಕಂಡುಬಂದಿದೆ.[೨೬] ಹಿಂದಣ ಕಾಲದ ಈ ಪ್ರದೇಶದಲ್ಲಿ ಹಲವಾರು ಕಲ್ಗೊಂಬೆಗಳಿದ್ದು, ಅವನೆಲ್ಲಾ ಒಡೆದು ಹಾಕಲಾಗಿದೆ ಎಂಬ ಮಾಹಿತಿಯನ್ನು ಸ್ಥಳೀಯರು ನೀಡುತ್ತಾರೆ. ಭಾಗಶಃ ಉಳಿದಿರುವ ಒಂದು ಕಲ್ಗೊಂಬೆಯನ್ನು ಬನ್ನಿ ಮರದ ಕೆಳಗಿಟ್ಟು ಪೂಜಿಸಲಾಗುತ್ತದೆ. ಎರಡು ಕೈಗಳು ಹಾಗೂ ಮುಂಡದಲ್ಲಿರುವ ಕಟಿಯ ಕೆಳಭಾಗ ತುಂಡಾಗಿರುವ ಈ ಕಲ್ಲುಗೊಂಬೆಯಲ್ಲಿ ತಲೆ, ಕತ್ತು, ಎರಡು ಭುಜಗಳು ಎದೆಯಿಂದ ಕಟಿಯವರೆಗೆ ಮಾತ್ರ ಉಳಿದಿವೆ. ಉಳಿದ ಭಾಗದ

ಕಲ್ಲುಗೊಂಬೆಯ ಎತ್ತರ ೧ ಮೀ, ಇದ್ದರೆ ಕಟಿಯ ಭಾಗ ೦.೨೯ ಮೀ. ಅಗಲವಾಗಿದೆ. ಕತ್ತು, ಭುಜಗಳಿದ್ದು ಎರಡೂ ಕೈಗಳನ್ನು ಭುಜದಿಂದ ವಾರೆಯಾಗಿ ಕೆಳಕ್ಕೆ ಚಾಚಿದಂತೆ ಚಿತ್ರಿಸಲಾಗಿದೆ. ಬೃಹತ್ ಶಿಲಾಯುಗದ ಜನರು ಮೊದಲು ಶವವನ್ನು ಸುಟ್ಟು ಇಲ್ಲವೇ ಹೂಳಿ ಅದರ ಅಸ್ಥಿ ಅವಶೇಷಗಳನ್ನು ಒಂದು ಪಾತ್ರೆಯಲ್ಲಿಟ್ಟು ಅದನ್ನು ನೆಲದಲ್ಲಿ ಹೂಳುತ್ತಿದ್ದರು. ಮತ್ತು ಆ ಸಮಾಧಿಯ ಮೇಲೆ ಸತ್ತ ಮನುಷ್ಯನ ಸಂಕೇತವಾಗಿ ಕಲ್ಲಿನ ಗೊಂಬೆಗಳನ್ನು ನಿರ್ಮಿಸುತ್ತಿದ್ದರು ಇಂಥ ನೆನಪುಗಳಿಗಾಗಿ ಈ ರೀತಿಯ ಕಲ್ಲುಗಳನ್ನು ನಿರ್ಮಿಸಲಾಗಿದೆಂಬುದನ್ನು ಅಭಿಪ್ರಾಯಿಸಬಹುದು.

**ಗಡ್ಡಿ**

ಗಂಗಾವತಿ ತಾಲ್ಲೂಕು ಕೇಂದ್ರದಿಂದ ೧೨.ಕಿ.ಮೀ ದೂರದಲ್ಲಿ ಗಡ್ಡಿ ಗ್ರಾಮವಿದೆ. ಈ ಗ್ರಾಮದಿಂದ ನೈರುತ್ಯ ದಿಕ್ಕಿನಲ್ಲಿರುವ ಬೆಟ್ಟದ ಮೇಲಿನ ಬಯಲಿನಲ್ಲಿ ಬೃಹತ್ ಶಿಲಾಸಮಾಧಿ ನೆಲೆಯಿದೆ. ಇಲ್ಲಿ ಸುಮಾರು ೧೫ ಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿರುವ ಕಂಡಿಕೋಣೆಯ ಮಾದರಿ ಸಮಾಧಿಗಳು ಕಂಡುಬಂದಿವೆ.[೨೭] ಬಹುತೇಕ ಇಲ್ಲಿದ್ದ ಸಮಾಧಿಗಳು ಹಾಳಾಗಿದ್ದು, ಅವಶೇಷಗಳು ಸುತ್ತೆಲ್ಲಾ ಹರಡಿವೆ. ಈ ಸಮಾಧಿಗಳ ಬಗೆಗೆ ಹೆಚ್ಚಿಗೆ ತಿಳಿದುಬರುವುದಿಲ್ಲ. ಆದರೆ ಇದೇ ಸ್ಥಳದಿಂದ ೨.ಕಿ.ಮೀ ದೂರದಲ್ಲಿ 'ಮೋರೆಯರ ಗುಡ್ಡ'ವೆಂಬ ಸ್ಥಳದಲ್ಲಿ ಮತ್ತೊಂದು ನೆಲೆಯಿದೆ. ಈ ನೆಲೆಯು ಬೆಟ್ಟದ ಮೇಲೆ ಸಮತಟ್ಟಾಗಿರುವ ಬಯಲಿನಲ್ಲಿದೆ. ಈ ಹಿಂದೆ ಇಲ್ಲಿ ಹಲವಾರು ಸಮಾಧಿಗಳಿದ್ದವೆಂಬುದು ಚದುರಿ ಬಿದ್ದಿರುವ ಅವಶೇಷಗಳಿಂದ ತಿಳಿಯಬಹುದು. ಪ್ರಸ್ತುತ ಒಂದು ಶಿಲಾಕೋಣೆ(ಕಲ್ಮನೆ) ಮಾತ್ರ ಭಾಗಶಃ ಉಳಿದುಕೊಂಡಿದೆ. ಇದು ೭ ಅಡಿ ಎತ್ತರವಾಗಿದ್ದು, ೬.೩ ಅಡಿ, ಉದ್ದ ಹಾಗೂ ೫.೯ ಅಡಿ ಅಗಲವಿದೆ. ಇದರ ನಾಲ್ಕು ಬದಿಯ ಗೋಡೆ ಕಲ್ಲುಗಳಲ್ಲಿ ಒಂದು ಬದಿಯ ಕಲ್ಲನ್ನು ಕಿತ್ತುಹಾಕಲಾಗಿದೆ. ಉಳಿದ ಮೂರು ಬದಿ ಕಲ್ಲುಗಳ ಮೇಲೆ ವೃತ್ತಾಕಾರದ ಕಲ್ಲುಚಪ್ಪಡಿಯಿದೆ. ಈ ಶಿಲಾಸಮಾಧಿಯಿಂದ ಸ್ವಲ್ಪ ದೂರದಲ್ಲಿ ಮೊತ್ತೊಂದು ಆಯಾತಾಕಾರದ ಕಲ್ಲುಗ್ಗಪ್ಪೆ ಸಮಾಧಿ ಇದೆ. ಅದು ೧೨ ಅಡಿ ಉದ್ದ, ೮ ಅಡಿ ಅಗಲವಿದ್ದು, ದುಂಡನೆಯ ಕಲ್ಲುಗಳಿಂದ ನಿರ್ಮಿಸಲಾಗಿದೆ. ಮೇಲ್ನೋಟಕ್ಕೆ ಇದು ಕಲ್ಲುಗ್ಗುಪ್ಪೆಯಂತೆ ಕಂಡರೂ ಪಶ್ಚಿಮದ ದಿಕ್ಕಿಗೆ ಪ್ರವೇಶದ್ವಾರವಿರುವುದು ವಿಶೇಷವೆನಿಸಿದೆ. ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಬಗೆಯ ಶಿಲಾ ಸಮಾಧಿಯು ಬೇರೆಲ್ಲೂ ಕಂಡುಬಂದಿಲ್ಲ ಎಂಬುದು ವಿಶೇಷವಾಗಿ ಗಮನಿಸಬಹುದಾದ ಸಂಗತಿಯಾಗಿದೆ.

**ಚಿಕ್ಕಬೆಣಕಲ್ಲು**

ಗಂಗಾವತಿ ತಾಲ್ಲೂಕು ಕೇಂದ್ರದಿಂದ ೧೩.ಕಿ.ಮೀ ದೂರದಲ್ಲಿ ಚಿಕ್ಕಬೆಣಕಲ್ಲು ಇದೆ. ಈ ಗ್ರಾಮದ ಮಳೆಯಮ್ಮನ ಊಟಿ ಎಂಬ ಸ್ಥಳದಲ್ಲಿ ಹಲವಾರು ಬೃಹತ್ ಶಿಲಾಯುಗದ ಶಿಲಾಸಮಾಧಿಗಳಿವೆ.[೨೮] ಅವು ಕಂಡಿಕೋಣೆ ಮತ್ತು ನೆಲಕೋಣೆ ಸಮಾಧಿ ಪ್ರಕಾರದವು. ಇವುಗಳು ಬಹುಮಟ್ಟಿಗೆ ನಾಶವಾಗಿದ್ದು ಅವಶೇಷಗಳು ಮಾತ್ರ ಉಳಿದಿವೆ. ಇಲ್ಲಿಯ ಕಲ್ಲಾಸರೆಯೊಂದರಲ್ಲಿ ಬೃಹತ್ ಗಾತ್ರದ ಕಾಡುಕೋಣದ

ಚಿತ್ರಣವಿದೆ. ಇಂತಹ ಕಾಡುಕೋಣದ ಚಿತ್ರಣವೂ ತೆಕ್ಕಲಕೋಟೆಯ ಕರಿಮಟ್ಟಿಗುಡ್ಡದಲ್ಲಿ ಕಾಣಬಹುದು. ಅಲ್ಲದೇ ಇಲ್ಲಿಂದ ಯಡರಹಳ್ಳಿಗೆ ಹೋಗುವ ಹಾದಿಯಲ್ಲಿ ಬಂಡೆಕುಂಟೆ ಕರಿಯಮ್ಮ ಮತ್ತು ಆಂಜನೇಯ ದೇವಾಲಯದ ಬಳಿ ಕಂಡಿಕೋಣೆ ಸಮಾಧಿಗಳು, ಆಯತಾಕಾರದ ನೆಲಕೋಣೆ ಸಮಾಧಿಗಳಿವೆ. ಕಂಡಿಕೋಣೆ ಸಮಾಧಿಗಳು ೫ ಅಡಿ ಉದ್ದ ಮತ್ತು ೫ ಅಡಿ ಅಗಲ ವಿಸ್ತೀರ್ಣ ಹೊಂದಿವೆ. ಪೂರ್ವದ ದಿಕ್ಕಿಗೆ ಇರುವ ಚಪ್ಪಡಿಕಲ್ಲಿನಲ್ಲಿ ೪೦ ಸೆಂ.ಮೀ ವ್ಯಾಸದ ಕಿಂಡಿಯಿದೆ. ಸಮಾಧಿಯು ೫ ಅಡಿ ಆಳವಾಗಿದ್ದು ಒಂದು ತೊಟ್ಟಿಯಂತೆ ಕಾಣುತ್ತದೆ. ಅಕ್ಕಪಕ್ಕದಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ಸಮಾಧಿಯ ಕಲ್ಲಿನ ಅವಶೇಷಗಳಿವೆ. ಇಲ್ಲಿ ನಲವತ್ತಕ್ಕೂ ಹೆಚ್ಚು ಶಿಲಾಸಮಾಧಿಗಳು ಕಂಡುಬಂದಿದ್ದು ಅವುಗಳ ಸಮೀಪದಲ್ಲಿ ಕಪ್ಪು-ಕೆಂಪು ವರ್ಣದ ಮಡಕೆಗಳ ಭಾಗಗಳಿವೆ. ಚಿಕ್ಕಬೆಣಕಲ್ಲುನಲ್ಲಿ ದೊರಕಿರುವ ಈ ಸಂಸ್ಕೃತಿಯ ಕುರುಹುಗಳು ಶವಸಂಸ್ಕಾರಕ್ಕೆ ಸಂಬಂಧಿಸಿರುವುದರಿಂದ ಇದು 'ಸ್ಮಶಾನ ನೆಲೆ' ಎಂದು ಗುರುತಿಸಬಹುದಾಗಿದೆ. ಈ ನೆಲೆಯ ಸಮೀಪದಲ್ಲಿರುವ ಯಡರಹಳ್ಳಿಯಲ್ಲಿಯೂ ಸಹ ಇಂತಹ ಅವಶೇಷಗಳಿದ್ದವೆಂದು ಅವುಗಳನ್ನು ಸಂಪೂರ್ಣ ಹಾಳುಮಾಡಿ ಸಾಗುವಳಿ ಮಾಡಲಾಗುತ್ತದೆ ಎಂಬ ಮಾಹಿತಿಯನ್ನು ಸ್ಥಳೀಯರು ನೀಡಿದರು.

**ಹಳೇಬಸವಾಪಟ್ಟಣ**

ಗಂಗಾವತಿ ತಾಲ್ಲೂಕು ಕೇಂದ್ರದಿಂದ ೫.೮ಕಿ.ಮೀ ದೂರದಲ್ಲಿ ಹಳೇಬಸವಾಪಟ್ಟಣವಿದೆ. ಈ ಗ್ರಾಮದ ಹಿರೇಕಣಿವೆ ಆಂಜನೇಯ ದೇವಾಲಯದ ಪೂರ್ವಬದಿಯಲ್ಲಿ ಹಳೇಮಟ್ಟಿಗುಡ್ಡವಿದೆ. ಈ ಗುಡ್ಡದ ಕೆಳಭಾಗ ಹಾಗೂ ಮೇಲ್ಭಾಗದಲ್ಲಿ ವಿವಿಧ ಶಿಲಾಸಮಾಧಿಗಳು, ಕಲ್ಲುಗುಪ್ಪೆಗಳು, ನೆಲಸಮಾಧಿಗಳಿವೆ. ಇವುಗಳಲ್ಲಿ ಆಯತಾಕಾರದಲ್ಲಿರುವ ನೆಲಸಮಾಧಿಗಳ ರಚನೆ ವಿಶೇಷವಾಗಿದೆ. ೬ ಅಡಿ ಉದ್ದ ಹಾಗೂ ೧.೨೨ ಅಡಿ ಅಗಲವಿರುವ ಸಮಾಧಿಗಳಿವೆ. ಹಾಗೂ ಈ ಬೆಟ್ಟಕ್ಕೆ ಹೊಂದಿಕೊಂಡಿರುವ ಹಳೇಮಟ್ಟಿಗುಡ್ಡದ ಮೇಲ್ತುದಿಯಲ್ಲಿ ಸುಮಾರು ೩೦ ಸಮಾಧಿಗಳಿವೆ. ಆದರೆ ಬಹುಮಟ್ಟಿಗೆ ಅವೆಲ್ಲವೂ ನಾಶವಾಗಿದ್ದು, ಅವಶೇಷಗಳು ಮಾತ್ರ ಉಳಿದಿವೆ. ಇವೆಲ್ಲಾ ಕಂಡಿಸಹಿತ ಶಿಲಾವೃತ್ತ ಸಮಾಧಿಗಳು. ಮಧ್ಯಮ ಗಾತ್ರದ ಕಲ್ಲುಗುಂಡುಗಳನ್ನು ಒಂದು ಕಡೆ ಪ್ರವೇಶಕ್ಕೆ ಅವಕಾಶವನ್ನು ಬಿಟ್ಟು ವೃತ್ತಾಕಾರದಲ್ಲಿ ಜೋಡಿಸಲಾಗುತ್ತಿತ್ತು. ಈ ಶಿಲಾವೃತ್ತವನ್ನು ಮುಚ್ಚುವ ಹಾಗೆ ಮೇಲೆ ವೃತ್ತಾಕಾರದ ದೊಡ್ಡ ಕಲ್ಲುಚಪ್ಪಡಿಗಳನ್ನು ಇರಿಸಲಾಗಿದೆ. ಬಿಟ್ಟಿರುವ ಹಾದಿಯ ಮೂಲಕ ಇದರಲ್ಲಿ ಶವವನ್ನು ಇರುಸುತ್ತಿದ್ದರು. ಅದರ ಮಾಂಸವನ್ನು ಪ್ರಾಣಿ ಪಕ್ಷಿಗಳು ತಿಂದ ಮೇಲೆ ಉಳಿದ ಅಸ್ಥಿ ಅವಶೇಷಗಳನ್ನು ಸಂಗ್ರಹಿಸಿ ಅವುಗಳನ್ನು ದೊಡ್ಡ ಮಡಕೆಗಳಲ್ಲಿಟ್ಟು ಅವುಗಳ ಮೇಲೆ ಶಿಲಾಕೋಣೆ ಸಮಾಧಿಗಳನ್ನು ನಿರ್ಮಿಸುತ್ತಿದ್ದರೆಂಬ ಅಭಿಪ್ರಾಯವಿದೆ.[೨೯]

**ತಿಪ್ಪನಾಳ**

ಕೊಪ್ಪಳ ಜಿಲ್ಲೆಯ ಬೃಹತ್ ಶಿಲಾಯುಗದ ನೆಲೆಗಳಲ್ಲಿ ಜೀರಾಳ ನೆಲೆಯು ಒಂದು. ಇದು ಹಿರೇಬೆಣಕಲ್ಲಿನಿಂದ ಈಶಾನ್ಯ ದಿಕ್ಕಿಗೆ ೪೯ ಕಿ.ಮೀ ದೂರದಲ್ಲಿದೆ. ನೂತನ ಶಿಲಾಯುಗದ ನೆಲೆಯ

ಬದಿಯಲ್ಲಿಯೇ ಹೊನ್ನೂರುಸಾಬ್ ಅವರ ಹೊಲದಲ್ಲಿ ಅಗೆದು ಹಾಕಲ್ಪಟ್ಟ ಸುಮಾರು ಹತ್ತು ಬೃಹತ್ ಶಿಲಾ ದುಂಡು ಕಟ್ಟೆ ಸಮಾಧಿಗಳು, ಹೊಳಪಾದ ಕಪ್ಪು ಕೆಂಪು ಬಣ್ಣದ ಮಡಿಕೆ ಚೂರುಗಳು, ಕಬ್ಬಿಣ ವಸ್ತುಗಳ ಚೂರುಗಳು ಹಾಗೂ ಮಾನವನ ಅಸ್ತಿಚೂರುಗಳನ್ನು ಅ.ಸುಂದರ ಅವರು ಶೋಧಿಸಿದರು.[೩೦] ಇಲ್ಲಿನ ಸಮಾಧಿಗಳು ಬೃಹತ್ ಶಿಲಾಯುಗದ ಜನರ ಶವಸಂಸ್ಕಾರದ ವಿವರಗಳನ್ನು ನೀಡುತ್ತವೆಯೇ ಹೊರತು ಅಂದಿನ ಜನರ ಲೌಖಿಕ ಜೀವನದ ವಾಸ್ತವ್ಯದ ಕುರುಹುಗಳಾಗಿ ಕಂಡುಬಂದಿಲ್ಲವಾದ್ದರಿಂದ ಈ ನೆಲೆಯನ್ನು ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂದು ಕರೆಯಲಾಗಿದೆ.

**ಗುಡೂರು**

ಕೊಪ್ಪಳ ಜಿಲ್ಲೆಯ ಬೃಹತ್ ಶಿಲಾಯುಗದ ನೆಲೆಗಳಲ್ಲಿ ಗುಡೂರು ನೆಲೆಯು ಒಂದು. ಇದು ಹಿರೇಬೆಣಕಲ್ಲು ನೆಲೆಯಿಂದ ವಾಯ್ಯುವ್ಯ ದಿಕ್ಕಿಗೆ ೭ ಕಿ.ಮೀ ದೂರದಲ್ಲಿದೆ. ಅ.ಸುಂದರ ಅವರು ಗುಡಿಹೊಲ ಎಂಬಲ್ಲಿ ಕಂಡುಬಂದ ಪ್ರಾಕ್ತನಾವಶೇಷಗಳನ್ನು ಗಮನಿಸಿ ಪ್ರಾಯಶಃ ಹಿಂದೆ ಅಲ್ಲಿ ಶಿಲಾವೃತ್ತಗಳಿದ್ದವೆಂದು ಅಭಿಪ್ರಾಯಿಸುತ್ತಾರೆ. ಅಲ್ಲದೇ ಈಗ ಅಲ್ಲಲ್ಲಿ ಕಪ್ಪು-ಕೆಂಪು ಬಣ್ಣದ ಮಡಿಕೆ ಚೂರುಗಳು ಮಾತ್ರ ದೊರಕುತ್ತವೆ ಎಂಬ ಅಭಿಪ್ರಾಯವನ್ನು ತಮ್ಮ ಸಂಶೋಧನ ಲೇಖನದಲ್ಲಿ ದಾಖಲಿಸಿದ್ದಾರೆ. ಇಲ್ಲಿನ ಶಿಲಾಸಮಾಧಿಗಳು ಕ್ರಮವಾಗಿ ಮಸ್ಕಿ, ಬ್ರಹ್ಮಗಿರಿ, ಉತ್ಖನನಗಳಲ್ಲಿ ಕಂಡುಬರುವ ಬೃಹತ್ ಶಿಲಾಸಮಾಧಿಗಳನ್ನು ಹೋಲುತ್ತವೆ ಎಂದಿದ್ದಾರೆ.[೩೧] ಇವು ಬೃಹತ್ ಶಿಲಾಯುಗದ ಜನರ ಶವಸಂಸ್ಕಾರದ ಕುರುಹುಗಳಾಗಿದ್ದು, ಅಂದಿನ ಜನರ ವಾಸ್ತವ್ಯದ ಕುರುಹುಗಳು ಕಂಡುಬಂದಿಲ್ಲವಾದ್ದರಿಂದ ಈ ನೆಲೆಯನ್ನು ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂದು ಗುರುತಿಸಲಾಗಿದೆ.

**ಬಸರಿಹಾಳ**

ಕೊಪ್ಪಳ ಜಿಲ್ಲೆಯ ಬೃಹತ್ ಶಿಲಾಯುಗದ ನೆಲೆಗಳಲ್ಲಿ ಬಸರಿಹಾಳ ನೆಲೆಯು ಒಂದು. ಇದು ಹಿರೇಬೆಣಕಲ್ಲು ನೆಲೆಯಿಂದ ವಾಯುವ್ಯ ದಿಕ್ಕಿಗೆ ೪೬ ಕಿ.ಮೀ ದೂರದಲ್ಲಿದೆ. ಬಸರಿಹಾಳ ಗ್ರಾಮದಿಂದ ೧ ಕಿ.ಮೀ ಈಶಾನ್ಯ ದಿಕ್ಕಿಗೆ ಅಳಿದುಳಿದ ಮೂರು ನಾಲ್ಕು ದುಂಡು ಕಟ್ಟೆಗಳು ಅಥವಾ ಶಿಲಾವೃತ್ತಗಳು, ಸಣ್ಣ ತುಂಡುಕಲ್ಲುಗಳ ರಾಶಿಕಟ್ಟೆಯನ್ನು(ಕೈರನ್ ಸ್ಟೋನ್ ಸರ್ಕಲ್ಸ್) ಪುರಾತತ್ವಜ್ಞರಾದ ಅ.ಸುಂದರ ಅವರು ಶೋಧಿಸಿದರು.[೩೨]ಆದರೆ ಈ ಸಂಸ್ಕೃತಿಯ ವಸತಿ ಅವಶೇಷಗಳು ಕಂಡುಬಂದಿಲ್ಲವಾದ್ದರಿಂದ ಇದು ಕೂಡ ಈ ಸಂಸ್ಕೃತಿಯ ಸ್ಮಶಾನ ನೆಲೆಯೆಂದೇ ಗುರುತಿಸಲಾಗಿದೆ.

**ಜೀರಾಳ್**

ಕೊಪ್ಪಳ ಜಿಲ್ಲೆಯ ಬೃಹತ್ ಶಿಲಾಯುಗದ ನೆಲೆಗಳಲ್ಲಿ ಜೀರಾಳ್ ನೆಲೆಯು ಒಂದು. ಇದು ಹಿರೇಬೆಣಕಲ್ಲು ನೆಲೆಯಿಂದ ೫೩ ಕಿ.ಮೀ ದೂರದಲ್ಲಿದೆ. ಜೀರಾಳ್ ಗ್ರಾಮದಿಂದ ದಕ್ಷಿಣಕ್ಕೆ ಸುಮಾರು ಅರ್ಧ ಕಿ.ಮೀ. ದೂರದಲ್ಲಿ ಕಲ್ಲುಗುಡಿಯಿದೆ. ಈ ಕಲ್ಲುಗುಡಿ ಸಮೀಪದಲ್ಲಿ ಅ.ಸುಂದರ ಅವರು ಸುಮಾರು ಹತ್ತು ಬೃಹತ್ ಶಿಲಾಶವಕುಣಿಗಳು (Pit circle) ಕಪ್ಪು-ಕೆಂಪು ಬಣ್ಣದ ಮಡಕೆ ಚೂರುಗಳು, ಅಸ್ತಿ

ಅವಶೇಷಗಳು ಅಲ್ಲಲ್ಲಿ ಚಲ್ಲಾಪಿಲ್ಲಿಯಾಗಿ ಬಿದ್ದಿರುವುದನ್ನು ಗುರುತಿಸಿದರು.[೩೩] ಶವಕುಣಿಗಳ ಸಮೀಪದಲ್ಲಿ ಒಂದು ಹಳ್ಳ ಇದ್ದು, ಅದು ಅಂದಿನ ಕಾಲದ ಜನರ ಜೀವನಾಡಿ ಆಗಿತ್ತೆಂಬ ಅಭಿಪ್ರಾಯವನ್ನು ಮಂಡಿಸಿದರು. ಒಟ್ಟಿನಲ್ಲಿ ಜೀರಾಳ್ ನೆಲೆಯಲ್ಲಿ ಲಭ್ಯವಾಗಿರುವ ಪ್ರಾಕ್ತನ ಅವಶೇಷಗಳಿಂದ ಇದು ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂದು ಕರೆಯಲಾಗಿದೆ. ಪ್ರಸ್ತುತ ಈ ನೆಲೆಯಲ್ಲಿದ್ದ ಅವಶೇಷಗಳು ಸಂಪೂರ್ಣವಾಗಿ ಹಾಳಗಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಲಾಗಿದೆ.

**ಬಂಡರಾಳ**

ಹಿರೇಬೆಣಕಲ್ಲು ನೆಲೆಯಿಂದ ೩ ಕಿ.ಮೀ ದೂರದಲ್ಲಿ ಬಂಡರಾಳ ಗ್ರಾಮವಿದೆ. ಬಂಡರಾಳದ ದಕ್ಷಿಣಕ್ಕಿರುವ ಕಲ್ಲುಗುಡ್ಡಗಳಲ್ಲಿ ಸುಮಾರು ಇಪ್ಪತ್ತು ಕಂಡಿಕೋಣೆ ಸಮಾಧಿಗಳು(Porthold Chembers) ಲಭ್ಯವಾಗಿವೆ.[೩೪] ಸ್ಥಳೀಯರು ಇವುಗಳನ್ನು 'ಮೋರೆಯರ ತಟ್ಟೆಗಳು' ಎಂದು ಕರೆಯುತ್ತಾರೆ. ಈ ಸಮಾಧಿಗಳು ಬೃಹತ್ ಶಿಲಾಯುಗದ ಜನರ ಶವಸಂಸ್ಕಾರದ ಕುರುಹುಗಳಾಗಿದ್ದು, ಆದರೆ ಈ ನೆಲೆಯಲ್ಲಿ ಅಂದಿನ ಜನರ ವಾಸ್ತವ್ಯದ ಕುರುಹುಗಳು ದೊರೆತಿಲ್ಲ. ಹಾಗಾಗಿ ಈ ನೆಲೆಯನ್ನು ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂದೇ ತಿಳಿಯಬೇಕಾಗುತ್ತದೆ.

**ಎಮ್ಮೆಗುಡ್ಡ**

ಎಮ್ಮೆಗುಡ್ಡವು ಗಂಗಾವತಿ-ಕೊಪ್ಪಳ ರಸ್ತೆಯಲ್ಲಿ ೧೫ ಕಿ.ಮೀ ದೂರದಲ್ಲಿದೆ. ಈ ನೆಲೆಯಲ್ಲಿ ಪ್ರಥಮ ಬಾರಿಗೆ ಮೇಡೋಸ್ ಟೇಲರ್ ಅವರು ಬೃಹತ್ ಶಿಲಾಸಮಾಧಿಗಳನ್ನು ಶೋಧಿಸಿದರು.[೩೫] ಈ ಶಿಲಾಸಮಾಧಿಗಳನ್ನು ಸ್ಥಳೀಯರು ಮೋರೆಯರ ಮನೆಗಳೆಂದು ಕರೆಯುತ್ತಾರೆ. ಶಿಲಾಸಮಾಧಿಗಳನ್ನು ಬೆಟ್ಟದ ಇಳಿ ಜಾರಿನಲ್ಲಿದ್ದ ಗ್ರಾನೈಟ್ ಶಿಲೆಗಳಿಂದ ನಿರ್ಮಿಸಲಾಗಿದೆ. ಒಂದು ಸಮಾಧಿಯ ಅಳತೆಯು ೯ ಅಡಿ ಉದ್ದ, ೬.೫ ಅಡಿ ಎತ್ತರವನ್ನು ಹೊಂದಿದ್ದು, ಇದಕ್ಕೆ ಬಳಸಿರುವ ಕಲ್ಲು ೯ ಅಡಿ ಉದ್ದ, ೭ ಅಡಿ ಅಗಲವಾಗಿವೆ. ಮತ್ತೊಂದು ನೆಲಕೋಣೆ ಸಮಾಧಿಯ ಅಳತೆಯು ೮.೫ ಅಡಿ ಉದ್ದ, ೬.೫ ಅಡಿ ಅಗಲ, ಮತ್ತು ೮.೫ ಅಡಿ ಎತ್ತರವಾಗಿದೆ. ಇಲ್ಲಿನ ಎರಡು ಅಥವಾ ಮೂರು ಚೇಂಬರ್‌ಗಳ ಮೇಲೆ ಕ್ಯಾಪ್‌ಸ್ಟೋನ್‌ಗಳನ್ನು ಮತ್ತು ಸುತ್ತಲೂ ವೃತ್ತಾಕಾರದಲ್ಲಿ ಕಲ್ಲುಗಳನ್ನು ಇಡಲಾಗಿದೆ. ಇವು ೨.೫ ಅಡಿ ಎತ್ತರ, ಕೊನೆಯಲ್ಲಿ ೪ ರಿಂದ ೫ ಅಡಿ ಅಂತರವಿದ್ದು ಅವುಗಳಲ್ಲಿ ಯಾವದೇ ಅವಶೇಷಗಳಿಲ್ಲ. ಈ ಪ್ರದೇಶದ ಪಶ್ಚಿಮಕ್ಕೆ ಸ್ವಲ್ಪ ದೂರದಲ್ಲಿ Dimunitive cist ಇದ್ದು ವಿಭಿನ್ನ ಪ್ರಕಾರದ್ದಾಗಿದೆ. ಸಣ್ಣಕಲ್ಲಿನ ಚಪ್ಪಡಿಗಳನ್ನು ಬಳಸಿ ನಿರ್ಮಿಸಲಾಗಿದೆ. ಮತ್ತು ವೃತ್ತಾಕಾರವಾಗಿ ದಿಬ್ಬದ ಸುತ್ತಲೂ ಕಲ್ಲುಚಪ್ಪಡಿಗಳಿಂದ ಜೋಡಿಸಲಾಗಿದೆ. ಅವು ಸಣ್ಣ ಕೋಣೆಗಳ ಚಪ್ಪಡಿಗಳನ್ನು ಒಳಗೊಂಡಿವೆ. ಕೆಲವು ೧೮ ಇಂಚುಗಳಷ್ಟು ಚೌಕಕಾರದ ಕಂಡಿಗಳನ್ನು(Port-hole) ಹೊಂದಿವೆ. ಮೂರು ಭಾಗಗಳನ್ನು ಹೊಂದಿರುವ ಮತ್ತೊಂದು (Triple tomb) ಸಮಾಧಿ ಇದ್ದು, ಅದು ೭.ಅಡಿ ಉದ್ದ, ೩.ಅಡಿ ಅಗಲ ಅಳತೆಯನ್ನು ಹೊಂದಿರುವುದು. ಇದೇ ಸ್ಥಳದಲ್ಲಿರುವ ಇನ್ನೊಂದು ನೆಲಕೋಣೆ(cist)

ಸಮಾಧಿಯು ೫.೫ ಅಡಿ ಉದ್ದ ೨.ಅಡಿ ಅಗಲ ಅಳತೆಯನ್ನು ಒಳಗೊಂಡಿರುವುದನ್ನು ಗಮನಿಸಬಹುದು. ಮೂರನೆಯ ಸಮಾಧಿಯು ೩ ಅಡಿ ಉದ್ದ, ೧.ಅಡಿ ಅಗಲವಿದೆ. ನಾಲ್ಕನೆಯದು ಡಬಲ್ ಟೋಂಬ್ ಆಗಿದ್ದು ಇದು ೬.೫ ಅಡಿ ಉದ್ದ, ೨.ಅಡಿ ಅಗಲವಿದೆ. ಇಲ್ಲಿ ಬೃಹತ್ ಶಿಲಾಯುಗದ ಜನರ ವಾಸ್ತವ್ಯದ ಕುರುಹುಗಳು ಲಭ್ಯವಾಗಿಲ್ಲದಿರುವುದರಿಂದ ಇದು ಸ್ಮಶಾನ ನೆಲೆ ಎಂದು ಗುರುತಿಸಬಹುದಾಗಿದೆ.

**ಶಿವಪುರ**

ಕೊಪ್ಪಳ ತಾಲೂಕು ಮತ್ತು ಜಿಲ್ಲಾ ಕೇಂದ್ರದಿಂದ ೮ ಕಿ.ಮೀ ದೂರದಲ್ಲಿ ಶಿವಪುರ ಗ್ರಾಮವಿದೆ. ಈ ಗ್ರಾಮದಲ್ಲಿ ಶಿಲಾ-ತಾಮ್ರಯುಗ ಹಾಗೂ ಬೃಹತ್ ಶಿಲಾಯುಗ ಸಂಸ್ಕೃತಿಯ ಸಾಂಸ್ಕೃತಿಕ ಅವಶೇಷಗಳು ದೊರೆತಿವೆ. ಈ ನೆಲೆಯಿಂದ ಸುಮಾರು ೨೦.ಕಿಮೀ ದೂರದಲ್ಲಿ ಹಿರೇಬೆಣಕಲ್ಲು ನೆಲೆಯಿದೆ. ಎಫ್. ಆರ್. ಆಲ್ಚಿನ್ ಅವರು ಶಿವಪುರ ನೆಲೆಯಲ್ಲಿ ಹಾಳುಮಣ್ಣು ಮತ್ತು ಕೆಂಪು-ಕಪ್ಪು ಮಡಕೆಯ ಭಾಗಗಳು, ಬೂದಿದಿಬ್ಬ, ಇನ್ನೂರಕ್ಕೂ ಹೆಚ್ಚು ಬೃಹತ್ ಶಿಲಾಸಮಾಧಿಗಳನ್ನು ಶೋಧಿಸಿದರು.[೩೬] ಇಲ್ಲಿನ ಬೃಹತ್ ಶಿಲಾ ಸಮಾಧಿಗಳು ಎರಡು ಪ್ರಕಾರದಲ್ಲಿದ್ದು ಅವುಗಳು ಕಲ್ಲುವೃತ್ತ ಮತ್ತು ಸ್ವಸ್ತಿಕ್ ಆಕಾರದವು ಮುಖ್ಯವಾಗಿವೆ. ಇದು ಸಹ ಈ ಸಂಸ್ಕೃತಿಯ ಸ್ಮಶಾನ ನೆಲೆಯಾಗಿತ್ತು ಎಂಬ ವಿವರಗಳನ್ನು ಪ್ರಕಟಿಸಲಾಗಿದೆ.

**ಇಂದರ್ಗಿ**

ಕೊಪ್ಪಳ ಜಿಲ್ಲೆ ಮತ್ತು ತಾಲ್ಲೂಕು ಕೇಂದ್ರದಿಂದ ೮ ಕಿ.ಮೀ ದೂರದಲ್ಲಿ ಇಂದರ್ಗಿ ನೆಲೆಯಿದೆ. ಇದು ಹಿರೇಬೆಣಕಲ್ಲು ನೆಲೆಯಿಂದ ವಾಯುವ್ಯ ದಿಕ್ಕಿಗೆ ೧೨ ಕಿ.ಮೀ ದೂರದಲ್ಲಿ ಬಿಳೇಬಾವಿ ಸೀಮೆ ಮತ್ತು ಇಂದರ್ಗಿ ಸೀಮೆಯ ಗಡಿಯಲ್ಲಿ ಮೋರೆಯರ ಬಯಲು ಎಂಬ ಬೆಟ್ಟದ ತಪ್ಪಲಿನಲ್ಲಿ ನೂರಾರು ಶಿಲಾಸಮಾಧಿಗಳಿವೆ.[೩೭] ಅವುಗಳು ಮುಖ್ಯವಾಗಿ ಕಲ್ಮನೆ ಮತ್ತು ಕಲ್ಮನೆಸಹಿತ ನೆಲಕೋಣೆ (Dolmenoid cist) ಮಾದರಿಯಲ್ಲಿವೆ. ಇಲ್ಲಿನ ಒಂದು ಶಿಲಾಸಮಾಧಿಯು ಆಯತಾಕಾರದಲ್ಲಿದ್ದು ನೆಲಮಟ್ಟದಲ್ಲಿ ಕಂಡುಬರುತ್ತದೆ. ಇದರ ಅಳತೆಯು ೫.೫ ಅಡಿ ಅಗಲ, ೬.೫ ಅಡಿ ಉದ್ದ ವಿಸ್ತೀರ್ಣವನ್ನು ಹೊಂದಿದೆ. ನಾಲ್ಕು ಚಪ್ಪಡಿಕಲ್ಲುಗಳಿಂದ ರಚನೆ ಮಾಡಿರುವ ಈ ಶಿಲಾಸಮಾಧಿಯು ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿದೆ. ಈ ಸಮಾಧಿಗಳ ರಚನೆಗೆ ಬಳಸಿರುವ ಗ್ರಾನೈಟ್ ಶಿಲೆಗಳ ದಪ್ಪ ೫ ಇಂಚಿನಷ್ಟಿದೆ. ಸಮಾಧಿಯ ಪಕ್ಕದಲ್ಲಿ ಇನ್ನು ಹಲವು ಸಮಾಧಿಗಳಿದ್ದು, ಅವುಗಳ ಬಂಡೆಗಳನ್ನು ಕಿತ್ತು ಹಾಳುಮಾಡಲಾಗಿದ್ದರಿಂದ್ದ ಅವುಗಳ ಅಳತೆ ಸಿಗುವುದಿಲ್ಲ. ಇಲ್ಲಿ ಸಾಕಷ್ಟು ಮೋರೆಯರ ಮನೆಗಳಿದ್ದವು ಹಾಗೂ ಅವುಗಳನ್ನು ದೊಡ್ಡ ದೊಡ್ಡ ಬಂಡೆಗಳಿಂದ ರಚಿಸಲಾಗಿತ್ತು ಎಂಬುದನ್ನು ತಿಳಿಯಬಹುದಾಗಿದೆ. ಆದರೆ ಪ್ರಸ್ತುತ ದಿನಗಳಲ್ಲಿ ಅವುಗಳನ್ನು ಮನೆಗಳ ನಿರ್ಮಾಣಕ್ಕಾಗಿ, ಕೃಷಿ ಜಮೀನುಗಳಿಗಾಗಿ ಕಿತ್ತು ಹಾಳುಮಾಡಲಾಗಿದೆ ಎಂಬ ಮಾಹಿತಿಗಳನ್ನು ಸ್ಥಳೀಯರು ನೀಡುತ್ತಾರೆ.

**ಗವಿಮಠ**

ಕೊಪ್ಪಳ ನಗರದ ಪಶ್ಚಿಮದಿಕ್ಕಿನತ್ತ ಎತ್ತರವಾದ ಗುಡ್ಡಗಳ ಸಾಲಿದೆ. ಇದೇ ಗುಡ್ಡದ ಸಾಲಿನಲ್ಲಿ 'ಪಾಲ್ಕಿಗುಂಡು' ಅಥವಾ 'ಪಲ್ಲಕ್ಕಿ ಗುಂಡು' ಎಂಬ ಹೆಸರಿನಿಂದ ಕರೆಯುವ ಸ್ಥಳದಲ್ಲಿ ಅಶೋಕನ ಶಾಸನವಿದೆ. ಈ ಶಾಸನವಿರುವ ಸ್ಥಳದ ಪೂರ್ವದಲ್ಲಿ ಗವಿಮಠವಿದೆ. ಈ ಮಠದ ಪಶ್ಚಿಮ ದಿಕ್ಕಿನಲ್ಲಿ ಒಂದು ಗುಹೆ ಇದೆ. ಗವಿಮಠದ ಹಿಂಭಾಗದಲ್ಲಿ ಗುಡ್ಡಪ್ರದೇಶವಿದ್ದು, ಅಲ್ಲೊಂದು ವಿಶಾಲವಾದ ಕೊಡೆಯಾಕಾರದ ಬಂಡೆಗಲ್ಲಿನ ಮೇಲೆ ಅಶೋಕನ ಮತ್ತೊಂದು ಶಾಸನವಿದೆ. ಈ ಗವಿಯ ಎದುರು ಅರ್ಧ ಕಿ.ಮೀ ಅಂತರದಲ್ಲಿ ಮತ್ತೆರಡು ಗವಿಗಳಿದ್ದು ಅವುಗಳಲ್ಲಿ ಪ್ರಾಚೀನ ಕಾಲಕ್ಕೆ ಸೇರಿದ ಚಿತ್ರಗಳನ್ನು ಕಾಣುತ್ತೇವೆ. ಹೀಗೆ ಒಟ್ಟಾರೆ ಗವಿಮಠದ ಗುಡ್ಡಪ್ರದೇಶದಲ್ಲಿ ಸುಮಾರು ನಾಲ್ಕು ಗವಿಗಳಿವೆ. ಅವುಗಳಲ್ಲಿ ಮುಖ್ಯವಾಗಿ ಅಶೋಕನ ಶಾಸನವಿರುವ ಸ್ಥಳದ ಸಮೀಪದಲ್ಲಿಯೇ ಪೂರ್ವಕ್ಕೆ ಅಭಿಮುಖವಾಗಿ ಮತ್ತೊಂದು ಕಿರುಬೆಟ್ಟವಿದ್ದು, ಆ ಬೆಟ್ಟದ ಎರಡೂ ಗವಿಗಳಲ್ಲಿ ಶಿಲಾಯುಗದ ವರ್ಣದ ಚಿತ್ರಗಳಿವೆ. ಗವಿಯ ಮೇಲ್ಛಾವಣಿ ಭಾಗದಲ್ಲಿ ಹಳದಿ-ಮುಸುಕು ಬಿಳಿಯ ಮಿಶ್ರಿತ ದ್ವಿವರ್ಣದಲ್ಲಿ ಗಂಡು ಹೆಣ್ಣಿನ ಚಿತ್ರಗಳಿವೆ. ಅನತಿ ದೂರದಲ್ಲಿಯೇ ಇರುವ ಮತ್ತೊಂದು ಗುಹೆಯಲ್ಲಿ ಕೆಂಪುಬಣ್ಣದ ಸೂರ್ಯ, ಮನುಷ್ಯ(?)-ನೃತ್ಯ ಸಮೂಹದ ಚಿತ್ರಗಳಿವೆ. ಈ ಎರಡೂ ಗುಹೆಯ ವರ್ಣಚಿತ್ರಗಳು ಗವಿಯ ಮೇಲ್ಭಾಗದ ಕಲ್ಲಾಸರೆಯಲ್ಲಿ ಮಾತ್ರ ಚಿತ್ರಿಸಲಾಗಿದ್ದು ಬೆಳಕಿನ ಸಹಾಯದಿಂದ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮಾತ್ರ ಅವು ಗೋಚರಿಸುತ್ತವೆ.

ಕೊಪ್ಪಳ ನಗರದ ಪಶ್ಚಿಮ ಬದಿಯ ಮಳೆಮಲ್ಲೇಶ್ವರ ದೇವಾಲಯದ ವಾಯುವ್ಯಕ್ಕೆ ಇರುವ ಬೆಟ್ಟದ ಸಮತಲದಲ್ಲಿ ಬೃಹತ್ ಶಿಲಾಸಮಾಧಿಗಳನ್ನು ವಿದ್ವಾಂಸರು ಶೋಧಿಸಿದ್ದಾರೆ.[೩೮] ಇವು ಕೈಯಿರನ್ ಸರ್ಕಲ್, ಕ್ರೊಮೆಲೆಕ್ಸ್, ಎವಿನ್ಯುಸ್ ಮತ್ತು ಡಾಲ್ಮೆನ್ಸ್‌ಗಳೆಂದು ವಿಂಗಡಿಸಿದ್ದಾರೆ. ಇಲ್ಲಿರುವಂತಹ ಸಮಾಧಿಗಳು ಡಾಲ್ಮೆನ್ಸ್ ವರ್ಗಕ್ಕೆ ಸೇರಿದವುಗಳು ಎಂದು ತೀರ್ಮಾನಿಸಿರುವರು. ಸಾಮಾನ್ಯವಾಗಿ ಇಂಥ ಸಮಾಧಿಗಳು ಬೆಟ್ಟದ ತಪ್ಪಲಿನಲ್ಲಿರುತ್ತವೆ. ಆದರೆ ಇವುಗಳು ಬೆಟ್ಟದ ಮೇಲ್ಭಾಗದಲ್ಲಿರುವುದು ವೈಶಿಷ್ಟ್ಯವೆಂದು ಹೇಳಬಹುದು. ಹಾಗೂ ಇದೇ ಬೆಟ್ಟದಲ್ಲಿ ಒಟ್ಟು ಒಂಭತ್ತು ಕಲ್ಲಾಸರೆಗಳಿವೆ. ಅವುಗಳಲ್ಲಿ ವಿವಿಧ ಹಂತದ ವರ್ಣಚಿತ್ರಗಳು ಶೋಧವಾಗಿವೆ.

**ಲಿಂಗನಬಂಡಿ**

ಯಲಬುರ್ಗಾ ಮತ್ತು ಕುಷ್ಟಗಿ ತಾಲೂಕುಗಳ ನಡುವೆ ಹಾದುಹೋಗುವ ಮಾರ್ಗದಲ್ಲಿ ಲಿಂಗನಬಂಡಿ ಗ್ರಾಮವಿದೆ. ಯಲಬುರ್ಗಾ ತಾಲೂಕಿನಿಂದ ಪೂರ್ವಕ್ಕೆ ೨೦ ಕಿ.ಮೀ ದೂರದಲ್ಲಿರುವ ಈ ನೆಲೆಯಲ್ಲಿ ದೊಡ್ಡ ದೊಡ್ಡ ಬಂಡೆಗಳಿಂದ ಕೂಡಿದ ಬೆಟ್ಟ ಪ್ರದೇಶವಿದೆ. ಈ ಗ್ರಾಮದ ದಕ್ಷಿಣ ದಿಕ್ಕಿನಲ್ಲಿ ಹಾಳುಮಣ್ಣಿನಿಂದ ಮಿಶ್ರಿತವಾದ ಸುಮಾರು ನಾಲ್ಕು ಎಕರೆ ಪ್ರದೇಶದಲ್ಲಿ ಸೂಕ್ಷ್ಮಶಿಲಾಯುಗದ ಆಯುಧೋಪಕರಣಗಳು, ಬೃಹತ್ ಶಿಲಾಯುಗದ ಕಪ್ಪು ಕೆಂಪು ವರ್ಣದ ಮಡಕೆಗಳು

(ಬಿ.ಆರ್.ಡಬ್ಲ್ಯೂ) ಕಬ್ಬಿಣದ ಕಿಟ್ಟ, ಮೂಸೆ ಅವಶೇಷಗಳು, ಕಬ್ಬಿಣ ತಯಾರಿಸುವ ಪ್ರಕ್ರಿಯೆಯಲ್ಲಿ ಅದರ ರಸಸೋರಿ ಮಣ್ಣಿನಲ್ಲಿ ಗಟ್ಟಿಗೊಂಡ ಅವಶೇಷಗಳನ್ನು ಗಮನಿಸಿದಾಗ ಕಬ್ಬಿಣಯುಗದ ಆರಂಭಿಕ ಹಂತದಲ್ಲಿ ಕಬ್ಬಿಣ ಕರಗಿಸುವ ತಂತ್ರ ಇಲ್ಲಿ ನೆಲೆಸಿದ್ದಂತಹ ಜನರಿಗೆ ಕರಗತವಾಗಿತ್ತೆಂಬ ವರದಿಗಳು ದಾಖಲಾಗಿವೆ.[೩೯] ಆದರೆ ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಹೆಸರಿಸಿದ ಈ ಸ್ಥಳ ಪರಿಶೀಲಿಸಿದಾಗ ಹಿಂದೆ ವರದಿಯಾಗಿದ್ದ ಅವಶೇಷಗಳು ಸಂಪೂರ್ಣವಾಗಿ ಹಾಳಾಗಿರುವುದನ್ನು ಗಮನಿಸಲಾಗಿದೆ.

**ಕುಮ್ಮಟದುರ್ಗ**

ಕೊಪ್ಪಳ ತಾಲ್ಲೂಕು ಕೇಂದ್ರದಿಂದ ಪೂರ್ವಕ್ಕೆ ಗಂಗಾವತಿ ರಸ್ತೆಯ ಮಾರ್ಗವಾಗಿ ಸು.೨೭ ಕಿ.ಮೀ. ದೂರದಲ್ಲಿ ಜಬ್ಬಲಗುಡ್ಡ ಗ್ರಾಮವಿದೆ. ಈ ಗ್ರಾಮದಿಂದ ದಕ್ಕಿಣಕ್ಕೆ ಸು.೩ಕಿ.ಮೀ ದೂರದಲ್ಲಿ 'ಕುಮ್ಮಟದುರ್ಗ'ವಿದೆ. ಇಲ್ಲವೇ ಗಂಗಾವತಿಯಿಂದ ಕೊಪ್ಪಳಕ್ಕೆ ಹೋಗುವ ಮಾರ್ಗದಲ್ಲಿ ೧೬ ಕಿ.ಮೀ ಮುಕ್ಕುಂಪಿ ಗ್ರಾಮವಿದೆ. ಇಲ್ಲಿಂದ ೨ಕಿ.ಮೀ. ಹೋದರೂ ಕುಮ್ಮಟದುರ್ಗ ಸಿಗುತ್ತದೆ. ಇದು ಮೇಲ್ನೋಟಕ್ಕೆ ಅಭೇದ್ಯ ಎನ್ನಿಸುವ ಗಿರಿದುರ್ಗವಾಗಿದ್ದು, ಸುತ್ತಲೂ ನಿಸರ್ಗ ನಿರ್ಮಿತ ಕಗ್ಗಲ್ಲು ಬೆಟ್ಟಗಳಿಂದ ಹಾಗೂ ಗುಹೆ ಕಲ್ಲಾಸರೆಗಳಿಂದ ಆವೃತವಾಗಿದೆ. ಇಲ್ಲಿ ಕುಮಾರರಾಮನ ಗುಡ್ಡ(ಜಬ್ಬಲಗುಡ್ಡ), ಮಾದಿಗ ಹಂಪಯ್ಯನ ಗುಡ್ಡ, ಹನುಮಂತನ ಗುಡ್ಡ, ಬೊಲ್ಲನ ಗುಡ್ಡ, ಕಾಟಪ್ಪನ ಗುಡ್ಡ, ಗುಲಗಂಜಿ ಗುಡ್ಡ, ಎಮ್ಮಿಗುಡ್ಡಗಳು ರಕ್ಷಣಾ ಕೋಟೆಗಳಂತಿವೆ. ಇಲ್ಲಿಯ ಕುಮಾರರಾಮನ ಗುಡ್ಡವು ಸಮುದ್ರಮಟ್ಟದಿಂದ ೬೯೬ ಮೀಟರ್ ಎತ್ತರದಲ್ಲಿದೆ. ಸುತ್ತಲಿನ ಪ್ರದೇಶವು ೨೧೩.೩೬ ಮೀಟರ್ ಎತ್ತರವಾಗಿದೆ. ಭೌಗೋಳಿಕವಾಗಿ ಕೊಪ್ಪಳ ಮತ್ತು ಗಂಗಾವತಿ ತಾಲ್ಲೂಕಿನ ಬಹುತೇಕ ಪ್ರದೇಶವು ಆರ್ಕಿಯನ್ ಶಿಲಾಸಮುಚ್ಚಯಗಳಿಂದ ಕೂಡಿರುವ ಪೆನಿನ್ಸುಲಾರ್ ಸೀಳಕಲ್ಲಿನ ಸಂಕೀರ್ಣದ ಸೈನೈಟ್ ಮತ್ತು ಗ್ರಾನೈಟ್ ಶಿಲೆಗಳ ಬೃಹತ್ತಾದ ಕಲ್ಲುಬೆಟ್ಟಗಳಿಂದ ಕೂಡಿದ ಪ್ರದೇಶಗಳಾಗಿವೆಯೆಂದು ವರದಿಗಳು ದಾಖಲಾಗಿವೆ. ಈ ಪ್ರದೇಶದಲ್ಲಿ ತುಂಗಭದ್ರ ನದಿಯ ನೀರಿನ ಅನುಕೂಲತೆಗಳಿದ್ದು ಆದಿಮಾನವನ ವಾಸ್ತವ್ಯಕ್ಕೆ ನೆರವಾಗಿದ್ದವು. ಇಂತಹ ಪ್ರದೇಶದಲ್ಲಿ ಹಲವು ಪ್ರಾಕ್ತನ ನೆಲೆಗಳು ಪತ್ತೆಯಾಗಿದ್ದು, ಇಂಥ ನೆಲೆಗಳು ಈ ಪ್ರದೇಶದ ಪ್ರಾಗ್ಚಾರಿತ್ರಿಕ ಮಹತ್ವವನ್ನು ಅರಿಯಲು ಸಹಾಯಕವಾಗಿವೆಯೆಂದು ಅಭಿಪ್ರಾಯಿಸಬಹುದು.

ಉತ್ತರ ಅಕ್ಷಾಂಶ ೧೫೦೨೪'೧೭' ಮತ್ತು ಪೂರ್ವ ರೇಖಾಂಶ ೭೬೦೨೨'೨೯' ವಿಸ್ತೀರ್ಣ ಹೊಂದಿರುವ ಈ ನೆಲೆಯಲ್ಲಿ ಬೃಹತ್ ಶಿಲಾಯುಗದ ಎರಡು ನಿಲುಸುಗಲ್ಲುಗಳಿವೆ.[೪೦] ಇವು ರಾಮಸ್ವಾಮಿ ದೇವಾಲಯದ ದಕ್ಷಿಣದ ತಪ್ಪಲಿನಲ್ಲಿ 'ಕಾಗಿರಾಮನ ಶಿಲ್ಪ' ಅಥವಾ 'ಹೋಲಿಕೆ ರಾಮಪ್ಪನ ಶಿಲ್ಪ'ದ ಎದುರುಗಡೆ ಸು.೫೦ ಮೀಟರ್ ಅಂತರದಲ್ಲಿವೆ. ಸ್ಥಳೀಯರು ಇವುಗಳನ್ನು ಕುಮ್ಮಟದುರ್ಗದ ಅಗಸಿ ಬಾಗಿಲುಗಳೆಂದು ಭಾವಿಸಿದ್ದಾರೆ. ಆದರೆ ಅವುಗಳಲ್ಲಿ 'ಅಗಸಿ ಬಾಗಿಲು'ಗಳೆಂದು ಖಚಿತವಾಗಿ ಗುರುತಿಸಲು ಯಾವುದೇ ಲಕ್ಷಣಗಳು ಗೋಚರಿಸುವುದಿಲ್ಲ. ಆದರೆ ಅವು ಬೃಹತ್ ಶಿಲಾಯುಗದ

ಜನರ ಶವಸಂಸ್ಕಾರದ ಸಮಾಧಿಯ ಮಾದರಿಯಾಗಿವೆ. ಇಂತಹ ನಿಲಸುಗಲ್ಲುಗಳನ್ನು ಮರಣ ಹೊಂದಿದವರ ಸ್ಮರಣಾರ್ಥಕವಾಗಿ 'ನಿಲ್ಲಿಸಿದಕಲ್ಲು'ಗಳೆಂದು ಅಥವಾ 'ನೆಡುಕಲ್ಲು'ಗಳೆಂದು ಕರೆಯಲಾಗುತ್ತದೆ. ಆದರೆ ನಿಲಸುಗಲ್ಲುಗಳ ಬಗ್ಗೆ ಈವರೆಗೆ ಹೆಚ್ಚಿನ ಪ್ರಮಾಣದ ಅಧ್ಯಯನಗಳ ಕೊರತೆಗಳಿದ್ದು ಸಂಶೋಧಕರಲ್ಲಿ ಇವುಗಳ ಬಗ್ಗೆ ಜಿಜ್ಞಾಸೆಗಳಿವೆ. ಸಾಮಾನ್ಯವಾಗಿ ನಿಲುಸುಗಲ್ಲುಗಳಲ್ಲಿ ನಿರ್ದಿಷ್ಟವಾದ ಆಕಾರಗಳಿರದೆ ಚಪ್ಪಡಿಕಲ್ಲಿನಂತೆ ನಿಲ್ಲಿಸಲಾಗಿರುತ್ತದೆ. ಇಲ್ಲಿನ ನಿಲುಸುಕಲ್ಲುಗಳನ್ನು ಪರಸ್ಪರ ಉತ್ತರ ಮತ್ತು ದಕ್ಷಿಣಾಭಿಮುಖವಾಗಿ ಸಮಾನಾಂತರ ಸಾಲಿನಲ್ಲಿ ನಿಲ್ಲಿಸಲಾಗಿದೆ. ಇವುಗಳ ಬುಡವು ಭದ್ರವಾಗಿ ನಿಲ್ಲಲು ತುಂಡುಕಲ್ಲುಗಳಿಂದ ಭರ್ತಿಮಾಡಿ ಗಟ್ಟಿಗೊಳಿಸಲಾಗಿದೆ. ಬಲಭಾಗದಲ್ಲಿರುವ ನಿಲುಸುಗಲ್ಲು ನೆಲಮಟ್ಟದಿಂದ ೭ ಅಡಿ ಉದ್ದ ಮತ್ತು ೨.೨ ಅಡಿ ಅಗಲವಾಗಿದ್ದು, ಉಳಿದ ಭಾಗ ನೆಲದಲ್ಲಿ ಅಂತರ್ಗತವಾಗಿದೆ. ಅದೇ ರೀತಿ ಎಡ ಭಾಗದಲ್ಲಿರುವ ನಿಲುಸುಕಲ್ಲು ಕೂಡ ೭ ಅಡಿ ಉದ್ದ ಮತ್ತು ೩.೬ ಅಡಿ ಅಗಲವಾಗಿದ್ದು, ಉಳಿದ ಭಾಗವು ಕೂಡ ನೆಲದಲ್ಲಿ ಅಂತರ್ಗತವಾಗಿರುವುದನ್ನು ಗಮನಿಸಬಹುದು. ಇವುಗಳ ನಡುವಿನ ಅಂತರ ೪.೫ ಮೀಟರ್(೧೫ ಅಡಿ)ನಷ್ಟಿದೆ. ಇಲ್ಲಿನ ನಿಲುಸುಗಲ್ಲುಗಳು ಮಸ್ಕಿ,(ರಾಯಚೂರು ಜಿಲ್ಲೆ), ಸಂಗನಕಲ್ಲು, ಕಪ್ಪಗಲ್ಲು,(ಬಳ್ಳಾರಿ ಜಿಲ್ಲೆ) ನೆಲೆಗಳಲ್ಲಿರುವ ನಿಲುಸುಗಲ್ಲುಗಳನ್ನು ಹೋಲುತ್ತವೆ. ಹಾಗೆಯೇ ತೆಲಂಗಾಣ ರಾಜ್ಯದ ಮುಡುಮಲ (ರಾಯಚೂರು ಜಿಲ್ಲೆಯಿಂದ ೩೦ ಕಿ.ಮೀ ದೂರದಲ್ಲಿದೆ.) ಗ್ರಾಮದಲ್ಲಿ ಎಂಬತ್ತು ಎಕರೆ ವಿಸ್ತೀರ್ಣದಲ್ಲಿ ಇಂತಹ ಮೂವತ್ತು ನಿಲುಸುಗಲ್ಲುಗಳಿದ್ದು ಅವುಗಳ ಬಗ್ಗೆ ಪೂರ್ಣ ಪ್ರಮಾಣದ ಅಧ್ಯಯನಗಳು ನಡೆಯುತ್ತಿದ್ದು ಅಲ್ಲಿನ ಸರ್ಕಾರ ಸಂರಕ್ಷಿತ ಪ್ರದೇಶವನ್ನಾಗಿ ಮಾಡುತ್ತಿದೆ. ಆದರೆ ನಮ್ಮಲ್ಲಿ ಇಂತಹ ಹಲವು ನಿಲುಸುಕಲ್ಲುಗಳು ವಿನಾಶಕ್ಕೆ ತುತ್ತಾಗಿವೆ. ಪ್ರಸ್ತುತವಾಗಿ ಈ ಪ್ರದೇಶದಲ್ಲಿ ಬೆಳಕಿಗೆ ಬಂದಿರುವ ಈ ನಿಲುಸುಗಲ್ಲುಗಳು ಬೃಹತ್ ಶಿಲಾಯುಗದ ಜನರ ಶವಸಂಸ್ಕಾರದ ಕುರುಹುಗಳಾಗಿದ್ದು ಇವುಗಳನ್ನು ಬೃಹತ್ ಶಿಲಾಯುಗದ ಜನರು ಸತ್ತವರ ಸ್ಮರಣಾರ್ಥವಾಗಿ ನಿರ್ಮಿಸುತ್ತಿದ್ದರು. ಆದರೆ ಈ ಜನರ ವಸತಿಯ ಕುರಿತಂತೆ ಯಾವುದೇ ಕುರುಹುಗಳು ಖಚಿತವಾಗಿ ದೊರಕದೆ ಸಮಾಧಿ ಅವಶೇಷಗಳು ಕಂಡುಬರುವುದರಿಂದ ಈ ನೆಲೆಯನ್ನು 'ಸ್ಮಶಾನ ನೆಲೆ'(ಸಮಾಧಿ ನೆಲೆ) ಅಥವಾ 'ಗೋರಿನೆಲೆ' ಎಂದು ಗುರುತಿಸಿ ಅಧ್ಯಯನ ಮಾಡಲಾಗಿದೆ. ಒಟ್ಟಿನಲ್ಲಿ ಕುಮ್ಮಟದುರ್ಗ ಪರಿಸರವು ಬೃಹತ್ ಶಿಲಾಯುಗ ಅಥವಾ ಕಬ್ಬಿಣಯುಗದ ಕಾಲದಿಂದಲೂ ಜನವಸತಿಯ ತಾಣವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ.

**ಅಚಲಾಪುರ**

ಕೊಪ್ಪಳ ತಾಲೂಕು ಕೇಂದ್ರದಿಂದ ಪೂರ್ವದಿಕ್ಕಿಗೆ ೨೪ ಕಿ.ಮೀ ದೂರದಲ್ಲಿ ಅಚಲಾಪುರ ಗ್ರಾಮವಿದೆ. ಈ ಗ್ರಾಮದಿಂದ ಆಗ್ನೇಯ ದಿಕ್ಕಿಗೆ ೨. ಕಿ.ಮೀ. ದೂರದಲ್ಲಿರುವ ಬೆಟ್ಟಗಳ ಮಧ್ಯದಲ್ಲಿ ಬೃಹತ್ ಶಿಲಾಯುಗದ ಸಮಾಧಿ ನೆಲೆಯಿದೆ. ಭೌಗೋಳಿಕವಾಗಿ ಪೂರ್ವ ರೇಖಾಂಶ ೭೬೦೨೨'೦೯.೪ ಮತ್ತು ೧೫೦೨೧'೧೬.೦ ಉತ್ತರ ಅಕ್ಷಾಂಶ ಹೊಂದಿರುವ ನೆಲೆಯಲ್ಲಿ ಸುಮಾರು ೨೫ಕ್ಕಿಂತ ಅಧಿಕ

ಶಿಲಾಸಮಾಧಿಗಳು, ಮಾನವನ ಅಸ್ಥಿ ಅವಶೇಷಗಳು ಹಾಗೂ ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು(ಬಿ.ಆರ್.ಡಬ್ಲ್ಯೂ) ಲಭ್ಯವಾಗಿವೆ. ಹಾಗೂ ನೆಲೆಯ ಪಶ್ಚಿಮಕ್ಕೆ ೦.೫ ಕಿ.ಮೀ ದೂರದಲ್ಲಿ ಹೊಸಬಂಡಿ ಹರ್ಲಾಪುರದ ಬೋರುಕಾ ಜಲವಿದ್ಯುತ್ ಘಟಕವಿದ್ದು, ಇದರ ಸುತ್ತಲೂ ಇರುವ ಬೆಟ್ಟಗಳ ಕಲ್ಲಾಸರೆಗಳಲ್ಲಿ ಈಗಾಗಲೇ ವರ್ಣಚಿತ್ರಗಳು ಶೋಧವಾಗಿವೆ. ಆದರೆ ಅಚಲಾಪುರ ಪರಿಸರದಲ್ಲಿರುವ ಬೃಹತ್ ಶಿಲಾಯುಗದ ಸಮಾಧಿ ನೆಲೆಯ ಬಗ್ಗೆ ಅಧ್ಯಯನಗಳಾಗಿಲ್ಲ. ಪ್ರಸ್ತುತ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅಚಲಾಪುರ ಸಮೀಪದಲ್ಲಿ ಒಟ್ಟು ನಾಲ್ಕು ಪ್ರಕಾರದ ಶಿಲಾಸಮಾಧಿಗಳನ್ನು ಶೋಧಿಸಲಾಗಿದೆ.[೪೧]

೧. ಕಲ್ಮನೆ ಸಮಾಧಿಗಳು ಎರಡು ಕಂಡುಬಂದಿದ್ದು, ಅವುಗಳಲ್ಲಿ ಒಂದು ಸಮಾಧಿಯು ಐದು ಚಪ್ಪಡಿ ಕಲ್ಲುಗಳಿಂದ ಕೂಡಿದ್ದು, ೭ ಅಡಿ ಉದ್ದ ಮತ್ತು ೬ ಅಡಿ ಅಗಲವಿದೆ. ನಾಲ್ಕು ಚಪ್ಪಡಿ ಕಲ್ಲುಗಳನ್ನು ಪರಸ್ಪರ ಒಂದಕ್ಕೊಂದು ಸ್ಥಿರವಾಗಿಸಿ ಅವುಗಳ ಮೇಲೆ ೧೦ ಅಡಿ ಉದ್ದ ಮತ್ತು ೯ ಅಡಿ ಅಗಲವಿರುವ ಚಪ್ಪಡಿಕಲ್ಲನ್ನು ಹಾಸಲಾಗಿದೆ ಅದೇ ರೀತಿ ಮತ್ತೊಂದು ಶಿಲಾಸಮಾಧಿಯನ್ನು ಕೂಡ ಐದು ಚಪ್ಪಡಿಕಲ್ಲುಗಳಿಂದ ಕೂಡಿದ್ದು, ಅದರಲ್ಲಿ ನಾಲ್ಕು ಚಪ್ಪಡಿಕಲ್ಲುಗಳನ್ನು ಒಂದಕ್ಕೊಂದು ಆನಿಸಿ ನಿಲ್ಲಿಸಿ, ಅವುಗಳ ಮೇಲೆ ೧೦ ಅಡಿ ಉದ್ದ ಮತ್ತು ೧.೫ ಅಡಿ ಗಾತ್ರದ ಚಪ್ಪಡಿಕಲ್ಲನ್ನು ಹಾಸಲಾಗಿದೆ. ಈ ಎರಡೂ ಶಿಲಾ ಸಮಾಧಿಗಳು ಹಿರೇಬೆಣಕಲ್ಲು ಹಾಗೂ ಅದರ ಸುತ್ತಮುತ್ತಲಿನ ನೆಲೆಗಳ ಶಿಲಾ ಸಮಾಧಿಗಳನ್ನು ಹೋಲುತ್ತವೆ.

೨. ಕಂಡಿಕೋಣೆ(Port-holed cist) ಮಾದರಿಯ ಶಿಲಾಸಮಾಧಿಗಳು ಕಂಡುಬಂದಿದ್ದು, ಅವು ಅಧ್ಯಯನಕ್ಕೆ ಯೋಗ್ಯವಾಗಿವೆ. ಈ ಸಮಾಧಿಗಳನ್ನು ಸ್ಥಳೀಯವಾಗಿ ಲಭ್ಯವಿರುವ ಗ್ರಾನೈಟ್ ಶಿಲಾಫಲಕಗಳಿಂದ ನಿರ್ಮಿಸಲಾಗಿದೆ. ನಾಲ್ಕು ದಿಕ್ಕಿಗೆ ಶಿಲಾಫಲಕ(ಚಪ್ಪಡಿಕಲ್ಲು)ಗಳನ್ನು ಪರಸ್ಪರ ಒಂದಕ್ಕೊಂದು ಸ್ಥಿರವಾಗಿ ನಿಲ್ಲಿಸಲಾಗಿದೆ. ಪೂರ್ವದಿಕ್ಕಿಗೆ ಇರುವ ಚಪ್ಪಡಿಕಲ್ಲಿಗೆ ೫೦ ಸೆಂ.ಮೀ ವ್ಯಾಸದ ಕಿಂಡಿಯಿದೆ. ಈ ಸಮಾಧಿಯು ೫ ಅಡಿ ಆಳವಿದ್ದು, ೬ ಅಡಿ ಉದ್ದ ಮತ್ತು ೫.ಅಡಿ ಅಗಲವಿದೆ. ಇದು ಮೇಲ್ನೋಟಕ್ಕೆ ತೊಟ್ಟಿಯಂತೆ ಕಂಡುಬರುವ ಈ ಸಮಾಧಿಯು ನೆಲದಲ್ಲಿ ಅಂತರ್ಗತವಾಗಿದೆ.(ಚಿತ್ರ ಸಂಖ್ಯೆ ೬) ಈ ಸಮಾಧಿಗಳು ಬ್ರಹ್ಮಗಿರಿ ನಿವೇಶನದಲ್ಲಿರುವ ಬೃಹತ್ ಶಿಲಾಯುಗದ ಸಮಾಧಿಗಳನ್ನು ಹೋಲುತ್ತವೆ.

೩. ಅಚಲಾಪುರ ಸಮೀಪದಲ್ಲಿ ನೆಲಕೋಣೆ ಸಮಾಧಿಗಳು(Cists)ಸಹ ಕಂಡುಬಂದಿವೆ. ಅವು ೫ ಅಡಿ ಉದ್ದ ಮತ್ತು ೨.೬ ಅಡಿ ಅಗಲವಿದ್ದು ಭೂಮಿಯಲ್ಲಿ ಅಂತರ್ಗತವಾಗಿವೆ. ಅಲ್ಲದೇ ಶಿಲಾವೃತ್ತಸಹಿತ ನೆಲಕೋಣೆ(Cist with Cairn) ಸಮಾಧಿ ಕಂಡುಬಂದಿದ್ದು, ಅದು ನಿಧಿಗಳ್ಳರ ಹಾವಳಿಗೆ ಒಳಗಾಗಿ ಸಂಪೂರ್ಣ ಹಾಳಾಗಿದೆ.

೪. ಅಚಲಾಪುರ ಪರಿಸರದ ಬೃಹತ್ ಶಿಲಾಯುಗದ ನೆಲೆಯಲ್ಲಿ ಕಲ್ಮನೆ ಸಮಾಧಿ, ಕಂಡಿಕೋಣೆ ಸಮಾಧಿ ಮತ್ತು ನೆಲಕೋಣೆ ಸಮಾಧಿ ಅಷ್ಟೇ ಅಲ್ಲದೇ ನಿಲುಸುಗಲ್ಲುಗಳು ಬೆಳಕಿಗೆ ಬಂದಿವೆ.

ಸೋಮಪ್ಪನವರ ಜಮೀನಿನಲ್ಲಿ ಭಗ್ನಗೊಂಡು ಬಿದ್ದಿರುವ ನಿಲುಸುಕಲ್ಲುಗಳಿವೆ. ಅದರಲ್ಲಿ ಒಂದು ನಿಲುಸುಗಲು ಮಾತ್ರ ನೆಲದಲ್ಲಿ ಅರ್ಧ ಉಳಿದುಕೊಂಡಿದ್ದು, ಇನ್ನುಳಿದ ಭಾಗ ಭಗ್ನಗೊಂಡಿದೆ. ಈ ನಿಲುಸುಗಲ್ಲು ಪೂರ್ವಭಿಮುಖವಾಗಿತ್ತು. ಆದರೆ ನಿಧಿಗಳ್ಳರು ಕಳೆದ ಎರಡು ವರ್ಷಗಳ ಹಿಂದೆ ಕಿತ್ತು ಹಾಳುಮಾಡಿದರು ಎಂದು ಸೋಮಪ್ಪನವರು ತಿಳಿಸುತ್ತಾ ಭಗ್ನಗೊಂಡು ಅವಶೇಷಗಳಾಗಿ ಬಿದ್ದಿರುವ ಕಲ್ಲುಗಳನ್ನು ತೋರಿಸಿದರು. ನೆಲದ ಮೇಲೆ ತುಂಡು ತುಂಡಾಗಿ ಬಿದ್ದಿದ್ದ ನಿಲಸುಗಲ್ಲನ್ನು ಮರುಜೋಡಿಸಿ ಸಂಗ್ರಹಿಸಿದ ಅಳತೆಯು ೭ ಅಡಿ ಉದ್ದವಿದ್ದು, ೨ ಅಡಿ ಅಗಲವಿದೆ. ಇಲ್ಲಿನ ನಿಲುಸುಗಲ್ಲುಗಳೆನ್ನೆಲ್ಲಾ ನಾಶಪಡಿಸಿ ಈ ನೆಲೆಯನ್ನು ಕೃಷಿ ಭೂಮಿಯಾಗಿ ಮಾಡಲಾಗಿದೆ. ಆದ್ಯಾಗೂ ಇಡೀ ಪ್ರದೇಶದಲ್ಲಿ ಹಲವು ನಿಲುಸುಗಲ್ಲುಗಳ ಅವಶೇಷಗಳು ಹರಡಿದ್ದು, ಇಂತಹ ಹಲವು ನಿಲುಸುಗಲ್ಲುಗಳಿದ್ದವೆಂಬುದಕ್ಕೆ ಸಾಕ್ಷಿಯಾಗಿವೆ. ಸಮಾಧಿಗಳ ರಚನೆಗೆ ಅಂದಿನ ಜನರು ವಿಶೇಷ ತಂತ್ರಗಾರಿಕೆಯನ್ನು ಕಂಡುಕೊಂಡಿದ್ದರು. ನೆಲೆಯ ಸುತ್ತಮುತ್ತಲಿನ ಗುಡ್ಡಗಳಲ್ಲಿರುವ ಬೃಹತ್ ಬಂಡೆಗಳನ್ನು ಕಬ್ಬಿಣದಂತಹ ಕಠಿಣವಾದ ಲೋಹದ ಉಪಕರಣಗಳ ಸಹಾಯದಿಂದ ಸೀಳಿ(ಕತ್ತರಿಸಿ) ಗುಡ್ಡದ ಕೆಳಗೆ ಸ್ಥಳಾಂತರಿಸಲಾಗುತ್ತಿತ್ತು. ಹಾಗೂ ಶಿಲಾಸಮಾಧಿ ರಚನೆಗೆ ಬೇಕಾದ ರೀತಿಯಲ್ಲಿ ಚಪ್ಪಡಿಕಲ್ಲುಗಳನ್ನು ಸಿದ್ದಪಡಿಸಿಕೊಂಡು ಮರದ ದಿಮ್ಮಿಗಳ ಮೇಲೆ ನಿಧಾನವಾಗಿ ಉರುಳಿಸಿಕೊಂಡು ಬಂದು ಶವಸಂಸ್ಕಾರದ ಸ್ಥಳಕ್ಕೆ ಸಾಗಿಸುತ್ತಿದ್ದರೆಂದು ತೋರುತ್ತದೆ. ಮುಖ್ಯವಾಗಿ ದೊಡ್ಡ ದೊಡ್ಡ ಬಂಡೆಗಳನ್ನು ಸೀಳುವುದು ಮತ್ತು ಅವುಗಳನ್ನು ನಿರ್ದಿಷ್ಟ ಸ್ಥಳಕ್ಕೆ ಸಾಗಿಸುವುದು ಅತ್ಯಂತ ಶ್ರಮದಾಯಕವಾದುದು. ಇಲ್ಲಿನ ಶಿಲಾಸಮಾಧಿಗಳ ಸಂಖ್ಯೆಗಳನ್ನು ಗಮನಿಸಿ ಆ ಕಾಲದ ಸಮುದಾಯಗಳ ಬಗೆಗೆ ವಿವೇಚಿಸುವುದಾದರೆ ಅವರು ವಿಶಿಷ್ಟ ತಾಂತ್ರಿಕ ಕೌಶಲ ಮತ್ತು ಧಾರ್ಮಿಕ ನಂಬಿಕೆಯುಳ್ಳ ಸಂಘಟಿತ ಸಮುದಾಯವಾಗಿತ್ತು ಎಂದು ತರ್ಕಿಸಬಹುದು.

### ಅಪ್ಪಯ್ಯನಹಳ್ಳಿ

ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ಸುಮಾರು ೩೯.ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೪೫ ಕಿ.ಮೀ ದೂರದಲ್ಲಿ ಅಪ್ಪಯ್ಯನಹಳ್ಳಿ ಗ್ರಾಮವಿದೆ. ಭೌಗೋಳಿಕವಾಗಿ ಗ್ರಾಮದ ಸುತ್ತಮುತ್ತ ಕುರುಚಲು ಕಾಡು, ಸರ್ವಕಾಲಿಕವಾಗಿರುವ ನೀರಿನ ದೋಣಿ ಹಾಗೂ ಗ್ರಾನೈಟ್ ಶಿಲಾಬೆಟ್ಟಗಳಿಂದ ಆವೃತವಾಗಿದೆ. ಇಲ್ಲಿನ ಗವಿಗಳಲ್ಲಿ ಶಿಲಾತಾಮ್ರಯುಗ ಸಂಸ್ಕೃತಿಗೆ ಸೇರಿದ ವರ್ಣಚಿತ್ರಗಳು ಪತ್ತೆಯಾದ ವಿವರಗಳು ಪ್ರಕಟವಾಗಿವೆ. ಅಲ್ಲದೇ ಇದೇ ನೆಲೆಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಶಿಲಾಸಮಾಧಿಗಳು ಮತ್ತು ಬಯಲು ಬಂಡೆಯ ಮೇಲೆ ಮೂಡಿಸಿದ ಗೀರು ಚಿತ್ರಗಳು ವರದಿಯಾಗಿವೆ. ಪ್ರಸ್ತುತ ಈ ನೆಲೆಯಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಸ್ಥಳ ಪರಿಶೀಲಿಸಿದಾಗ ಇಲ್ಲಿನ ಬೃಹತ್ ಶಿಲಾಯುಗದ ಸಮಾಧಿ ಅವಶೇಷಗಳು ಸಂಪೂರ್ಣ ಹಾಳಾಗಿದ್ದು ಅಳಿದುಳಿದ ಕಲ್ಲಿನ ಅವಶೇಷಗಳು ಮತ್ತು ಬಯಲು ಬಂಡೆ ಗೀರುಚಿತ್ರಗಳು ಮಾತ್ರ ಕಂಡುಬಂದವು. ಈ ಎಲ್ಲಾ ಅಂಶಗಳಿಂದ ತಿಳಿಯಬಹುದಾದ ಬಹುಮುಖ್ಯ ಅಂಶಗಳೆಂದರೆ ಈ ಪ್ರದೇಶವು ಶಿಲಾತಾಮ್ರಯುಗ ಕಾಲದಿಂದ ಬೃಹತ್

ಶಿಲಾಯುಗದವರೆಗಿನ ಜನವಸತಿಯ ಚಟುವಟಿಕೆಗಳ ಪ್ರಮುಖ ನೆಲೆಯಾಗಿತ್ತು ಎಂಬುದನ್ನು ಉಲ್ಲೇಖಿಸಬಹುದು.

ಅಪ್ಪಯ್ಯನಹಳ್ಳಿ ಶೋಧವಾಗಿರುವ ಬೃಹತ್ ಶಿಲಾಯುಗದ ಬಯಲು ಬಂಡೆ ಗೀರು ಚಿತ್ರಗಳಲ್ಲಿರುವ ಪ್ರಾಣಿಗಳ ಸಮೂಹ ಹಾಗೂ ಮಂಡಲದ ಚಿತ್ರಗಳಿಗೆ ಅಪ್ಪಯ್ಯನಹಳ್ಳಿ ಮತ್ತು ದೇವರಹಟ್ಟಿ ಸುತ್ತಮುತ್ತಲಿನ ಮ್ಯಾಸಬೇಡ ಸಮುದಾಯದವರು ವಿಭೂತಿ, ಹೂ, ಹಣ್ಣು, ತೆಂಗಿನ ಕಾಯಿಗಳನ್ನಿಟ್ಟು ಪೂಜಿಸುವ ಸಂಪ್ರದಾಯ ಇಂದಿಗೂ ರೂಢಿಸಿಕೊಂಡಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಲಾಗಿದೆ. ಇಲ್ಲಿನ ಮ್ಯಾಸಬೇಡ ಸಮುದಾಯವು ಪಶುಪಾಲಕರಾಗಿದ್ದು ಪ್ರಾಚೀನ ಕಾಲದಿಂದಲೂ ಪಶುಗಳನ್ನು ದೇವರೆತ್ತುಗಳೆಂದು ಪೂಜಿಸುತ್ತಾ ಬಂದಿದ್ದಾರೆ. ಅಪ್ಪಯ್ಯನಹಳ್ಳಿಯ ಸಮೀಪದಲ್ಲಿರುವ ಗುಡ್ಡದಲ್ಲಿ ಹಿಂದಿನ ಕಾಲದಲ್ಲಿ ಶರಣರು ವಾಸವಾಗಿದ್ದರಿಂದ ಆ ಗುಡ್ಡಕ್ಕೆ ಶರಣರಗುಡ್ಡವೆಂದು ಕರೆಯಲಾಗುತ್ತದೆ. ಪ್ರಾಯಶಃ ಆ ಗುಡ್ಡದಲ್ಲಿ ವಾಸವಾಗಿದ್ದ ಶರಣರು ಬೃಹತ್ ಶಿಲಾಯುಗದ ಜನರಾಗಿದ್ದು ಅವರು ಮೂಡಿಸಿದ ಬಯಲು ಬಂಡೆ ಚಿತ್ರಗಳಲ್ಲಿ ಎತ್ತು, ದನ, ಜಿಂಕೆ ಮೊದಲಾದ ಪ್ರಾಣಿಗಳ ಚಿತ್ರಗಳಿರುವುದರಿಂದ ಪಶುಪಾಲಕರಾಗಿರುವ ಮ್ಯಾಸಬೇಡರು ಅವುಗಳನ್ನು ಪೂಜಿಸುತ್ತಾ ಬಂದಿದ್ದಾರೆನ್ನಬಹುದು. ಈ ನಿಟ್ಟಿನಲ್ಲಿ ವಿಸ್ತೃತವಾದ ಅಧ್ಯಯನಗಳು ತಲಸ್ಪರ್ಶಿಯಾಗುವ ಜರೂರತೆ ಇದೆ.

**ಜರಿಮಲೆ**

ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ೧೬ ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೫೬ ಕಿ.ಮೀ ದೂರದಲ್ಲಿ ಜರಿಮಲೆ ಗ್ರಾಮವಿದೆ. ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ನೂರಕ್ಕೂ ಹೆಚ್ಚು ಶಿಲಾಸಮಾಧಿಗಳಿವೆ. ಈ ಗ್ರಾಮವು ಭೌಗೋಳಿಕವಾಗಿ ಬೆಟ್ಟಗುಡ್ಡಗಳಿಂದ ಕೂಡಿದೆ. ಪ್ರಸ್ತುತ ಜರಿಮಲೆ ಬೆಟ್ಟದ ಇಳಿಜಾರಿನಲ್ಲಿ ಹಾಗೂ ಬೆಟ್ಟದತಪ್ಪಲಿನ ಬಿದರಂಬಯಲು ಎಂದು ಕರೆಯುವ ಸ್ಥಳದಲ್ಲಿ ಕೆಲವು ಪ್ರಕಾರದ ಸಮಾಧಿಗಳು ಕಂಡುಬಂದಿವೆ. ಅವುಗಳಲ್ಲಿ ಕಲ್ಮನೆ ಸಮಾಧಿಗಳು(Dolmens), ನೆಲಕೋಣೆ ಸಮಾಧಿಗಳು(Cists), ಕಂಡಿಕೋಣೆ ಸಮಾಧಿಗಳು(Port-holed cists) ಹಾಗೂ ಕಲ್ಗುಪ್ಪೆ (Cairns), ಸಮಾಧಿಗಳೆಂಬ ನಾಲ್ಕು ಪ್ರಕಾರದ ಶಿಲಾಸಮಾಧಿಗಳು ಶೋಧವಾಗಿವೆ. ಜರಿಮಲೆ ದುರ್ಗಮ್ಮ ಬೆಟ್ಟದ ದಕ್ಷಿಣದ ಇಳಿಜಾರಿನಲ್ಲಿ ಇಪ್ಪತ್ತಕ್ಕೂ ಹೆಚ್ಚು ಕಲ್ಮನೆ ಸಮಾಧಿಗಳು ಕಂಡುಬಂದಿದ್ದು, ಅವುಗಳಲ್ಲಿ ಕೆಲವು ಮಾತ್ರ ಸುಸ್ಥಿತಿಯಲ್ಲಿವೆ. ಇನ್ನೂ ಕೆಲವು ಸಂಪೂರ್ಣವಾಗಿ ನೆಲಕ್ಕೆ ಬಿದ್ದು ಹಾಳಾಗಿವೆ. ಈ ಸಮಾಧಿಗಳನ್ನು ಸ್ಥಳೀಯವಾಗಿ ದೊರಕುವ ಗ್ರಾನೈಟ್ ಶಿಲೆಗಳಿಂದ ನಿರ್ಮಿಸಲಾಗಿದೆ. ಇನ್ನೂ ಕೆಲವು ಬೆಟ್ಟದ ತಪ್ಪಲಿನಲ್ಲಿ ಅಂದರೆ ಸ್ಥಳೀಯವಾಗಿ 'ಬಿದರಂಬಯಲು' ಎಂದು ಕರೆಯುವ ಸ್ಥಳದಲ್ಲಿ ನೂರಕ್ಕೂ ಹೆಚ್ಚು ಬೃಹತ್ ಶಿಲಾಯುಗದ ಸಮಾಧಿಗಳು ಹಾಗೂ ಕಪ್ಪು-ಕೆಂಪು ವರ್ಣದ ಮಡಕೆಗಳನ್ನು ಶೋಧಿಸಲಾಯಿತು.[೨೨] ಈ ಸಮಾಧಿಗಳನ್ನು ಸ್ಥಳೀಯರು 'ಮೋರೆಯರ ಮನೆಗಳು' ಎಂದು ಕರೆಯುತ್ತಾರೆ. ಇಂತಹ ಶಿಲಾಸಮಾಧಿಗಳು ಕೂಡ್ಲಿಗಿ ತಾಲ್ಲೂಕಿನ

ವಿವಿಧ ನೆಲೆಗಳಾದ ಹಾಲಸಾಗರ, ಗುಡೇಕೋಟೆ, ಮಡಕಲಕಟ್ಟೆ, ಹುರುಳಿಹಾಳು, ಮಾಳೆಹಳ್ಳಿ, ಮಹದೇವಪುರ, ಕುಮತಿ, ಹುಲಿಕುಂಟೆ ನೆಲೆಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಹಲವಾರು ಮಹತ್ವದ ಸಂಗತಿಗಳನ್ನು ಶೋಧಿಸುವ ಅಥವಾ ಮರುಶೋಧಿಸುವ ಪ್ರಯತ್ನ ಮಾಡಲಾಗಿದೆ.

ಜರಿಮಲೆ ಬೆಟ್ಟದತಪ್ಪಲಿನಲ್ಲಿರುವ ಶಿಲಾಸಮಾಧಿಗಳು ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿವೆ. ಕೆಲವು ಸಮಾಧಿಗಳು ಆಯತಾಕಾರದಲ್ಲಿ ಇನ್ನೂ ಕೆಲವು ಸ್ವಸ್ತಿಕ್ ಆಕಾರದಲ್ಲಿವೆ. ಈ ಸಮಾಧಿಗಳ ಅಳತೆ ೫.೧/೨ ಅಡಿ ಉದ್ದ, ೩.೧/೨ ಅಡಿ ಅಗಲ ವಿಸ್ತೀರ್ಣ ಹೊಂದಿವೆ. ಕೆಲವು ಕಂಡಿಕೋಣೆ ಶಿಲಾಸಮಾಧಿಗಳು ಸಹ ಕಂಡುಬಂದಿದ್ದು, ಈ ಶಿಲಾಸಮಾಧಿಗಳನ್ನು ನಾಲ್ಕು ಕಲ್ಲುಚಪ್ಪಡಿಗಳಿಂದ ಪರಸ್ಪರ ಜೋಡಿಸಲಾಗಿದೆ. ಮೇಲ್ಭಾಗದಲ್ಲಿ ಮಳೆ ನೀರು ಬೀಳದಂತೆ ಮತ್ತೊಂದು ಚಪ್ಪಡಿಕಲ್ಲಿನಿಂದ ಮುಚ್ಚಳದ ರೀತಿಯಲ್ಲಿ ಜೋಡಿಸಲಾಗಿದೆ. ಬಹುತೇಕ ಕಡೆ ಪೂರ್ವ ದಿಕ್ಕಿಗೆ ಜೋಡಿಸಿರುವ ಚಪ್ಪಡಿಕಲ್ಲಿನ ಮಧ್ಯದಲ್ಲಿ ರಂಧ್ರವನ್ನು ಬಿಡಲಾಗಿರುತ್ತದೆ. ಆದರೆ ಜರಿಮಲೆಯ ಬೆಟ್ಟದ ತಪ್ಪಲಿನ ಕಂಡಿಕೋಣೆ ಸಮಾಧಿಗೆ ಉತ್ತರದಿಕ್ಕಿಗೆ ಹೊಂದಿಸಿರುವ ಕಲ್ಲುಚಪ್ಪಡಿಗೆ ಕಂಡಿ ಇರುವುದು ವಿಶೇಷ. ಈ ಸಮಾಧಿಗಳ ರಚನೆಗೆ ಬೆಟ್ಟದಲ್ಲಿ ದೊರಕುವ ಗ್ರಾನೈಟ್ ಶಿಲೆಗಳನ್ನು ಗಟ್ಟಿಯಾದ ಕಬ್ಬಿಣದ ಉಪಕರಣಗಳಿಂದ ಸೀಳಿ, ಮರದ ಕೊರಡುಗಳ ಸಹಾಯದಿಂದ ಸಾಗಿಸಿಕೊಂಡು ತಂದು ಸಮಾಧಿಗಳ ರಚನೆ ಮಾಡಲಾಗಿದೆ. ಇದು ಬೃಹತ್ ಶಿಲಾಯುಗದ ಜನರ ತಾಂತ್ರಿಕತೆಯನ್ನು ಸೂಚಿಸುತ್ತದೆ.

ಜರಿಮಲೆಯ ಬೆಟ್ಟದ ಮೇಲಿನ 'ವಡಕಟ್ಟೆಸರ'ದಲ್ಲಿ (ವಡಕಟ್ಟೆ ಹಳ್ಳದ ದಂಡೆಯಲ್ಲಿ) ಸುಮಾರು ಮೂವತ್ತಕ್ಕೂ ಹೆಚ್ಚು ಕಲ್ಗುಪ್ಪೆ ಸಮಾಧಿಗಳನ್ನು ಶೋಧಿಸಲಾಗಿದೆ. ಸಮಾಧಿಯ ಮೇಲೆ ಗುರುತಿಗಾಗಿ ಒತ್ತಾಗಿ ಕುಪ್ಪೆ ಹಾಕಿದ ಸಣ್ಣಕಲ್ಲುಗಳೇ ಕಲ್ಗುಪ್ಪೆಗಳು.[೪೩] ಇವುಗಳು ನಿರ್ದಿಷ್ಟ ಅಳತೆಯಲ್ಲಿರದೆ ಕಲ್ಗುಪ್ಪೆಗಳಾಗಿ ಗೋಚರಿಸುತ್ತವೆ. ಇಂತಹ ಕಲ್ಗುಪ್ಪೆ ಸಮಾಧಿಗಳನ್ನು ನಿರ್ಮಿಸುವ ಸಂಪ್ರದಾಯ ಇಂದಿಗೂ ಚಾಲ್ತಿಯಲ್ಲಿದೆ. ಈ ಗ್ರಾಮದಲ್ಲಿರುವ ಮ್ಯಾಸ ಬುಡಕಟ್ಟು ಸಮುದಾಯಕ್ಕೆ ಸೇರಿದ ಜರಿಮಲೆ ದುರುಗಮ್ಮದೇವಿಯ ಪೂಜಾರಿ ವಂಶಸ್ಥರಲ್ಲಿ ಯಾರಾದರೂ ಸಾವನಪ್ಪಿದರೆ ಅವರ ಶವವನ್ನು ಬೆಟ್ಟದ ಮೇಲಿನ 'ವಡಕಟ್ಟೆಸರ' ಎನ್ನುವ ಸ್ಥಳದಲ್ಲಿ ಅಂತ್ಯಸಂಸ್ಕಾರ ಮಾಡಲಾಗುತ್ತದೆ.

ಮೊದಲು ಶವವನ್ನು ಸುಟ್ಟ ನಂತರ ಅಳಿದುಳಿದ ಬೂದಿ ಅವಶೇಷಗಳನ್ನು ಸಂಗ್ರಹಿಸಿ ಅದರ ಗುರುತಿಗಾಗಿ ಸುತ್ತಲೂ ಒತ್ತಾಗಿ ಹಾಕಿದ ಸಣ್ಣಕಲ್ಲುಗಳಿಂದ ಮುಚ್ಚಿ ಕಲ್ಗುಪ್ಪೆ ನಿರ್ಮಾಣ ಮಾಡುವ ಸಂಪ್ರದಾಯ ಇಂದಿಗೂ ಜೀವಂತವಾಗಿದೆ. ಈ ಕಲ್ಗುಪ್ಪೆ ಸಮಾಧಿಗಳಿಗೆ ಪ್ರತಿವರ್ಷ ಮಾರ್ಚ್ ತಿಂಗಳಲ್ಲಿ ನಡೆಯುವ ದುರುಗಮ್ಮ ಜಾತ್ರೆಯ ಸಂದರ್ಭದಲ್ಲಿ ಹೂ, ಬಳೆ, ವಸ್ತ್ರಗಳಿಂದ ಅಲಂಕರಿಸಿ, ಎಡೆ ಇಟ್ಟು ನೈವೇದ್ಯ ಮಾಡುತ್ತಾರೆ ಎಂದು ಸ್ಥಳೀಯ ವಕ್ತೃ ಚೌಡಪ್ಪ ಅವರು ವಿವರಿಸುವರು. ಆದರೆ ಇಲ್ಲಿನ ಬಹುತೇಕ ಸಮಾಧಿಗಳು ಗಿಡಗಂಟೆಗಳು ಬೆಳೆದು ಮುಚ್ಚಿ ಹೋಗಿವೆ. ಇನ್ನೂ ಕೆಲವು ಸಮಾಧಿಗಳನ್ನು ನಿಧಿ ಆಸೆಗಾಗಿ, ಮನೆಗಳ ನಿರ್ಮಾಣಕ್ಕಾಗಿ, ಕೃಷಿ ಚಟುವಟಿಕೆಗಳಿಗಾಗಿ ಸಂಪೂರ್ಣವಾಗಿ ಹಾಳುಮಾಡಿರುವುದು ಅಧ್ಯಯನದಲ್ಲಿ ಗುರುತಿಸಲಾಗಿದೆ. ಜರಿಮಲೆಯ ಬೃಹತ್

ಶಿಲಾಯುಗದ ನೆಲೆಯ ಜನರಿಗೂ ತಾಲೂಕಿನಲ್ಲಿರುವ ವಿವಿಧ ಬೃಹತ್ ಶಿಲಾಯುಗದ ನೆಲೆಗಳ ಜನರಿಗೂ ಪರಸ್ಪರ ಒಡನಾಟ ಇದ್ದಿರಬೇಕೆಂಬುದು ಪ್ರಸ್ತುತ ಅಧ್ಯಯನದಿಂದ ತಿಳಿದು ಬರುತ್ತದೆ. ಹಾಗೂ ಇದೇ ಮೊದಲ ಬಾರಿಗೆ ಕಲ್ಲುಗ್ಗಪ್ಪೆ ಸಮಾಧಿಗಳು ಅಧ್ಯಯನ ಪರಿಸರದಲ್ಲಿ ಕಂಡುಬಂದಿರುವುದು ವಿಶೇಷ ಸಂಗತಿಯಾಗಿದೆ.

**ಗುಡೇಕೋಟೆ**

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಹೋಬಳಿ ಕೇಂದ್ರಗಳಲ್ಲಿ ಗುಡೇಕೋಟೆ ಒಂದು. ಇದು ತಾಲ್ಲೂಕು ಕೇಂದ್ರದಿಂದ ಪೂರ್ವಕ್ಕೆ ೨೮ ಕಿ.ಮೀ ಹಾಗೂ ಜಿಲ್ಲಾ ಕೇಂದ್ರದಿಂದ ನೈರುತ್ಯಕ್ಕೆ ೪೫ ಕಿ.ಮೀ ದೂರದಲ್ಲಿದೆ. ಈ ಗ್ರಾಮದ ಅಕ್ಕ-ಪಕ್ಕ ಇರುವ ಬೆಟ್ಟಗುಡ್ಡಗಳು, ಕೆರೆ-ಕಟ್ಟೆಗಳು, ಸರ್ವಕಾಲಿಕ ಮತ್ತು ಋತುಕಾಲಿನ ನೀರಿನ ಸೆಲೆಗಳು ಪ್ರಾಗಿತಿಹಾಸ ಕಾಲದ ಮಾನವ ನೆಲೆಗೊಳ್ಳಲು ಕಾರಣವಾಗಿವೆ. ಗುಡೇಕೋಟೆಯ ಸ್ಥಳನಾಮದ ಕುರಿತು ಪುರಾಣ, ಜನಪದ ಕಥೆ, ಕಾವ್ಯಗಳಲ್ಲಿ ಬಾಣಸುರ ಪಟ್ಟಣವೆಂದು ಕರೆಯಲಾಗಿದೆ. ಈ ಬಾಣಾಸುರನು ಶಿವಪಾವರ್ತಿಯರ ಪರಮ ಭಕ್ತನಾಗಿದ್ದು, ಇವನ ಭಕ್ತಿಗೆ ಮೆಚ್ಚಿ ಶಿವಪಾರ್ವತಿಯರು ಪಟ್ಟಣದ ಮಹಾದ್ವಾರವನ್ನು ಸದಾಕಾಲ ಕಾಯುತ್ತಿರುವುದಾಗಿ ಅಭಯ ನೀಡಿದ್ದರೆಂಬ ಪ್ರತೀತಿಯೂ ಇದೆ. ಅಲ್ಲದೇ ಗುಡ್ಡದ ಮೇಲೆ ಕೋಟೆ ಇರುವುದರಿಂದ ಈ ಗ್ರಾಮಕ್ಕೆ 'ಗುಡೇಕೊಟೆ' ಎಂಬ ಹೆಸರು ಬಂದಿರಬೇಕು ಎಂಬುದು ಜನರ ನಂಬಿಕೆಯಾಗಿದೆ. ಈ ನೆಲೆಯಲ್ಲಿ ನೂತನ ಶಿಲಾಯುಗದಿಂದ ಹಿಡಿದು ಬೃಹತ್ ಶಿಲಾಯುಗ, ಆದಿ ಇತಿಹಾಸ ಕಾಲದ ಸಾಂಸ್ಕೃತಿಯ ಕುರುಹುಗಳು ಶೋಧವಾಗಿವೆ.[೪೪] ಇಲ್ಲಿ ದೊರೆತ ಸಾಂಸ್ಕೃತಿಕ ಅವಶೇಷಗಳಲ್ಲಿ ಉಜ್ಜಿನಯಗೊಳಿಸಿದ ಶಿಲಾಕೊಡಲಿ, ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು(ಬಿ.ಆರ್.ಡಬ್ಲ್ಯೂ), ವಿವಿಧ ಮಾದರಿಯ ಶಿಲಾಸಮಾಧಿಗಳು, ಮಣಿಗಳು, ಹಾಗೂ ಗವಿಕಲ್ಲಾಸರೆಯಲ್ಲಿ ವರ್ಣಚಿತ್ರಗಳು, ಕುಟ್ಟುಚಿತ್ರಗಳು ಬೆಳಕಿಗೆ ಬಂದಿವೆ.

ಗುಡೇಕೋಟೆ ಗ್ರಾಮದ ದಕ್ಷಿಣ ದಿಕ್ಕಿನ ಬೆಟ್ಟ ಪ್ರದೇಶದಲ್ಲಿ ಕಂಡಿಕೋಣೆ ಸಮಾಧಿಯೊಂದು (ಭೂ ಮಟ್ಟದಲ್ಲಿ ೪-೫ ಚಪ್ಪಡಿಕಲ್ಲುಗಳಿಂದ ರಚಿಸಿದ ಕೋಣೆಯನ್ನು ಕಲ್ಮನೆ ಎನ್ನುವರು. ಕೋಣೆಯ ಮೇಲ್ಭಾಗವನ್ನು ಚಪ್ಪಡಿಕಲ್ಲುಗಳಿಂದ ಮುಚ್ಚಲಾಗಿರುತ್ತದೆ. ಯಾವುದಾದರೂ ಒಂದು ಬದಿಯ ಗೋಡೆಯ ಚಪ್ಪಡಿಕಲ್ಲಿನಲ್ಲಿ ಕಂಡಿ ಇದ್ದರೆ ಅದನ್ನು ಕಂಡಿಕೋಣೆ ಸಮಾಧಿ ಎಂದು ಕರೆಯುವರು) ಕಂಡುಬಂದಿದ್ದು, ಅದು ಇಂದಿಗೂ ಸುಸ್ಥಿತಿಯಲ್ಲಿದೆ. ಇನ್ನು ಉಳಿದಂತೆ ಹಲವು ಸಮಾಧಿಗಳು ಕಲ್ಲುಗಣಿಗಾರಿಕೆಯಿಂದ ಹಾಳಾಗಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಸಮಾಧಿಯು ಪೂರ್ವಾಭಿಮುಖವಾಗಿದ್ದು, ೧೦ ಅಡಿ ಉದ್ದ, ೮ ಅಡಿ ಅಗಲ ವಿಸ್ತೀರ್ಣ ಹೊಂದಿದೆ. ಹಾಗೂ ಮೇಲ್ಭಾಗದಲ್ಲಿ ೫ ಸೆಂ.ಮೀ ವ್ಯಾಸದ ಕಲ್ಗುಳಿಗಳಿವೆ. ಒಳ ಭಾಗದಲ್ಲಿ ಬಿಳಿವರ್ಣದಲ್ಲಿ ರಚಿಸಿದ ಮನುಷ್ಯಾಕೃತಿಯ ಕಡ್ಡಿಚಿತ್ರಗಳಿವೆ. ಈ ಚಿತ್ರಗಳು ಇತಿಹಾಸ ಆರಂಭಕಾಲಕ್ಕೆ ಸೇರಿವೆ. ಪೂರ್ವಾಭಿಮುಖವಾಗಿರುವ ಚಪ್ಪಡಿಕಲ್ಲಿಗೆ ೫೦ ಸೆಂ.ಮೀ. ವ್ಯಾಸದ ಕಿಂಡಿಯಿದೆ. ಈ ರೀತಿಯ ಶಿಲಾಸಮಾಧಿಯೊಂದರ ಚಪ್ಪಡಿಕಲ್ಲಿನಲ್ಲಿ ವರ್ಣಚಿತ್ರಗಳು

ಕಂಡುಬಂದಿರುವುದು ಅಪರೂಪವೆನ್ನಬಹುದು. ಸ್ಥಳೀಯರು ಇದನ್ನು ಬೇಟೆಮನೆ, ಕಾಗೆಗೂಡು ಇತ್ಯಾದಿ ಹೆಸರಿನಿಂದ ಕರೆಯುತ್ತಾರೆ.

ಪ್ರಸ್ತುತ ಈ ಸಮಾಧಿಯ ಸುತ್ತಲೂ ಕಲ್ಲುಕ್ವಾರಿ ಗಣಿಗಾರಿಕೆ ನಡೆಯುತ್ತಿದ್ದು ಬೃಹತ್ ಬಂಡೆ ಸ್ಫೋಟದಿಂದ ಇಲ್ಲಿನ ಸಮಾಧಿಯು ನಾಶಹೊಂದುವ ಸಾಧ್ಯತೆಯಿದೆ. ಇಲ್ಲಿನ ಕೋಟೆಗೆ ಹೋಗುವ ದಾರಿಯಲ್ಲಿ ನೈಸರ್ಗಿಕವಾಗಿರುವ ಕಲ್ಮನೆಯಲ್ಲಿ ಕಂದು ಮತ್ತು ಬಿಳಿವರ್ಣದ ಚಿತ್ರಗಳಿದ್ದು ಅವುಗಳಲ್ಲಿ ಮಾನವನು ಪ್ರಾಣಿಬೇಟೆ, ಕುದುರೆ ಸವಾರಿ ಮಾಡುತ್ತಿರುವಂತಹ ಚಿತ್ರಗಳು ಹಾಗೂ ಎಮ್ಮೆಯ ಚಿತ್ರವನ್ನು ರಚಿಸಿರುವುದನ್ನು ಕಾಣುತ್ತೇವೆ. ಒಟ್ಟಿನಲ್ಲಿ ಗುಡೇಕೋಟೆ ಬೆಟ್ಟದಲ್ಲಿರುವ ಭೌಗೋಳಿಕ ಸನ್ನಿವೇಶಗಳು ಪ್ರಾಗೈತಿಹಾಸಿಕ ಕಾಲದಿಂದ ಮಾನವನು ನೆಲೆಗೊಳ್ಳಲು ನೆರವಾಗಿವೆ. ಇಲ್ಲಿನ ಬೆಟ್ಟಗಳಲ್ಲಿನ ಗವಿ, ಕಲ್ಲಾಸರೆಗಳನ್ನು ವಾಸ್ತವ್ಯದ  ನೆಲೆಗಳಾಗಿ ರೂಪಿಸಿಕೊಂಡಿದ್ದರು. ಹಾಗೂ ಗ್ರಾಮದ ದಕ್ಷಿಣಕ್ಕೆ ಕೃಷಿಗೆ ಯೋಗ್ಯವಲ್ಲದ ಸ್ಥಳದಲ್ಲಿ ಶವಸಂಸ್ಕಾರ ಮಾಡುತ್ತಿದ್ದರೆಂಬುದಕ್ಕೆ ಇಲ್ಲಿನ ಸಮಾಧಿಯ ನೆಲೆಯ ಲಕ್ಷಣಗಳು ಸೂಚಿಸುತ್ತವೆ.

**ಕುಮತಿ**

ಈ ಗ್ರಾಮವು ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ಸು. ೪೦ ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೭೫ ಕಿ.ಮೀ ದೂರದಲ್ಲಿದೆ. ಭೌಗೋಳಿಕವಾಗಿ ಬಯಲು ಪ್ರದೇಶದಲ್ಲಿರುವ ಇಲ್ಲಿನ ಸಣ್ಣ ಪುಟ್ಟ ಗುಡ್ಡಗಳು ಸುತ್ತಮುತ್ತ ಸ್ವಲ್ಪಮಟ್ಟಿಗೆ ಕುರುಚಲು ಗಿಡಗಳಿರುವ ಅರಣ್ಯ ಮಳೆಯ ಪ್ರಮಾಣ ಕಡಿಮೆ ಇರುವ ಭೌಗೋಳಿಕ ಲಕ್ಷಣವುಳ್ಳ ಪ್ರದೇಶ ಇದಾಗಿದೆ. ಈ ನೆಲೆಯ ಸಮೀಪದಲ್ಲಿಯೇ ಚಿನ್ನಹಗರಿ ನದಿಯು ಹರಿದು ಹೋಗುತ್ತದೆ. ೧೯೯೬ರಲ್ಲಿ ಮೊದಲ ಭಾರಿಗೆ ಪುರಾತತ್ವ ಇಲಾಖೆಯ ಬೆಂಗಳೂರು ಶಾಖೆಯವರು ಕೆ.ವಿ. ಪೂಣಚ್ಚ ಇವರ ನೇತೃತ್ವದಲ್ಲಿ ಹಮ್ಮಿಕೊಂಡಿದ್ದ ಗ್ರಾಮಾಂತರ ಸಮೀಕ್ಷಾ ಕಾರ್ಯದಲ್ಲಿ ಕೆ.ಎಂ.ರುದ್ರಯ್ಯನವರ ಜಮೀನಿನಲ್ಲಿ ಏಳು ಮಾನವಾಕೃತಿಯ ಏಕ ಶಿಲಾಸಮುಚ್ಛಯಗಳನ್ನು ಹಾಗೂ ಕಂಡಿಕೋಣೆ ಸಮಾಧಿಯನ್ನು ಅನ್ವೇಷಿಸಿ ಇದೊಂದು ಬೃಹತ್ ಶಿಲಾಯುಗದ ನೆಲೆಯೆಂದು ವರದಿ ಮಾಡಿದರು.[೬೫] ಕಂಡಿಕೋಣೆ ಸಮಾಧಿಯು ಇಲ್ಲಿಂದ ಸು.೧ ಕಿ.ಮೀ ದೂರದಲ್ಲಿದೆ. ಸ್ಥಳೀಯರು ಇದನ್ನು 'ಮೂಗು ಮಲೇರು ಗುಡಿ' ಎಂದು ಕರೆಯುತ್ತಾರೆ.

ಕುಮತಿ ಗ್ರಾಮದ ಕೆರೆದಂಡೆಯ ಉತ್ತರಕ್ಕೆ ಮುನ್ನೂರು ಮೀಟರ್ ದೂರದಲ್ಲಿರುವ ಕೆ.ಎಂ.ರುದ್ರಯ್ಯನವರ ಜಮೀನಿನಲ್ಲಿ ಏಳು ಮಾನವಾಕೃತಿಯ ಏಕ ಶಿಲಾಸಮುಚ್ಛಯಗಳಿದ್ದು, ಪ್ರಸ್ತುತ ಅವುಗಳಲ್ಲಿ ಎರಡು ಮಾತ್ರ ಸುಸ್ಥಿತಿಯಲ್ಲಿವೆ. ಇನ್ನುಳಿದ ಐದು ಸಮುಚ್ಛಯಗಳು ಭಗ್ನಗೊಂಡಿವೆ. ಈ ಶಿಲಾ ಸಮುಚ್ಛಯಗಳನ್ನು ಸ್ಥಳೀಯವಾಗಿ ಸಿಗುವ ಗ್ರಾನೈಟ್ ಶಿಲೆಯ ಅಗಲವಾದ ಶಿಲಾಫಲಕಗಳಿಂದ ದಕ್ಷಿಣೋತ್ತರವಾಗಿ ಯೋಜಿಸಿ, ಪೂರ್ವಾಭಿಮುಖವಾಗಿ ನಿಲ್ಲಿಸಲಾಗಿದೆ. ಇವುಗಳನ್ನು ಸ್ಥಳೀಯರು 'ರಾಕ್ಷಸಕಲ್ಲುಗಳು' ಎಂದು ಕರೆಯುವರು. ಇವುಗಳ ಬಗ್ಗೆ ಪೌರಾಣಿಕ ಕಥೆ ಮತ್ತು ಧಾರ್ಮಿಕ

ನಂಬಿಕೆ ಜನರಲ್ಲಿದೆ. ಈ ಮಾನವಾಕೃತಿ ನಿರ್ಮಿತಿಗಳು ದಕ್ಷಿಣ ಭಾರತದಲ್ಲಿಯೇ ಕಂಡುಬರುವ ಮಾನವಾಕೃತಿ ರಚನೆಗಳಲ್ಲಿ ಅತ್ಯಂತ ಮಹತ್ವದ ನಿರ್ಮಿತಿಗಳಾಗಿವೆ. ಇವುಗಳ ಲಕ್ಷಣಗಳನ್ನು ಆಧರಿಸಿ ಗಂಡು ಮತ್ತು ಹೆಣ್ಣಿನ ಅಕೃತಿಗಳೆಂಬ ಅಭಿಪ್ರಾಯಗಳನ್ನು ಕೂಡ ಹಲವು ಸಂಶೋಧಕರು ವ್ಯಕ್ತಪಡಿಸಿದ್ದಾರೆ. ಅ.ಸುಂದರ ಅವರು ಇಲ್ಲಿನ ಮಾನವಾಕೃತಿ ಗೊಂಬೆಗಳು ಪಂಚಪಾಂಡವರನ್ನು ನಿರ್ದೇಶಿಸುತ್ತವೆ ಎಂದಿದ್ದಾರೆ. ಒಟ್ಟಿನಲ್ಲಿ ಕುಮತಿ ನೆಲೆಯು ಬೃಹತ್ ಶಿಲಾಯುಗ ಕಾಲದ ಧಾರ್ಮಿಕ ಆಚರಣೆಯ ಕೇಂದ್ರವಾಗಿತ್ತೆಂದು ಹೇಳಬಹುದು. ಈ ನಿಟ್ಟಿನಲ್ಲಿ ವಿಸ್ತೃತ ಅಧ್ಯಯನಗಳು ತಲಸ್ಪರ್ಶಿಯಾಗುವ ಜರೂರತೆ ಇದೆ.

**ಹುಲಿಕುಂಟೆ.**

ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ಸು.೩೧ ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೭೪ ಕಿ.ಮೀ ದೂರದಲ್ಲಿ ಹುಲಿಕುಂಟೆ ಗ್ರಾಮವಿದೆ. ಭೌಗೋಳಿಕವಾಗಿ ಗ್ರಾಮದ ಸುತ್ತಮುತ್ತ ಕುರುಚಲು ಕಾಡು ಹಾಗೂ ಸರ್ವಕಾಲಿಕವಾಗಿರುವ ನೀರಿನ ದೋಣಿ, ಗುಡೇಕೋಟೆ ಬೆಟ್ಟಸಾಲು ಇದೆ. ೧೯೯೮ರಲ್ಲಿ ಬಾಲಸುಬ್ರಮಣ್ಯ ಅವರ ನೇತೃತ್ವದ ತಂಡವು ಹುಲಿಕುಂಟೆ ಗ್ರಾಮದ ವಾಯುವ್ಯ ಭಾಗಕ್ಕೆ ಸು. ೨ಕಿ.ಮೀ ದೂರದಲ್ಲಿರುವ 'ಹರಿಜನ ಬೋರಕ್ಕ' ಎಂಬುವರ ಜಮೀನಿನಲ್ಲಿ ಶಿಲಾವೃತ್ತದಲ್ಲಿರುವ ಮೂರು ಮಾನವಾಕೃತಿಯ ಏಕಶಿಲಾ ಸಮುಚ್ಛಯಗಳನ್ನು ಮತ್ತು ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು, ಕಬ್ಬಿಣ ತಯಾರಿಸುವ ಕೆಲ ಅವಶೇಷಗಳನ್ನು ಶೋಧಿಸಲಾಯಿತು.[೪೬] ಈ ರೀತಿಯ ಲಕ್ಷಣಗಳು ಕರ್ನಾಟಕದ ಯಾವುದೇ ನೆಲೆಗಳಲ್ಲಿ ಕಂಡುಬರುವುದಿಲ್ಲ. ಹಾಗಾಗಿ ಇಂಥ ವಿಶೇಷ ಲಕ್ಷಣಗಳು ಈ ನೆಲೆಯ ಹೆಗ್ಗಳಿಕೆ. ಇಲ್ಲಿನ ಮಾನವಾಕೃತಿಗಳಲ್ಲಿ ಒಂದು ಮಾತ್ರ ಸುಸ್ಥಿತಿಯಲ್ಲಿದ್ದು, ಮತ್ತೊಂದರ ಭಾಗ ಭೂಮಿಯಲ್ಲಿ ಹುದುಗಿದೆ. ಇನ್ನೊಂದರ ಕೆಲ ಅವಶೇಷಗಳು ಮಾತ್ರ ಲಭ್ಯವಾಗಿದ್ದು ಇವುಗಳನ್ನು ಸ್ಥಳೀಯವಾಗಿರುವ ಗ್ರಾನೈಟ್ ಶಿಲೆಯ ಫಲಕಗಳಿಂದ ನಿರ್ಮಿಸಲಾಗಿದೆ. ಇವು ಕುಮತಿಯಲ್ಲಿರುವ ಮಾನವಾಕೃತಿಗಳಿಗಿಂತ ಚಿಕ್ಕದಾಗಿವೆ. ಈ ಆಕೃತಿಗಳಿಗೆ ಎಡೆ ಇಡುವ ಪದ್ದತಿ ಇಲ್ಲ. ಆದರೆ ಇವುಗಳನ್ನು ಸಹ ರಾಕ್ಷಸಕಲ್ಲುಗಳೆಂದು ಕರೆಯಲಾಗುತ್ತದೆ.[೪೭]

**ಕೆ.ರಾಯಪುರ**

ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ಸುಮಾರು ೪೫.ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೪೭ ಕಿ.ಮೀ ದೂರದಲ್ಲಿ ಕೆ.ರಾಯಪುರ ಗ್ರಾಮವಿದೆ. ಈ ಗ್ರಾಮದ ಸುತ್ತಮುತ್ತ ನೈಸರ್ಗಿಕವಾದ ಬೆಟ್ಟಗುಡ್ಡ, ಗಿಡಮರ, ಬಳ್ಳಿ, ಹಳ್ಳಕೊಳ್ಳಗಳು ಆವೃತವಾಗಿವೆ. ಇಂಥ ಭೌಗೋಳಿಕ ಪರಿಸರದಲ್ಲಿ ಅನ್ವೇಷಣೆ ನಡೆಸಿದ ಜಯಣ್ಣ ಉಲ್ಲಾನಹಳ್ಳಿಯವರು ಬಳ್ಳಾರಿ ನಾಗೇಂದ್ರಪ್ಪನ ಹೊಲದಲ್ಲಿ ಬೃಹತ್ ಶಿಲಾಯುಗದ ಕಬ್ಬಿಣದ ಕಲುಮೆ ಹಾಗೂ ಬೃಹತ್ ಶಿಲಾಸಮಾಧಿಗಳನ್ನು ಪತ್ತೆಹಚ್ಚಿ ಅವುಗಳ ವಿವರಗಳನ್ನು ತಮ್ಮ ಸಂಶೋಧನಾ ಲೇಖನದಲ್ಲಿ ದಾಖಲಿಸಿದ್ದಾರೆ. ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ

ಕ್ಷೇತ್ರಕಾರ್ಯ ಕೈಗೊಂಡಾಗ ಆ ನೆಲೆಯಲ್ಲಿದ್ದ ಬೃಹತ್ ಶಿಲಾಯುಗದ ಸಮಾಧಿಗಳು ಮತ್ತು ಕುಲುಮೆ ಅವಶೇಷಗಳು ಸಂಪೂರ್ಣ ಹಾಳಾಗಿರುವುದನ್ನು ಗಮನಿಸಲಾಯಿತು. ಈ ನೆಲೆಯಲ್ಲಿ ದೊರಕಿರುವ ಕುರುಹುಗಳ ಆಧಾರದಿಂದ ತಿಳಿಯುವುದೇನೆಂದರೆ ಕೆ. ರಾಯಪುರವು ಬೃಹತ್ ಶಿಲಾಯುಗದ ಪ್ರಮುಖ ನೆಲೆಯಾಗಿತ್ತೆಂದು ವ್ಯಕ್ತವಾಗುತ್ತದೆ.

**ಹುರುಳಿಹಾಳು**

ಹುರುಳಿಹಾಳು ಗ್ರಾಮವು ಕೂಡ್ಲಿಗಿ ತಾಲೂಕಿನಿಂದ ದಕ್ಷಿಣಕ್ಕೆ ೩೬ ಕಿ.ಮೀ ದೂರದಲ್ಲಿದೆ. ಈ ಗ್ರಾಮದ ಉತ್ತರಕ್ಕೆ ಓಬಳಶೆಟ್ಟಿಹಳ್ಳಿ, ದಕ್ಷಿಣಕ್ಕೆ ಜುಮ್ಮೋಬನಹಳ್ಳಿ ಪೂರ್ವಕ್ಕೆ ಮೀನಕೆರೆ, ಚಿರತಗುಂಡು, ವಲಸೆ ಹಾಗೂ ಪಶ್ಚಿಮಕ್ಕೆ ಗುಂಡುಮುಣಗು, ಚಿಕ್ಕಜೋಗಿಹಳ್ಳಿ ನೆರೆಯ ಗ್ರಾಮಗಳಾಗಿವೆ. 'ಹುರುಳಿಹಾಳು'ಗೆ ಪ್ರಾಚೀನತೆಯಿದ್ದು ಬುಡಕಟ್ಟು ಸಂಸ್ಕೃತಿಯ ನೆಲೆಗಳಲ್ಲಿ ಒಂದಾಗಿದೆ. ಹುರುಳಿಹಾಳು ಹಿಂದೆ ಈಗಿರುವ ಸ್ಥಳದಲ್ಲಿ ಇರಲಿಲ್ಲ. ಪ್ರಾಚೀನ ಗ್ರಾಮಗಳೆರಡು ನಿರ್ಮಾಣಗೊಂಡು ನಂತರ ನಾಶವಾದ ಮೇಲೆ ಅಲ್ಲಿನ ಜನ ಹೊಸದಾಗಿ ಈಗಿರುವ ಸ್ಥಳದಲ್ಲಿ ನೆಲೆಗೊಂಡಿದ್ದಾರೆ. ಹುರುಳಿಹಾಳಿನ ಪ್ರಾಚೀನ ಹೆಸರು 'ಪಿಲ್ಲಿಪಾತಿ' ಎಂಬುದಾಗಿತ್ತು. ಪ್ಲೇಗು ಬಂದಾಗ ಜನ ಈ ಊರನ್ನು ತೊರೆದು ಮತ್ತೊಂದು ಗ್ರಾಮ ನಿರ್ಮಿಸಿ ಅದಕ್ಕೆ 'ಸುಂದಹಳ್ಳಿ' ಎಂದು ಕರೆದರು. ಇವೆರಡು ಗ್ರಾಮಗಳು ಇಂದು ನಶಿಸಿಹೋಗಿದ್ದು ಅವಶೇಷಗಳು ಮಾತ್ರ ಉಳಿದಿವೆ. ಈಗಿರುವ ಗ್ರಾಮದ ಈಶಾನ್ಯ ದಿಕ್ಕಿಗೆ ಹುರುಳಿಹಾಳಿನಿಂದ ಎಕ್ಕೆಗುಂದಿಗೆ ಹೋಗುವ ಮಾರ್ಗವಾಗಿ (೨ ಕಿ.ಮೀ ದೂರದಲ್ಲಿ) ಬಲ ಬದಿಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಹಾದಿಕೋಣೆ ಸಮಾಧಿಯನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಶೋಧಿಸಲಾಗಿದೆ.[೪೭] ಇಲ್ಲಿನ ಸಮಾಧಿಯ ರಚನೆಗೆ ಗ್ರಾನೈಟ್ ಶಿಲೆಯ ನಾಲ್ಕು ಚಪ್ಪಡಿಕಲ್ಲುಗಳನ್ನು ಬಳಸಿ ನಿರ್ಮಾಣ ಮಾಡಲಾಗಿದೆ. ಮೂರು ಚಪ್ಪಡಿಕಲ್ಲುಗಳನ್ನು ಪರಸ್ಪರ ಅಭಿಮುಖವಾಗಿ ನಿಲ್ಲಿಸಿ ಅವುಗಳ ಮೇಲೆ ಮುಚ್ಚಳ ರೂಪದಲ್ಲಿ ಬಂಡೆಯನ್ನು ಹಾಸಲಾಗಿದೆ. ಸಮಾಧಿಯ ಅಳತೆಯು ೫ ಅಡಿ ಉದ್ದ, ೩೧/೨ ಅಡಿ ಅಗಲ, ೨೧/೨ ಅಡಿ ಎತ್ತರವಿದ್ದು ಒಂದು ಕೋಣೆಯರೂಪದಲ್ಲಿದೆ. ವಿಶೇಷವಾಗಿ ಮೇಲ್ಭಾಗದ ಚಪ್ಪಡಿಕಲ್ಲಿನಲ್ಲಿ ೧೫ ಕಲ್ಗುಳಿಗಳಿವೆ. ಸ್ಥಳೀಯರು ಈ ಸಮಾಧಿಯನ್ನು ಉಜ್ಜಿನಪ್ಪನ ಪಾದಗಟ್ಟೆ ಎಂದು ಕರೆಯುವರು. ಒಟ್ಟಿನಲ್ಲಿ ಹುರುಳಿಹಾಳು ನೆಲೆಯು ಬೃಹತ್ ಶಿಲಾಯುಗ ಕಾಲದ ಸ್ಮಶಾನ ನೆಲೆಯಾಗಿದ್ದು, ಇದರ ಸಮೀಪದಲ್ಲಿ ಪ್ರಾಚೀನ ಕಬ್ಬಿಣದ ಕುಲುಮೆ ಅವಶೇಷಗಳು ಮತ್ತು ಕಪ್ಪು ವರ್ಣದ ಮಡಕೆ ಚೂರುಗಳು ಕಂಡುಬಂದಿರುವುದರಿಂದ ಇದು ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂಬುದರಲ್ಲಿ ಯಾವ ಅನುಮಾನಗಳಿಲ್ಲ.

**ಮಹದೇವಪುರ**

ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ಸುಮಾರು ೩೯.ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೪೫ ಕಿ.ಮೀ ದೂರದಲ್ಲಿ ಮಹದೇವಪುರ ಗ್ರಾಮವಿದೆ. ಈ ಗ್ರಾಮದ ಸುತ್ತಮುತ್ತ ನೈಸರ್ಗಿಕವಾದ

ಬೆಟ್ಟಗುಡ್ಡಗಳಿಂದ ಗಿಡಮರ, ಬಳ್ಳಿ, ಹಳ್ಳಕೊಳ್ಳಗಳಿಂದ ಕೂಡಿದೆ. ಇಂಥ ಭೌಗೋಳಿಕ ಪರಿಸರದಲ್ಲಿ ಅನ್ವೇಷಣೆ ನಡೆಸಿದ ಜಯಣ್ಣ ಉಲ್ಲಾನಹಳ್ಳಿಯವರು ತಿಪ್ಪೇರುದ್ರಪ್ಪನವರ ಜಮೀನಿನಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳನ್ನು ಪತ್ತೆಹಚ್ಚಿ ಅವುಗಳ ವಿವರಗಳನ್ನು ತಮ್ಮ ಸಂಶೋಧನ ಲೇಖನದಲ್ಲಿ ದಾಖಲಿಸಿದ್ದಾರೆ. ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಆ ನೆಲೆಯಲ್ಲಿದ್ದ ಬೃಹತ್ ಶಿಲಾಯುಗದ ಸಮಾಧಿಗಳು ಹಾಳಾಗಿರುವುದನ್ನು ಗಮನಿಸಲಾಯಿತು. ಅಲ್ಲದೇ ಈ ನೆಲೆಯಲ್ಲಿ ಸಮಾಧಿ ಅವಶೇಷಗಳು ಹೊರತುಪಡಿಸಿ ವಸತಿಯ ಕುರುಹುಗಳು ಕಂಡುಬಂದಿರುವುದಿಲ್ಲ ಹಾಗಾಗಿ ಇದು ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂದು ಅಭಿಪ್ರಾಯಿಸಲಾಗುವುದು.

**ಮಡಕಲಕಟ್ಟೆ**

ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ಸುಮಾರು ೩೫.ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ಸುಮಾರು ೪೦ ಕಿ.ಮೀ ದೂರದಲ್ಲಿ ಮಡಕಲಕಟ್ಟೆ ಗ್ರಾಮವಿದೆ. ಈ ಗ್ರಾಮದ ಪರಿಸರವು ನೈಸರ್ಗಿಕವಾದ ಬೆಟ್ಟ-ಗುಡ್ಡ, ಕುರುಚಲು ಗಿಡಗಳಿಂದ ಹಾಗೂ ಇಲ್ಲಿನ ನೆಲ ಕೆಂಪು ಮಿಶ್ರಿತ ಮರಳು ಮಣ್ಣಿನಿಂದ ಕೂಡಿದೆ. ಇಲ್ಲಿನ ಮಳೆ ಪ್ರಮಾಣವು ಕಡಿಮೆಯಿದೆ. ಈ ಪ್ರದೇಶದಲ್ಲಿ ಚಿಕ್ಕಹಗರಿ ಮತ್ತು ಚಿನ್ನಹಗರಿ(ಜಿನಗಿಹಳ್ಳಗಳ) ಹರಿಯುತ್ತಿದ್ದು ಅಲ್ಪ ಪ್ರಮಾಣದಲ್ಲಿ ನೀರಾವರಿಗೆ ಸಹಾಯಕವಾಗಿವೆ. ಇಂಥ ಭೌಗೋಳಿಕ ಅಂಶಗಳು ಶಿಲಾಯುಗದ ಮಾನವರು ನೆಲೆಗೊಳ್ಳಲು ಬೇಕಾದ ಪೂರಕ ವಾತಾವರಣವನ್ನು ಒದಗಿಸಿವೆ. ಈ ಗ್ರಾಮದಿಂದ ಗುಂಡುಮುಣುಗು ಗ್ರಾಮಕ್ಕೆ ಹೋಗುವ ರಸ್ತೆಯ ಬಲ ಮತ್ತು ಎಡ ಬದಿಯಲ್ಲಿ ಚಕ್ಕೆಕಲ್ಲುಗಳಿಂದ ತುಂಬಿದ ಕಲ್ಲುವೃತ್ತ ಮಾದರಿಯ ಎರಡು ಸಮಾಧಿಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶೋಧಿಸಲಾಗಿದೆ. ಅವುಗಳಲ್ಲಿ ಗ್ರಾಮದಿಂದ ದಕ್ಷಿಣಕ್ಕೆ ಸು. ೨೦೦ ಮೀಟರ್ ಅಂತರದಲ್ಲಿ ಗುಂಡುಮುಣುಗು ಮಾರ್ಗವಾಗಿ ಹೋಗುವ ರಸ್ತೆಯ ಬಲ ಭಾಗದಲ್ಲಿರುವ ಶಿಲಾಸಮಾಧಿ ಆಯಾತಾಕಾರದಲ್ಲಿದೆ. ಶಿಲಾಸಮಾಧಿಯು ಉತ್ತರ ಮತ್ತು ದಕ್ಷಿಣಾಭಿಮುಖವಾಗಿದ್ದು ೬.೫ ಅಡಿ ಉದ್ದ ಮತ್ತು ೪.೯ ಅಡಿ ಅಗಲ ಅಳತೆಯನ್ನು ಹೊಂದಿದೆ. ಇದರ ನಾಲ್ಕು ದಿಕ್ಕುಗಳಲ್ಲಿ ಚಪ್ಪಡಿಕಲ್ಲುಗಳನ್ನು ಒಂದಕ್ಕೊಂದು ಅಭಿಮುಖವಾಗಿ ಜೋಡಿಸಿ ಸಮಾಧಿ ನಿರ್ಮಿಸಲಾಗಿದೆ. ಅಲ್ಲದೇ ಇದರ ಪೂರ್ವ, ಪಶ್ಚಿಮ ಮತ್ತು ದಕ್ಷಿಣಕ್ಕೆ ನೆಟ್ಟಿರುವ ಚಪ್ಪಡಿಕಲ್ಲುಗಳಿದ್ದು, ಉತ್ತರದ ಚಪ್ಪಡಿಕಲ್ಲು ಇರುವುದಿಲ್ಲ. ಪ್ರಾಯಶಃ ಅದು ಸ್ಥಾನಪಲ್ಲಟವಾಗಿರುವ ಸಾಧ್ಯತೆಯಿದೆ. ನೆಟ್ಟಂತಹ ಚಪ್ಪಡಿಕಲ್ಲುಗಳನ್ನು ಭೂ ಮೇಲ್ಮಟ್ಟದಿಂದ ಮೇಲಕ್ಕೆ ಎತ್ತರಿಸಲಾಗಿದ್ದು ಅವುಗಳ ಮೇಲೆ ಛತ್ತಿಯ ಕಲ್ಲನ್ನು ಇಟ್ಟಿರುವುದಿಲ್ಲ.

ಇಲ್ಲಿನ ಶಿಲಾಸಮಾಧಿಗಳನ್ನು ಸ್ಥಳೀಯರು 'ಹಿರಿಯರ ಕಟ್ಟೆಗಳು' ಎಂದು ಕರೆಯುತ್ತಾರೆ. ಇಲ್ಲಿನ ಮತ್ತೊಂದು ಶಿಲಾಸಮಾಧಿಯು ಗ್ರಾಮದಿಂದ ಆಗ್ನೇಯ ದಿಕ್ಕಿಗೆ ಸುಮಾರು ೪೦೦ ಮೀಟರ್ ಅಂತರದಲ್ಲಿ ಗುಂಡುಮುಣುಗು ಮಾರ್ಗವಾಗಿ ಹೋಗುವ ರಸ್ತೆಯ ಎಡ ಭಾಗದಲ್ಲಿದೆ. ಆಯಾತಾಕಾರದಲ್ಲಿರುವ ಈ ಶಿಲಾಸಮಾಧಿಯು ೭ ಅಡಿ ಉದ್ದ ಮತ್ತು ೫ ಅಡಿ ಅಗಲ ಅಳತೆಯನ್ನು ಹೊಂದಿದೆ. ಇದರ ನಾಲ್ಕು ದಿಕ್ಕುಗಳಲ್ಲಿ ಚಪ್ಪಡಿಕಲ್ಲುಗಳನ್ನು ಒಂದಕ್ಕೊಂದು ಅಭಿಮುಖವಾಗಿ ಜೋಡಿಸಿ

ಸಮಾಧಿ ನಿರ್ಮಿಸಲಾಗಿದೆ. ಅಲ್ಲದೆ ಇದರ ಪೂರ್ವ, ಪಶ್ಚಿಮ ಮತ್ತು ದಕ್ಷಿಣಕ್ಕೆ ನೆಟ್ಟಿರುವ ಚಪ್ಪಡಿಕಲ್ಲುಗಳಿದ್ದು, ಉತ್ತರದ ಚಪ್ಪಡಿಕಲ್ಲು ಇರುವುದಿಲ್ಲ. ಪ್ರಾಯಶಃ ಅದು ಸ್ಥಾನಪಲ್ಲಟವಾಗಿರುವ ಸಾಧ್ಯತೆಯಿದೆ. ನೆಟ್ಟಂತಹ ಚಪ್ಪಡಿಕಲ್ಲುಗಳನ್ನು ಭೂ ಮೇಲ್ಮಟ್ಟದಿಂದ ಮೇಲಕ್ಕೆ ಎತ್ತರಿಸಲಾಗಿದ್ದು ಅವುಗಳ ಮೇಲೆ ಛತ್ತಿಯ ಕಲ್ಲನ್ನು ಇಟ್ಟಿರುವುದಿಲ್ಲ. ಆದರೂ ಇದರ ಲಕ್ಷಣವನ್ನು ಗುರುತಿಸುವುದು ಕಷ್ಟದಾಯವಾಗಿದೆ. ಈ ಎಲ್ಲಾ ಅಂಶಗಳಿಂದ ತಿಳಿಯುದೇನೆಂದರೆ ಮಡಕಲಕಟ್ಟೆ ಗ್ರಾಮವೂ ಬೃಹತ್ ಶಿಲಾಯುಗದ ಸ್ಮಶಾನ ಎಂದು ಅಭಿಪ್ರಾಯಿಸಬಹುದು.

**ಮಾಳೇಹಳ್ಳಿ**

ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ಸು. ೪೦ ಕಿ.ಮೀ. ದೂರದಲ್ಲಿರುವ ಈ ನೆಲೆಯು ಕಲ್ಲಹಳ್ಳಿಯ-ಮಹಜರ್(ಉಪಗ್ರಾಮ)ವಾಗಿದೆ. ಈ ಗ್ರಾಮವು ಬಯಲು ಪ್ರದೇಶದಿಂದ ಕೂಡಿದ್ದು, ದಕ್ಷಿಣಕ್ಕೆ ಚಿನ್ನಹಗರಿ ನದಿ ದಂಡೆಯಿದೆ. ಮಾಳೆಹಳ್ಳಿಯ ದಕ್ಷಿಣಕ್ಕೆ ಕಲ್ಲಹಳ್ಳಿ, ಉತ್ತರಕ್ಕೆ ತಿಪ್ಪೇಹಳ್ಳಿ, ಪಶ್ಚಿಮಕ್ಕೆ ಪೂಜಾರಹಳ್ಳಿ ಎಂಬ ಹೆಸರಿನ ನೆರೆಯ ಗ್ರಾಮಗಳಿವೆ. ಮಾಳೆಹಳ್ಳಿಯ ಕೆರೆಯ ಉತ್ತರಕ್ಕೆ ಹಾಗೂ ತಿಪ್ಪೇಹಳ್ಳಿಗೆ ಹೋಗುವ ದಾರಿಯ ಎಡಬದಿಯಲ್ಲಿ ಕಾಣುವ ಎತ್ತರದ ಹೆಬ್ಬಂಡೆಗಳಿದ್ದು ಇವುಗಳನ್ನು 'ದವನಪ್ಪನ ಗುಂಡು' ಎಂದು ಕರೆಯಲಾಗುತ್ತದೆ. ಈ ಬಂಡೆಯ ಮಧ್ಯಬಾಗದಲ್ಲಿ ಕುಟ್ಟಿರಚಿಸಿದ ಜಿಂಕೆ ಮತ್ತು ಹಾವಿನ ಚಿತ್ರಗಳು ಕಂಡುಬಂದಿವೆ. ಜಿಂಕೆಯ ಚಿತ್ರವು ಉದ್ದವಾದ ಬಾಗಿದ ಕೋಡುಗಳಿಂದ ಗಿಡ್ಡ ದೇಹವನ್ನು ಹಾಗೂ ಕಾಲುಗಳು ಅಸ್ಪಷ್ಟವಾಗಿರುವಂತೆ ಚಿತ್ರಿಸಲಾಗಿದೆ. ದವನ ಎಂಬ ಪದವು ಸುವಾಸನೆಯ ಎಲೆಗಳನ್ನುಳ್ಳ ಒಂದು ಬಗೆಯ ಸಸ್ಯ; ಹಬ್ಬದ ಹೂ ಎಂಬ ಅರ್ಥವನ್ನು ಸೂಚಿಸುತ್ತದೆ. ಪ್ರಾಯಶಃ ದವನಪ್ಪ ಎನ್ನುವ ವ್ಯಕ್ತಿ ಈ ಪ್ರದೇಶದಲ್ಲಿ ನೆಲೆಸಿ ಪ್ರಸಿದ್ಧಿಯನ್ನು ಪಡೆದಿರಬೇಕು ಎಂದೆನ್ನಿಸುತ್ತದೆ.[೪೮] ಮಾಳೇಹಳ್ಳಿ ಗ್ರಾಮದ ಉತ್ತರ ದಿಕ್ಕಿಗೆ ಕೆರೆಯಂಗಳದಲ್ಲಿ ಶಿಲಾಸಮಾಧಿಯೊಂದಿದ್ದು ಇದಕ್ಕೆ ಸ್ಥಳೀಯರು ಕೆರೆಯಂಗಳದ ಬಸವಣ್ಣ ಎಂದು ಕರೆಯುತ್ತಾರೆ. ಆದರೆ ಇದರ ಲಕ್ಷಣವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇದು ಬೃಹತ್ ಶಿಲಾಯುಗದ ಸಮಾಧಿಯಾಗಿದ್ದು ಸಂಪೂರ್ಣಹಾಳಾಗಿದೆ. ಆಯಾತಾಕಾರದಲ್ಲಿದ್ದು, ಸ್ವಸ್ತಿಕ್ ರೂಪದಲ್ಲಿ ಗೋಚರಿಸುತ್ತದೆ. ಇದರ ಉತ್ತರ, ದಕ್ಷಿಣ ಮತ್ತು ಪಶ್ಚಿಮಕ್ಕೆ ನೆಟ್ಟಿರುವ ಕಲ್ಲು ಚಪ್ಪಡಿಗಳಿದ್ದು ಅವುಗಳು ಅಸ್ತವ್ಯಸ್ಥವಾಗಿವೆ. ಒಟ್ಟಾರೆಯಾಗಿ ಮಾಳೇಹಳ್ಳಿಯ ಸಮೀಪದಲ್ಲಿನ ಕಲ್ಲಹಳ್ಳಿಯು ನವಶಿಲಾಯುಗ, ಶಿಲಾ-ತಾಮ್ರಯುಗ ಹಾಗೂ ಬೃಹತ್ ಶಿಲಾಯುಗ ನೆಲೆಯಾಗಿದೆ. ಇದರ ಸಮೀಪದಲ್ಲಿಯೇ ಮಾಳೇಹಳ್ಳಿಯ ದವನಪ್ಪನ ಗುಂಡುಗಳು ಕಂಡುಬರುವುದರಿಂದ ಮಾಳೆಹಳ್ಳಿಯು ಸಹ ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂಬುದನ್ನು ಸ್ಪಷ್ಟವಾಗಿ ಗುರುತಿಸಬಹುದು.

**ತಿಮ್ಮವ್ವನಹಳ್ಳಿ (ತಿಮ್ಮನಹಳ್ಳಿ)**

ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ೪೦ ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೮೩.ಕಿ.ಮೀ ದೂರದಲ್ಲಿ ತಿಮ್ಮನಹಳ್ಳಿ ಗ್ರಾಮವಿದೆ. ಈ ಗ್ರಾಮದ ಸಮೀಪದಲ್ಲಿ ಚಿನ್ನಹಗರಿ ನದಿ ಹರಿದು ಹೋಗುತ್ತದೆ.

ಇಲ್ಲಿ ಪುರಾತನ ಕಬ್ಬಿಣದ ಕುಲುಮೆಗಳು ಮತ್ತು ಕಬ್ಬಿಣದ ಕಿಟ್ಟರಾಶಿ ಅವಶೇಷಗಳನ್ನು ಭೀಮಸಮುದ್ರ ರಂಗನಾಥ ಮತ್ತು ಎಚ್.ತಿಪ್ಪೇಸ್ವಾಮಿಯವರು ಶೋಧಿಸಿ ವರದಿಮಾಡಿದ್ದಾರೆ.[೪೯] ಭೌಗೋಳಿಕವಾಗಿ ಬಯಲು ಪ್ರದೇಶವಾಗಿದ್ದು ಇಲ್ಲಿನ ಜಮೀನೊಂದರಲ್ಲಿ ಸುಮಾರು ೧೦ ಟ್ರಾಕ್ಟರ್ ಲೋಡ್ ಆಗುವಷ್ಟು ಕಬ್ಬಿಣದ ಕಿಟ್ಟದ ರಾಶಿ ಹಾಗೂ ಕುಲುಮೆಯ ಅವಶೇಷಗಳು, ಮಣ್ಣಿನಿಂದ ಮಾಡಿದ ಕೊಳವೆಗಳು ದೊರೆತಿವೆ. ಈ ನೆಲೆಯ ಸಮೀಪದಲ್ಲಿ ಕುಮತಿ ಬೃಹತ್ ಶಿಲಾಯುಗದ ನೆಲೆಯು ಕಂಡುಬರುವುದರಿಂದ ಎರಡೂ ನೆಲೆಗಳಲ್ಲಿನ ಸಂಸ್ಕೃತಿಯ ಜನರಿಗೆ ಪರಸ್ಪರ ಒಡನಾಟವಿತ್ತೆಂದು ತೋರುತ್ತದೆ. ಪ್ರಾಯಶಃ ತಿಮ್ಮವ್ವನಹಳ್ಳಿಯಲ್ಲಿರುವ ಕಬ್ಬಿಣ ತಯಾರಿಕ ಘಟಕದಿಂದ ಸುತ್ತಮುತ್ತಲಿನ ನೆಲೆಗಳಿಗೆ ಕಬ್ಬಿಣದ ಉಪಕರಣಗಳನ್ನು ಪೂರೈಕೆ ಮಾಡಲಾಗುತ್ತಿತ್ತು ಎಂದು ಅಭಿಪ್ರಾಯಿಸಬಹುದು.

**ಕಲ್ಲಹಳ್ಳಿ**

ಕೂಡ್ಲಿಗಿ ತಾಲೂಕು ಕೇಂದ್ರದಿಂದ ೪೮.ಕಿ.ಮೀ ದೂರದಲ್ಲಿರುವ ಈ ನೆಲೆಯಲ್ಲಿ (ತಿಪ್ಪೇಹಳ್ಳಿಗೆ ಹೋಗುವ ದಾರಿಯ ಹಾಳೂರಿನಲ್ಲಿ) ನೂತನ ಶಿಲಾಯುಗ, ಶಿಲಾ–ತಾಮ್ರಯುಗ ಹಾಗೂ ಬೃಹತ್ ಶಿಲಾ ಸಂಸ್ಕೃತಿಯ ನೆಲೆಯನ್ನು ಮತ್ತು ಇದೇ ಕಾಲದ ಉಪಕರಣ ಹಾಗೂ ಬೃಹತ್ ಶಿಲಾಯುಗ ಕಾಲದ ಕಪ್ಪು–ಕೆಂಪು ವರ್ಣದ ಮಡಿಕೆ ಭಾಗಗಳು(ಬಿ.ಆರ್.ಡಬ್ಲ್ಯೂ), ವರ್ಣಚಿತ್ರಗಳು ಸಂಶೋಧಕರು ಬೆಳಕಿಗೆ ತಂದಿದ್ದಾರೆ. ಚಿನ್ನಹಗರಿ ನದಿ ದಂಡೆಯಲ್ಲಿರುವ ಈ ನೆಲೆಯಲ್ಲಿ ಹಾಳಾಗಿರುವ ಬೂದಿದಿಬ್ಬವೊಂದನ್ನು ಹಾಗೂ ವಿವಿಧ ಹಂತದ ಮಡಕೆ ಚೂರುಗಳು ಸಾಕಷ್ಟು ಪ್ರಮಾಣದಲ್ಲಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿರುವುದರಿಂದ ಈ ನೆಲೆಯು ಕೂಡ ಮಹತ್ವದ ನೆಲೆಯಾಗಿತ್ತೆಂಬುದು ಅಲ್ಲಿನ ಅವಶೇಷಗಳಿಂದ ದೃಢವಾಗುತ್ತದೆ.

**ಸುಣ್ಣಮರಡಿ**

ಕೂಡ್ಲಿಗಿ ತಾಲೂಕು ಕೇಂದ್ರದಿಂದ ೪೭ ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೮೦ ಕಿ.ಮೀ ದೂರದಲ್ಲಿ ಸುಣ್ಣಮರಡಿ ಎಂಬ ಹಾಳೂರು ಇದೆ. ಹುಲಿಕೆರೆ–ಚಿಕ್ಕಕುಂಬಳ ಗುಂಟೆಯ ಮಾರ್ಗದ ಮಧ್ಯದಲ್ಲಿರುವ ಇಲ್ಲಿ ಇಂದು ಜನವಸತಿಯಿಲ್ಲ. ಭೌಗೋಳಿಕವಾಗಿ ಬಯಲು ಪ್ರದೇಶವಾಗಿದ್ದು, ಕುರುಚಲು ಗಿಡಗಳಿಂದ ಹಾಗೂ ಮಳೆಗಾಲದಲ್ಲಿ ತುಂಬಿ ಹರಿಯುವ ಹಳ್ಳ, ಕುಂಟೆಗಳಿಂದ ಕೂಡಿರುವ ಸುಂದರ ಪರಿಸರವಾಗಿದೆ. ಈ ನೆಲೆಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಶಿಲಾಸಮಾಧಿ ಮತ್ತು ಆ ಕಾಲದ ಕಪ್ಪು–ಕೆಂಪು ವರ್ಣದ ಮಡಕೆಯ ಚೂರುಗಳು(ಬಿ.ಆರ್.ಡಬ್ಲ್ಯೂ) ಬೆಳಕಿಗೆ ಬಂದಿರುವುದನ್ನು ದಾಖಲಿಸಲಾಗಿದೆ.[೫೦] ಆದರೆ ಬೃಹತ್ ಶಿಲಾಯುಗದ ವಸತಿ ಕುರುಹುಗಳು ಕಂಡುಬರದೇ ಸಮಾಧಿ ಅವಶೇಷಗಳು ಲಭ್ಯವಾಗಿರುವುದರಿಂದ ಈ ನೆಲೆಯು ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂದು ಗುರುತಿಸಲಾಗಿದೆ.

**ಚಿಕ್ಕೆಮಂಡಿ (ಚಿಕ್ಕೆಬಂಡೆ)**

ಕೂಡ್ಲಿಗಿ ತಾಲೂಕು ಕೇಂದ್ರದಿಂದ ಸುಮಾರು ೩೭ ಕಿ.ಮೀ ದೂರದಲ್ಲಿ ಚಿಕ್ಕೆಮಂಡಿ ಇದೆ. ಗುಡೇಕೋಟೆ–ಮೊಳಕಾಲ್ಮೂರು ರಸ್ತೆಯ ಮಾರ್ಗವಾಗಿ ಹೊಸಹಟ್ಟಿಯ ಸಮೀಪದಲ್ಲಿರುವ ಸ್ಥಳವನ್ನು 'ಚಿಕ್ಕೆಬಂಡೆ' ಎಂದು ಕರೆಯುತ್ತಾರೆ. ಈ ಚಿಕ್ಕೆಮಂಡಿ ಸ್ಥಳದಲ್ಲಿ ಎರಡು ಗವಿಗಳಿವೆ. ಅವುಗಳಲ್ಲಿ ಒಂದು ಗವಿಯನ್ನು 'ಸನ್ಯಾಸಪ್ಪನ ಗವಿ' ಎಂದು ಕರೆಯಲಾಗುತ್ತದೆ. ಹಿಂದೆ ಧಾರ್ಮಿಕ ಮಹಾಪುರುಷನೊಬ್ಬ ಇಲ್ಲಿಯ ನೈಸರ್ಗಿಕ ಗವಿಗಳಲ್ಲಿ ತಪಸ್ಸು ಮಾಡಿ ಇಲ್ಲಿಯೇ ನೆಲೆಸಿದ್ದರಿಂದ ಗವಿಯನ್ನು ಸನ್ಯಾಸಪ್ಪನಗವಿ, ಸನ್ಯಾಸಿ ಮಠ, ಚಿಕ್ಕೆಬಂಡೆಗವಿ ಎಂದು ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ.[೫೧] ಈ ಚಿಕ್ಕೆಬಂಡೆ ಬೆಟ್ಟದಲ್ಲಿ ಬೃಹತ್ ಶಿಲಾಯುಗದ ಕಲ್ಗೋರಿಗಳು, ಕಲ್ಲಾಸರೆ, ಶಿಲಾಯುಧಗಳು ಮತ್ತು ಬಂಡೆಯಲ್ಲಿ ರೇಖಾಚಿತ್ರಗಳಿವೆ. ಹಾಗೂ ಮೇಲ್ನೋಟಕ್ಕೆ ಜನವಾಸ ಮಾಡುವ ಜಾಗವಲ್ಲವೆಂದು ಎನ್ನಿಸಿದರೂ ಸ್ಥಳೀಯರು ಹೇಳುವ ಮೌಖಿಕ ಕಥನಗಳಿಂದ ಈ ಗುಹೆಗಳ ಸುತ್ತಮುತ್ತ ಜನವಸತಿ ಇದ್ದಿರಬಹುದೆಂದು ಹೇಳಬಹುದು. ಇಲ್ಲಿರುವ ಅವಶೇಷಗಳು ಈ ಪ್ರದೇಶದ ಚಾರಿತ್ರಿಕ ಮಹತ್ವವನ್ನು ತಿಳಿಸುತ್ತವೆ. ಮುಖ್ಯವಾಗಿ ಆದಿಮಾನವರು ನೆಲೆಸಿರುವ ತಾಣಗಳಲ್ಲಿ ಇದು ಒಂದಾಗಿದ್ದು ತನ್ನ ವಾಸಕ್ಕೆ ಗವಿಯನ್ನು ಆಶ್ರಯಿಸಿದ ಮಾನವ ಬೆಟ್ಟಗುಡ್ಡಗಳಲ್ಲಿ ಬೇಟೆಯಾಡಿ ಆಹಾರ ಪದಾರ್ಥಗಳನ್ನು ಗುಹೆಯಲ್ಲಿ ಸಂಗ್ರಹಿಸುತ್ತಿದ್ದನು. ಇದಕ್ಕೆ ಪೂರಕವೆನ್ನುವಂತೆ ಬೆಟ್ಟದ ಮೇಲೆ ನೀರಿಗಾಗಿ ಚಿಲುಮೆಗಳನ್ನು ಮಾಡಿರುವುದು. ಒರತೆ, ಹೊಂಡಗಳು ಇಲ್ಲಿಯ ಬೆಟ್ಟಗಳ ಮೇಲೆ ಇರುವುದು ಗಮನಾರ್ಹ ಸಂಗತಿ. ಚಿಕ್ಕೆಬಂಡೆಯಲ್ಲಿ ಇಂದಿಗೂ ಕಟ್ಟಿಗೆಯ ಚಿಕ್ಕೆಯಂತೆ ಕಲ್ಲನ್ನು ಎಬ್ಬಿಸಲಾಗುತ್ತದೆ. ಈ ಬೆಟ್ಟದ ಬಂಡೆಯ ಮತ್ತೊಂದು ತುದಿಯಲ್ಲಿ ಗವಿಗಳಿವೆ. ಈ ಗವಿಗಳನ್ನು ವಿರೂಪಾಕ್ಷಿ ಪೂಜಾರಹಳ್ಳಿಯವರು ಮೊದಲಿಗೆ ಪತ್ತೆಹಚ್ಚಿದರು.[೫೨]

ಎರಡನೇ ಗವಿಯು ೨೦×೬೦ ಅಡಿಗಳಷ್ಟು ವೃತ್ತಾಕಾರದಲ್ಲಿದ್ದು ಈ ಗವಿಯ ಮಧ್ಯ ಭಾಗದಲ್ಲಿ ಸನ್ಯಾಸಿ ಏಕಾಂತದಲ್ಲಿ ತಪ್ಪಸ್ಸು ಮಾಡುತ್ತಿದ್ದ ಕಲ್ಲಿನ ಕಟ್ಟಡವಿದೆ ಮತ್ತು ಇದಕ್ಕೆ ಬಾಗಿಲು ಇಲ್ಲ. ೨×೩ ಅಡಿ ಗಾತ್ರದ ಕಿಟಕಿ ಮಾತ್ರ ಇದೆ ಒಳಗಡೆ ಪ್ರವೇಶ ಮಾಡಿದರೆ ಆಳವಾದ ತಗ್ಗು ಮತ್ತೊಂದು ಕಡೆ ಕಲ್ಲಿನ ಕಟ್ಟೆ ಇರುವುದು ಕಂಡುಬರುತ್ತದೆ. ಈ ಎಲ್ಲಾ ಲಕ್ಷಣಗಳ ಹಿನ್ನೆಲೆಯಲ್ಲಿ ಈ ಗವಿಯನ್ನು ಸನ್ಯಾಸಿ ಗವಿ ಎಂದು ಕರೆಯಲಾಗುತ್ತದೆ. ಅದೇ ರೀತಿ ಮೊದಲನೆಯ ಗವಿಯ ಪಶ್ಚಿಮಕ್ಕೆ ಪ್ರವೇಶ ದ್ವಾರವಿದೆ. ಒಳಗಡೆ ವಿಶಾಲ ಪ್ರಾಂಗಣವಿದೆ. ಉತ್ತರ ದಿಕ್ಕಿಗಿರುವ ಹೆಬ್ಬಂಡೆಯಲ್ಲಿ ನಂದಿಮೂರ್ತಿ ಕೆತ್ತಲಾಗಿದೆ. ಇತ್ತೀಚೆಗೆ ಪ್ರಾಂಗಣದ ನೆಲಕ್ಕೆ ಸ್ಥಳೀಯರು ಬಂಡೆ ಹಾಸಿ ಕಟ್ಟೆ ನಿರ್ಮಿಸಿದ್ದಾರೆ. ಅಲ್ಲದೇ ಇಲ್ಲಿ ಶಿಲಾಯುಧ, ಮಡಿಕೆಚೂರು, ಅಡುಗೆ ಒಲೆ, ಹೆಬ್ಬಂಡೆಗಳ ಮೇಲಿರುವ ರೇಖಾ ಚಿತ್ರಗಳು ಈ ಗುಹೆಯಲ್ಲಿ ದೊರೆತಿರುವುದರಿಂದ ಇದು ಆದಿ ಮಾನವನ ನೆಲೆಯಾಗಿತ್ತೆಂದು ಪ್ರಚುರಪಡಿಸುತ್ತದೆ. ಇಲ್ಲಿನ ಬಂಡೆಯಲ್ಲಿ ಚಿತ್ರಗಳಿರುವುದರಿಂದ 'ಚಿತ್ರಬಂಡ್ಲು' ಎಂದು ಕರೆಯುವರು. ಈ ಗವಿಯ ಸಮೀಪದಲ್ಲಿ ಕೆರೆಯೊಂದಿದ್ದು ಅದನ್ನು ಸನ್ಯಾಸಪ್ಪನ ಕೆರೆ ಎಂದು ಕರೆಯಲಾಗುತ್ತದೆ. ಈ ಕೆರೆಯ

ದಕ್ಷಿಣಕ್ಕೆ ಇರುವ ಹಾಸುಬಂಡೆಯಲ್ಲಿ ನಗ್ನ ಮಾನವಾಕೃತಿಯ ರೇಖಾಚಿತ್ರವಿದೆ. ಚೆಕ್ಕಮಂಡಿಯಿಂದ ಮೊಳಕಾಲ್ಮೂರಿಗೆ ಹೋಗುವ ರಸ್ತೆಯ ಎಡ ಭಾಗದಲ್ಲಿ ಪುರಾತನ ಕುಲುಮೆ ಮತ್ತು ಕಿಟ್ಟದ ಅವಶೇಷಗಳನ್ನು ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ಶೋಧಿಸಲಾಗಿದೆ. ಇಲ್ಲಿ ಕಂಡುಬಂದಿರುವ ಪ್ರಾಚ್ಯಾವಶೇಷಗಳಿಂದ ಈ ಪ್ರದೇಶದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ಕಬ್ಬಿಣ ತಯಾರಿಕೆ ಘಟಕವನ್ನು ತೆರೆದು ಕಬ್ಬಿಣದ ಉಪಕರಣಗಳನ್ನು ಸಿದ್ದಪಡಿಸಿಕೊಳ್ಳುತ್ತಿದ್ದರು. ಪ್ರಾಯಶಃ ಇಲ್ಲಿ ಸಿದ್ದಪಡಿಸಿದ ಆಯುಧೋಪಕರಣಗಳನ್ನು ಸಮೀಪದ ಬ್ರಹ್ಮಗಿರಿ ಸುತ್ತಮುತ್ತಲಿನ ನೆಲೆಗಳಿಗೆ ಪೂರೈಕೆ ಮಾಡಲಾಗುತ್ತೆಂದು ತೋರುತ್ತದೆ.

**ಓಬಳಾಪುರ**

ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ಸುಮಾರು ೪೦.ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ಸು.೮೦ ದೂರದಲ್ಲಿರುವ ಓಬಳಾಪುರವು ಪ್ರಾಚೀನ ನೆಲೆಯಾಗಿದೆ. ಈ ನೆಲೆಯಲ್ಲಿ ನೈಸರ್ಗಿಕ ಗವಿಯೊಂದಿದ್ದು, ಇಲ್ಲಿ ಶಿಲಾಯುಗದ ಮಾನವ ನೆಲೆಸಿದಂತಹ ಕುರುಹುಗಳು ದೊರೆತಿವೆ.[೫೩] ಇಲ್ಲಿನ ಗವಿಯನ್ನು ದೊಡ್ಡ ಬಂಡೆಯ ಅಡಿಯಲ್ಲಿ ನಿರ್ಮಿಸಲಾಗಿದೆ. ಇದು ಹುರುಳಿಹಾಳ್ ಗ್ರಾಮಕ್ಕೆ ಹೋಗುವ ಹಾದಿಯಲ್ಲಿ ಕಂಡುಬರುತ್ತದೆ. ಕುರುಚಲು ಗಿಡಗಳಿಂದ ಹಾಗೂ ಕಲ್ಲು ಬಂಡೆಗಳಿಂದ ಕೂಡಿರುವ ಈ ನೆಲೆಯಲ್ಲಿ ಕುಲುಮೆ ಅವಶೇಷಗಳು(ಕಬ್ಬಿಣದ) ದೊರೆತಿವೆ. ಕಬ್ಬಿಣದ ಕಿಟ್ಟ ಹಾಗೂ ಮಣ್ಣಿನಿಂದ ತಯಾರಿಸಿದ ಮೂಸೆಗಳು ದೊರೆತಿದ್ದು, ಅವು ಇಲ್ಲಿದ್ದ ಕಬ್ಬಿಣ ತಯಾರಿಕೆ ಘಟಕವನ್ನು ಸಾಂಕೇತಿಸುತ್ತವೆ. ಈ ನೆಲೆಯಲ್ಲಿನ ಕಬ್ಬಿಣದ ವಸ್ತುಗಳನ್ನು ಕುಲಮೆಯಲ್ಲಿ ಹದ ಮಾಡಲಾಗುತಿತ್ತೆಂಬುದನ್ನು ಅರಿಯಬಹುದು. ಬಹುಶಃ ಕಬ್ಬಿಣದ ಅದಿರು ನೆರೆಯ ತಾಲ್ಲೂಕು ಸಂಡೂರಿನಲ್ಲಿ ಹೇರಳವಾಗಿ ದೊರೆಯುತ್ತಿದ್ದರಿಂದ ಮತ್ತು ಕಬ್ಬಿಣ ಉಪಕರಣಗಳನ್ನು ಸಿದ್ದಪಡಿಸಲು ಉತ್ತಮವಾದ ಅವಕಾಶಗಳು ಈ ನೆಲೆಯಲ್ಲಿ ಇದ್ದುದರಿಂದ ಇಲ್ಲಿ ಕಬ್ಬಿಣ ತಯಾರಿಕೆ ಘಟಕವನ್ನು ತೆರೆಯಲಾಗಿತ್ತು. ಇಲ್ಲಿ ತಯಾರಾದ ಕಬ್ಬಿಣದ ಉಪಕರಣಗಳನ್ನು ಸಮೀಪದ ನೆಲೆಗಳಿಗೆ ಪೂರೈಕೆ ಮಾಡಲಾಗುತ್ತೆಂದು ಸ್ಪಷ್ಟವಾಗಿ ಅಭಿಪ್ರಾಯಿಸಬಹುದು.

**ಅಮರದೇವರ ಗುಡ್ಡ**

ಕೂಡ್ಲಿಗಿ ಪಟ್ಟಣದ ೧ನೇ ವಾರ್ಡ್ ವ್ಯಾಪ್ತಿಯಲ್ಲಿ ಅಮರದೇವರ ಗುಡ್ಡವಿದೆ. ಇದು ಕೂಡ್ಲಿಗಿ ಪಟ್ಟಣದ ಸಮೀಪದಲ್ಲಿರುವ ಈ ಗುಡ್ಡವನ್ನು ಅಮರದೇವರ ಗುಡ್ಡ ಎಂದು ಕರೆಯಲಾಗುತ್ತದೆ. ಈ ಗುಡ್ಡವು ಬೃಹತ್ ಗಾತ್ರದ ಬಂಡೆಗಳಿಂದ, ಗಿಡ ಮರಗಳಿಂದ ಆವೃತವಾದ ಪ್ರದೇಶವಾಗಿದೆ. ಇಲ್ಲಿ ನೈಸರ್ಗಿಕವಾದ ನೀರಿನದೋಣಿ ಹಾಗೂ ಗ್ರ್ಯಾನೈಟ್ ಶಿಲೆಗಳಿಂದ ಕೂಡಿರುವ ಈ ಗುಡ್ಡದಲ್ಲಿ ಶಿಲಾಯುಗದ ಮಾನವರು ನೆಲೆಗೊಳ್ಳಲು ಬೇಕಾದ ಪೂರಕವಾದ ವಾತವರಣದಿಂದ ಕೂಡಿದೆ. ಇಂಥ ಭೌಗೋಳಿಕ ಪರಿಸರದಲ್ಲಿ ಬೃಹತ್ ಶಿಲಾಯುಗದ ಜನರು ನಿರ್ಮಿಸಿದ ಕಲ್ಮನೆ ಸಮಾಧಿಗಳನ್ನು ಕ್ಷೇತ್ರಕಾರ್ಯದ

ಸಂದರ್ಭದಲ್ಲಿ ಗುರುತಿಸಲಾಗಿದೆ. ಹಾಗಾಗಿ ಈ ನೆಲೆಯು ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂದು ಅಭಿಪ್ರಾಯಿಸಬಹುದು.

**ಪೇಟೆನಹಳ್ಳಿ**

ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ೩೩ ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೮೦ಕಿ.ಮೀ ದೂರದಲ್ಲಿ ಪೇಟೆನಹಳ್ಳಿ ಎಂಬ ಹಾಳೂರು ಇದೆ. ಭೀಮಸಮುದ್ರ ಗ್ರಾಮದ ಸಮೀಪದಲ್ಲಿರುವ ನೆಲೆಯಾಗಿದೆ. ಈ ನೆಲೆಯು ಕುರುಚಲು ಗಿಡಗಳಿಂದ ಕೂಡಿದ ಪರಿಸರ ಕೆಂಪು ಮಿಶ್ರಿತ ಬೂದಿ ಮಣ್ಣು ಸುಣ್ಣದಕಲ್ಲು ಒಳಗೊಂಡ ಸವಳು ಭೂಮಿ, ಕಲ್ಲುಮಿಶ್ರಿತ ಕೆಂಪು ಭೂಮಿಯಿದ್ದು ಸಮತಟ್ಟಾದ ತಗ್ಗು ದಿನ್ನೆಗಳಿಂದ ಕೂಡಿರುವುದು. ಇದರ ಸಮೀಪದಲ್ಲಿ ಕೆರೆಯಿದ್ದು ಅದನ್ನು ಪೇಟೆನಳ್ಳಿ ಕೆರೆ ಎಂದು ಕರೆಯಲಾಗುತ್ತದೆ. ಇಲ್ಲಿ ಪೆದ್ದವಂಕ ಎಂಬ ಹಳ್ಳವು ಉಗಮಗೊಂಡು ಮುಂದೆ ಕುಮತಿ ಬಳಿ  ಚಿನ್ನಹಗರಿ ಉಪನದಿಗೆ ಸೇರುತ್ತದೆ. ಇಂತಹ ಭೌಗೋಳಿಕ ಪರಿಸರವನ್ನು ಹೊಂದಿರುವ ಈ ನೆಲೆಯಲ್ಲಿ ಸೂಕ್ಷ್ಮಶಿಲಾಯುಗದಿಂದ ಹಿಡಿದು ನವಶಿಲಾಯುಗ, ಬೃಹತ್ ಶಿಲಾಯುಗ, ಆದಿ ಇತಿಹಾಸಕಾಲದ ವರೆಗಿನ ಸಾಂಸ್ಕೃತಿಕ ಅವಶೇಷಗಳು ಶೋಧವಾಗಿವೆ.[೫೪] ಇಲ್ಲಿ ಸೂಕ್ಷ್ಮಶಿಲಾಯುಗ ಕಾಲದಲ್ಲಿ ಉಪಯೋಗಿಸುತ್ತಿದ್ದ ಕಚ್ಚಾವಸ್ತುಗಳು, ಕೋರ್‌ಗಳು ಹಾಗೂ ಇನ್ನಿತರೆ ಅವಶೇಷಗಳು ದೊರೆತಿರುವುದನ್ನು ದಾಖಲಿಸಲಾಗಿದೆ. ಹಾಗೂ ನವಶಿಲಾಯುಗ ಕಾಲದ ಬೂದಿ ಮಿಶ್ರಿತ ಮಡಕೆಗಳು, ಉಜ್ಜಿ ನಯಗೊಳಿಸಿದ ಶಿಲಾಕೊಡಲಿ, ದುಂಡಾದ ಸುಟ್ಟಮಣ್ಣಿನ ಬಿಲ್ಲೆಗಳು ಹಾಗೂ ನೀರಿನ ಹೂಜಿ ಭಾಗಗಳು ದೊರೆತಿವೆ. ಇದೇ ನೆಲೆಯಲ್ಲಿ ನವಶಿಲಾಯುಗ ನಂತರದ ಹಂತವಾಗಿರುವ ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ಲಭ್ಯವಾಗಿವೆ. ಕಪ್ಪು ಕೆಂಪುವರ್ಣದ ಮಡಕೆ ಭಾಗಗಳು, ಕಪ್ಪುವರ್ಣದ ಮಡಕೆಯ ಕಂಠದ ಭಾಗಗಳು, ಮಣ್ಣಿನಿಂದ ತಯಾರಿಸಿದ ಹೂಜಿಯ ಮೂತಿ, ಸಣ್ಣ ದೀಪದ ಮುರಿದ ಭಾಗ, ಕಬ್ಬಿಣದ ಕಿಟ್ಟ, ಕಲ್ಲಿನ ಅರ, ಮೂಳೆ ಅವಶೇಷಗಳು, ಸುಟ್ಟಮಣ್ಣಿನಿಂದ ತಯಾರಿಸಿದ ದುಂಡಾದ ಬಿಲ್ಲೆಗಳು, ಅಲಂಕಾರಿಕ ಮಡಕೆಗಳು ಮತ್ತು ಬೃಹತ್ ಶಿಲಾಸಮಾಧಿಗಳನ್ನು ಭೀಮಸಮುದ್ರ ರಂಗನಾಥ್ ಅವರು ಶೋಧಿಸಿದ್ದಾರೆ.[೫೫]

ಪೇಟೆನಹಳ್ಳಿಯಿಂದ ೧ ಕಿ.ಮೀ ದೂರದಲ್ಲಿ ಕಲ್ಲುವೃತ್ತ ಸಹಿತ ಕಲ್ಮನೆ ಮಾದರಿ ಮತ್ತು ನಿಲುಸುಗಲ್ಲು ಹೋಲಿಕೆಯ ಎರಡು ಸಮಾಧಿಗಳು ಕಂಡುಬಂದಿವೆ. ಈ ಸಮಾಧಿಗಳನ್ನು ಸ್ಥಳೀಯರು ಮಲ್ಲಿಯಮ್ಮನ ಸಮಾಧಿ ಮತ್ತು ಶರಣಮ್ಮನ ಸಮಾಧಿಗಳೆಂದು ಕರೆಯುವರು. ಕಲ್ಲುವೃತ್ತ ಸಹಿತ ಕಲ್ಮನೆ ಸಮಾಧಿಯು ಆಯತಾಕಾರವಾಗಿದೆ. ಸುತ್ತಲೂ ಸ್ಥಳೀಯವಾಗಿ ಸಿಗುವ ಗ್ರಾನೈಟ್ ಕಲ್ಲುಗಳನ್ನು ಬಳಸಿಕೊಂಡು ಜೋಡಿಸಲಾಗಿದೆ. ಅವುಗಳ ಜೊತೆಗೆ ನಾಲ್ಕು ನಿಲುಸುಗಲ್ಲುಗಳನ್ನು ನಿಲ್ಲಿಸಲಾಗಿದೆ. ಇಲ್ಲಿನ ಮತ್ತೊಂದು ಸಮಾಧಿಯು ವೃತ್ತಾಕಾರದಲ್ಲಿದ್ದು ಅದರ ಸುತ್ತಲೂ ಕೂಡ ಕಲ್ಲುಗಳನ್ನು ಜೋಡಿಸಿರುವುದನ್ನು ಗಮನಿಸಬಹುದು. ಇಲ್ಲಿ ದೊರಕಿರುವ ಅವಶೇಷಗಳಿಂದ ತಿಳಿಯಬಹುದಾದ ಸಂಗತಿ ಏನೆಂದರೆ ಪೇಟೆನಹಳ್ಳಿಯ ನೆಲೆಯು ಕೂಡ ಪ್ರಾಗಿತಿಹಾಸ ಕಾಲದಿಂದ ಜನವಸತಿಯ ತಾಣವಾಗಿತ್ತೆಂದು

ತೋರುತ್ತದೆ. ಬೃಹತ್ ಶಿಲಾಯುಗ ಕಾಲದಲ್ಲಿ ಇಲ್ಲಿ ಕಬ್ಬಿಣದ ಉಪಕರಣಗಳನ್ನು ತಯಾರಿಸುವ ಜನರು ನೆಲೆಸಿದ್ದರೆಂಬುದಕ್ಕೆ ಲಭ್ಯವಾಗಿರುವ ಅವಶೇಷಗಳು ಸಾಕ್ಷೀಕರಿಸುತ್ತವೆ. ನಂತರದಲ್ಲಿ ಆದಿ ಇತಿಹಾಸ ಕಾಲದ ಸುಧಾರಿತ ಜನಸಮುದಾಯ ಇದೇ ನೆಲೆಯಲ್ಲಿ ನೆಲೆಸಿದ್ದರೆನ್ನಲು ಕಪ್ಪು ಬಣ್ಣದ ಮಡಕೆಯ ಮೇಲೆ ಕೆಂಪು ಬಣ್ಣದ ಅಲಂಕಾರಿಕ ಮಡಕೆಗಳು ಸಾಕ್ಷಿಭರಿತ ಆಕರಗಳಾಗಿ ನಿಲ್ಲುತ್ತವೆ. ಹೀಗೆ ಪೇಟೆನಹಳ್ಳಿಯು ಪ್ರಾಗೈಹಾಸಿಕ ಕಾಲದಿಂದ ಜನವಸತಿ ತಾಣವಾಗಿ ಬೆಳೆದು ವಿಜಯನಗರೋತ್ತರ ಕಾಲದಲ್ಲಿ ವ್ಯಾಪಾರ ಕೇಂದ್ರವಾಗಿ ರೂಪುಗೊಂಡು ಪೇಟೆನಹಳ್ಳಿ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿತ್ತು ಎಂಬ ಸಂಗತಿಯನ್ನು ವಿಶ್ಲೇಷಿಸಬಹುದಾಗಿದೆ.

**ಹಿರೇಹಾಳು**

ಸಂಡೂರು ತಾಲೂಕಿನಿಂದ ೨೦ ಕಿ.ಮೀ. ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೮೩ ಕಿ.ಮೀ ದೂರದಲ್ಲಿ ಹಿರೇಹಾಳು ಗ್ರಾಮವಿದೆ. ಈ ಗ್ರಾಮದ ಕೆರೆಯ ದಡದಲ್ಲಿ ಶಿಲಾವೃತ್ತ ಸಹಿತ ಕಲ್ಮನೆಯ ಸಮಾಧಿಯಿದೆ. ಪೂರ್ವಾಭಿಮುಖವಾಗಿ ಗ್ರಾನೈಟ್ ಶಿಲೆಯನ್ನು ಬಳಸಿ ನಿರ್ಮಿಸಿರುವ ಸಮಾಧಿಯು ೨.೮ ಅಡಿ ಉದ್ದ, ಅಗಲ ೩.೨ ಅಡಿ ಅಳತೆ ವಿಸ್ತೀರ್ಣ ಹೊಂದಿದೆ. ಇದರ ಸುತ್ತಲೂ ವೃತ್ತದಲ್ಲಿ ೧೩ ಕಲ್ಲುಗಳಿವೆ. ಸಮಾಧಿಗೆ ಬಳಸಿರುವ ಚಪ್ಪಡಿಕಲ್ಲಿನ ಅಳತೆಯು ಈ ರೀತಿ ಇದೆ. ಎಡ ಭಾಗದ ಕಲ್ಲು ಉದ್ದ ೨.೪ ಅಡಿ ಎತ್ತರ ನೆಲಮಟ್ಟ ದಿಂದ ೧.೯ ಅಡಿಯಷ್ಟಿದೆ. ಬಲ ಭಾಗದ ಕಲ್ಲು ೧.೫ ಅಡಿ ಎತ್ತರ, ಉದ್ದ ೨.೩ ಅಡಿಯಷ್ಟಿದೆ. ಪಶ್ಚಿಮಕ್ಕೆ ಹೊಂದಿಸಿರುವ ಕಲ್ಲಿನ ಅಳತೆ ೨.೫ ಅಡಿ ಹಾಗೂ ಎತ್ತರ ೧.೮ ಅಡಿಯಷ್ಟಿದೆ. ಈ ಮೇಲಿನ ಎಲ್ಲಾ ಲಕ್ಷಣಗಳಿಂದ ಇದು ಬೃಹತ್ ಶಿಲಾಯುಗದ ಸಮಾಧಿ ಎಂದು ಗುರುತಿಸಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ.[೫೬] ಆದರೆ ಸಮಾಧಿ ನೆಲೆಯೆಂದೇ ಪ್ರತಿಪಾದಿಸ ಬಹುದಾದ ಸಂಗತಿಗಳಿಗೆ ಆಧಾರವಾಗಬಹುದಾದ ಇನ್ನಿತರೆ ಕುರುಹುಗಳು ಈ ಸಂಸ್ಕೃತಿಗೆ ಸಂಬಂಧಿಸಿದಂತೆ ಕಂಡುಬಂದಿಲ್ಲ.

**ಮತ್ತಾಜನಹಳ್ಳಿ (ಮುತ್ತಜ್ಜನಹಳ್ಳಿ)**

ಸಂಡೂರು ತಾಲ್ಲೂಕಿನಿಂದ ೩೫ ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೮೩ ಕಿ.ಮೀ ದೂರದಲ್ಲಿ ಮತ್ತಾಜನಹಳ್ಳಿ ಗ್ರಾಮವಿದೆ. ಈ ಗ್ರಾಮದ ಸಮೀಪ ಪೂರ್ವ ದಿಕ್ಕಿಗೆ ಜಾಲಿಪೆಂಟೆ ಗುಡ್ಡ, ಕೋಟೆಗುಡ್ಡಗಳಿವೆ. ಗ್ರಾಮದ ಈಶಾನ್ಯ ದಿಕ್ಕಿಗೆ ಉಬ್ಬಾವಿ ಎನ್ನುವ ಜಲ ಸಂಗ್ರಾಹಕವಿದೆ. ಪಶ್ಚಿಮಕ್ಕೆ 'ಕರೆಬಂಡೆತೊಟ್ಟು'(ನಲ್ಲಬಂಡ ತೊಟ್ಟು)ಎನ್ನುವ ಸ್ಥಳವಿದೆ. ಇದರ ಸಮೀಪದಲ್ಲಿ ಊಟಿಬಾವಿ ಮತ್ತು ಮಲಿಯಮ್ಮನ ದೋಣಿಗಳಿದ್ದು ಅವು ಸದಾ ಕಾಲ ನೀರಿನಿಂದ ತುಂಬಿಕೊಂಡಿರುತ್ತವೆ. ಇವುಗಳ ಸಮೀಪದಲ್ಲಿರುವ ತಿಪ್ಪೇಸ್ವಾಮಿ ಎಂಬುವರ ಜಮೀನಿನಲ್ಲಿ ಸು.ಅರ್ಧ ಎಕರೆ ವಿಸ್ತೀರ್ಣದಲ್ಲಿ ಕಬ್ಬಿಣದ ಕುಲುಮೆ ಅವಶೇಷಗಳು ಮತ್ತು ಕಿಟ್ಟದ ರಾಶಿಯು ಕಂಡುಬಂದಿವೆ.[೫೭] ಪ್ರಾಯಶಃ ಇಂಥ ಸಾಕ್ಷಿಗಳು ಬೃಹತ್ ಶಿಲಾಯುಗದ ಜನರ ಕಬ್ಬಿಣ ತಯಾರಿಕ ಘಟಕವಾಗಿತ್ತೆಂದು ಅಭಿಪ್ರಾಯಿಸುವುದಕ್ಕೆ

ಪೂರಕ ಸಾಕ್ಷಿಗಳಂತೆ ತೋರುತ್ತವೆ. ಈ ನೆಲೆಯ ದಕ್ಷಿಣಕ್ಕೆ ಚಿಲುಮೆನಹಳ್ಳಿ ಎಂಬ ಸ್ಥಳದಲ್ಲಿ ಇಂತಹ ಕುರುಹುಗಳು ಕಂಡುಬಂದಿದ್ದು ಸ್ಥಳೀಯವಾಗಿ ಸಿಗುವ ಕಚ್ಚಾ ಅದಿರನ್ನು ಬಳಸಿ ಹಿಂದೆ ಕಬ್ಬಿಣವನ್ನು ತಯಾರಿಸಲಾಗುತ್ತೆಂದು ಎನ್ನುವುದಕ್ಕೆ ಇಲ್ಲಿ ದೊರೆತಿರುವ ಕುರುಹುಗಳು ಸಾಕ್ಷಿಯಾಗಿವೆ. ಇಲ್ಲಿ ತಯಾರಾದ ಕಬ್ಬಿಣದ ಉಪಕರಣಗಳು ಸುತ್ತಮುತ್ತಲಿನ ನೆಲೆಗಳಿಗೆ ಪೂರೈಕೆಯಾಗುತ್ತಿದ್ದವೆಂದು ಹೇಳಬಹುದು.

**ರಾಜಾಪುರ**

ಸಂಡೂರು ತಾಲ್ಲೂಕಿನಿಂದ ೪೬ ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೩೩ ಕಿ.ಮೀ ದೂರದಲ್ಲಿ ರಾಜಪುರ ಗ್ರಾಮವಿದೆ. ಈ ಗ್ರಾಮದಲ್ಲಿ ಶಿಲಾತಾಮ್ರಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಕುರುಹುಗಳು ಶೋಧವಾಗಿವೆ.[೫೮] ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗ್ರಾಮದ ಆಗ್ನೇಯ ದಿಕ್ಕಿನಲ್ಲಿರುವ ಕಲ್ಲುಬಂಡೆಯ ಮೇಲೆ ೧೦೧ ಕಲ್ಗುಳಿಗಳನ್ನು ಪತ್ತೆಹಚ್ಚಲಾಯಿತು. ಈ ಕಲ್ಗುಳಿಗಳು ೫ ಸೆಂ. ಮೀ. ಚಿಕ್ಕದಾಗಿದ್ದು, ಪ್ರಾಯಶಃ ಈ ಕುಳಿಗಳನ್ನು ಲೋಹದ ವಸ್ತು ಅಥವಾ ಚೂಪಾದ ಕಲ್ಲನ್ನು ಬಳಸಿ ರಚನೆ ಮಾಡಿರಬೇಕೆಂದು ಸ್ಪಷ್ಟಪಡಿಸಬಹುದಾಗಿದೆ. ಒಂದು ರೀತಿಯಲ್ಲಿ ಅಳಗುಳಿ ಆಟದ ಮನೆಗಳಂತೆ ಕಂಡುಬಂದರೂ ಅವುಗಳ ರಚನೆ ಉದ್ದೇಶಗಳು ಮಾತ್ರ ಸ್ಪಷ್ಟವಾಗಿ ತಿಳಿಯುವುದಿಲ್ಲ. ಇವುಗಳ ಭೌಗೋಳಿಕ ಸ್ಥಾನಮಾನ ಗಮನಿಸಿದರೆ, ಪ್ರಾಯಶಃ ಇವು ಬೃಹತ್ ಶಿಲಾಯುಗ ಕಾಲದವೂ ಎನ್ನಲು ಅಡ್ಡಿಯಿಲ್ಲ. ಇಂತಹ ಕಲ್ಗುಳಿಗಳನ್ನು ಗ್ರಹಗಳ ಚಲನೆಯನ್ನು ತಿಳಿಯಲು ಅಂದಿನ ಜನರು ರಚಿಸುತ್ತಿದ್ದರೆಂಬ ಅಭಿಪ್ರಾಯಗಳಿವೆ. ಈ ಬಗ್ಗೆ ವೈಜ್ಞಾನಿಕ ಅಧ್ಯಯನ ಮಾಡಿದಾಗ ಮಾತ್ರ ಸ್ಪಷ್ಟವಾದ ತೀರ್ಮಾನಕ್ಕೆ ಬರಲು ಸಾಧ್ಯವಾಗುವುದು.

**ನಿಟ್ಟೂರು**

ಸಿರುಗುಪ್ಪ ತಾಲೂಕಿನಿಂದ ೧೬ ಕಿ.ಮೀ ಹಾಗೂ ಜಿಲ್ಲಾ ಕೇಂದ್ರವಾದ ಬಳ್ಳಾರಿಯಿಂದ ಉತ್ತರಕ್ಕೆ ೫೦ ಕಿ.ಮೀ ದೂರದಲ್ಲಿ ನಿಟ್ಟೂರು ಗ್ರಾಮವಿದೆ. ಇದು ತುಂಗಭದ್ರಾ ನದಿ ದಂಡೆಯಲ್ಲಿದ್ದು ಆದಿಹಳೆಯ ಶಿಲಾಯುಗದಿಂದ ಹಿಡಿದು ಬೃಹತ್ ಶಿಲಾಯುಗದವರೆಗಿನ ಸಾಂಸ್ಕೃತಿಕ ಕುರುಹುಗಳನ್ನು ಈ ನೆಲೆಯು ಹೊಂದಿದೆ ಎಂಬುದನ್ನು ಈವರೆಗೂ ನಡೆದಿರುವ ಅಧ್ಯಯನಗಳ ವರದಿಗಳಿಂದ ತಿಳಿಯಬಹುದಾಗಿದೆ. ಇಲ್ಲಿ ಆದಿಹಳೆಯ ಶಿಲಾಯುಗದ ಸಂಸ್ಕೃತಿಯ ಉಪಕರಣಗಳು ಹಾಗೂ ಬಾಸ್‌ನೊಮಿಡಿಕಸ್ (ನಶಿಸಿಹೋದ ಕಾಡುದನ), ನೂತನ ಶಿಲಾಯುಗ ಸಂಸ್ಕೃತಿಯ. ಉಜ್ಜಿನಯಗೊಳಿಸಿದ ಕೊಡಲಿ ಹಾಗೂ ನೀಳಗೆರೆಗಳುಳ್ಳ ಮೂಲ ಶಿಲಾಗಟ್ಟಿಯು ಕಂಡುಬಂದಿದೆ. ಬೃಹತ್ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಶವಕುಣಿಗಳು ಸಹ ಕಂಡುಬಂದಿದ್ದು ಅವು ಸಾಕಷ್ಟು ಹಾಳಾಗಿವೆ.[೫೯] ಗುಡ್ಡದ ಮೇಲೆ ಕೆಲವು ಕಲ್ಲುವೃತ್ತ ಸಮಾಧಿಯ ಅವಶೇಷಗಳಿದ್ದವೆಂದು ಸ್ಥಳೀಯರು ಹೇಳುವರು. ಆದರೆ ಅವುಗಳಿರುವ ಸ್ಥಳವನ್ನು ಇಂದು ಸಾಗುವಳಿ ಮಾಡಿ ಕೃಷಿ ಭೂಮಿಯಾಗಿ ಮಾರ್ಪಡಿಸಲಾಗಿದೆ. ಆದರೆ ಈ

ನೆಲೆಯಲ್ಲಿ ಕಲ್ಲಿನ ಅವಶೇಷಗಳು ಮಾತ್ರ ಈ ದಿನಗಳಲ್ಲಿಯೂ ಕಂಡುಬರುತ್ತವೆ. ಹಾಗೂ ಇದೇ ನೆಲೆಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಮುಂದುವರೆದ ಹಂತವಾದ ಆದಿ ಇತಿಹಾಸ ಕಾಲದ ಕುರುಹುಗಳು ಬೆಳಕಿಗೆ ಬಂದಿರುವುದು ವಿಶೇಷವೆನಿಸಿದೆ. ಇಲ್ಲಿ ಮೌರ್ಯ ಸಾಮ್ರಾಜ್ಯದ ಅರಸ ಅಶೋಕನ ಎರಡು ಲಘು ಶಾಸನಗಳು ಈ ನೆಲೆಯಲ್ಲಿ ಕಂಡುಬಂದಿರುವುದು ಗಮನಾರ್ಹ.

**ದಶಮಾಪುರ**

ಹಗರಿಬೊಮ್ಮನಹಳ್ಳಿ ತಾಲ್ಲೂಕು ಕೇಂದ್ರದಿಂದ ಪೂರ್ವಕ್ಕೆ ೧೧ ಕಿ.ಮೀ ದೂರದಲ್ಲಿ ದಶಮಾಪುರ ಗ್ರಾಮವಿದೆ. ಈ ಗ್ರಾಮದ ಉತ್ತರ ಮತ್ತು ಪೂರ್ವ ಭಾಗದಲ್ಲಿ ಬೆಟ್ಟಗಳಿಂದ ಆವೃತ ಪ್ರದೇಶವಿದೆ. ಇಲ್ಲಿನ ಕರಡಿಗುಡ್ಡದ ಪಶ್ಚಿಮ ಇಳಿಜಾರು ಪ್ರದೇಶದಲ್ಲಿ ಎಂ.ಕೆ ದುರುಗಪ್ಪನವರು ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ೯೧ ಕಲ್ಲುವೃತ್ತ ಸಮಾಧಿಗಳನ್ನು ಬೆಳಕಿಗೆ ತಂದಿದ್ದಾರೆ.[೬೦] ಕೆಲವು ಸಮಾಧಿಗಳು ಆಯಾತಾಕಾರವಾಗಿಯೂ ಇವೆ. ಬಹುತೇಕ ಶಿಲಾಸಮಾಧಿಗಳು ಬ್ರಹ್ಮಗಿರಿಯಲ್ಲಿ ಉತ್ಖನನ ಮಾಡಿದ ವೃತ್ತಕಟ್ಟೆ ಶವಕುಣಿಯನ್ನು ಹೋಲುತ್ತವೆ. ಇವುಗಳನ್ನು ನಿರ್ಮಿಸುವಲ್ಲಿ ಅಷ್ಟೊಂದು ದೊಡ್ಡದಾದ ಕಲ್ಲುಗಳನ್ನು ಬಳಸದೇ ಸ್ಥಳೀಯವಾಗಿ ದೊರಕುವ ಬಿರುಸಲ್ಲದ ಚಪ್ಪಡಿಕಲ್ಲನ್ನು ಉಪಯೋಗಿಸಿದ್ದಾರೆ. ಸದ್ಯ ನೆಲಮಟ್ಟದಿಂದ ಒಂದರಿಂದ ಎರಡು ಅಡಿ ಎತ್ತರದಲ್ಲಿರುವ ಈ ಕಲ್ಲುವೃತ್ತಗಳು ಇದಕ್ಕೂ ಮೊದಲು ಎರಡು ಅಡಿಗಿಂತ ಹೆಚ್ಚು ಎತ್ತರವಿದ್ದ ಸೂಚನೆಗಳು ಎದ್ದು ಕಾಣುತ್ತವೆ. ಏಕೆಂದರೆ ಒಂದರ ಮೇಲೊಂದು ಹೊಂದಿಸಿದ ಕಲ್ಲುಗಳು ಕದಲಿಬಿದ್ದಿವೆ. ಈ ಕಲ್ಲುವೃತ್ತಗಳ ನಡುವೆ ೪ ರಿಂದ ೫ ಅಡಿಯವರೆಗೂ ನಿಧಿಶೋಧಕರು ಭೂ ಅಗೆತ ಮಾಡಿದ್ದಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲೂ ಈ ನೆಲೆಯಲ್ಲಿ ಕಪ್ಪು, ಕೆಂಪು, ಕೆಂಪು–ಕಪ್ಪು ವರ್ಣದ ಹೊಳಪಾದ ಸುಟ್ಟ ಮಡಿಕೆ ಚೂರುಗಳಿರುವುದನ್ನು ಗಮನಿಸಲಾಗಿದೆ. ಇಲ್ಲಿನ ಕಲ್ಲುವೃತ್ತ ಸಮಾಧಿಗಳನ್ನು ನಿರ್ಮಿಸಲಾಗಿರುವುದನ್ನು ಕಾಣುತ್ತೇವೆ. ದಕ್ಷಿಣೋತ್ತರವಾಗಿ ನಿರ್ಮಿಸಲಾಗಿದೆ. ಕೆಲವು ಕಲ್ಲುವೃತ್ತಗಳು ಒಂದಕ್ಕೊಂದು ತಾಗಿಕೊಂಡಿದ್ದರೆ. ಇನ್ನು ಕೆಲವುಗಳ ನಡುವೆ ಅಂತರವಿರುವುದನ್ನು ಗಮನಿಸಬಹುದು. ಇಲ್ಲಿನ ಸಮಾಧಿಗಳನ್ನು ಅಥವಾ ಕಲ್ಗೋರಿಗಳನ್ನು ಸ್ಥಳೀಯರು 'ಮೋರೆಯರ ಮನೆಗಳೆಂದು' ಕರೆಯುತ್ತಾರೆ. ಈ ಸಂಸ್ಕೃತಿಯ ವಸತಿ ಅವಶೇಷಗಳು ಕಂಡುಬರದೇ ಸಮಾಧಿ ಅವಶೇಷಗಳು ಹೆಚ್ಚು ಕಂಡುಬಂದಿವೆ. ಪ್ರಾಯಶಃ ವಸತಿ ಅವಶೇಷಗಳು ನಾಶಹೊಂದಿರುವ ಸಾಧ್ಯತೆಗಳಿವೆ.

**ಹಂಪಸಾಗರ**

ಹಗರಿಬೊಮ್ಮನಹಳ್ಳಿ ತಾಲ್ಲೂಕು ಕೇಂದ್ರದಿಂದ ೧೯ ಕಿ.ಮೀ ದೂರದಲ್ಲಿ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೧೨೫ ಕಿ.ಮೀ ದೂರದಲ್ಲಿ ಹಂಪಸಾಗರ ಗ್ರಾಮವಿದೆ. ಈ ಗ್ರಾಮವು ತುಂಗಭದ್ರ ನದಿದಂಡೆಯಲ್ಲಿದೆ. ಇಲ್ಲಿ ನವಶಿಲಾಯುಗದಿಂದ ಹಿಡಿದು ತಾಮ್ರ ಶಿಲಾಯುಗ ಹಾಗೂ ಬೃಹತ್ ಶಿಲಾಯುಗಕ್ಕೆ ಸಂಬಂಧಪಟ್ಟ ಕುರುಹುಗಳು ದೊರಕಿರುವ ವಿವರಗಳಿವೆ. ರಾಬರ್ಟ್ ಬ್ರೂಸ್‌ಫೂಟ್

ಅವರು ತುಂಗಭದ್ರ ನದಿದಡದ ಉದ್ದಕ್ಕೂ ಹಲವಾರು ಬೃಹತ್ ಶಿಲಾಯುಗದ ಕಪ್ಪು-ಕೆಂಪು, ಕಪ್ಪು ಹೊಳಪು ಮತ್ತು ಕೆಂಪು ವರ್ಣದ ಮಡಿಕೆಗಳನ್ನು ಶೋಧಿಸಿದರು.[೬೧] ಇಲ್ಲಿನ ಹಲವು ಶಿಲಾಸಮಾಧಿಗಳು ಪ್ರವಾಹದಿಂದ ಕೊಚ್ಚಿ ಹೋಗಿವೆ. ರಾಬರ್ಟ್ ಬ್ರೂಸ್‌ಫೂಟ್ ಅವರು ಬಟ್ಟಲುಗಳು, ಹೂದಾನಿ ಮೊದಲಾದವುಗಳನ್ನು ಸಂಗ್ರಹಿಸಿದರು. ಇವು ರೆಸೆಟ್ಟಾ ಲೇಪಿತ ವರ್ಣದ ಮಡಿಕೆಗಳು ಮತ್ತು ಇತರ ಸರಳ ಕೆಂಪು ವರ್ಣದ ಮಡಿಕೆಗಳು ಅಥವಾ ಕಪ್ಪು-ಕೆಂಪು ವರ್ಣದ ಮಡಿಕೆಗಳಾಗಿವೆ. ಮುಖ್ಯವಾಗಿ 'ಚದುರಿ ಬಿದ್ದಿದ್ದ ಸಮಾಧಿಯಿಂದ ಆನೆಯ ದಪ್ಪನೆಯ ಕಾಲುಗಳನ್ನು ಹೋಲುವ ಶವಪೆಟ್ಟಿಗೆಯನ್ನು ಹೊರತೆಗೆಯಲಾಗಿದೆ. ಇದು ಅಂಡಾಕಾರದ ದೇಹದ ಉದ್ದದ ಬದಲು ಸಮತಲ ಸ್ಥಾನದಲ್ಲಿ ಇರಿಸಲಾಗಿದೆ. ಸಾಮಾನ್ಯವಾಗಿ ಬಹಳ ಚಿಕ್ಕ ತಲೆಯೊಂದಿಗೆ ವಿಲಕ್ಷಣವಾದ ಆನೆಯನ್ನು ಹೋಲುತ್ತದೆ' ಎಂದು ದಾಖಲಿಸಿದ್ದಾರೆ.

ಇಲ್ಲಿನ ಕಲ್ಲುವೃತ್ತ ಸಮಾಧಿಗಳು ಕಡಿಮೆ ದಿಬ್ಬಗಳನ್ನು ಒಳಗೊಂಡಿರುವ ಅವುಗಳ ಅಳತೆ ವಿನ್ಯಾಸ ತಿಳಿಸಿದ್ದಾರೆ. ಎತ್ತರ ೧೧.೧/೪ ಇಂಚು, ಉದ್ದ ೧೦.೧/೨, ಅಗಲ ೮.೧/೨ ಇಂಚು, ಕಾಲುಗಳ ಉದ್ದ ೪.೧/೨ ಇಂಚು; ಅಂಡಾಕಾರದ ಮುಚ್ಚಳ ೪ ಇಂಚು. ಮುಚ್ಚಳದ ಅಗಲ ೩-೭/೮; ಹಾಗೂ ಬಲ ಮುಂಭಾಗದ ಪಾದದ ಬುಡದ ಸುತ್ತಳತೆಯು ೮.೧/೨ ಇಂಚು ಇದ್ದು ಬಾಲದ ತುದಿಯು ಮುರಿದು ಹೋಗಿದೆ ಎಂದು ದಾಖಲಿಸಿದ್ದಾರೆ.[೬೨] ಪ್ರಾಯಶಃ ಇದು ಕುಡುತಿನಿ ನೆಲೆಯಲ್ಲಿ ದೊರೆತ ಶವಪೆಟ್ಟಿಗೆ(ಸಾರ್ಕೋಫಿಗೋಸ್) ಮಾದರಿಯ ಸಮಾಧಿಯನ್ನು ಹೋಲುತ್ತಿದ್ದಿರಬಹುದಾದ ಸಾಧ್ಯತೆಯಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ನೆಲೆಯ ಸುತ್ತಮುತ್ತ ಈ ಸಂಸ್ಕೃತಿಯ ಕುರುಹುಗಳನ್ನು ಪರಿಶೀಲಿಸಲಾಗಿದೆ. ಈ ಪ್ರದೇಶವು ತುಂಗಭದ್ರ ನದಿ ದಂಡೆಯಲ್ಲಿರುವುದರಿಂದ ನವಶಿಲಾಯುಗದಿಂದ ಹಿಡಿದು ಬೃಹತ್ ಶಿಲಾಯುಗದವರೆಗೆ ಮಾನವನ ಸಾಂಸ್ಕೃತಿಕ ಹಂತಗಳು ಬೆಳವಣಿಗೆ ಪೂರಕ ಪರಿಸರವಾಗಿ ಪಾತ್ರ ನಿರ್ವಹಿಸಿರುವುದು ನಿರ್ವಿವಾದ ಸಂಗತಿಯಾಗಿ ತೋರುತ್ತದೆ. ಹಾಗೂ ಅಲ್ಲಿ ದೊರೆತ ಕುರುಹುಗಳು ಇಂಥ ಅನಿಸಿಕೆಗಳನ್ನು ಸಾಕ್ಷೀಕರಿಸುತ್ತವೆ. ಒಟ್ಟಿನಲ್ಲಿ ಬಳ್ಳಾರಿ ಜಿಲ್ಲೆಯ ವಿವಿಧ ತಾಲ್ಲೂಕಿನಲ್ಲಿ ಕಂಡುಬಂದಿರುವ ಪ್ರಾಗೈತಿಹಾಸಿಕ ನೆಲೆಗಳ ಪ್ರಮಾಣವನ್ನು ಗಮನಿಸಿದರೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಅತಿಕಡಿಮೆ ಸಂಖ್ಯೆಯಲ್ಲಿ ಕಂಡುಬರುವುದನ್ನು ಗಮನಿಸಬಹುದು. ಕಾರಣ ಇಲ್ಲಿನ ಭೌಗೋಳಿಕ ಸನ್ನಿವೇಶ ಹಾಗೂ ನೈಸರ್ಗಿಕ ಖನಿಜ ಸಂಪನ್ಮೂಲಗಳ ಕೊರತೆಯಿಂದ ಕೂಡಿದ ಪ್ರದೇಶ ಇದಾಗಿರುವುದರಿಂದ ಪ್ರಾಯಶಃ ಪ್ರಾಚೀನತಮ ಸಂಸ್ಕೃತಿಯ ನೆಲೆಗಳು ಹೆಚ್ಚಿನ ಸಂಖ್ಯೆಯಲ್ಲಿ ಬೆಳೆದು ಬರಲಿಲ್ಲವೆಂದು ಅಭಿಪ್ರಾಯಿಸಬಹುದು. ಬೃಹತ್ ಶಿಲಾಯುಗದ ಜನರು ವಾಸ್ತವ್ಯ ಹೊಂದಲು ಅವಶ್ಯಕವಾದ ಬೆಟ್ಟಗುಡ್ಡಗಳು ಲಭ್ಯತೆಯಿಲ್ಲದಿರುವುದರಿಂದ ಈ ಸಂಸ್ಕೃತಿಯ ನೆಲೆಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಇಲ್ಲವೇ ತುಂಗಭದ್ರ ನದಿಯ ನೀರಿನ ಅನುಕೂಲತೆಯಿಂದ ಕೃಷಿಚಟುವಟಿಕೆಗಳು ದ್ವಿಗುಣಗೊಂಡು ಇಲ್ಲಿನ ಪ್ರಾಕ್ತನಾವಶೇಷಗಳು ಸಂಪೂರ್ಣವಾಗಿ ನಾಶಹೊಂದಿರುವ ಸಾಧ್ಯತೆಯ ಅಂಶಗಳನ್ನು ಕೂಡ ನಿರಾಕರಿಸಲಾಗದು.

**ಅಲ್ಲಿಪುರ**

ಹೂವಿನಹಡಗಲಿ ತಾಲ್ಲೂಕು ಕೇಂದ್ರದಿಂದ ೨೨ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೧೫೪ ಕಿ.ಮೀ ದೂರದಲ್ಲಿ ಅಲ್ಲಿಪುರ ಗ್ರಾಮವಿದೆ. ತುಂಗಭದ್ರ ನದಿ ಪರಿಸರದಲ್ಲಿರುವ ಈ ಗ್ರಾಮದಲ್ಲಿ ನೂತನ ಶಿಲಾಯುಗ, ಶಿಲಾತಾಮ್ರಯುಗದ ನೆಲೆಗಳು ಬೆಳಕಿಗೆ ಬಂದಿವೆ. ಅಲ್ಲದೆ ಇದೇ ನೆಲೆಯಲ್ಲಿ ಬೃಹತ್ ಶಿಲಾಯುಗದ ವಿವಿಧ ಪ್ರಕಾರದ ಸಮಾಧಿಗಳು, ಕಪ್ಪು ವರ್ಣದ ಮಡಕೆಗಳು ಶೋಧವಾಗಿವೆ.[೬೩] ಪ್ರಸ್ತುತ ಈ ನೆಲೆಯಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಇಲ್ಲಿನ ಬಹುತೇಕ ಅವಶೇಷಗಳು ನಾಶವಾಗಿದ್ದು ಸಮಾಧಿಗೆ ಬಳಸಿದ್ದ ಕಲ್ಲಿನ ಅವಶೇಷಗಳು ಮಾತ್ರ ಕಂಡುಬಂದವು. ಆದರೆ ಬೃಹತ್ ಶಿಲಾಯುಗ ಸಂಸ್ಕೃತಿಯ ವಸತಿ ಕುರುಹುಗಳು ದೊರಕದೇ ಇರುವುದರಿಂದ ಇದು ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂದು ಗುರುತಿಸುವುದೇ ಹೆಚ್ಚು ಸೂಕ್ತವೆಂದೆನಿಸುತ್ತದೆ.

**ಹೂವಿನಹಡಲಿ**

ಹಡಗಲಿ ಪಟ್ಟಣದ ಹೊರಭಾಗದಲ್ಲಿ ಹಂಪಸಾಗರಕ್ಕೆ ಹೋಗುವ ರಸ್ತೆಯ ಎಡಕ್ಕೆ ನೂತನವಾಗಿ ನಿರ್ಮಾಣಗೊಳ್ಳುತ್ತಿರುವ ಅಂಬೇಡ್ಕರ್ ಭವನದ ಪಕ್ಕದಲ್ಲಿ ಎಂ.ಪಿ. ವೀಣಾ ಅವರು ಬೃಹತ್ ಶಿಲಾಯುಗ ಸಂಸ್ಕೃತಿಯ ಕಿಂಡಿಕೋಣೆ ಶಿಲಾಸಮಾಧಿಯನ್ನು ಶೋಧಿಸಿದ್ದಾರೆ.[೬೪] ಈ ಸಮಾಧಿಯು ನಾಲ್ಕು ಕಲ್ಲುಚಪ್ಪಡಿಗಳನ್ನು ಹೊಂದಿದ್ದು, ವಿಶೇಷವಾಗಿ ಪಶ್ಚಿಮ ದಿಕ್ಕಿಗೆ ಇರುವ ಕಲ್ಲುಚಪ್ಪಡಿಯಲ್ಲಿ ಇಂಗ್ಲೀಷ್ ಅಕ್ಷರದ "U" ಆಕಾರದ ಕಿಂಡಿಯಿದೆ. ಇದರ ಅಳತೆಯು ೭.೫ ಸೆಂ.ಮೀಟರ್ ಇದೆ. ಮೇಲ್ನೋಟಕ್ಕೆ ಪುನರ್ ಜೋಡಣೆಯಂತೆ ಮಾಡಿದ ಸಮಾಧಿಯಂತೆ ತೋರುತ್ತದೆ. ಇದರ ಇನ್ನುಳಿದ ಕಲ್ಲುಚಪ್ಪಡಿಗಳು ಸಂಪೂರ್ಣವಾಗಿ ಹಾಳಾಗಿವೆ. ಅಳಿದುಳಿದ ಅವಶೇಷಗಳು ಮಾತ್ರ ಕಂಡುಬಂದಿವೆ. ಪ್ರಾಯಶಃ ಇಲ್ಲಿ ಹಲವು ಸಮಾಧಿಗಳಿದ್ದು, ಅವುಗಳು ಹಡಗಲಿ ಪಟ್ಟಣ ಬೆಳದಂತೆಲ್ಲಾ ಸಂಪೂರ್ಣ ನಾಶವಾಗಿರುವ ಸಾಧ್ಯತೆಯಿದೆ. ಆದರೂ ಸಹ ಇಲ್ಲಿ ದೊರೆತಿರುವ ಅವಶೇಷಗಳು ಆ ಸಂದರ್ಭದ ಇಲ್ಲಿನ ಈ ಸಂಸ್ಕೃತಿಯ ಮಹತ್ವವನ್ನು ತಿಳಿಯಲು ನೆರವಾಗಿವೆಯೆಂದು ಪರಿಭಾವಿಸಬಹುದು.

**ನವಲಿ**

ಹೂವಿನ ಹಡಗಲಿ ತಾಲ್ಲೂಕು ಕೇಂದ್ರದಿಂದ ೨೯ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೧೭೪ಕಿ.ಮೀ ದೂರದಲ್ಲಿ ನವಲಿ ಗ್ರಾಮವಿದೆ. ತುಂಗಭದ್ರ ನದಿ ಪರಿಸರದಲ್ಲಿರುವ ಈ ನೆಲೆಯಲ್ಲಿ ಎಂ.ಪಿ ವೀಣಾ ಅವರು ಬೃಹತ್ ಶಿಲಾಯುಗದ ವಿವಿಧ ಪ್ರಕಾರದ ಶಿಲಾಸಮಾಧಿಗಳನ್ನು ಶೋಧಿಸಿದ್ದಾರೆ.[೬೫] ಈ ನೆಲೆಯಲ್ಲಿ ೨.೫ ಅಡಿ ಎತ್ತರದ ಮಾನವಾಕೃತಿಯ ಗೊಂಬೆಯನ್ನು ಪತ್ತೆಹಚ್ಚಿ ವರದಿ ಮಾಡಿದ್ದಾರೆ. ಆದರೆ ಇಲ್ಲಿನ ಮಾನವಾಕೃತಿಯು ಈಗಾಗಲೆ ಅಧ್ಯಯನ ಪ್ರದೇಶದಲ್ಲಿ ಶೋಧವಾಗಿರುವ ಮಾನವಾಕೃತಿಯನ್ನು ಸ್ಪಷ್ಟವಾಗಿ ಹೋಲುವುದಿಲ್ಲ ಎಂಬುದು ಪ್ರಮುಖ ಸಂಗತಿಯಾಗಿದೆ. ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಈ ನೆಲೆಯಲ್ಲಿ ವರದಿಯಾಗಿರುವ

ಬೃಹತ್ ಶಿಲಾಯುಗದ ಅವಶೇಷಗಳನ್ನು ಪರಿಶೀಲಿಸಲಾಯಿತು. ಆದರೆ ಈ ನೆಲೆಯಲಿದ್ದ ಬೃಹತ್ ಶಿಲಾಯುಗದ ಶಿಲಾಸಮಾಧಿಗಳು ಸಂಪೂರ್ಣವಾಗಿ ನಾಶವಾಗಿದ್ದು ಸಮಾಧಿಗೆ ಬಳಸಿದ ಕಲ್ಲಿನ ಅವಶೇಷಗಳು ಮತ್ತು ಕಪ್ಪು ವರ್ಣದ ಮಡಕೆ ಭಾಗಗಳು ಮಾತ್ರ ಅಲ್ಲಿಪುರ ನೆಲೆಯಲ್ಲಿ ಕಂಡುಬಂದಿರುವ ಅವಶೇಷಗಳ ಹಾಗೆಯೇ ಕಂಡುಬರುತ್ತವೆ ಆದ್ದರಿಂದ ಈ ನೆಲೆಯು ಸಹ ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂದು ಗುರುತಿಸಲು ಸಾಧ್ಯವಾಗಿದೆ.

**ಕೊಟ್ನಕಲ್ಲು**

ಹೂವಿನಹಡಗಲಿ ತಾಲ್ಲೂಕು ಕೇಂದ್ರದಿಂದ ೩೦ ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೧೭೫ ಕಿ.ಮೀ ದೂರದಲ್ಲಿ ಕೊಟ್ನಕಲ್ಲು ಗ್ರಾಮವಿದೆ. ಈ ಗ್ರಾಮದಲ್ಲಿ ಶಿಲಾತಾಮ್ರಯುಗದಿಂದ ಹಿಡಿದು ಬೃಹತ್ ಶಿಲಾಯುಗದವರೆಗಿನ ಸಾಂಸ್ಕೃತಿಕ ಅವಶೇಷಗಳು ಕಂಡುಬಂದಿವೆ. ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದಂತೆ ವಿವಿಧ ಪ್ರಕಾರದ ಸಮಾಧಿಗಳು, ಕಪ್ಪು ವರ್ಣದ ಮಡಕೆ ಭಾಗಗಳು ಮತ್ತು ಮೂಳೆ ಅವಶೇಷಗಳನ್ನು ಈ ನೆಲೆಯಲ್ಲಿ ಶೋಧಿಸಲಾಗಿದೆ.[೬೬] ಅವುಗಳ ಸುಳಿವಿನಿಂದ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ತುಂಗಭದ್ರ ನದಿದಂಡೆಯಲ್ಲಿರುವ ದೇವಾಲಯದ ಮುಂದೆ ಇರುವ ಕಪ್ಪು ಶಿಲೆಯಲ್ಲಿ ಮುವತ್ತಾರು ಕಲ್ಗುಳಿಗಳನ್ನು ಗುರುತಿಸಲಾಯಿತು. ಈ ಕಲ್ಗುಳಿಗಳ ರಚನೆಯ ಉದ್ದೇಶ ಸ್ಪಷ್ಟವಾಗಿಲ್ಲ. ಪ್ರಾಯಶಃ ಇವು ಧಾರ್ಮಿಕ ಆಚರಣೆಗೆ ಸಂಬಂಧಿಸಿದ ಕುರುಹುಗಳಾಗಿವೆ. ಅಲ್ಲದೆ ಈ ಹಿಂದೆ ದಾಖಲಾಗಿರುವ ಬೃಹತ್ ಶಿಲಾಯುಗದ ಸಮಾಧಿಗಳು ನಾಶವಾಗಿದ್ದು ಅವಶೇಷಗಳು ಮಾತ್ರ ಲಭ್ಯವಾಗಿವೆ. ಒಟ್ಟಿನಲ್ಲಿ ಕೊಟ್ನಕಲ್ಲು ಸುತ್ತಮುತ್ತಲಿನಲ್ಲಿ ದೊರೆತಿರುವ ಶಿಲಾಸಮಾಧಿಗಳಿಂದ ಇದು ಸ್ಮಶಾನ ನೆಲೆ ಎಂದು ಗುರುತಿಸಲು ಸಾಧ್ಯವಾಗಿದೆ.

**ಮಾಗಳ**

ಹೂವಿನ ಹಡಗಲಿ ತಾಲ್ಲೂಕು ಕೇಂದ್ರದಿಂದ ೩೨ ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೧೭೭ ಕಿ.ಮೀ ದೂರದಲ್ಲಿ ಮಾಗಳ ಗ್ರಾಮವಿದೆ. ತುಂಗಭದ್ರ ನದಿದಂಡೆಯಲ್ಲಿರುವ ಈ ನೆಲೆಯಲ್ಲಿ ನವಶಿಲಾಯುಗ ಸಂಸ್ಕೃತಿಯ ಕುರುಹುಗಳು ಮತ್ತು ಬೃಹತ್ ಶಿಲಾಯುಗದ ಸಮಾಧಿಗಳು ಮತ್ತು ಕಪ್ಪು ವರ್ಣದ ಮಡಕೆಗಳು ಶೋಧವಾಗಿವೆ.[೬೭] ಆದರೆ ಅವುಗಳು  ಇಂದು ಸಂಪೂರ್ಣ ನಾಶವಾಗಿದ್ದು ಸಮಾಧಿ ಅವಶೇಷಗಳು ಮಾತ್ರ ಕಂಡುಬಂದಿವೆ. ಹಾಗಾಗಿ ಇಂಥ ಅವಶೇಷಗಳ ಮೂಲಕ ತಿಳಿಯಬುದಾದ ಸಂಗತಿ ಏನೆಂದರೆ, ಮಾಗಳವು ಸಹ ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂಬುದನ್ನು ಖಚಿತವಾಗಿ ಗುರುತಿಸಲು ಸಾಧ್ಯವಾಗಿದೆ.

**ಮೈಲಾರ**

ಹೂವಿನಹಡಗಲಿ ತಾಲ್ಲೂಕು ಕೇಂದ್ರದಿಂದ ೨೭ ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೧೭೨ ಕಿ.ಮೀ ದೂರದಲ್ಲಿ ಮೈಲಾರ ಗ್ರಾಮವಿದೆ. ಭೌಗೋಳಿಕವಾಗಿ ತುಂಗಭದ್ರ ನದಿದಂಡೆಯಲ್ಲಿರುವ

ಈ ಗ್ರಾಮದಲ್ಲಿ ನವಶಿಲಾಯುಗದ ಶಿಲಾಕೊಡಲಿಗಳು ಹಾಗೂ ಬೃಹತ್ ಶಿಲಾಯುಗದ ವಿವಿಧ ಪ್ರಕಾರದ ಶಿಲಾ ಸಮಾಧಿಗಳು, ಕಪ್ಪು ವರ್ಣದ ಮಡಕೆಗಳು ವರದಿಯಾಗಿವೆ.[೬೮] ಪ್ರಸ್ತುತ ನೆಲೆಯಲ್ಲಿನ ಬೃಹತ್ ಶಿಲಾಯುಗದ ಅವಶೇಷಗಳು ಸಂಪೂರ್ಣ ನಾಶಹೊಂದಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಲಾಗಿದೆ. ಇಲ್ಲಿ ದೊರಕಿರುವ ಅವಶೇಷಗಳಿಂದ ಮೈಲಾರವು ಸಹ ಈ ಸಂಸ್ಕೃತಿಯ ಸಮಾಧಿ ನೆಲೆಯಾಗಿತ್ತು ಎಂಬುದರಲ್ಲಿ ಯಾವ ಅನುಮಾನಗಳಿಲ್ಲ.

**ಹುಲಿಗುಡ್ಡ**

ಹೂವಿನಹಡಗಲಿ ತಾಲ್ಲೂಕು ಕೇಂದ್ರದಿಂದ ೨೭ ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೧೭೨ ಕಿ.ಮೀ ದೂರದಲ್ಲಿ ಹುಲಿಗುಡ್ಡವಿದೆ. ಹುಲಿಗುಡ್ಡದಲ್ಲಿ ಬೃಹತ್ ಶಿಲಾಯುಗದ ಸಮಾಧಿ ನೆಲೆ ಮತ್ತು ವಿವಿಧ ಮಾದರಿಯ ಶಿಲಾಸಮಾಧಿಗಳನ್ನು ಶೋಧಿಸಲಾಗಿದೆ.[೬೯] ಪ್ರಸ್ತುತ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಆ ನೆಲೆಯಲ್ಲಿದ್ದ ಸಮಾಧಿಗಳು ಹಾಳಾಗಿದ್ದು, ಕಲ್ಲಿನ ಅವಶೇಷಗಳು ಮಾತ್ರ ಇರುವುದನ್ನು ಗಮನಿಸಲಾಗಿದೆ. ಈ ನೆಲೆಯಲ್ಲಿ ಬೃಹತ್ ಶಿಲಾಯುಗದ ವಸತಿ ಅವಶೇಷಗಳು ಕಂಡುಬರದೆ ಸಮಾಧಿ ಅವಶೇಷಗಳು ದೊರಕುವುದರಿಂದ ಹುಲಿಗುಡ್ಡವು ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂದು ಸ್ಪಷ್ಟವಾಗುತ್ತದೆ.

**ರಾಜವಾಳ (ರಾಜವಾಡೆ)**

ಹೂವಿನಹಡಗಲಿ ತಾಲ್ಲೂಕು ಕೇಂದ್ರದಿಂದ ೧೦ಕಿ.ಮೀ ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೧೫೪ ಕಿ.ಮೀ ದೂರದಲ್ಲಿ ರಾಜವಾಳ ಗ್ರಾಮವಿದೆ. ತುಂಗಭದ್ರ ನದಿದಂಡೆಯಲ್ಲಿರುವ ಈ ಗ್ರಾಮದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ೩೦ಕ್ಕೂ ಹೆಚ್ಚಿನ ಶಿಲಾಸಮಾಧಿಗಳು[೭೦] ಬೆಳಕಿಗೆ ಬಂದಿವೆ. ಆದರೆ ಅವುಗಳು ತುಂಗಭದ್ರ ನದಿಯ ಪ್ರವಾಹದಿಂದಾಗಿ ಸಂಪೂರ್ಣ ನಾಶಹೊಂದಿದ್ದು ಅಲ್ಲಲ್ಲಿ ಕಪ್ಪು, ಕೆಂಪು ವರ್ಣದ ಮಡಕೆ ಭಾಗಗಳು ಅಧ್ಯಯನದ ಆಕರಗಳಾಗಿ ಗೋಚರಿಸುತ್ತವೆ. ಪ್ರಸ್ತುತ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ರಾಜವಾಳದ ಸುತ್ತಮುತ್ತಲಿನ ಪರಿಸರದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಕುರುಹುಗಳನ್ನು ಪರಿಶೀಲಿಸಲಾಯಿತು. ಬಹುತೇಕ ಕುರುಹುಗಳು ಹಾಳಾಗಿದ್ದು ಕಲ್ಲಿನ ಅವಶೇಷಗಳು ಮಾತ್ರ ಕಂಡುಬಂದಿವೆ. ಆದರೆ ವಾಸ್ತವ್ಯದ ಕುರುಹುಗಳು ಕಂಡುಬಂದಿಲ್ಲ ಹಾಗಾಗಿ ರಾಜವಾಳವು ಸಹ ಬೃಹತ್ ಶಿಲಾಯುಗದ ಸ್ಮಶಾನ ನೆಲೆಯಾಗಿತ್ತು ಎಂಬುದು ಅಲ್ಲಿನ ಸಮಾಧಿ ಅವಶೇಷಗಳಿಂದ ದೃಢವಾಗುತ್ತದೆ.

**ಕಮಲಾಪುರ**

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನಲ್ಲಿರುವ ಕಮಲಾಪುರವು ತಾಲ್ಲೂಕಿನ ಹೋಬಳಿ ಕೇಂದ್ರವಾಗಿದೆ. ಈ ಗ್ರಾಮದ ನೈರುತ್ಯ ದಿಕ್ಕಿಗೆ ಸುಮಾರು ೬ ಕಿ.ಮೀ, ದೂರದಲ್ಲಿ ಕಮಲಾಪುರದ ಕೆರೆಗೆ ಹರಿದುಬರುವ ಹಳ್ಳದಲ್ಲಿ ಇತ್ತೀಚೆಗೆ ಹಳೆಯ ಶಿಲಾಯುಗದ ಆಯುಧೋಪಕರಣಗಳು

ಪತ್ತೆಯಾಗಿರುವ ವಿವರಗಳು ದಾಖಲಾಗಿವೆ.[೧೧] ದಕ್ಷಿಣದ ಬೆಟ್ಟಗುಡ್ಡಗಳ ಕಡೆಯಿಂದ ಹರಿದುಬರುವ ಹಳ್ಳದಲ್ಲಿ ದೊರೆತ ಶಿಲಾಯುಧಗಳನ್ನು ಡಾಲರೈಟ್ ಶಿಲೆಗಳಿಂದ ತಯಾರಿಸಲಾಗಿದೆ. ದೊರಕಿರುವ ಇಂಥ ಕುರುಹುಗಳಿಂದ ತಿಳಿಯಬಹುದಾದ ಬಹುಮುಖ್ಯ ಅಂಶವೆಂದರೆ ಈ ಪ್ರದೇಶವು ಆದಿ ಹಳೆಯ ಶಿಲಾಯುಗ ಕಾಲದಿಂದಲೂ ಜನ ವಾಸ್ತವ್ಯ ಹೊಂದಿತ್ತೆಂಬುದು ಸ್ಪಷ್ಟವಾಗುತ್ತದೆ. ಕಮಲಾಪುರದ ವ್ಯಾಪ್ತಿಯಲ್ಲಿರುವ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಮುಂಭಾಗದಲ್ಲಿರುವ ವಿಶಾಲವಾದ ಬಂಡೆಯ(ಚೋಮನ) ಮೇಲೆ ಎಂಟು ಪ್ರಾಗೈತಿಹಾಸಿಕ ಗೀರು ಚಿತ್ರಗಳನ್ನು ಶರಣಪ್ಪಬಸಪ್ಪ ಕೋಲ್ಕಾರ ಅವರು ಶೋಧಿಸಿದ್ದಾರೆ. ಅವುಗಳಲ್ಲಿ ಆರು ಎತ್ತುಗಳ ಚಿತ್ರಗಳಿವೆ. ಎರಡು ಎತ್ತುಗಳ ಮೇಲೆ ಕುಳಿತ ಮನುಷ್ಯನ ಚಿತ್ರಗಳಿವೆ. ಕನ್ನಡ ವಿಶ್ವವಿದ್ಯಾಲಯದ ಪೂರ್ವದ ಬಯಲಿನಲ್ಲಿರುವ (ಕುಲಪತಿ ನಿವಾಸದ ಪೂರ್ವಕ್ಕೆ ಇರುವ) ಒಂಟಿಕಲ್ಲು ಗುಂಡಿನ ಕಲ್ಲಾಸರೆಯಲ್ಲಿ ಜಿಂಕೆಯ(ಕಡವೆ) ವರ್ಣಚಿತ್ರವಿದೆ. ಈ ಗುಂಡಿನ ಕೆಳಗಡೆ ಇರುವ ಬಂಡೆಯಲ್ಲಿ ತ್ರಿಶೂಲದ ಆಕೃತಿ ಮತ್ತು ನಾಲ್ಕು ಎತ್ತುಗಳು ಸೇರಿ ಒಟ್ಟು ಐದು ಚಿತ್ರಗಳು ಕೊರೆಯಲ್ಪಟ್ಟಿವೆ. ಅವು ಒಂದರ ಹಿಂದೆ ಒಂದರಂತೆ ಸಾಲಾಗಿರುವಂತೆ ಚಿತ್ರಿಸಲಾಗಿದೆ. ಈ ಎತ್ತುಗಳ ಮುಂಭಾಗದಲ್ಲಿ ತ್ರಿಶೂಲದ ಆಕೃತಿಯ ಚಿತ್ರಣವಿದೆ. ಚಿತ್ರಿಸಿರುವ ಪ್ರಾಣಿಗಳೆಲ್ಲವೂ ಪೂರ್ವದ ದಿಕ್ಕಿಗೆ ಮುಖಮಾಡಿರುವುದನ್ನು ಗಮನಿಸಲಾಗಿದೆ. ಈ ಚಿತ್ರಗಳ ರಚನಾ ವಿನ್ಯಾಸವನ್ನು ಆಧರಿಸಿ ಇವು ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದವುಗಳೆಂದು ಗುರುತಿಸಲಾಗಿದೆ.[೨] ಇಂಥ ಅವಶೇಷಗಳಿಂದಾಗಿ ಈ ಪ್ರದೇಶವೂ ಹಳೆಯ ಶಿಲಾಯುಗ ಕಾಲದಿಂದ ಹಿಡಿದು ಬೃಹತ್ ಶಿಲಾಯುಗದ ವರೆಗಿನ ಸಾಂಸ್ಕೃತಿಕ ಕುರುಹುಗಳನ್ನು ಒಳಗೊಂಡಿರುವುದು ಸ್ಪಷ್ಟವಾಗುತ್ತದೆ. ಹಾಗಾಗಿ ಈ ನೆಲೆಯು ಪ್ರಾಗೈತಿಹಾಸಿಕ ಮಹತ್ವವನ್ನು ಹೊಂದಿರುವುದನ್ನು ಯಾವ ಅನುಮಾನಗಳಿಲ್ಲದೆ ದೃಢಪಡಿಸಬಹುದು.

**ಕುಲುಮೆ ಗೊಲ್ಲರಹಳ್ಳಿ**

ರಾಷ್ಟ್ರೀಯ ಹೆದ್ದಾರಿ ೫೦ರಲ್ಲಿ ಮುಖ್ಯ ರಸ್ತೆಯಿಂದ ಎಡಗಡೆಗೆ ತಿರುಗಿಕೊಳ್ಳುವ ಸಂಪರ್ಕ ರಸ್ತೆಯಲ್ಲಿ ೧ ಕಿ.ಮೀ ಸಾಗಿದರೆ, ಕುಲುಮೆ ಗೊಲ್ಲರಹಳ್ಳಿ ಗ್ರಾಮ ಸಿಗುತ್ತದೆ. ತಾಲ್ಲೂಕು ಕೇಂದ್ರವಾದ ಹೊಸಪೇಟೆಯಿಂದ ೩೦ ಕಿ.ಮೀ ದೂರದಲ್ಲಿದೆ. ಹಾಗೂ ಜಿಲ್ಲಾ ಕೇಂದ್ರವಾದ ಬಳ್ಳಾರಿಯಿಂದ ೮೭ ಕಿ.ಮೀ ಅಂತರವನ್ನು ಹೊಂದಿರುವುದು. ವಾಸುದೇವ ಬಡಿಗೇರ ಅವರು 'ಹಂಪಿ ಪ್ರದೇಶದ ಲೋಹಶಾಸ್ತ್ರ ಕಲೆ' ಎಂಬ ಲೇಖನದಲ್ಲಿ ೧೫ ಅಡಿ ಎತ್ತರದ ಕಬ್ಬಿಣ ಕರಗಿಸಿದ ಅವಶೇಷಗಳ ದಿಬ್ಬದ ಬಗ್ಗೆ ಹಾಗೂ ವಿಜಯನಗರ ಕಾಲದಲ್ಲಿ ಕಾಳಿಕಾ ದೇವಾಲಯವನ್ನು ಕಟ್ಟಿಸಿ, ಕಮ್ಮಾರರಿಗೆ ದತ್ತಿ ಬಿಡಲಾಯಿತೆಂದು ವಿವರಿಸಿದ್ದಾರೆ.[೩] ಅಲ್ಲದೇ ಇಲ್ಲಿನ ದಿಬ್ಬದಲ್ಲಿರುವ ಕೊಳವೆ, ಕಬ್ಬಿಣದ ಕಿಟ್ಟ, ಕುಲುಮೆ ತಯಾರಿಕೆಯಲ್ಲಿ ಬಳಸಿದ ಇಟ್ಟಿಗೆ ಮುಂತಾದ ವಸ್ತುಗಳನ್ನು ಗಮನಿಸಿ ಕುಲುಮೆಗಳನ್ನು ಸುಮಾರು ೫ ಅಡಿ ಎತ್ತರವಾಗಿ ವೃತ್ತಾಕಾರದಲ್ಲಿ ನಿರ್ಮಿಸಿ ಗಾಳಿ ಹಾಕಲು ಎರಡು ತಿದಿಗಳನ್ನು

ಕೂಡಿಸುತ್ತಿದ್ದರು ಎಂದು ದಾಖಲಿಸಿದ್ದಾರೆ. ಇಂದಿಗೂ ಕೂಡ ಕಮ್ಮಾರರು ಬಳಸುತ್ತಿದ್ದ ಇಕ್ಕಳ, ಭರ್ಚಿ, ಅಡಿಗಲ್ಲನ್ನು ಕಾಳಿಕ ದೇವಾಲಯದಲ್ಲಿಟ್ಟು ತಮಟೇಶ್ವರನೆಂದು ಆರಾಧಿಸಲಾಗುತ್ತದೆ. ಈ ಎಲ್ಲಾ ವಿವರಗಳನ್ನು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಗಮನಿಸಲಾಯಿತು. ಒಟ್ಟಿನಲ್ಲಿ ಬೃಹತ್ ಶಿಲಾಯುಗ ಕಾಲದಿಂದಲೂ ನಡೆದು ಬಂದ ಕಬ್ಬಿಣದ ಉತ್ಪಾದನೆಗೆ ಸಂಬಂಧಿಸಿದ ಕುರುಹುಗಳು ಈ ಗ್ರಾಮದಲ್ಲಿ ಕಂಡುಬರುತ್ತವೆ. ಇಲ್ಲಿನ ಕಮ್ಮಾರಿಕೆ ವೃತ್ತಿಯು ಪರಂಪರಾಗತವಾಗಿ ಮುಂದುವರೆದ ಕುಲಕಸುಬಾಗಿದೆಯೆಂದು ಅಭಿಪ್ರಾಯಿಸಬಹುದು.

**ಚಿಲಕನಹಟ್ಟಿ**

ರಾಷ್ಟ್ರೀಯ ಹೆದ್ದಾರಿ ೫೦ರಲ್ಲಿ ಹೊಸಪೇಟೆಯಿಂದ ೧೩ ಕಿ.ಮೀ ದೂರದಲ್ಲಿ ಚಿಲಕನಟ್ಟಿ ಗ್ರಾಮವಿದೆ. ಇದು ಜಿಲ್ಲಾ ಕೇಂದ್ರವಾದ ಬಳ್ಳಾರಿಯಿಂದ ೮೬ ಕಿ.ಮೀ ದೂರದಲ್ಲಿದಲ್ಲಿರುವುದು. ಈ ಗ್ರಾಮ ಪರಿಸರದಲ್ಲಿ ಕಬ್ಬಿಣದ ಕುಲುಮೆ ಅವಶೇಷಗಳು ಕಂಡುಬಂದಿವೆ. ಇಲ್ಲಿಯ ಕಮ್ಮಾರರು ಹೇಳುವಂತೆ, ಒಟ್ಟು ಎಂಟು ಕಮ್ಮಾರಿಕೆ ಕುಲುಮೆಗಳಿದ್ದವು. ಒಂದೊಂದು ಕುಲುಮೆಯಲ್ಲಿ ದಿನಕ್ಕೆ ಎರಡು ಕಬ್ಬಿಣದ ಮುದ್ದೆಗಳನ್ನು ತಯಾರಿಸಿ ಅವುಗಳನ್ನು ಉಪಕರಣಗಳ ತಯಾರಿಕೆಗೆ ಬಳಸಲಾಗುತ್ತಿತ್ತು. ಇಂದಿಗೂ ಕೆಂಪು ಮಣ್ಣಿನಿಂದ ನಿರ್ಮಿಸಿದ ಕೊಳವೆಗಳು ಕಬ್ಬಿಣದ ಕಿಟ್ಟ ಕುರುಹುಗಳು ಇರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಲಾಗಿದೆ. ಈ ಗ್ರಾಮದಲ್ಲಿ ವಿಶ್ವಕರ್ಮ ಸಮುದಾಯದವರು ಹೆಚ್ಚಾಗಿ ನೆಲೆಸಿದ್ದು, ಅವರು ಕಮ್ಮಾರಿಕೆ ವೃತ್ತಿಯನ್ನು ಪರಂಪರಾಗತವಾಗಿ ರೂಢಿಸಿಕೊಂಡು ಬಂದಿದ್ದಾರೆ.[೭೪] ಮೊದಲು ಕಬ್ಬಿಣವನ್ನು ಹದಮಾಡಿ ವಿವಿಧ ಉಪಕರಣಗಳನ್ನು ತಯಾರಿಸುವ ತಂತ್ರಜ್ಞಾನ ಬೃಹತ್ ಶಿಲಾಯುಗದ ಜನರಿಗೆ ತಿಳಿದಿತ್ತು. ಈ ಪಾರಂಪರಿಕ ತಂತ್ರಜ್ಞಾನ ಐತಿಹಾಸಿಕ ಕಾಲದಲ್ಲಿ ಬೆಳವಣಿಗೆ ಹೊಂದಿ ರಾಜಧಾನಿ ಪಟ್ಟಣಗಳ ಉದಯಕ್ಕೆ ಕಾರಣವಾಯಿತು. ಹೀಗೆ ಕಮ್ಮಾರಿಕೆ ವೃತ್ತಿಯನ್ನು ಪರಂಪರಗತವಾಗಿ ರೂಢಿಸಿಕೊಂಡು ಬಂದಿರುವ ವಿಶ್ವಕರ್ಮ ಸಮುದಾಯ ಕೆಲಸ ಮಾಡಲು ಬಳಸುತ್ತಿದ್ದ ದೊಡ್ಡ ದೊಡ್ಡ ಉಪಕರಣಗಳನ್ನು ಇಂದಿಗೂ ಕಾಣಬಹುದು. ಅದೇ ರೀತಿ ನಂದಿಬಂಡೆ ಗ್ರಾಮದಲ್ಲೂ ಸಹ ಕಬ್ಬಿಣದ ಕುರುಹುಗಳು ಕಂಡುಬಂದಿವೆ.

**ಕೊಂಡನಾಯಕನಹಳ್ಳಿ**

ಹೊಸಪೇಟೆ–ಕಂಪ್ಲಿ ರಸ್ತೆಯಲ್ಲಿ ಹೊಸಪೇಟೆಯಿಂದ ೪ಕಿ.ಮೀ ದೂರದಲ್ಲಿ ಕೊಂಡನಾಯಕನಹಳ್ಳಿ ಗ್ರಾಮವಿದೆ. ಜಿಲ್ಲಾ ಕೇಂದ್ರವಾದ ಬಳ್ಳಾರಿಯಿಂದ ೬೪ ಕಿ.ಮೀ ದೂರದಲ್ಲಿದೆ. ಈ ಗ್ರಾಮದ ಸಮೀಪದಲ್ಲಿ ಬೃಹತ್ ಶಿಲಾಗೋರಿಗಳನ್ನು ಸಂಶೋಧಕರು ಪತ್ತೆಹಚ್ಚಿದ್ದಾರೆ.[೭೫] ಹಂಪಿ ಪ್ರದೇಶದಲ್ಲಿ ದೊರೆತಿರುವ ನವಶಿಲಾಯುಗದ ನೆಲೆಗಳಲ್ಲಿ ನಂತರದ ಬೃಹತ್ ಶಿಲಾಯುಗ ಅಥವಾ ಕಬ್ಬಿಣಯುಗ ಸಂಸ್ಕೃತಿ ಬೆಳೆದು ಬಂದಿವೆ. ಇದಕ್ಕೆ ಆಧಾರವೆಂಬಂತೆ ಮೊಸಳಯ್ಯನ ಗುಡ್ಡದಲ್ಲಿ ಕಪ್ಪು–ಕೆಂಪು ವರ್ಣದ

ಮಡಕೆ ಭಾಗಗಳು(ಬಿ.ಆರ್.ಡಬ್ಲ್ಯೂ), ದೊರತಿವೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಅವುಗಳು ಸಂಪೂರ್ಣ ಹಾಳಾಗಿರುವುದನ್ನು ಗಮನಿಸಲಾಗಿದೆ. ಪ್ರಾಯಶಃ ವಿಜಯನಗರ ಪಟ್ಟಣದ ಬೃಹತ್ ಬೆಳವಣಿಗೆಯಿಂದಾಗಿ ಇಂಥ ಅವಶೇಷಗಳು ಹಾಳಾಗಿವೆ ಎಂಬುದನ್ನು ಊಹಿಸಬಹುದು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿದ್ದ ಬಹುತೇಕ ಬೃಹತ್ ಶಿಲಾಯುಗದ ನೆಲೆಗಳು ಹಾಳಾಗಿರುವುದನನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಲಾಗಿದೆ. ಹಿಂದಿನ ಹಳೆಯ ನಕಾಶೆಗಳಲ್ಲಿ 'ಪುರಾತತ್ವ ಪೊರೊಂಬೋಕು' ಎಂದು ಗುರುತಿಸಲಾಗಿದ್ದು, ಇವು ಬೃಹತ್ ಶಿಲಾಸಮಾಧಿಗಳಿದ್ದ ಸ್ಥಳಗಳನ್ನು ಸೂಚಿಸುತ್ತವೆ. ಆದರೆ ಹೊಸ ನಕಾಶೆಗಳಲ್ಲಿ ಈ ಸ್ಥಳಗಳನ್ನು ಸಾಗುವಳಿ ಭೂಮಿಗಳೆಂದು ದಾಖಲು ಮಾಡಿರುವುದರಿಂದ ಅಲ್ಲಿದ್ದ ಪ್ರಾಚೀನ ನೆಲೆಗಳು ಸಾಗುವಳಿಯಿಂದಾಗಿ ನಾಶವಾಗಿವೆ ಎಂಬುದು ತಿಳಿಯುತ್ತದೆ. ಕಬ್ಬಿಣದ ಅದಿರಿನ ನಿಕ್ಷೇಪಗಳು ಈ ನೆಲೆಗಳ ಸಮೀಪದಲ್ಲಿಯೇ ಇರುವುದರಿಂದ ಬೃಹತ್ ಶಿಲಾ ಸಮಾಧಿಗಳನ್ನು ಕಟ್ಟಲು ಅನುಕೂಲವಾಗುವ ಬಂಡೆಕಲ್ಲುಗಳ ಲಭ್ಯತೆ ಹಾಗೂ ಉಳುಮೆಗೆ ಯೋಗ್ಯವಾದ ಭೂಮಿ ಇದ್ದುದ್ದರಿಂದ ಶಿಲಾಯುಗ ಸಂಸ್ಕೃತಿ ಜನರು ಹೆಚ್ಚಿನ ಪ್ರಮಾಣದಲ್ಲಿ ವಾಸ್ತವ್ಯ ಮಾಡಲು ಸಾಧ್ಯವಾಯಿತೆಂದು ಅಭಿಪ್ರಾಯಿಸಬಹುದು. ಇಲ್ಲಿನ ಹಲವು ನೆಲೆಗಳಲ್ಲಿ ನವಶಿಲಾಯುಗ ಜನರಿಂದಲೇ ವಾಸ್ತವ್ಯವು ಆರಂಭವಾಗಿ ನಿರಂತರವಾಗಿ ಮುಂದುವರೆದಿರುವುದು ಸಾಂಸ್ಕೃತಿಕ ಅವಶೇಷಗಳಿಂದ ದೃಢವಾಗುತ್ತದೆ.

**ಜಾಲಿಪೆಂಟೆಗುಡ್ಡ**

ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕು ಮತ್ತು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಗಡಿಯಲ್ಲಿ ಜಾಲಿಪೆಂಟೆಗುಡ್ಡವಿದೆ. ಪ್ರಸ್ತುತ ಮೊಳಕಾಲ್ಮೂರು ತಾಲ್ಲೂಕು ವ್ಯಾಪ್ತಿಯಲ್ಲಿರುವ ಈ ನೆಲೆಯು ತಾಲ್ಲೂಕು ಕೇಂದ್ರದಿಂದ ನೈರುತ್ಯ ದಿಕ್ಕಿಗೆ ೩೧ ಕಿ.ಮೀ ದೂರದಲ್ಲಿದೆ. ಜಾಲಿಪೆಂಟೆಗುಡ್ಡದ ಪಶ್ಚಿಮ ದಿಕ್ಕಿನಲ್ಲಿ ಸಂಡೂರು ತಾಲ್ಲೂಕಿನ ದೇವರಲಹಳ್ಳಿ ಮುತ್ತಾಜನಹಳ್ಳಿ ಗ್ರಾಮಗಳಿವೆ. ಉತ್ತರ ದಿಕ್ಕಿಗೆ ಮೋತಲಕುಂಟೆ, ಬೊಮ್ಮನಗುಂಡು, ಜಿನಿವಾಲದಗುಡ್ಡ ಹಾಗೂ ಹಾಳೂರು ಗ್ರಾಮಗಳಿವೆ. ಜಾಲಿಪೆಂಟೆಗುಡ್ಡವು ನೈಸರ್ಗಿಕವಾದ ಗ್ರಾನೈಟ್ ಶಿಲಾಸಮುಚ್ಚಯಗಳಿಂದ ಹಾಗೂ ಗವಿಕಲ್ಲಾಸರೆಗಳು, ವಿವಿಧ ಜಾತಿಯ ಗಿಡ-ಮರಗಳು, ನೀರಿನ ದೋಣಿಗಳು, ಮಳೆ ನೀರಿನಿಂದ ತುಂಬಿಹರಿಯುವ 'ಯರ್ರವಂಕ'(ಕೆಂಪುಹಳ್ಳ)ಹಳ್ಳವು ಇಲ್ಲಿನ ಫಲವತ್ತಾದ ಭೂಭಾಗವನ್ನು ಸಮೃದ್ಧಗೊಳಿಸಿವೆ. ಇಲ್ಲಿನ ಭೌಗೋಳಿಕ ಪರಿಸರವು ಶಿಲಾಯುಗದ ಜನರ ವಾಸಕ್ಕೆ ಯೋಗ್ಯವಾಗಿದ್ದು ಅಂದಿನ ಜನರು ನೆಲೆಸಿದ್ದರು ಎನ್ನುವುದಕ್ಕೆ ಅಲ್ಲಿ ಕಂಡುಬಂದಿರುವ ಗವಿಗಳು, ಕಲ್ಗೋರಿಗಳು ಸಾಕ್ಷಿಯಾಗಿವೆ.[೬೬] ಬೃಹತ್ ಶಿಲಾಯುಗದ ಜನರು ಸಾವನಪ್ಪಿದ ನಂತರ ಶವವನ್ನು ಇಟ್ಟು ಸಮಾಧಿಗಳನ್ನು ನಿರ್ಮಿಸುತ್ತಿದ್ದರು. ಇಲ್ಲವೇ ಆ ಜನರ ಸ್ಮರಣಾರ್ಥವಾಗಿ ಕಲ್ಲಿನ ಸ್ಮಾರಕಗಳನ್ನು ನಿರ್ಮಿಸುತ್ತಿದ್ದರು. ಇಂತಹ ಕಲ್ಲಿನ ಸ್ಮಾರಕಗಳಲ್ಲಿ ವಿವಿಧ ಮಾದರಿಗಳಿವೆ. ಅವುಗಳಲ್ಲಿ ಕಲ್ಮನೆ(Dolmen), ಶಿಲಾವೃತ್ತ(Stone Circle), ನಿಲುಸುಕಲ್ಲುಗಳು(Menhir), ನೆಲಕೋಣೆ(Cist), ಶವಕುಣಿಗಳು(Pit Burial), ಶಿಲಾವೃತ್ತ

ಸಹಿತಕಲ್ಮನೆ(Dolmenoid Cist) ಎಂಬ ಮೊದಲಾದ ಮಾದರಿಗಳಿವೆ. ಆದರೆ ಜಾಲಿಪೆಂಟೆ ಗುಡ್ಡದಲ್ಲಿರುವ ಕಲ್ಮನೆ(Dolmen) ಮಾದರಿಗಳಾಗಿದ್ದು ಸುಮಾರು ೧೫ಕ್ಕೂ ಹೆಚ್ಚು ಕಂಡುಬಂದಿವೆ. ಅವುಗಳಲ್ಲಿ ಬಹುತೇಕ ಸಮಾಧಿಗಳು ಅಥವಾ ಕಲ್ಗೋರಿಗಳು ನಾಶಹೊಂದಿದ್ದು ಕೆಲವೇ ಕೆಲವು ಮಾತ್ರ ಸುಸ್ಥಿತಿಯಲ್ಲಿವೆ. ಈ ಕಲ್ಮನೆ(ಆಱಟಟಜಟ) ಗಳನ್ನು ಸ್ಥಳೀಯವಾಗಿ ಸಿಗುವ ಗ್ರ್ಯಾನೈಟ್ ಶಿಲೆಗಳನ್ನು ಬಳಸಿ ನಿರ್ಮಿಸಲಾಗಿದೆ. ಇವು ಬೃಹತ್ ಶಿಲಾಯುಗದ ಜನರು ನಿರ್ಮಿಸಿದ ಸ್ಮಾರಕಗಳಾಗಿವೆ. ಇಲ್ಲಿನ ಒಂದು ಸಮಾಧಿಯು ೨ ಮೀಟರ್ ಉದ್ದ ಮತ್ತು ೧ ಮೀಟರ್ ಅಗಲ ಅಳತೆ ಹೊಂದಿದ್ದು ಮೇಲ್ಭಾಗದಲ್ಲಿ ೧.ಮೀ, ಉದ್ದದ ಕಲ್ಲುಚಪ್ಪಡಿಯನ್ನು ಮುಚ್ಚಳ ರೂಪದಲ್ಲಿ ಇಡಲಾಗಿದೆ. ಮತ್ತೊಂದು ಕಲ್ಗೋರಿಯು ಆಯಾತಾಕಾರದಲ್ಲಿದ್ದು ೨.ಮೀ, ಉದ್ದ ಮತ್ತು ೧.ಮೀ, ಅಗಲ ಅಳತೆ ಹೊಂದಿದೆ. ಇದರ ಮೇಲೆ ೧.ಮೀ, ಉದ್ದದ ಕಲ್ಲುಚಪ್ಪಡಿಯನ್ನು ಮುಚ್ಚಳ ರೂಪದಲ್ಲಿ ಇಡಲಾಗಿದೆ. ಇಂಥ ಸಮಾಧಿಗಳು ಅಥವಾ ಕಲ್ಗೋರಿಗಳು 'ಬೊಮ್ಮನಗುಂಡು' ಎಂಬ ಸ್ಥಳದಲ್ಲಿಯೂ ಸಹ ಕಂಡುಬಂದಿವೆ. ಅವು ಜಾಲಿಪೆಂಟೆ ಗುಡ್ಡದ ಉತ್ತರಕ್ಕೆ ಇಳಿಜಾರಿನಲ್ಲಿ ಸುಮಾರು ೨೦ಕ್ಕೂ ಹೆಚ್ಚು ಕಂಡುಬಂದಿದ್ದು ಬೃಹತ್ ಶಿಲಾಯುಗದ ಜನರ ಸ್ಮಾರಕಗಳಾಗಿವೆ. ಈ ಕುರುಹುಗಳಿಂದ ಜಾಲಿಪೆಂಟೆಗುಡ್ಡ ಮತ್ತು ಬೊಮ್ಮನಗುಂಡು ಪರಿಸರವು ಸಹ ಬೃಹತ್ ಶಿಲಾಯುಗ ಕಾಲದಿಂದಲೂ ಮಾನವನ ಆವಾಸಸ್ಥಾನವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಈ ಜಾಲಿಪೆಂಟೆಗುಡ್ಡ ಮತ್ತು ಬೊಮ್ಮನಗುಂಡು ಎಂಬ ಸ್ಥಳದಿಂದ ಪಶ್ಚಿಮಕ್ಕೆ ಸು. ೧ ಕಿ.ಮೀ ದೂರದಲ್ಲಿ ಹಾಳೂರು ಇದೆ. ಇದರ ಸಮೀಪದಲ್ಲಿಯೇ 'ಯರ್ರವಂಕ'(ಕೆಂಪುಹಳ್ಳ) ಎಂಬ ಹೆಸರಿನ ಹಳ್ಳವು ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತದೆ. ಈ ಹಳ್ಳದ ದಂಡೆಯಲ್ಲಿ ಹೊಲೆಯರ ತಿಮ್ಮವ್ವನ ಬಯಲಿನಲ್ಲಿ ವಿಜಯನಗರೋತ್ತರ ಕಾಲದ ಸ್ಮಾರಕಶಿಲ್ಪಗಳು, ಆಂಜನೇಯನ ಶಿಲ್ಪಗಳಿವೆ. ಅವುಗಳ ಕುರಿತಾಗಿ ಮರಿಕುಂಟೆ ತಿಪ್ಪೇಸ್ವಾಮಿಯವರು 'ಮೊಳಕಾಲ್ಮೂರು ತಾಲ್ಲೂಕು ದರ್ಶನ' ಕೃತಿಯಲ್ಲಿ ದಾಖಲಿಸಿದ್ದಾರೆ. ಇಲ್ಲಿನ ಬಹುತೇಕ ಕುರುಹುಗಳು ಸಂರಕ್ಷಣೆಯಿಲ್ಲದೆ ನಿಧಿಗಳ್ಳರ ಹಾವಳಿಗೆ ತುತ್ತಾಗಿವೆ. ಒಂದು ಎಕರೆ ವಿಸ್ತೀರ್ಣದಲ್ಲಿ ಹರಡಿಕೊಂಡಿರುವ ಕಬ್ಬಿಣದಕಿಟ್ಟ ಮತ್ತು ಮಣ್ಣಿನ ಮಡಕೆಗಳು, ಇಟ್ಟಿಗೆ ಹಾಗೂ ಸುಟ್ಟುಕರಕಲಾದ ಬೂದಿಮಣ್ಣು ಮೊದಲಾದ ಕುರುಹುಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಲಾಗಿದ್ದು, ಇದರಿಂದ ಈ ನೆಲೆಯಲ್ಲಿ ಬೃಹತ್ ಶಿಲಾಯುಗ ಕಾಲದಿಂದ ಮಾನವ ಸಂಸ್ಕೃತಿಯು ನಿರಂತರವಾಗಿ ಬೆಳೆದು ಬಂದಿರುವ ವಿವರಗಳು ತಿಳಿಯಲು ಸಾಧ್ಯವಾಯಿತು.

## ಕೋಷ್ಟಕ

### ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಹೊಸದಾಗಿ ಶೋಧಿಸಿದ ಬೃಹತ್ ಶಿಲಾಯುಗದ ನೆಲೆಗಳು

| ಕ್ರ.ಸಂ | ನೆಲೆಯ ಹೆಸರು | ದೊರೆತ ಅವಶೇಷಗಳು | [illegible] |
|---|---|---|---|
| ೦೧ | ಹುರುಳಿಹಾಳು | ಹಾದಿಕೋಣೆ ಸಮಾಧಿ/ ಕಬ್ಬಿಣದ ಕಿಟ್ಟ | ಬಯಲು |
| ೦೨ | ಮಾಳೇಹಳ್ಳಿ | ಶಿಲಾಸಮಾಧಿ/ ಗೀರುಚಿತ್ರಗಳು | ಬಯಲು |
| ೦೩ | ಮಡಕಲಕಟ್ಟೆ | ಶಿಲಾಸಮಾಧಿಗಳು | ಬಯಲು |
| ೦೪ | ಜರಿಮಲೆ | ಶಿಲಾಸಮಾಧಿಗಳು | ಬೆಟ್ಟದ ತಪ್ಪಲು |
| ೦೫ | ಶಿವಗಂಗೆ ಹಾಳೂರು | ಕಬ್ಬಿಣದ ಕಿಟ್ಟ/ ಕುಲುಮೆ ಅವಶೇಷಗಳು | ಬಯಲು |
| ೦೬ | ಚಿಕ್ಕಮಂಡಿ | ಗೀರುಚಿತ್ರ / ಕಬ್ಬಿಣದ ಕಿಟ್ಟ/ ಕುಲುಮೆ | ಬೆಟ್ಟದ ತಪ್ಪಲು |
| ೦೭ | ಚಿಲುಮೇನಹಳ್ಳಿ | ಕಬ್ಬಿಣದ ಕುಲುಮೆ/ ಕಿಟ್ಟ | ಬಯಲು |
| ೦೮ | ಮಾರಮ್ಮನಹಳ್ಳಿ | ಕಬ್ಬಿಣದ ಕುಲುಮೆ/ ಕಿಟ್ಟ | ಬಯಲು |
| ೦೯ | ನಡುವಲಹಳ್ಳಿ | ಕಬ್ಬಿಣದ ಕುಲುಮೆ/ ಕಿಟ್ಟ | ಬಯಲು |
| ೧೦ | ತಿಮ್ಮನಹಳ್ಳಿ | ಕಬ್ಬಿಣದ ಕುಲುಮೆ/ ಕಿಟ್ಟ | ಬಯಲು |
| ೧೧ | ಓಬಳಾಪುರ | ಕಬ್ಬಿಣದ ಕುಲುಮೆ/ ಕಿಟ್ಟ | ಬಯಲು |
| ೧೨ | ಕಕ್ಕುಪ್ಪೆ | ಕಬ್ಬಿಣದ ಕುಲುಮೆ/ ಕಿಟ್ಟ | ಬೆಟ್ಟದ ತಪ್ಪಲು |
| ೧೩ | ಮತ್ತಾಜನಹಳ್ಳಿ | ಕಬ್ಬಿಣದ ಕುಲುಮೆ/ ಕಿಟ್ಟ | ಬೆಟ್ಟದ ತಪ್ಪಲು |
| ೧೪ | ಹಿರೇಹಾಳು | ಶಿಲಾಸಮಾಧಿ | ಬಯಲು |
| ೧೫ | ಕೊಂಚಗೇರಿ | ಬೂದಿದಿನ್ನೆ/ ಕಬ್ಬಿಣದ ಕಿಟ್ಟ | ಬಯಲು |
| ೧೬ | ಕುಮ್ಮಟದುರ್ಗ | ನಿಲುಸುಗಲ್ಲುಗಳು | ಬೆಟ್ಟದ ತಪ್ಪಲು |
| ೧೭ | ಅಚಲಾಪುರ | ಶಿಲಾಸಮಾಧಿಗಳು | ಬೆಟ್ಟದ ತಪ್ಪಲು |
| ೧೮ | ಕಿರೆಹಳ್ಳಿ | ವರ್ಣಚಿತ್ರಗಳು | ಬೆಟ್ಟದ ತಪ್ಪಲು |
| ೧೯ | ಯಡರಹಳ್ಳಿ | ಶಿಲಾಸಮಾಧಿಗಳು | ಬೆಟ್ಟದ ತಪ್ಪಲು |
| ೨೦ | ಜಾಲಿಪೆಂಟೆಗುಡ್ಡ (ಬೊಮ್ಮನಗುಂಡು) | ಶಿಲಾಸಮಾಧಿಗಳು | ಬೆಟ್ಟದ ಮೇಲೆ |

ಅಧ್ಯಯನ ಪ್ರದೇಶದಲ್ಲಿ ವಸತಿ ನೆಲೆಗಳು ಮತ್ತು ಸ್ಮಶಾನ ನೆಲೆಗಳೆಂದು ವಿಂಗಡಿಸಿಕೊಂಡು ಅಧ್ಯಯನ ಮಾಡಿದಾಗ ಒಟ್ಟು ಎಪ್ಪತ್ತೊಂಭತ್ತು ನೆಲೆಗಳು ಬೃಹತ್ ಶಿಲಾಯುಗದ ನೆಲೆಗಳು ಕಂಡುಬಂದಿವೆ. ಅವುಗಳಲ್ಲಿ ಐವತ್ತೆಂಟು ನೆಲೆಗಳು ಅಧ್ಯಯನಕ್ಕೆ ಯೋಗ್ಯವಾಗಿದ್ದು, ಇನ್ನುಳಿದ

ಹದಿಮೂರು ನೆಲೆಗಳು ಉಲ್ಲೇಖಕ್ಕೆ ಮಾತ್ರ ಸಿಗುತ್ತವೆ. ಅಲ್ಲದೆ ಹತ್ತು ನೆಲೆಗಳಲ್ಲಿ ವಸತಿ ಮತ್ತು ಸ್ಮಶಾನದ ಅವಶೇಷಗಳು ಕಂಡುಬಂದರೆ ಅರವತ್ತೊಂಭತ್ತು ನೆಲೆಗಳಲ್ಲಿ ಸ್ಮಶಾನ(ಸಮಾಧಿ) ಅವಶೇಷಗಳು ಲಭ್ಯವಾಗಿದ್ದು ಈ ಸಂಸ್ಕೃತಿಯ ಮಹತ್ವವನ್ನು ಅರಿಯಲು ನೆರವಾಗಿವೆ. ಅಧ್ಯಯನ ಪ್ರದೇಶದಲ್ಲಿರುವ ಕೆಲವು ನೆಲೆಗಳು ಹೆಚ್ಚು ವಿಸ್ತಾರವಾಗಿದ್ದರೆ, ಇನ್ನು ಕೆಲವು ನೆಲೆಗಳಲ್ಲಿ ಐದಕ್ಕಿಂತ ಕಡಿಮೆ ಸಂಖ್ಯೆಯ ಸಮಾಧಿ ಅವಶೇಷಗಳು ಮಾತ್ರ ಕಂಡುಬರುತ್ತವೆಯೇ ಹೊರತು ವಸತಿಯ ಕುರುಹುಗಳು ದೊರಕುವುದಿಲ್ಲ.

ನವಶಿಲಾಯುಗ ಮತ್ತು ಶಿಲಾತಾಮ್ರಯುಗ ಸಂಸ್ಕೃತಿಯ ನೆಲೆಗಳಲ್ಲಿಯೇ ಮುಂದುವರೆದು ಬೃಹತ್ ಶಿಲಾಯುಗ ಸಂಸ್ಕೃತಿ ಅಥವಾ ಕಬ್ಬಿಣಯುಗ ಸಂಸ್ಕೃತಿಯು ಬೆಳೆವಣಿಗೆಯಾಗಿರುವುದು ಉತ್ಖನನಗಳಲ್ಲಿ ಲಭ್ಯವಾಗಿರುವ ಸಾಂಸ್ಕೃತಿಕ ದೃಢವಾಗುತ್ತದೆ. ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ಹಿಂದಿನ ನವಶಿಲಾಯುಗ ಮತ್ತು ತಾಮ್ರಯುಗ ಸಂಸ್ಕೃತಿಯ ಜನರಿಗಿಂತ ಮುಂದುವರಿದ ತಾಂತ್ರಿಕ ಕೌಶಲ್ಯಭರಿತ ಜನರಾಗಿದ್ದರು ಎಂಬುದು ವಿವಿಧ ನೆಲೆಗಳಲ್ಲಿರುವ ವಾಸ್ತು ನಿರ್ಮಿತಿಗಳಿಂದ ಸ್ಪಷ್ಟವಾಗುತ್ತದೆ. ಬಹಳ ಆಸಕ್ತಿದಾಯಕ ವಿಷಯಗಳೆಂದರೆ ಕುರುಗೋಡು ನಿವೇಶನದಲ್ಲಿ ಬೃಹತ್ ಶಿಲಾಯುಗದ ವಸತಿ ಮತ್ತು ಶವಸಂಸ್ಕಾರದ ಕುರುಹುಗಳು ಒಟ್ಟಿಗೆ ಕಂಡುಬಂದಿವೆ. ಸಾಮಾನ್ಯವಾಗಿ ಈ ಸಂಸ್ಕೃತಿಯ ವಾಸ್ತವ್ಯದ ನೆಲೆಗಳು ನದಿದಂಡೆಯ ಮೇಲೆ ಕಂಡುಬಂದರೆ ಸಮಾಧಿ ಸಂಕೀರ್ಣಗಳು ನದಿಗಳಿಂದ ಸುಮಾರು ಎರಡು ಕಿ.ಮೀ ನಿಂದ ಐದು ಕಿ.ಮೀ ದೂರದಲ್ಲಿ ಕಲ್ಲುಗುಡ್ಡಗಳ ಮೇಲೆ ಇಲ್ಲವೆ ತಪ್ಪಲುಗಳಲ್ಲೂ ಕಂಡುಬಂದಿವೆ.

ಒಟ್ಟಿನಲ್ಲಿ ಅಧ್ಯಯನ ಪ್ರದೇಶದಲ್ಲಿರುವ ಬೃಹತ್ ಶಿಲಾಯುಗದ ನೆಲೆಗಳನ್ನು ಅವಲೋಕಿಸಿದರೆ, ಬಳ್ಳಾರಿ ಜಿಲ್ಲಾ ಪರಿಸರದಲ್ಲಿ ಹಗರಿಬೊಮ್ಮನಹಳ್ಳಿ ತಾಲೂಕನ್ನು ಹೊರತುಪಡಿಸಿ ಉಳಿದೆಲ್ಲಾ ತಾಲ್ಲೂಕಿನಲ್ಲಿ ಈ ಸಂಸ್ಕೃತಿಯ ನೆಲೆಗಳು ಅಧಿಕ ಸಂಖ್ಯೆಯಲ್ಲಿರುವುದು ತಿಳಿದುಬರುತ್ತದೆ. ಅದೇ ರೀತಿ ಕೊಪ್ಪಳ ಜಿಲ್ಲೆಯ ಗಂಗಾವತಿ, ಕುಷ್ಟಗಿ, ಕೊಪ್ಪಳ ತಾಲೂಕು ಪರಿಸರದಲ್ಲಿ ಹೆಚ್ಚಿನ ಸಂಖ್ಯೆಯ ನೆಲೆಗಳಿದ್ದರೆ, ಯಲ್ಬುರ್ಗಾ ತಾಲ್ಲೂಕಿನಲ್ಲಿ ಮಾತ್ರ ಅತೀ ಕಡಿಮೆ ನೆಲೆಗಳಿರುವುದು ಕ್ಷೇತ್ರ ಅಧ್ಯಯನದಿಂದ ತಿಳಿದುಬರುತ್ತದೆ. ಮುಖ್ಯವಾಗಿ ಇಲ್ಲಿನ ಭೌಗೋಳಿಕ ಬೆಟ್ಟಗುಡ್ಡಗಳು ಅಥವಾ ಸನ್ನಿವೇಶಗಳು ಶಿಲಾಯುಗದ ಮಾನವನ ವಾಸಕ್ಕೆ ಯೋಗ್ಯವಾಗಿದ್ದವು. ಉಳಿದಂತೆ ಬೆಟ್ಟದ ಕೆಳಗಿನ ಪ್ರದೇಶವು ಪ್ರಾಯಶ: ದಟ್ಟವಾದ ಕಾಡುಗಳಿಂದ ಆವೃತವಾಗಿದ್ದರಿಂದ ಅಂತಹ ನೆಲೆಗಳಲ್ಲಿ ಮಾನವ ವಾಸ್ತವ್ಯದ ಕುರುಹುಗಳು ಹೆಚ್ಚಾಗಿ ಕಂಡುಬರುವುದಿಲ್ಲವೆಂದು ಅಭಿಪ್ರಾಯಿಸಬಹುದು.

**ಕೊನೆ ಟಿಪ್ಪಣಿ**

೧.ಧವಳೇಕರ್ ಎಂ.ಕೆ., ೨೦೧೩, ಪ್ರೀ ಹಿಸ್ಟರಿ ಆಫ್ ಇಂಡಿಯಾ, ಪು. ೪೨.

೨.ಸುಂದರ ಅ., (ಸಂ), (ಮರು ಮುದ್ರಣ), ೨೦೧೮., ಕರ್ನಾಟಕ ಚರಿತ್ರೆ (ಸಂ.೧), ಪು. ೧೭೬.

೩.ಅದೇ, ಪು. ೧೭೬.

೪.ಸುಬ್ಬರಾವ್ ಬಿ., ೧೯೪೮, ಸ್ಟೋನ್ ಏಜ್ ಕಲ್ಚರ್ಸ್ ಆಫ್ ಬಳ್ಳಾರಿ, ಪು. ೬೪.

೫.ಅದೇ, ಪು. ೬೪.

೬.ಮಹದೇವಯ್ಯ ಎಂ. ಮತ್ತು ವೀರರಾಘವನ್, ೨೦೧೪, ಎಕ್ಸಕವೇಷನ್ ಅಟ್ ಕುರುಗೋಡು ಇನ್ ಕರ್ನಾಟಕ, ಮೆಗಲಿಥಿಕ್ ಕಲ್ಚರ್ಸ್ ಆಫ್ ಸೌಥ್ ಇಂಡಿಯಾ, ಸ್ಪೆಷಲ್ ರಿಪೋರ್ಟ್, ಪು. ೪೫–೪೬

೭.ಸುಬ್ಬರಾವ್ ಬಿ., ೧೯೪೮, ಪೂರ್ವೋಕ್ತ, ಪು. ೬೪.

೮.ನಾಗರಾಜರಾವ್ ಎಮ್. ಎಸ್., ಮತ್ತು ಕೆ.ಸಿ ಮಲ್ಹೋತ್ರ, ೧೯೬೪, ದಿ ಸ್ಟೋನ್ ಏಜ್ ಡೆಲ್ಲರ್ಸ್ ಇನ್ ತೆಕ್ಕಲಕೋಟೆ, ಪು. ೭೩–೭೫.

೯.ಜನವರಿ ೧೬, ೨೦೧೯, ಸಂಯುಕ್ತ ಕರ್ನಾಟಕ, ದಿನ ಪತ್ರಿಕೆ, ಪು. ೩.

೧೦. ಮೇಡೋಸ್ ಟೇಲರ್, ೧೯೪೧, ಮೆಗಲಿಥಿಕ್ ಟೋಂಬ್ಸ್ ಅಂಡ್ ಅದರ್ ಏನ್ಸಿಯಂಟ್ ರಿಮೆನ್ಸ್ ಇನ್ ದ ಡೆಕ್ಕನ್, ಪು. ೮೬.

೧೧. ಮಂಜನಾಯ್ಕ್ ಆರ್., ೨೦೧೮, ಹಾಲಸಾಗರ ಸಮೀಪ ಬೃಹತ್ ಶಿಲಾಯುಗದ ಸಮಾಧಿಗಳ ಶೋಧ, ಇ.ದ.ಸಂ.೩೩, ಪು.

೧೨. ಸುಂದರ ಅ., ೧೯೭೫, ದಿ ಅರ್ಲಿ ಚೇಂಬರ್ ಟೋಂಬ್ಸ್ ಆಫ್ ಸೌತ್ ಇಂಡಿಯಾ, ಪು. ೭೨.

೧೩. ಅದೇ, ಪು. ೭೩.

೧೪. ಅದೇ, ಪು. ೭೩.

೧೫. ಅದೇ, ಪು. ೭೩.

೧೬. ಗುರುರಾಜರಾವ್ ಬಿ.ಕೆ., ೧೯೭೨, ಮೆಗಾಲಿಥಿಕ್ ಕಲ್ಚರ್ ಇನ್ ಸೌತ್ ಇಂಡಿಯ, ಪು. ೧೬೦–೧೬೫.

೧೭. ಅದೇ. ಪು. ೧೬೦–೧೬೫.

೧೮. ತಾವರೆಗೇರದಲ್ಲಿ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಹೊಸದಾಗಿ ಮಾನಪ್ಪಯ್ಯ ಗುಡ್ಡದ ಪೂರ್ವಕ್ಕೆ ಇರುವ ದೊಡ್ಡ ಬಂಡೆಯ ದಕ್ಷಿಣಾಭಿಮುಖವಾಗಿರುವ ಎತ್ತರದ ಗೋಡೆಯ

ಮೇಲೆ ಕಲ್ಲಿನಿಂದ ಕೊರೆದ ಉದ್ದನೆಯ ಕೊಂಬುಗಳುಳ್ಳ ಜಿಂಕೆಯ ಚಿತ್ರವನ್ನು ಗುರುತಿಸಲಾಗಿದೆ. ಇದರ ತಳಭಾಗದಲ್ಲಿರುವ ಗವಿಯಲ್ಲಿ ವಸತಿ ಅವಶೇಷಗಳಾದ ಮಡಕೆಗಳು, ಸುಟ್ಟಮಣ್ಣು ಹಾಗೂ ಗವಿಯ ಭಿತ್ತಿಯಲ್ಲಿ ಐದು ಕೊಂಬುಗಳುಳ್ಳ ಜಿಂಕೆ, ಗೂಳಿ ಮತ್ತು ಇತರೆ ಪ್ರಾಣಿ ಚಿತ್ರಗಳನ್ನು ಹೊಸದಾಗಿ ಶೋಧಿಸಲಾಗಿದೆ.

೧೯. ಸುಂದರ ಅ., ೧೯೭೫, ಪೂರ್ವೋಕ್ತ, ಪು. ೭೨.

೨೦. ಅದೇ, ಪು. ೭೨.

೨೧. ಅದೇ, ಪು. ೭೨.

೨೨. ವಾಸುದೇವನ್ ಸಿ.ಎಸ್., ೨೦೧೦, ಕಡೆಬಾಗಿಲು-ಪ್ರಾಗಿತಿಹಾಸ ಕಾಲದ ನೆಲೆ, ಗೋಪಾಲ್. ಆರ್, (ಸಂ), ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೨೦-೨೧.

೨೩. ಅದೇ, ಪು. ೨೦-೨೧.

೨೪. ಶರಣಬಸಪ್ಪ ಕೋಲ್ಕಾರ, ೨೦೧೬, ಗಂಗಾವತಿ ತಾಲ್ಲೂಕಿನ ನವಶೋಧಿತ ಬೃಹತ್ ಶಿಲಾಯುಗದ ನೆಲೆಗಳು ಮತ್ತು ಕಲ್ಗೊಂಬೆಗಳು, ಇ.ದ.ಸಂ ೩೧, ಪು.೧-೬.

೨೫. ಸುಂದರ ಅ., ೧೯೭೫, ಪೂರ್ವೋಕ್ತ, ಪು. ೭೨: ಶರಣಬಸಪ್ಪ ಕೋಲ್ಕಾರ, ೨೦೧೬, ಪೂರ್ವೋಕ್ತ, ಪು. ೧-೬.

೨೬. ಶರಣಬಸಪ್ಪ ಕೋಲ್ಕಾರ, ೨೦೧೬, ಪೂರ್ವೋಕ್ತ, ಪು. ೧-೬.

೨೭. ಸುಂದರ ಅ., ೧೯೭೫, ಪೂರ್ವೋಕ್ತ, ಪು. ೭೨: ಶರಣಬಸಪ್ಪ ಕೋಲ್ಕಾರ, ೨೦೧೬, ಪೂರ್ವೋಕ್ತ, ಪು. ೧-೬.

೨೮. ಅದೇ, ಪು. ೧-೬.

೨೯. ಶರಣಬಸಪ್ಪ ಕೋಲ್ಕಾರ, ೨೦೧೬, ಪೂರ್ವೋಕ್ತ, ಪು, ೧-೬.

೩೦. ಸುಂದರ ಅ., ೧೯೭೩, ಗಂಗಾವತಿ ತಾಲ್ಲೂಕಿನ ಪ್ರಾಚ್ಯವಸ್ತುಗಳು, ಕ.ಭಾ.ಸಂ, ೬-೧ ಪು. ೬೭-೬೮.

೩೧. ಅದೇ, ಪು. ೬೭-೬೮.

೩೨. ಅದೇ, ಪು. ೬೭-೬೮.

೩೩. ಅದೇ, ಪು. ೬೭-೬೫.

೩೪. ಅದೇ, ಪು. ೬೭-೬೫

೩೫. ಗುರುರಾಜರಾವ್ ಬಿ.ಕೆ., ೧೯೭೨, ಮೆಗಾಲಿಥಿಕ್ ಕಲ್ಚರ್ ಇನ್ ಸೌತ್ ಇಂಡಿಯ, ಪು. ೧೬೦-೧೬೫.

೩೬. ಸುಂದರ ಅ., ೧೯೭೫, ಪೂರ್ವೋಕ್ತ, ಪು. ೭೨.

೩೭. ಅದೇ, ಪು. ೭೨.

೩೮. ಅದೇ, ಪು. ೭೨.

೩೯. ವಾಸುದೇವ ಬಡಿಗೇರ್, ೧೯೯೯, ಹಂಪಿ ಪರಿಸರದ ಲೋಹಶಾಸ್ತ್ರ ಕಲೆ, ಇ.ದ.ಸಂ.೧೪, ಪು. ೨೩-೨೫.

೪೦. ಕುಮ್ಮಟದುರ್ಗದಲ್ಲಿ ಕೈಗೊಂಡ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಬೃಹತ್ ಶಿಲಾಯುಗದ ಎರಡು ನಿಲುಸುಗಲ್ಲುಗಳನ್ನು ಶೋಧಿಸಲಾಯಿತು. ಸ್ಥಳೀಯರು ಈ ನಿಲುಸುಗಲ್ಲುಗಳನ್ನು ಅಗಸಿ ಬಾಗಿಲುಗಳೆಂಬ ಹೆಸರಿನಿಂದ ಸಂಬೋಧಿಸುತ್ತಾರೆ ಹಾಗೂ ಅವುಗಳ ಬಗೆಗೆ ಕೆಲವು ನಂಬಿಕೆಗಳನ್ನು ಇಟ್ಟುಕೊಂಡಿದ್ದಾರೆ. ಆದರೆ ಈ ನೆಲೆಯಲ್ಲಿ ಸ್ಥಳ ಪರಿಶೀಲನೆ ನಡೆಸಿದಾಗ ಅವು ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ತಮ್ಮ ಹಿರಿಯರ ನೆನಪಿಗಾಗಿ ನೆಟ್ಟಂತಹ ನೆನಪಿನ ಸ್ಮಾರಕಗಳೆಂದು ಗುರುತಿಸಲಾಗಿದೆ.

೪೧. ಕೊಪ್ಪಳ ತಾಲೂಕು ಕೇಂದ್ರದಿಂದ ಪೂರ್ವದಿಕ್ಕಿಗೆ ೨೪ ಕಿ.ಮೀ ದೂರದಲ್ಲಿ ಅಚಲಾಪುರ ಗ್ರಾಮವಿದೆ. ಈ ಗ್ರಾಮದಿಂದ ಆಗ್ನೇಯ ದಿಕ್ಕಿಗೆ ೨. ಕಿ.ಮೀ. ದೂರದಲ್ಲಿರುವ ಶಿವಪುರದ ಸೋಮಣ್ಣನವರ ಹೊಲದಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶೋಧಿಸಲಾಗಿದೆ.

೪೨. ತಿಪ್ಪೇಶ ಹೆಚ್.ಎಂ., ೨೦೧೯, ಜರಿಮಲೆ ಬೆಟ್ಟದ ತಪ್ಪಲಿನಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳು ಶೋಧ, ಇ.ದ.ಸಂ.೩೧, ಪು. ೩೬-೩೮.

೪೩. ಜಯಣ್ಣ ಉಲ್ಲಾನಹಳ್ಳಿ, ೨೦೦೩, ಕೂಡ್ಲಿಗಿ ತಾಲ್ಲೂಕಿನ ಪುರಾತತ್ವ ಸಮೀಕ್ಷೆ, ಇ.ದ.ಸಂ, ಪು. ೧೫-೧೬.

೪೪. ತಿಪ್ಪೇಸ್ವಾಮಿ ಹೆಚ್., ೧೯೯೯, ಕೂಡ್ಲಿಗಿ ತಾಲ್ಲೂಕಿನ ಅಪರೂಪದ ಮಾನವಾಕೃತಿಗಳು, ಇ.ದ.ಸಂ, ೧೪, ಪು. ೨೦.

೪೫. ಅದೇ, ಪು. ೨೦.

೪೬. ತಿಪ್ಪೇಶ ಹೆಚ್.ಎಂ., ೨೦೧೬, ಹುರುಳಿಹಾಳು ಮತ್ತು ಮಾಳೇಹಳ್ಳಿಯ ಬೃಹತ್ ಶಿಲಾಯುಗದ ಅವಶೇಷಗಳು, ಇ.ದ.ಸಂ.೩೦, ಪು. ೦೪.

೪೭. ಅದೇ. ಪು. ೦೪.

೪೮. ತಿಪ್ಪೇಸ್ವಾಮಿ ಹೆಚ್., ೧೯೯೯, ಪೂರ್ವೋಕ್ತ, ಪು. ೨೦.

೪೯. ಶ್ರೀನಿವಾಸ್ ಎಲ್., ೨೦೧೦, ಹಂಪಿ ಪರಿಸರದ ಆದಿ ಮಾನವನ ನೆಲೆಗಳು, ಪು. ೫೯.

೪೯. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, ಚಿನ್ನಹಗರಿ ಸಿರಿ, ಪು. ೨೪.

೫೦. ಅದೇ, ಪು. ೨೪.

೫೧. ಅದೇ, ಪು. ೨೪.

೫೨. ಕೂಡ್ಲಿಗಿ ತಾಲ್ಲೂಕಿನ ಓಬಳಾಪುರದ ಗವಿಯೊಂದರ ಸಮೀಪದಲ್ಲಿ ಕಬ್ಬಿಣದ ಕಿಟ್ಟ ಮತ್ತು ಮಣ್ಣಿನಿಂದ ಮಾಡಿದ ಕೊಳವೆಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪತ್ತೆಹಚ್ಚಲಾಗಿದೆ.

೫೩.ಭೀಮಸಮುದ್ರ ರಂಗನಾಥ್, ಪೇಟೆನಹಳ್ಳಿಯ ಪ್ರಾಕ್ಚಾರಿತ್ರಿಕ ಕುರುಹುಗಳು, ಅಪ್ರಕಟಿತ ಸಂಶೋಧನಾ ಲೇಖನ.

೫೪. ಅದೇ,

೫೫. ಸಂಡೂರು ತಾಲ್ಲೂಕಿನ ಹಿರೇಹಾಳು ಗ್ರಾಮದಲ್ಲಿ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಕೆರೆಯ ದಡದಲ್ಲಿ ಶಿಲಾವೃತ್ತ ಸಹಿತ ಕಲ್ಮನೆ ಸಮಾಧಿಯನ್ನು ಪತ್ತೆಹಚ್ಚಲಾಗಿದೆ.

೫೬. ಸಂಡೂರು ತಾಲ್ಲೂಕಿನ ಮುತ್ತಜ್ಜನಹಳ್ಳಿ(ಮತ್ತಾಸನಹಳ್ಳಿ) ಗ್ರಾಮದಲ್ಲಿ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ತಿಪ್ಪೇಸ್ವಾಮಿಯವರ ಜಮೀನಿನಲ್ಲಿ ಕಬ್ಬಿಣದ ಕುಲಮೆ ಅವಶೇಷಗಳನ್ನು ಪತ್ತೆಹಚ್ಚಲಾಗಿದೆ.

೫೬. ಇಂ.ಅ.ರಿ, ೧೯೭೭-೭೮, ಪು. ೨೫: ಸುಂದರ ಅ., ೧೯೯೪, ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ, ಪು. ೬೭-೬೯.

೫೭. ಇಂ.ಅ.ರಿ, ೧೯೮೭-೮೮, ಪು. ೩೩.

೫೮. ದುರುಗಪ್ಪ ಎಂ.ಕೆ., ೨೦೦೪, ಹಗರಿಬೊಮ್ಮನಹಳ್ಳಿ ತಾಲ್ಲೂಕು ದಶಮಾಪುರ ಪರಿಸರದ ಪ್ರಾಗೈತಿಹಾಸಿಕ ಕುರುಹುಗಳು, ಇ.ದ.ಸಂ.೧೮, ಪು. ೧೪-೧೫.

೫೯. ಗುರುರಾಜರಾವ್ ಬಿ.ಕೆ., ೧೯೭೨, ಪೂರ್ವೋಕ್ತ, ಪು.೧೬೦-೧೬೫.

೬೦. ಅದೇ, ಪು. ೧೬೦-೧೬೫.

೬೧. ವೀಣಾ ಎಂ.ಪಿ., ೧೯೯೯, ಅಲ್ಲಿಪುರದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿ ನೆಲೆ, ಇ.ದ.ಸಂ ೧೪, ಪು. ೧೭-೧೮.

೬೨. ಅದೇ, ೧೯೯೮, ಕೊಟ್ನಕಲ್ಲು ಪರಿಸರದ ಪ್ರಾಗೈತಿಹಾಸಿಕ ನೆಲೆಗಳು, ಇ.ದ.ಸಂ. ೧೩ ಪು. ೧೫-೧೬.

೬೩. ಅದೇ, ಪು. ೧೫-೧೬.

೬೪. ಅದೇ, ಪು. ೧೫-೧೬.

೬೫. ಅದೇ, ೧೯೯೯, ಪೂರ್ವೋಕ್ತ, ಇ.ದ.ಸಂ ೧೪, ಪು.೧೭–೧೮ ೬೬. ಅದೇ, ಪು. ೧೫–೧೬.

೬೬. ಅದೇ, ಪು. ೧೫–೧೬.

೬೭. ಅದೇ, ಪು.೧೫–೧೬.

೬೮. ಅದೇ, ಪು.೧೫–೧೬.

೬೯. ಅದೇ, ಪು.೧೫–೧೬.

೭೦. ಮೇಡೋಸ್ ಟೇಲರ್, ೧೯೪೧, ಮೆಗಲಿಥಿಕ್ ಟೋಮ್ಸ್ ಇನ್ ಏನ್ಸಿಯಂಟ್ ರಿಮೇನ್ಸ್ ಇನ್ ಡೆಕ್ಕನ್, ಪು. ೮೬.

೭೧. ಇಂ.ಆ.ರಿ., ೧೯೭೬–೭೭, ಪು.೨೪.

೭೨. ಶರಣಬಸಪ್ಪ ಕೋಲ್ಕಾರ, ೨೦೧೦, ಹಂಪಿ ಪರಿಸರದ ಗವಿ ಚಿತ್ರಗಳು, ಪು. ೧೪೨.

೭೩. ವಾಸುದೇವ ಬಡಿಗೇರ, ೧೯೯೯, ಪೂರ್ವೋಕ್ತ, ಪು. ೨೩–೨೫.

೭೪. ಅದೇ, ಪು. ೨೩–೨೫.

೭೫. ಮಹಾದೇವ ಸಿ, ಸುಬ್ಬಣ್ಣ ರೈ, ಮಾಧವ ಪೆರಾಜೆ, ೨೦೦೨, ಹೊಸಪೇಟೆ ತಾಲ್ಲೂಕು ದರ್ಶನ, ಪು. ೧೦.

೭೬. ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕು ಮತ್ತು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಗಡಿಯಲ್ಲಿರುವ ಜಾಲಿಪೆಂಟೆಗುಡ್ಡದಲ್ಲಿ ೧೫ಕ್ಕೂ ಹೆಚ್ಚು ಕಲ್ಮನೆ(ಆಂಟಟಜಟ) ಸಮಾಧಿಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶೋಧಿಸಲಾಗಿದೆ. ಅವುಗಳಲ್ಲಿ ಬಹುತೇಕ ಕಲ್ಗೋರಿಗಳು ನಾಶಹೊಂದಿದ್ದು ಕೆಲವು ಮಾತ್ರ ಸುಸ್ಥಿತಿಯಲ್ಲಿವೆ.

# ಅಧ್ಯಾಯ : ಆರು
# ಬೃಹತ್ ಶಿಲಾಯುಗದ ನೆಲೆಗಳು: ವಸ್ತು ಅವಶೇಷಗಳು

೬.೧ ಶಿಲಾಸಮಾಧಿಗಳು
೬.೨ ಮೃತ್ಪಾತ್ರೆಗಳು
೬.೩ ಕಬ್ಬಿಣದ ವಸ್ತು ಅವಶೇಷಗಳು
೬.೪ ಇತರೆ ಕಲಾತ್ಮಕ ಅವಶೇಷಗಳು
- ೬.೪.೧ ವರ್ಣಚಿತ್ರಗಳು
- ೬.೪.೨ ಬಯಲುಬಂಡೆ ಚಿತ್ರಗಳು
- ೬.೪.೩ ಸುಡಾವೆ ಮಣ್ಣಿನ ಗೊಂಬೆಗಳು
- ೬.೪.೪ ಮಣಿಗಳು

# ಅಧ್ಯಾಯ : ಆರು

# ಬೃಹತ್ ಶಿಲಾಯುಗದ ನೆಲೆಗಳಲ್ಲಿ ದೊರೆತ ವಸ್ತು ಅವಶೇಷಗಳು

ಕರ್ನಾಟಕದಾದ್ಯಂತ ಸಾವಿರಕ್ಕೂ ಅಧಿಕ ಬೃಹತ್ ಶಿಲಾಯುಗದ ನೆಲೆಗಳು ಬೆಳಕಿಗೆ ಬಂದಿವೆ. ಈ ನೆಲೆಗಳಲ್ಲಿ ಕಂಡುಬಂದ ವಸ್ತು ಅವಶೇಷಗಳನ್ನು ಆಧರಿಸಿ ವಸತಿ ನೆಲೆ ಮತ್ತು ಸ್ಮಶಾನ ನೆಲೆಗಳೆಂದು ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ವಸತಿ ನೆಲೆಗಳಿಗಿಂತ ಸ್ಮಶಾನ ನೆಲೆಗಳು ಅಧಿಕ ಸಂಖ್ಯೆಯಲ್ಲಿ ಶೋಧವಾಗಿವೆ. ಪ್ರಸ್ತುತ ಅಧ್ಯಯನ ಪರಿಸರದಲ್ಲಿಯೂ ಮೇಲೆ ಉಲ್ಲೇಖಿಸಿದ ಎರಡೂ ಬಗೆಯ ನೆಲೆಗಳಿದ್ದು, ಅವುಗಳಲ್ಲಿ ವಿವಿಧ ವಸ್ತುಗಳು ಕಂಡುಬಂದಿವೆ. ಈ ವಸ್ತು ಅವಶೇಷಗಳಲ್ಲಿ ಶಿಲಾಸಮಾಧಿಗಳು, ಮೃತ್ಪಾತ್ರೆಗಳು, ಕಬ್ಬಿಣದ ವಸ್ತುಗಳು, ಕಬ್ಬಿಣದ ಕುಲುಮೆಯ ಅವಶೇಷಗಳು, ಕಲಾತ್ಮಕ ಕುರುಹುಳಾದ ವರ್ಣಚಿತ್ರಗಳು, ರೇಖಾಚಿತ್ರಗಳು, ಕುಟ್ಟುಚಿತ್ರಗಳು, ಅಲಂಕಾರಿಕ ವಸ್ತುಗಳಾದ ಸುಡಾವೆ ಮಣ್ಣಿನ ಗೊಂಬೆಗಳು, ಲೋಹದ ಮಣಿಗಳು, ಸುಡಾವೆ ಮಣ್ಣಿನ ಮಣಿಗಳು ಲಭ್ಯವಾಗಿವೆ. ಇವು ಈ ಸಂಸ್ಕೃತಿ ಜನರ ಸಾಮಾಜಿಕ, ಧಾರ್ಮಿಕ, ಆರ್ಥಿಕ ಜೀವನದ ಮೇಲೆ ಬೆಳಕು ಚೆಲ್ಲುತ್ತವೆ. ಕೆಲವೊಂದು ವಸ್ತುಗಳ ಬಳಕೆ ವಿಧಾನವು ಬೃಹತ್ ಶಿಲಾಯುಗಕ್ಕೂ ಹಿಂದಿನ ಕಾಲಗಳಿಂದ ಬಳುವಳಿಯಾಗಿ ಬಂದಿದೆ. ಈ ನಿಟ್ಟಿನಲ್ಲಿ ಅಧ್ಯಯನ ಪ್ರದೇಶದಲ್ಲಿ ಭೌತಿಕವಾಗಿರುವ ಮತ್ತು ತತ್ಸಂಬಂಧಿತ ನೆಲೆಗಳಲ್ಲಿ ವರದಿಯಾಗಿರುವ ಆಕರ ಸಾಮಾಗ್ರಿಗಳನ್ನು ಆಧರಿಸಿ ವಿವೇಚಿಸುವ ಪ್ರಯತ್ನ ಮಾಡಲಾಗಿದೆ.

## ೬.೧. ಶಿಲಾಸಮಾಧಿಗಳು

ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ದಿನನಿತ್ಯ ಬದುಕಿ ಬಾಳಿದ ವಾಸದ ಮನೆಗಳು ಅಥವಾ ಲೌಕಿಕ ಕಟ್ಟಡಗಳ ನಿರ್ಮಾಣದ ಬಗೆಗೆ ಸ್ಪಷ್ಟವಾದ ಕುರುಹುಗಳು ಕಂಡುಬರುವುದಿಲ್ಲ. ಆದರೆ ಈ ಸಂಸ್ಕೃತಿಯ ಜನರು ಸಾವಿನ ನಂತರ ನಡೆಸಿದ ಅಂತ್ಯ ಕ್ರಿಯೆಗೆ ಸಂಬಂಧಿಸಿದ ಆಶ್ಚರ್ಯಕರವಾದ ವೈವಿಧ್ಯಮಯ ಶಿಲಾಸಮಾಧಿಗಳನ್ನು ನಿರ್ಮಿಸಿದರು. ಈ ವೈವಿಧ್ಯಮಯ ಮತ್ತು ಕೌಶಲ್ಯಯುತ ಸಮಾಧಿಗಳನ್ನು ನಿರ್ಮಿಸಿದ ಇವರಿಗೆ ತಮ್ಮ ಮನೆಗಳನ್ನು ದೊಡ್ಡ ಪ್ರಮಾಣದಲ್ಲಿ ಕಟ್ಟಲಿಕ್ಕೆ ಸಾಧ್ಯವಾಗಲಿಲ್ಲ. ಪ್ರಾಯಶಃ ಇವರ ನಂಬಿಕೆ ಆಚರಣೆಗಳು ಮತ್ತು ಇವರ ಜೀವನ ಶೈಲಿ ಅಂತಹ ವಾಸ್ತವ್ಯ ನಿರ್ಮಿತಿಗಳಿಗೆ ಪ್ರಚೋದನೆ ನೀಡಿರಲಿಲ್ಲ ಎಂಬ ಅಭಿಪ್ರಾಯಗಳಿವೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿರುವ ಬೃಹತ್ ಶಿಲಾಸಮಾಧಿಗಳನ್ನು ಸಂಗನಕಲ್ಲು ಮತ್ತು ಹಿರೇಬೆಣಕಲ್ಲು ಎಂಬ ಎರಡು ಪ್ರಮುಖ ಗುಂಪುಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಬಳ್ಳಾರಿ ಜಿಲ್ಲೆಯ ಗುಡ್ಡಗಾಡು ಪ್ರದೇಶದಲ್ಲಿ ಸು.೧೫೦ ಕಿ.ಮೀ ವ್ಯಾಪ್ತಿಯ ನೆಲೆಗಳಲ್ಲಿರುವ ಬೃಹತ್ ಶಿಲಾಸಮಾಧಿಗಳನ್ನು 'ಸಂಗನಕಲ್ಲು ಪ್ರದೇಶದ ಗುಂಪು' ಎಂದು ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಈ ಗುಂಪಿಗೆ ಅಥವಾ ಪ್ರದೇಶಕ್ಕೆ ಸಂಬಂಧಿಸಿದ ವಿವಿಧ ನೆಲೆಗಳ ಸಾಂದ್ರತೆ, ಸಾಪೇಕ್ಷ ಭೌಗೋಳಿಕ ಸ್ಥಾನಗಳನ್ನು ಅರ್ಥಮಾಡಿಕೊಳ್ಳಲು ನೆಲೆಗಳ ಸಂಖ್ಯೆ ಸಂಖ್ಯಾ ಪಟ್ಟಿಯನ್ನು ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

**ಕೋಷ್ಟಕ**

**ಸಂಗನಕಲ್ಲು ಪ್ರದೇಶದ ಬೃಹತ್ ಶಿಲಾಸಮಾಧಿ ಪ್ರಕಾರಗಳು**

| [illegible] | [illegible] | [illegible] | [illegible] | [illegible] | [illegible] |
|---|---|---|---|---|---|
| ೦೧ | ಕಪ್ಪಗಲ್ಲು | ೫೯ ಕಿ.ಮೀ | ಉತ್ತರ | ನಿಲುಸುಗಲ್ಲು/ ಶಿಲಾವೃತ್ತಗಳು | ೦೭ |
| ೦೨ | ಕುಮತಿ | ೮೨ ಕಿ.ಮೀ | ನೈರುತ್ಯ | ಕಲ್ಮನೆಕೋಣೆ/ ಮಾನವಾಕೃತಿ ಶಿಲೆಗಳು | ೦೮ |
| ೦೩ | ಕುಡುತಿನಿ | ೪೦ ಕಿ.ಮೀ | ನೈರುತ್ಯ | ಶವಪೆಟ್ಟಿಗೆ | ೦೧ |
| ೦೪ | ಕುರುಗೋಡು | ೩೫ ಕಿ.ಮೀ | ನೈರುತ್ಯ | ಶಿಲಾವೃತ್ತಗಳು | ೦೩ |
| ೦೫ | ಕೊಟ್ನಿಕಲ್ಲು | ೧೫೫ ಕಿ.ಮೀ | ಪಶ್ಚಿಮ | ಶಿಲಾವೃತ್ತಗಳು/ ಮಾನವಾಕೃತಿ ಶಿಲೆ | ೦೬ |
| ೦೬ | ಗುಡೇಕೋಟೆ | ೬೦ ಕಿ.ಮೀ | ನೈರುತ್ಯ | ಕಂಡಿಕೋಣೆ/ ಕಲ್ಗುಪ್ಪೆಗಳು/ ನೆಲಕೋಣೆ | ೦೧ |
| ೦೭ | ಜರಿಮಲೆ | ೨೨ ಕಿ.ಮೀ | ನೈರುತ್ಯ | ಕಂಡಿಕೋಣೆ/ ಕಲ್ಗುಪ್ಪೆಗಳು/ ನೆಲಕೋಣೆ | ೫೦ |
| ೦೮ | ದಶಮಾಪುರ | ೧೦೦ ಕಿ.ಮೀ | ನೈರುತ್ಯ | ಶಿಲಾವೃತ್ತಗಳು | ೯೧ |
| ೦೯ | ನವಲಿ | ೧೩೦ ಕಿ.ಮೀ | ಪಶ್ಚಿಮ | ಕಲ್ಮನೆಕೋಣೆ. | ೧೦ |
| ೧೦ | ನಿಟ್ಟೂರು | ೫೮ ಕಿ.ಮೀ | ಉತ್ತರ | ಕಲ್ಗುಪ್ಪೆ/ ಶಿಲಾವೃತ್ತಗಳು | ೧೦ |
| ೧೧ | ಬಳ್ಳಾರಿ | ೦೬ ಕಿ.ಮೀ | ದಕ್ಷಿಣ | ಶಿಲಾವೃತ್ತಗಳು | ೦೨ |
| ೧೨ | ಮಡಕಲಕಟ್ಟೆ | ೭೫ ಕಿ.ಮೀ | ನೈರುತ್ಯ | ಕಲ್ಮನೆಕೋಣೆ | ೦೪ |
| ೧೩ | ಮಲ್ಲಾಪುರ | ೬೦ ಕಿ.ಮೀ | ನೈರುತ್ಯ | ಕಲ್ಮನೆಕೋಣೆ | ೨೦ |
| ೧೪ | ಮಹದೇವಪುರ | ೫೩ ಕಿ.ಮೀ | ನೈರುತ್ಯ | ಕಲ್ಮನೆಕೋಣೆ | ೦೨ |
| ೧೫ | ಮಾಳೇಹಳ್ಳಿ | ೮೦ ಕಿ.ಮೀ | ನೈರುತ್ಯ | ಕಲ್ಮನೆಕೋಣೆ | ೦೫ |
| ೧೬ | ರಾಜವಾಳ | ೧೫೫ ಕಿ.ಮೀ | ನೈರುತ್ಯ | ಶಿಲಾಸಮಾಧಿಗಳು | ೩೩ |
| ೧೭ | ಹಂಪಸಾಗರ | ೧೨೯ ಕಿ.ಮೀ | ನೈರುತ್ಯ | ಶವಪೆಟ್ಟಿಗೆ | ೦೧ |
| ೧೮ | ಹಾಲಸಾಗರ | ೫೯ ಕಿ.ಮೀ | ದಕ್ಷಿಣ | ಹಾದಿಕೋಣೆ/ ನೆಲಕೋಣೆ/ | ೨೦೦ |
| ೧೯ | ಹಿರೇಹಾಳು | ೭೦ ಕಿ.ಮೀ | ದಕ್ಷಿಣ | ಶಿಲಾವೃತ್ತಸಹಿತ ಕಲ್ಮನೆ | ೦೧ |
| ೨೦ | ಹುರುಳಿಹಾಳು | ೭೯ ಕಿ.ಮೀ | ನೈರುತ್ಯ | ಹಾದಿಕೋಣೆ | ೦೧ |
| ೨೧ | ಹುಲಿಕುಂಟೆ | ೭೯ ಕಿ.ಮೀ | ನೈರುತ್ಯ | ಮಾನವಾಕೃತಿ ಶಿಲೆ | ೦೩ |
| ೨೨ | ಹೂವಿನಹಡಗಲಿ | ೧೫೦ ಕಿ.ಮೀ | ಪಶ್ಚಿಮ | ಕಂಡಿಕೋಣೆ | ೦೧ |
| ೨೩ | ಸಂಗನಕಲ್ಲು | ೦೦ ಕಿ.ಮೀ | – | ನಿಲುಸುಗಲ್ಲು/ ಕಲ್ಲುವೃತ್ತಗಳು | ೦೬ |

ಮಾನವ ಮೊಟ್ಟಮೊದಲು ವಾಸ್ತು ನಿರ್ಮಿತಿ ಕಾರ್ಯದಲ್ಲಿ ಅತ್ಯಂತ ಪ್ರಗತಿಯನ್ನು ಕಂಡುಕೊಂಡ ಕಾಲ ಬೃಹತ್ ಶಿಲಾಯುಗ ಕಾಲ. ಮಾರ್ಟಿಮರ್ ವೀಲ್ಹರ್, ವಿ.ಡಿ. ಕೃಷ್ಣಸ್ವಾಮಿ, ಬಿ.ಕೆ. ಗುರುರಾಜ ರಾವ್, ಅ.ಸುಂದರ ಮೊದಲಾದವರು ಕರ್ನಾಟಕದಲ್ಲಿ ಕಂಡುಬರುವ ಬೃಹತ್ ಶಿಲಾಸಮಾಧಿಗಳನ್ನು ಗುರುತಿಸಿ ವಿವಿಧ ಪ್ರಕಾರಗಳಾಗಿ ವಿಂಗಡಿಸಿದರು. ಕರ್ನಾಟಕದಲ್ಲಿ ಇದುವರೆಗೂ ಕಂಡುಬಂದಿರುವ ಬೃಹತ್ ಶಿಲಾಸಮಾಧಿಗಳನ್ನು ಹತ್ತು ಪ್ರಕಾರಗಳಲ್ಲಿ ಗುರುತಿಸಲಾಗಿದೆ. ಅವುಗಳಲ್ಲಿ ಹಾದಿಕೋಣೆ ಸಮಾಧಿ(ಕಲ್ಮನೆ ಸಮಾಧಿ), ಕಂಡಿಕೋಣೆಸಹಿತ ಕಲ್ಮನೆ ಸಮಾಧಿ, ನಿಲುಸುಗಲ್ಲುಗಳು(ಮಾನವಾಕೃತಿಯ ಶಿಲೆಗಳು ಅಥವಾ ಕಲ್ಲುಗೊಂಬೆಗಳು), ಚಕ್ಕೆಕಲ್ಲುಗಳಿಂದ ತುಂಬಿದ ಕಲ್ಲುವೃತ್ತಗಳು, ವರ್ತುಲಗಡ್ಡೆಗಳು, ಕಲ್ಲುವೃತ್ತಗಳು(ಶಿಲಾವೃತ್ತಗಳು), ಶವಕುಣಿಗಳು ಎಂಬ ಏಳು ಪ್ರಕಾರದ ಶವಸಂಸ್ಕಾರದ ಸಮಾಧಿಗಳನ್ನು ಗುರುತಿಸಿದರು.[೧] ಆದರೆ ೧೯೭೭ರ ನಂತರದಲ್ಲಿ ಈ ಹಿಂದೆ ಮಾಡಿದ ವಿ.ಡಿ. ಕೃಷ್ಣಸ್ವಾಮಿಯವರ ವರ್ಗೀಕರಣವನ್ನು ಮತ್ತೊಮ್ಮೆ ಪರಿಶೀಲಿಸಿದ ಅ.ಸುಂದರ ಮೊದಲಾದವರು ಇಡೀ ಕರ್ನಾಟಕಕ್ಕೆ ಸಂಬಂಧಿಸಿದಂತೆ ಹೊಸದಾಗಿ ಮೂರು ಮಾದರಿಗಳನ್ನು ಗುರುತಿಸಿದರು.

**ಹಾದಿಕೋಣೆ ಸಮಾಧಿಗಳು**

ಹಾದಿಕೋಣೆ ಸಮಾಧಿಯು ಒಂದು ಮೇಜಿನಂತೆ ಚತುರ್ಸ್ರಾಕಾರದಲ್ಲಿರುತ್ತದೆ. ಈ ನಿರ್ಮಿತಿಯು ನೆಲದ ಮೇಲೆಯೇ ಇಂಥ ಕೋಣೆಯ ಇಲ್ಲವೆ ಭೂಮಿಯ ಅಥವಾ ಪೂರ್ತಿಯಾಗಿ ಅಂತರ್ಗತವಾಗಿರುತ್ತದೆ. ಒಂದೊಂದು ಬದಿಯಲ್ಲಿಯೂ ದೊಡ್ಡ ದೊಡ್ಡ ಚಪ್ಪಡಿಕಲ್ಲನ್ನು ಒಂದಕ್ಕೊಂದು ಆನಿಸಿ ಊರ್ಧ್ವವಾಗಿ ನಿಲ್ಲಿಲಾಗಿರುತ್ತದೆ. ಅಧ್ಯಯನ ಪ್ರದೇಶದಲ್ಲಿ ಹುರುಳಿಹಾಳು, ಹಾಲಸಾಗರ, ಸರ್ವೋದಯ ಗ್ರಾಮದಲ್ಲಿ ಇಂತಹ ಸಮಾಧಿಗಳು ಕಂಡುಬಂದಿವೆ. ಸರ್ವೋದಯ ಗ್ರಾಮದಲ್ಲಿರುವ ಶಿಲಾ ಸಮಾಧಿಯು ೫ ಅಡಿ ಉದ್ದ, ೩.೧/೨ ಅಡಿ ಅಗಲ ಹಾಗೂ ೨.೧/೨ ಅಡಿ ಎತ್ತರವಿದ್ದು ಒಂದು ಕೋಣೆಯ ರೂಪದಲ್ಲಿದೆ. ವಿಶೇಷವಾಗಿ ಮೇಲ್ಭಾಗದ ಚಪ್ಪಡಿಕಲ್ಲಿನಲ್ಲಿ ೧೫ ಕಲ್ಗುಳಿಗಳು ಇರುವುದು ವಿಶೇಷವೆನಿಸಿದೆ.

**ಶಿಲಾವೃತ್ತಸಹಿತ ಕಲ್ಮನೆ ಸಮಾಧಿಗಳು(Dolmenoid Cists)**

ದೊಡ್ಡ ದೊಡ್ಡ ಕಲ್ಲುಗಳನ್ನು ವೃತಾಕಾರದಲ್ಲಿಟ್ಟು ಅವುಗಳ ಮಧ್ಯದಲ್ಲಿ ಚಿಕ್ಕ ಕಲ್ಲುಗಳನ್ನು ನೆಟ್ಟು ವೃತ್ತಾಕಾರದ ಕೇಂದ್ರದ ಮಧ್ಯದಲ್ಲಿ ಮೇಲ್ನೋಟಕ್ಕೆ ಕಾಣುವಂತೆ ಕಲ್ಮನೆ ರಚನೆಯಿದ್ದು ಅದರ ಅಡಿಯಲ್ಲಿ ಅಂತರ್ಗತ ಶವಪೆಟ್ಟಿಗೆ ಇರುತ್ತದೆ. ಅಂತಹ ಸಮಾಧಿಗಳೇ ಕಲ್ಲುವೃತ್ತ ಸಹಿತ ಸಮಾಧಿಗಳು. ಅಧ್ಯಯನ ಪ್ರದೇಶದಲ್ಲಿ ಇಂತಹ ಸಮಾಧಿಗಳು ಕುಮತಿ(ಕೂಡ್ಲಿಗಿ ತಾ.) ಹಿರೇಹಾಳು(ಸಂಡೂರು ತಾ.)ನೆಲೆಗಳಲ್ಲಿ ಕಂಡುಬಂದಿವೆ.[೨] ಹಿರೇಹಾಳು ಗ್ರಾಮದಲ್ಲಿರುವ ಸಮಾಧಿಯು ವೃತ್ತಾಕಾರದ ಕೇಂದ್ರದ ಮಧ್ಯದಲ್ಲಿರುವ ಕಲ್ಮನೆಯ ರಚನೆಯು ಗಾತ್ರದಲ್ಲಿ ಕುಮತಿಯಲ್ಲಿರುವ ಸಮಾಧಿಗಿಂತ ಭಿನ್ನವಾಗಿದೆ. ಆದರೆ ಕುಮತಿಯಲ್ಲಿರುವ ಸಮಾಧಿಯು ದೊಡ್ಡದಾದ ಕಲ್ಲುಚಪ್ಪಡಿಗಳಿಂದ ನಿರ್ಮಿಸಲಾಗಿದೆ. ಹಾಗೂ ಪೂರ್ವದ ದಿಕ್ಕಿಗೆ ಇರುವ ಚಪ್ಪಡಿಕಲ್ಲಿಗೆ ಕಂಡಿ ರಚನೆ ಮಾಡಲಾಗಿದೆ.

**ಕಲ್ಲುಗುಪ್ಪೆ ಸಮಾಧಿಗಳು (Cairns)**

ಕಲ್ಲುಗುಪ್ಪೆ ಸಮಾಧಿಗಳು ಬೃಹತ್ ಶಿಲಾಯುಗದ ಸಮಾಧಿ ಪ್ರಕಾರಗಳಲ್ಲಿ ಒಂದಾಗಿವೆ. ಬಿ ಸುಬ್ಬರಾವ್ ಅವರು ಬಳ್ಳಾರಿಯ ಉತ್ತರಕ್ಕೆ ಇರುವ ಬೆಟ್ಟದ ತಪ್ಪಲಿನಲ್ಲಿ ಎರಡು ಉದ್ದವಾಗಿರುವ ಕಲ್ಲುಗುಪ್ಪೆಗಳನ್ನು ಶೋಧಿಸಿದರು. ಇಂಥ ಶಿಲಾ ಸಮಾಧಿಗಳು ನಿಟ್ಟೂರು,[೩] ಗಂಗಾವತಿ ತಾಲ್ಲೂಕಿನ ಗಡ್ಡಿ, ಜರಿಮಲೆಯಲ್ಲಿವೆ. ಕ್ಷೇತ್ರಕಾರ್ಯದಲ್ಲಿ ಕೈಗೊಂಡ ಸಂದರ್ಭದಲ್ಲಿ ಜರಿಮಲೆ ಬೆಟ್ಟದ ಮೇಲಿನ 'ವಡಕಟ್ಟೆಸರ'ದಲ್ಲಿ (ವಡಕಟ್ಟೆ ಹಳ್ಳದ ದಂಡೆಯಲ್ಲಿ) ಸುಮಾರು ಮೂವತ್ತಕ್ಕೂ ಹೆಚ್ಚು ಕಲ್ಲುಗುಪ್ಪೆ ಸಮಾಧಿಗಳನ್ನು ಶೋಧಿಸಲಾಗಿದೆ. ಸಮಾಧಿಯ ಮೇಲೆ ಗುರುತಿಗಾಗಿ ಒತ್ತಾಗಿ ಕುಪ್ಪೆ ಹಾಕಿದ ಸಣ್ಣಕಲ್ಲುಗಳೇ ಕಲ್ಲುಗುಪ್ಪೆ ಸಮಾಧಿಗಳು. ಇವುಗಳು ನಿರ್ದಿಷ್ಟ ಅಳತೆಯಲ್ಲಿರದೆ ಕಲ್ಲುಗುಪ್ಪೆಗಳಾಗಿ ಗೋಚರಿಸುತ್ತವೆ.

**ಶಿಲಾವೃತ್ತಗಳು(Stone circles)**

ಬಿ. ಸುಬ್ಬರಾವ್ ಅವರು ಸಂಗನಕಲ್ಲು ಗ್ರಾಮದ ಉತ್ತರಕ್ಕೆ ಇರುವ ಬೆಟ್ಟದ ತಪ್ಪಲಿನಲ್ಲಿ ಕಲ್ಲುವೃತ್ತ ಸಮಾಧಿಗಳನ್ನು ಪತ್ತೆಹಚ್ಚಿದರು. ಸಂಗನಕಲ್ಲಿನ ಉತ್ತರಕ್ಕೆ ಇರುವ ಭರಮಪ್ಪನವರ ಹೊಲದಲ್ಲಿರುವ ೫.೪೦ ಮೀಟರ್ ಅಳತೆಯ ಶಿಲಾವೃತ್ತವನ್ನು ಶೋಧಿಸಿ ವರದಿ ಮಾಡಿದರು.[೪] ೧೯೬೪ರಲ್ಲಿ ಸಂಗನಕಲ್ಲಿನಲ್ಲಿ ನಡೆಯುತ್ತಿದ್ದ ಉತ್ಖನನ ಸಮಯದಲ್ಲಿ ನಾಲ್ಕು ಕಲ್ಲುವೃತ್ತಗಳನ್ನು ಪರಿಶೋಧಿಸಿದರು. ಆದರೆ ಅವುಗಳಲ್ಲಿ ಈ ಹಿಂದೆ ಕಪ್ಪಗಲ್ಲು ಬೆಟ್ಟದ ತಪ್ಪಲಿನಲ್ಲಿ ಗಮನಿಸಿದ ಶಿಲಾ ಸಮಾಧಿಗಳ ಹೋಲಿಕೆಯನ್ನು ಗುರುತಿಸಿದರು. ಈ ಶಿಲಾಸಮಾಧಿಗಳಲ್ಲಿ ಒತ್ತಾಗಿ ಕುಪ್ಪೆಹಾಕಿದ ನೆಲಕೋಣೆಯ ಲಕ್ಷಣಗಳಿಲ್ಲದಿರುವುದನ್ನು ಗಮನಿಸಿ ವರದಿ ಮಾಡಿದರು. ಇಂಥ ಶಿಲಾ ಸಮಾಧಿಗಳು ನಿಟ್ಟೂರು, ದಶಮಾಪುರ, ಬಳ್ಳಾರಿ, ಕಪ್ಪಗಲ್ಲು ನೆಲೆಗಳಲ್ಲಿ ಕೂಡ ಸಾಕಷ್ಟು ಸಂಖ್ಯೆಯಲ್ಲಿ ಕಂಡುಬಂದಿವೆ. ಸಂಶೋಧಕರಾದ ಎಂ.ಕೆ ದುರುಗಪ್ಪನವರು ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ದಶಮಾಪುರದಲ್ಲಿ ತೊಂಭತ್ತೊಂದು ಶಿಲಾವೃತ್ತ ಸಮಾಧಿಗಳನ್ನು ಶೋಧಿಸಿದ್ದಾರೆ.[೫]

**ನಿಲುಸುಗಲ್ಲು ಸಮಾಧಿಗಳು ಮತ್ತು ಮಾನವಾಕೃತಿಗಳು(Menhirs and Anthromorpic)**

ಬಿ.ಸುಬ್ಬರಾವ್ ಅವರು ಸಂಗನಕಲ್ಲಿನ ವಿಭಿನ್ನ ಸ್ಥಳಗಳಲ್ಲಿ ಪ್ರತ್ಯೇಕವಾದ ಮೂರು ನಿಲುಸುಗಲ್ಲುಗಳನ್ನು ಶೋಧಿಸಿದರು.[೬] ಅವುಗಳಲ್ಲಿ ಒಂದು ಚೌಡಮ್ಮ ಬೆಟ್ಟದ ಉತ್ತರ ದಿಕ್ಕಿನಲ್ಲಿ ಕಂಡುಬಂದಿದ್ದು, ಮತ್ತೆರಡು ದಕ್ಷಿಣ ದಿಕ್ಕಿನಲ್ಲಿವೆ. ಅವುಗಳ ನಿರ್ಮಾಣದ ಉದ್ದೇಶವನ್ನು ತಿಳಿಯಲು ಸಾಧ್ಯವಾಗಿಲ್ಲ. ಅವು ಪರಸ್ಪರ ಪ್ರತ್ಯೇಕ ಸ್ಥಳದಲ್ಲಿವೆ. ಈ ನಿಲುಸುಗಲ್ಲುಗಳು ಗ್ರಾನೈಟ್ ಶಿಲೆಯಲ್ಲಿವೆ. ಅವು ೧.೫ ಮೀಟರ್ ನಿಂದ ೩.೧೦ ಮೀಟರ್‌ನಷ್ಟು ಎತ್ತರವಾಗಿವೆ. ಒಂದು ನಿಲುಸುಗಲ್ಲಿನ ನಾಲ್ಕು ದಿಕ್ಕಿಗೆ ನಾಲ್ಕು ಕಲ್ಲುಗಳನ್ನು ನೆಟ್ಟಿರುವುದನ್ನು ಗುರುತಿಸಲಾಗಿದೆ.

ಕಪ್ಪಗಲ್ಲು ಗ್ರಾಮದ ನೈರುತ್ಯ ದಿಕ್ಕಿನಲ್ಲಿ ಐದು ನಿಲುಸುಗಲ್ಲುಗಳು ಕಂಡುಬಂದಿವೆ. ಅವುಗಳಲ್ಲಿ ಎರಡು ಮಾತ್ರ ಸುಸ್ಥಿತಿಯಲ್ಲಿವೆ. ಎಡ ಭಾಗದಲ್ಲಿರುವ ನಿಲುಸುಗಲ್ಲಿನ ಅಳತೆಯು ನೆಲಮಟ್ಟದಿಂದ

೨.೭ ಮೀಟರ್ ಎತ್ತರ, ಸುಮಾರು ೦.೯೧ ಮೀಟರ್ ಅಗಲವಿದೆ. ಇದರ ಸುತ್ತಳತೆ ೧.೬೭ ಮೀಟರ್, ಎದೆ ಭಾಗ, ೧ ಮೀಟರ್ ಇದೆ. ಇದರ ಬಲಭಾಗದಲ್ಲಿರುವ ಮತ್ತೊಂದು ನಿಲುಸುಗಲ್ಲು ನೆಲಮಟ್ಟದಿಂದ ೨.೭ ಮೀಟರ್ ಎತ್ತರವಾಗಿದ್ದು, ಅಗಲ ೧.೩೪ ಮೀಟರ್‌ನಷ್ಟಿದೆ. ನೆಲಕ್ಕೆ ಬಿದ್ದಿರುವ ಮತ್ತೊಂದು ಕಲ್ಲು ೨.೨೨ ಮೀಟರ್ ಉದ್ದ ಹಾಗೂ ೦.೬೭ ಮೀಟರ್ ಅಗಲವಾಗಿದೆ. ಇನ್ನೊಂದು ೩ ಮೀ ಉದ್ದ, ೦.೯೧ ಮೀ, ಅಗಲವಿದೆ. ಎಡಕ್ಕೆ ಬಿದ್ದಿರುವ ಕಲ್ಲು ೩ ಮೀಟರ್ ಉದ್ದ ಹಾಗೂ ೧.೩೪ ಮೀಟರ್, ಅಗಲವಿದೆ. ಈ ನಿಲುಸುಗಲ್ಲುಗಳನ್ನು ದೂರದಿಂದ ಗಮನಿಸಿದಾಗ ಅಲೈನ್‌ಮೆಂಟ್‌ಗಳಂತೆ ಸಾಲಾಗಿ ನಿಲ್ಲಿಸಿರುವುದು ಗೋಚರಿಸುತ್ತದೆ.[೭] ಕುಮತಿಯ ಮಾನವಾಕೃತಿ ಶಿಲೆಗಳನ್ನು ೧೯೯೬ರಲ್ಲಿ ಕೆ.ಪಿ.ಪೂಣಚ್ಚ ಇವರ ನೇತೃತ್ವದಲ್ಲಿ ಪುರಾತತ್ವ ಇಲಾಖೆ ಬೆಂಗಳೂರು ಶಾಖೆಯವರು ಹಮ್ಮಿಕೊಂಡಿದ್ದ ಗ್ರಾಮಾಂತರ ಸಮೀಕ್ಷೆ ಕಾರ್ಯದಲ್ಲಿ ಅಪರೂಪದ ಏಳು ಮಾನವಾಕಾರದ ಏಕಶಿಲಾ ಸಮುಚ್ಚಯಗಳನ್ನು ಕುಮತಿ ಗ್ರಾಮದ ಕೆರೆಯ ದಂಡೆಯಲ್ಲಿ ಸುಮಾರು ೩೦೦.ಮೀ. ದೂರದಲ್ಲಿನ ಕೆ.ಎಂ.ತಿಪ್ಪೇರುದ್ರಯ್ಯ ಎಂಬುವರ ಜಮೀನಿನಲ್ಲಿ ಅನ್ವೇಷಿಸಿ ವರದಿ ಮಾಡಿದರು. ಇವುಗಳಲ್ಲಿ ಎರಡು ಮಾತ್ರ ಸುಸ್ಥಿತಿಯಲ್ಲಿದ್ದು, ಇನ್ನುಳಿದಂತೆ ಭಗ್ನಗೊಂಡಿವೆ. ಸ್ಥಳೀಯವಾಗಿ ದೊರೆಯುವ ಗ್ರಾನೈಟ್ ಶಿಲೆಗಳಿಂದ ಅಗಲವಾದ ಶಿಲಾಫಲಕಗಳನ್ನು ರಚಿಸಿ ದಕ್ಷಿಣೋತ್ತರವಾಗಿ ಯೋಜಿಸಿ ಪೂರ್ವಾಭಿಮುಖವಾಗಿ ನಿಲ್ಲಿಸಲಾಗಿದೆ. ಎಡಭಾಗದಲ್ಲಿರುವ ಮಾನಾವಾಕೃತಿಯು ೩.೦೨ಮೀ ಎತ್ತರವಿದ್ದು ಇದರ ಎದೆ ಭಾಗದ ಅಳತೆ ೨.೪೨ ಮೀ ಅಗಲವಿದೆ. ಅಲ್ಲದೆ ಅದರ ತಳಭಾಗ ೧.೪೬ಮೀ ಅಳತೆ ಹೊಂದಿದೆ. ಇದರ ಬಲಭಾಗದಲ್ಲಿರುವ ಮಾನಾವಾಕೃತಿಯು ೩.೦೭ ಮೀ ಎತ್ತರ ೩.೩೬ಮೀ ಅಗಲವಿದೆ. ಇವುಗಳ ನಡುವಿನ ಅಂತರ ೫.೭೪ಮೀ ಇದೆ.

೧೯೯೮ರಲ್ಲಿ ಶ್ರೀ ಬಾಲಸುಬ್ರಮಣ್ಯಂ ಅವರ ನೇತೃತ್ವದ ತಂಡವು ಹಮ್ಮಿಕೊಂಡಿದ್ದ ಗ್ರಾಮಾಂತರ ಸರ್ವೇಕ್ಷಣ ಕಾರ್ಯದಲ್ಲಿ ಹುಲಿಕುಂಟೆ ಗ್ರಾಮದ ವಾಯುವ್ಯ ಭಾಗಕ್ಕೆ ಸುಮಾರು ೨.ಕಿ.ಮೀ ದೂರದಲ್ಲಿ ಹರಿಜನ ಬೋರಕ್ಕ ಎಂಬುವರ ಜಮೀನಿನಲ್ಲಿ ಮಾನವಾಕೃತಿಗಳನ್ನು ಅನ್ವೇಷಿಸಿ ವರದಿ ಮಾಡಿದರು.[೮] ಅವುಗಳಲ್ಲಿ ಒಂದು ಮಾತ್ರ ಸುಸ್ಥಿತಿಯಲ್ಲಿದ್ದು ಇನ್ನುಳಿದಂತೆ ಭಗ್ನವಾಗಿವೆ. ಈ ಮಾನವಾಕೃತಿಯ ಶಿಲೆಗಳನ್ನು ಸ್ಥಳೀಯವಾಗಿ ದೊರೆಯುವ ಗ್ರಾನೈಟ್ ಶಿಲೆಯ ಅಗಲವಾದ ಶಿಲಾಫಲಕಗಳಿಂದ ನಿರ್ಮಿಸಲಾಗಿದೆ. ಇದರ ಎತ್ತರ ೧.೮೨ ಮೀಟರ್, ಅಗಲ ೧.೧೯ ಮೀಟರ್ ಆಗಿದ್ದು ಇದರ ದಪ್ಪ ೧೫ ಸೇ.ಮೀ ಇದೆ. ಈ ಶಿಲಾಫಲಕಗಳನ್ನು ದಕ್ಷಿಣೋತ್ತರವಾಗಿ ನಿಲ್ಲಿಸಲಾಗಿದ್ದು ಪೂರ್ವಾಮುಖವಾಗಿವೆ.[೯] ಈ ಮಾನವಾಕೃತಿಗಳನ್ನು ಸ್ಥಳೀಯರು ರಾಕ್ಷಸಕಲ್ಲುಗಳೆಂದು ಕರೆಯುವರು.

**ಕಲ್ಮನೆ ಸಮಾಧಿಗಳು(Dolmens)**

ಭೂಮಟ್ಟದಲ್ಲಿ ೪-೫ ಚಪ್ಪಡಿಕಲ್ಲುಗಳಿಂದ ನಿರ್ಮಿಸಿದ ಕೋಣೆಯನ್ನು ಕಲ್ಮನೆ ಎನ್ನುವರು. ಕೋಣೆಯ ಮೇಲ್ಭಾಗವನ್ನು ಚಪ್ಪಡಿಕಲ್ಲುಗಳಿಂದ ಮುಚ್ಚಲಾಗಿರುತ್ತದೆ. ಯಾವುದಾದರೂ ಒಂದು ಬದಿಯ ಗೋಡೆಯ ಚಪ್ಪಡಿಕಲ್ಲಿನಲ್ಲಿ ಕಂಡಿ ಇದ್ದರೆ ಅದನ್ನು ಕಂಡಿಕೋಣೆ ಸಮಾಧಿ ಎಂದು

ಕರೆಯುವರು. ಸಂಗನಕಲ್ಲು ಗುಂಪಿನ ವ್ಯಾಪ್ತಿಯಲ್ಲಿ ಗುರುತಿಸಿರುವ ಗುಡೇಕೋಟೆ, ಮಹದೇವಪುರ, ಜರಿಮಲೆ, ನವಲಿ, ಮಡಕಲಕಟ್ಟೆ, ಮಲ್ಲಾಪುರ ನೆಲೆಗಳಲ್ಲಿ ಈ ಪ್ರಕಾರದ ಸಮಾಧಿಗಳಿವೆ. ಜರಿಮಲೆಯ ದುರ್ಗಮ್ಮ ಬೆಟ್ಟದ ದಕ್ಷಿಣದ ಇಳಿಜಾರಿನಲ್ಲಿ ಇಪ್ಪತ್ತಕ್ಕೂ ಹೆಚ್ಚು ಕಲ್ಮನೆ ಸಮಾಧಿಗಳು ಕಂಡುಬಂದಿದ್ದು, ಅವುಗಳಲ್ಲಿ ಕೆಲವು ಮಾತ್ರ ಸುಸ್ಥಿತಿಯಲ್ಲಿವೆ. ಇನ್ನೂ ಕೆಲವು ಸಂಪೂರ್ಣವಾಗಿ ನೆಲಕ್ಕೆ ಬಿದ್ದು ಹಾಳಾಗಿವೆ.

ಗುಡೇಕೋಟೆ ಗ್ರಾಮದ ವ್ಯಾಯುವ್ಯ ದಿಕ್ಕಿನಲ್ಲಿ ಕಂಡಿಕೋಣೆ ಸಮಾಧಿಯೊಂದು ಕಂಡುಬಂದಿದ್ದು, ಇಂದಿಗೂ ಸುಸ್ಥಿತಿಯಲ್ಲಿದೆ. ಈ ಸಮಾಧಿಯು ಪೂರ್ವಾಭಿಮುಖವಾಗಿದ್ದು, ೩ ಮೀಟರ್ ಉದ್ದ, ೨.೪೩ ಮೀಟರ್ ಅಗಲ ವಿಸ್ತೀರ್ಣ ಹೊಂದಿದೆ. ಹಾಗೂ ಮೇಲ್ಭಾಗದಲ್ಲಿ ೫ ಸೆಂ. ಮೀ ವ್ಯಾಸದ ಕಲ್ಗುಳಿಗಳಿವೆ. ಪೂರ್ವಾಭಿಮುಖವಾಗಿರುವ ಚಪ್ಪಡಿಗೆ ೫೦ ಸೆಂ.ಮೀ. ಇಲ್ಲಿನ ಸಮಾಧಿಗಳನ್ನು ಸ್ಥಳೀಯರು 'ಮೋರೆಯರ ಮನೆ'ಗಳೆಂಬ ಹೆಸರಿನಿಂದ ಕರೆಯುವರು. ಈ ಶಿಲಾಸಮಾಧಿಗಳನ್ನು ಸ್ಥಳೀಯವಾಗಿ ಬೆಟ್ಟಗಳಲ್ಲಿ ದೊರಕುವ ಗ್ರಾನೈಟ್ ಶಿಲೆಗಳಿಂದ ನಿರ್ಮಿಸಲಾಗಿರುವುದನ್ನು ಗಮನಿಸಬಹುದು. ಇಲ್ಲಿರುವ ಸಮಾಧಿಗಳಿಗೆ ಕಿಂಡಿಗಳನ್ನು ಸಹ ಕೊರೆಯಲಾಗಿದೆ. ಇದರ ಒಳ ಭಾಗದಲ್ಲಿ ಕಡ್ಡಿ ಚಿತ್ರಗಳಿದ್ದು ಅವುಗಳು ಮನುಷ್ಯನನ್ನು ಹೋಲುತ್ತವೆ.[೧೧] ಹಡಗಲಿಯಿಂದ ಹಂಪಸಾಗರಕ್ಕೆ ಹೋಗುವ ರಸ್ತೆಯ ಎಡಭಾಗದಲ್ಲಿ ಅಂಬೇಡ್ಕರ್ ಭವನದ ಪಕ್ಕದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಕಾಲಕ್ಕೆ ಸಂಬಂಧಪಟ್ಟ ಕಿಂಡಿಕೋಣೆ ಸಮಾಧಿಯಿದೆ.[೧೧] ಇದು ನಾಲ್ಕು ಕಲ್ಲುಚಪ್ಪಡಿಗಳನ್ನು ಹೊಂದಿದ್ದು, ಪಶ್ಚಿಮ ದಿಕ್ಕಿನ ಕಲ್ಲುಚಪ್ಪಡಿಯಲ್ಲಿ ಇಂಗ್ಲಿಷ್ ಅಕ್ಷರದ "U" ಆಕಾರದ ಕಿಂಡಿಯಿದೆ. ಇದರ ಅಳತೆಯು ೭.೫ ಸೆಂ.ಮೀ ಇದೆ. ಇದು ಪುನರ್ ಜೋಡಣೆಯಂತೆ ಕಂಡುಬರುತ್ತದೆ. ಇದರ ಇನ್ನುಳಿದ ಕಲ್ಲುಚಪ್ಪಡಿಗಳು ಸಂಪೂರ್ಣವಾಗಿ ಹಾಳಾಗಿದ್ದು ಅಳಿದುಳಿದ ಅವಶೇಷಗಳು ಮಾತ್ರ ಅಧ್ಯಯನಕ್ಕೆ ಯೋಗ್ಯವಾಗಿವೆಯೆಂಬ ವಿವರಗಳನ್ನು ತಿಳಿಯಬಹುದು.

**ನೆಲಕೋಣೆ ಸಮಾಧಿಗಳು(Cists)**

ಭೂಮಿಯಲ್ಲಿ ನಾಲ್ಕು ಚಪ್ಪಡಿಕಲ್ಲುಗಳನ್ನು ಪರಸ್ಪರ ಅಭಿಮುಖವಾಗಿ ನಿಲ್ಲಿಸಿ ಅವುಗಳ ಮಧ್ಯದಲ್ಲಿ ಶವಸಂಸ್ಕಾರ ಮಾಡಲಾಗಿರುತ್ತದೆ. ಸಾಮಾನ್ಯವಾಗಿ ಇಂತಹ ಸಮಾಧಿಗಳು ಉತ್ತರ ಮತ್ತು ದಕ್ಷಿಣಾಭಿಮುಖವಾಗಿ ನಿರ್ಮಿಸಲಾಗಿರುತ್ತದೆ. ಸಂಗನಕಲ್ಲು ಗುಂಪಿನ ವ್ಯಾಪ್ತಿಯಲ್ಲಿ ಗುರುತಿಸಿರುವ ಹಾಲಸಾಗರ, ಜರಿಮಲೆ ನೆಲೆಗಳಲ್ಲಿ ಈ ಪ್ರಕಾರದ ಸಮಾಧಿಗಳು ಕಂಡುಬಂದಿವೆ. ಜರಿಮಲೆ ಬಿದಿರಂಬಯಲು ಎನ್ನುವ ಸ್ಥಳದಲ್ಲಿ ನೂರಕ್ಕೂ ಹೆಚ್ಚು ಶಿಲಾಸಮಾಧಿಗಳಿವೆ. ಅವು ಸ್ವಸ್ತಿಕ್ ಮತ್ತು ಆಯತಾಕಾರದ ವಿನ್ಯಾಸದಲ್ಲಿವೆ. ಜರಿಮಲೆಯಲ್ಲಿರುವ ನೆಲಕೋಣೆ ಸಮಾಧಿಯ ಅಳತೆಯು ೫.೧/೨ ಅಡಿ ಉದ್ದ, ೩.೧/೨ ಅಡಿ ಅಗಲ ವಿಸ್ತೀರ್ಣ ಹೊಂದಿದೆ. ಇದೇ ರೀತಿ ಹಾಲಸಾಗರದ ಲಕ್ಷ್ಮಯ್ಯ ಎಂಬುವರ ಜಮೀನಿನಲ್ಲಿ ಸ್ವಸ್ತಿಕ್ ಆಕಾರದ ಶಿಲಾಸಮಾಧಿಗಳು ಬೆಳಕಿಗೆ ಬಂದಿವೆ. ಹಾಗೂ

ಆಯತಾಕಾರದ ಜೋಡಿ ಸಮಾಧಿಗಳು ಕಂಡುಬಂದಿದ್ದು ಪ್ರಾಯಶಃ ಅವು ಪತಿ ಪತ್ನಿಯರ ಶವಸಂಸ್ಕಾರದ ಕುರುಹುಗಳಾಗಿರಬಹುದು.

**ಕಂಡಿಕೋಣೆ ಸಹಿತ ನೆಲಕೋಣೆ ಸಮಾಧಿಗಳು (Port-holed cists)**

ಜರಿಮಲೆಯ ಬೆಟ್ಟದ ತಪ್ಪಲಿನಲ್ಲಿ ಕೆಲವು ಕಂಡಿಕೋಣೆ ಶಿಲಾಸಮಾಧಿಗಳು ಸಹ ಕಂಡುಬಂದಿದ್ದು, ಅವುಗಳನ್ನು ಸಹ ಸ್ಥಳೀಯವಾಗಿ ದೊರಕುವ ಗ್ರ್ಯಾನೈಟ್ ಶಿಲೆಗಳಿಂದ ನಿರ್ಮಿಸಲಾಗಿದೆ. ಈ ಶಿಲಾಸಮಾಧಿಗಳನ್ನು ನಾಲ್ಕು ಕಲ್ಲುಚಪ್ಪಡಿಗಳಿಂದ ಪರಸ್ಪರ ಜೋಡಿಸಲಾಗಿದ್ದು, ಮೇಲ್ಭಾಗದಲ್ಲಿ ಮಳೆ ನೀರು ಬೀಳದಂತೆ ಮತ್ತೊಂದು ಚಪ್ಪಡಿಕಲ್ಲಿನಿಂದ ಮುಚ್ಚಳದ ರೀತಿಯಲ್ಲಿ ಜೋಡಿಸಲಾಗಿದೆ. ಪೂರ್ವ ದಿಕ್ಕಿಗೆ ಜೋಡಿಸಿರುವ ಚಪ್ಪಡಿಕಲ್ಲಿನ ಮಧ್ಯದಲ್ಲಿ ರಂಧ್ರವನ್ನು ಬಿಡಲಾಗಿರುತ್ತದೆ. ಆದರೆ ಜರಿಮಲೆಯ ಬೆಟ್ಟದ ತಪ್ಪಲಿನ ಕಂಡಿಕೋಣೆ ಸಮಾಧಿಗೆ ಉತ್ತರ ದಿಕ್ಕಿನಲ್ಲಿ ಹೊಂದಿಸಿರುವ ಕಲ್ಲುಚಪ್ಪಡಿಗೆ ಕಂಡಿ ರಚನೆ ಇರುವುದು ವಿಶೇಷ.

**ಶವಪೆಟ್ಟಿಗೆಗಳು**

ಈ ಪ್ರಕಾರದ ಸಮಾಧಿಗಳು ತುಂಗಭದ್ರ ನದಿದಂಡೆಯಲ್ಲಿರುವ ಹಂಪಸಾಗರ ಮತ್ತು ಕುಡುತಿನಿ ಬೂದಿದಿನ್ನೆ ಉತ್ಖನನದ ನೆಲೆಗಳಲ್ಲಿ ವರದಿಯಾಗಿವೆ. ರಾಬರ್ಟ್ ಬ್ರೂಸ್‌ಫೂಟ್ ಅವರು ಹಂಪಸಾಗರದಲ್ಲಿರುವ 'ಚದುರಿ ಬಿದ್ದಿದ್ದ ಸಮಾಧಿಯಿಂದ ದಪ್ಪದಾದ ಆನೆಯ ಕಾಲುಗಳನ್ನು ಹೋಲುವ ಶವಪೆಟ್ಟಿಗೆಯನ್ನು ಹೊರತೆಗೆದು ಅದರ ವಿವರಗಳನ್ನು ವರದಿ ಮಾಡಿದ್ದಾರೆ.[೨] ಇದು ಅಂಡಾಕಾರದ ದೇಹವನ್ನು ಉದ್ದದ ಬದಲು ಸಮತಲ ಸ್ಥಾನದಲ್ಲಿ ಇರಿಸಲಾಗಿದೆ. ಸಾಮಾನ್ಯವಾಗಿ ಇದು ಬಹಳ ಚಿಕ್ಕ ತಲೆಯೊಂದಿಗೆ ವಿಲಕ್ಷಣವಾದ ಆನೆಯನ್ನು ಹೋಲುತ್ತದೆ' ಎಂದು ದಾಖಲಿಸಿದ್ದಾರೆ. ಈ ಶವಪಟ್ಟಿಗಳನ್ನು ಸಾರ್ಕೋಫೋಗಸ್ ಎಂದು ಕರೆಯಲಾಗುತ್ತದೆ. ಇತ್ತೀಚೆಗೆ ೨೦೦೨ರಲ್ಲಿ ರವಿ ಕೋರಿಶೆಟ್ಟರ್ ಅವರ ತಂಡ ಕುಡುತಿನಿಯ ಬೂದಿ ದಿನ್ನೆಯಲ್ಲಿ ಅಗೆದ ಪರೀಕ್ಷಾ ಗುಂಡಿಯಲ್ಲಿ ಅಪರೂಪದ ಅವಶೇಷ ದೊರಕಿತು. ಒಂದರ ಮೇಲೊಂದಿಟ್ಟ ಮೂರು ಪೂರ್ಣ ಮಡಕೆಗಳ ಕೆಳಗೆ ಮಣ್ಣಿನಲ್ಲಿ ಮಾಡಿದ ಆರು ಕಾಲಿನ ಶವಪೆಟ್ಟಿಗೆಯನ್ನು ಶೋಧಿಸಿದರು. ಇದರೊಳಗೆ ೬–೭ ವರ್ಷದ ಮಗುವನ್ನು ಸಮಾಧಿಗೊಳಿಸಲಾಗಿತ್ತು. ಉತ್ತರ–ದಕ್ಷಿಣಾಭಿಮುಖವಾಗಿದ್ದ ಈ ಪೆಟ್ಟಿಗೆ ಸುತ್ತಲು ಇಟ್ಟಿದ್ದ ಮಡಕೆಗಳಲ್ಲಿ ಮಗುವಿನ ಕೆಲ ಮೂಳೆಗಳನ್ನು ಇಡಲಾಗಿತ್ತು ಎಂಬ ವರದಿಗಳು ಪ್ರಕಟವಾಗಿವೆ.

ಕೊಪ್ಪಳ ಜಿಲ್ಲೆಯ ಗುಡ್ಡಗಾಡು ಪ್ರದೇಶದಲ್ಲಿ ಸುಮಾರು ೧೫೦ ಕಿ.ಮೀ ವ್ಯಾಪ್ತಿಯಲ್ಲಿರುವ ವಿವಿಧ ನೆಲೆಗಳಲ್ಲಿನ ಬೃಹತ್ ಶಿಲಾಸಮಾಧಿಗಳನ್ನು ಹಿರೇಬೆಣಕಲ್ಲು ಕೇಂದ್ರವಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ. ನೆಲೆಗಳ ಸಾಂದ್ರತೆ, ಸಾಪೇಕ್ಷ ಭೌಗೋಳಿಕ ಸ್ಥಾನಗಳನ್ನು ಅರ್ಥಮಾಡಿಕೊಳ್ಳಲು ನೆಲೆಗಳ ಸಂಖ್ಯಾ ಪಟ್ಟಿಯನ್ನು ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

## ಕೋಷ್ಟಕ

## ಹಿರೇಬೆಣಕಲ್ಲು ಪ್ರದೇಶದ ಬೃಹತ್ ಶಿಲಾ ಸಮಾಧಿ ಪ್ರಕಾರಗಳು

| ಕ್ರಮ | ಸ್ಥಳ | ಹಿರೇಬೆಣಕಲ್ಲಿನಿಂದ ಇರುವ ದೂರ | ದಿಕ್ಕು | ಸಮಾಧಿ ಪ್ರಕಾರ | ಸಮಾಧಿಗಳ ಸಂಖ್ಯೆ |
|---|---|---|---|---|---|
| ೦೧ | ಆಚಿಲಾಪುರ | ೨೭ ಕಿ.ಮೀ | ನೈರುತ್ಯ | ಕಲ್ಮನೆ/ ನೆಲಕೋಣೆ/ ನಿಲುಸುಗಲ್ಲು | ೧೫ |
| ೦೨ | ಆಗೋಲಿ | ೦೬ ಕಿ.ಮೀ | ವಾಯುವ್ಯ | ಕಲ್ಮನೆ/ ನಿಲುಸುಗಲ್ಲು/ ಮಾನವಾಕೃತಿ ಶಿಲೆ | ೫೦ |
| ೦೩ | ಆನೆಗೊಂದಿ | ೧೫ ಕಿ.ಮೀ | ಆಗ್ನೇಯ | ಕಲ್ಲುವೃತ್ತ | ೨೦ |
| ೦೪ | ಇಂದರಗಿ | ೧೨ ಕಿ.ಮೀ | ವಾಯುವ್ಯ | ಕಲ್ಮನೆ | ೭೦ |
| ೦೫ | ಎಮ್ಮೆಗುಡ್ಡ | ೨೧ಕಿ.ಮೀ | ವಾಯುವ್ಯ | ಕಂಡಿಕೋಣೆ | ೪೦ |
| ೦೬ | ಕಲ್ಲಪ್ಪನ ಕ್ಯಾಂಪ್ | ೫೯ ಕಿ.ಮೀ | ಈಶಾನ್ಯ | ಮಾನವಾಕೃತಿ ಶಿಲೆ | ೦೧ |
| ೦೭ | ಕುಮ್ಮಟದುರ್ಗ | ೨೯ ಕಿ.ಮೀ | ಪಶ್ಚಿಮ | ನಿಲುಸುಗಲ್ಲು | ೦೨ |
| ೦೮ | ಕೊಪ್ಪಳ | ೩೫ ಕಿ.ಮೀ | ಪಶ್ಚಿಮ | ಶಿಲಾವೃತ್ತಸಹಿತ ಕಲ್ಮನೆ | ೧೦ |
| ೦೯ | ಗಡ್ಡಿ | ೦೪ ಕಿ.ಮೀ | ಉತ್ತರಕ್ಕೆ | ಕಲ್ಮನೆ | ೧೫ |
| ೧೦ | ಗುಡೂರು | ೭೦ ಕಿ.ಮೀ | ವಾಯುವ್ಯ | ಶಿಲಾವೃತ್ತ | ೦೫ |
| ೧೧ | ಚಿಕ್ಕಬೆಣಕಲ್ಲು | ೩ ಕಿ.ಮೀ | ದಕ್ಷಿಣ | ಕಲ್ಮನೆ | ೧೦ |
| ೧೨ | ಜಂಗಮರಕಲ್ಗುಡಿ | ೪೧ ಕಿ.ಮೀ | ವಾಯುವ್ಯ | ಶವಕುಣಿಗಳು | ೧೦ |
| ೧೩ | ಜೀರಾಳ | ೫೩ ಕಿ.ಮೀ | ವಾಯುವ್ಯ | ಶವಕುಣಿಗಳು | ೧೦ |
| ೧೪ | ತಾವರಗೇರ | ೨೪ ಕಿ.ಮೀ | ಈಶಾನ್ಯ | ಶಿಲಾವೃತ್ತ/ ಹಾದಿಕೋಣೆ | ೧೧ |
| ೧೫ | ತಿಪ್ಪನಾಳ | ೪೯ ಕಿ.ಮೀ | ಈಶಾನ್ಯ | ಶಿಲಾವೃತ್ತ | ೨೦ |
| ೧೬ | ಬಂಡರಾಳ | ೦೩ ಕಿ.ಮೀ | ಉತ್ತರ | ಕಂಡಿಕೋಣೆ | ೨೦ |
| ೧೭ | ಬಸರಿಹಾಳ | ೪೬ ಕಿ.ಮೀ | ಈಶಾನ್ಯ | ಶಿಲಾವೃತ್ತ | ೦೪ |
| ೧೮ | ಬಿಳೇಬಾವಿ | ೨೦ ಕಿ.ಮೀ | ವಾಯುವ್ಯ | ನೆಲಕೋಣೆ | ೩೫ |
| ೧೯ | ಮಲ್ಲಾಪುರ | ೦೬ ಕಿ.ಮೀ | ಆಗ್ನೇಯ | ಕಲ್ಮನೆ | ೨೦ |
| ೨೦ | ಶಿವಪುರ | ೨೦. ಕಿಮೀ | ನೈರುತ್ಯ | ಶಿಲಾವೃತ್ತ/ ನೆಲಕೋಣೆ | ೨೦೦ |
| ೨೧ | ಸಾಣಾಪುರ | ೨೨. ಕಿ ಮೀ | ದಕ್ಷಿಣ | ಕಲ್ಲುಗುಪ್ಪೆ | ೧೦ |
| ೨೨ | ಹಳೇಬಸವಪಟ್ಟಣ | ೫.೪ ಕಿಮೀ | ಈಶಾನ್ಯ | ಶಿಲಾವೃತ್ತ/ ಶಿಲಾವೃತ್ತಸಹಿತ ಕಲ್ಮನೆ | ೩೦ |
| ೨೩ | ಹಿರೇಬೆಣಕಲ್ಲು | -- | -- | ಕಲ್ಮನೆ/ ನೆಲಕೋಣೆ/ ಮಾನವಾಕೃತಿ ಶಿಲೆ. | ೪೪೦ |

ದಕ್ಷಿಣ ಭಾರತದಲ್ಲಿಯೇ ಅತಿ ದೊಡ್ಡ ಬೃಹತ್ ಶಿಲಾಯುಗದ ನೆಲೆ ಹಿರೇಬೆಣಕಲ್ಲು. ಇದು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಸುತ್ತಲೂ ಇರುವ ಎತ್ತರದ ಏಳು ಗುಡ್ಡಗಳ ಸಾಲುಗಳ ಮಧ್ಯದಲ್ಲಿ ಆವೃತಗೊಂಡಿದೆ. ಬೃಹತ್ ಬಂಡೆಗಳ ರಾಶಿಯ ಈ ಬೆಟ್ಟಗಳಲ್ಲಿ ಜನವಸತಿಗೆ ಯೋಗ್ಯವಾದ ಅಸಂಖ್ಯಾತ ಗವಿ ಕಲ್ಲಾಸರೆಗಳಿವೆ. ಈ ನೆಲೆಯು ಸಾವಿರಕ್ಕೂ ಅಧಿಕ ಶಿಲಾಸಮಾಧಿಗಳನ್ನು ಹೊಂದಿದ್ದು, ಭಾರತದ ಪ್ರಾಗಿತಿಹಾಸಕಾಲದ ಮಹತ್ವದ ನೆಲೆಗಳಲ್ಲಿ ಒಂದೆನಿಸಿದೆ. ರೆವರೆಂಡ್ ಜಿ. ಕೆಯಿಸ್‌ರವರು ಮೊಟ್ಟಮೊದಲಿಗೆ ಈ ನೆಲೆಯನ್ನು ಶೋಧಿಸಿದರು. ಈ ಸಂಗತಿಯನ್ನು ೧೮೩೫ರ ರಾಯಲ್ ಏಷ್ಯಾಟಿಕ್ ಸೊಸೈಟಿ, ಬಾಂಬೆ ಶಾಖೆಯ ಜರ್ನಲ್ ಸಂಪುಟ ೪ರಲ್ಲಿ ಕರ್ನಲ್ ಮೆಡೊಸ್ ಟೇಲರ್ ಅವರು ಪ್ರಕಟಿಸುವುದರೊಂದಿಗೆ ಕರ್ನಾಟಕದಲ್ಲಿ ಬೃಹತ್ ಶಿಲಾಯುಗದ ನೆಲೆಗಳ ಅಧ್ಯಯನ ಪ್ರಾರಂಭವಾಯಿತೆನ್ನಬಹುದು. ೧೯೬೪-೬೮ರಲ್ಲಿ ಅ.ಸುಂದರ ಅವರು ಈ ನೆಲೆ ಪರಿಶೀಲನೆಯಲ್ಲಿ ಸು.೮ ಗವಿಚಿತ್ರಗಳನ್ನೂ, ಎರಡು ವಸತಿನೆಲೆಗಳನ್ನು ಪತ್ತೆಹಚ್ಚಿದರು.[೧೩] ರೇಮೆಂಡ್ ಎಫ್.ಅಲ್ಚಿನ್ ಅವರು ೧೯೫೫ರಲ್ಲಿ ಹಿರೇಬೆಣಕಲ್ಲು ಬೆಟ್ಟದ ಮೇಲಿರುವ ವಿಶಾಲವಾದ ಬಯಲು ಪ್ರದೇಶಗಳಲ್ಲಿರುವ ಸುಮಾರು ೪೪೦ ಶಿಲಾಸಮಾಧಿಗಳನ್ನು ವರದಿ ಮಾಡಿದರು. ನಂತರದಲ್ಲಿ ತಜ್ಞರಾದ ಅ.ಸುಂದರ ಅವರು ಇಲ್ಲಿನ ಬೃಹತ್ ಶಿಲಾಸಮಾಧಿಗಳನ್ನು ನಾಲ್ಕು ಪ್ರಕಾರಗಳಾಗಿ ವರ್ಗೀಕರಿಸಿದರು.

೧. ಕೆಲವು ಬ್ರಹ್ಮಗಿರಿಯ ನಿವೇಶನದಲ್ಲಿ ಉತ್ಖನನ ಮಾಡಿದ ಪ್ರಕಾರಗಳಿಗೆ ಹೋಲಿಕೆಯಾಗುತ್ತವೆ.

೨. ಕೆಲವು ಸಾವಣದುರ್ಗದ ಶಿಲಾಸಮಾಧಿ ಪ್ರಕಾರಗಳಿಗೆ ಹೋಲಿಕೆಯಾಗುತ್ತವೆ.

೩. ಕೆಲವು ಉತ್ತರ ಗುಲ್ಬರ್ಗದಲ್ಲಿ ಕಂಡುಬರುವ ಶಿಲಾಸಮಾಧಿ ಪ್ರಕಾರಗಳಿಗೆ ಹೋಲಿಕೆಯಾಗುತ್ತವೆ.

೪. ಕೆಲವು ರಾಯಚೂರಿನ ವಿಶಿಷ್ಟ ಪ್ರಕಾರಗಳಿಗೆ ಹೋಲಿಕೆಯಾಗುತ್ತವೆ ಎಂಬುದನ್ನು ಖಚಿತಪಡಿಸಿದರು.

ಪುರಾತತ್ವ ಇಲಾಖೆಯು ೨೦೦೩-೦೪ರಲ್ಲಿ ಇಲ್ಲಿರುವ ಪ್ರದೇಶದಲ್ಲಿ ಒಂದು ವಸತಿನೆಲೆಯನ್ನು ಸಣ್ಣ ಪ್ರಮಾಣದಲ್ಲಿ ಉತ್ಖನನ ಪ್ರಕ್ರಿಯೆಗೆ ಒಳಪಡಿಸಿರುವುದು.[೧೪] ಸ್ಥಳೀಯವಾಗಿ 'ದುರ್ಗದ ದಡಿ' ಎಂದು ಕರೆಯುವ ಬಿಳಿ-ಬೂದು ವರ್ಣದ ಕಲ್ಲಿನ ಬೆಟ್ಟದ ಮೇಲೆ ಸುಮಾರು ೧.೧/೨ ಕಿ. ಮೀ ಉದ್ದಗಲದಷ್ಟು ವಿಸ್ತಾರವಾದ ಸಮತಟ್ಟಿನ ಪ್ರದೇಶದಲ್ಲಿ ಮೂರು ಸ್ಥಳಗಳಲ್ಲಿ ೪೪೦ಕ್ಕೂ ಅಧಿಕ ಬೃಹತ್ ಶಿಲಾ ಸಮಾಧಿಗಳಿವೆ. ಸ್ಥಳಿಯರು ಈ ಕಲ್ಮನೆಗಳನ್ನು ಮೋರಿಯರ ಮನೆಗಳೆಂದು ಕರೆಯುತ್ತಾರೆ. ಇಲ್ಲಿ ಮೂರು ಪ್ರಕಾರದ ಸಮಾಧಿಗಳನ್ನು ಕಲ್ಲುಚಪ್ಪಡಿಗಳಿಂದ ನಿರ್ಮಿಸಲಾಗಿದೆ.

ಪಶ್ಚಿಮದಿಂದ ಪರಿಗಣಿಸುವುದಾದರೆ ಪ್ರಾರಂಭದಲ್ಲಿಯೇ ಇರುವ ಸ್ಥಳದಲ್ಲಿ ಅರ್ಧ ಹುಗಿದ ವೃತ್ತಕಂಡಿ ಲಕ್ಷಣವುಳ್ಳ ಆಯತಾಕಾರದ ಶಿಲಾಸಮಾಧಿಗಳಿದ್ದರೆ, ಅದರ ಮುಂದಿನದರ ಮೇಲೆ ನೆಲದ ಮೇಲೆ ನಿರ್ಮಿಸಿದ ಪೆಟ್ಟಿಗೆ ಆಕಾರದ ಸಮಾಧಿಗಳಿವೆ. ಇದರ ಮುಂದಿನ ಸ್ಥಳದಲ್ಲಿ ನೆಲದಲ್ಲಿ ಅರ್ಧ ಹುಗಿದ ಚೌಕಾಕಾರದ ಕಂಡಿಕೋಣೆ ಸಮಾಧಿಗಳಿವೆ. ಒಂದು ಪ್ರಕಾರದ ಕಲ್ಮನೆಯನ್ನು ನೆಲದ ಮೇಲೆಯೆ ಸ್ವಸ್ತಿಕ್ ವಿನ್ಯಾಸದಲ್ಲಿ ರಚಿಸಲಾಗಿದೆ. ಇದರಲ್ಲಿ ವೃತ್ತ, ಅರ್ಧ ವೃತ್ತಾಕಾರ ಅಥವಾ

ತ್ರಿಕೋನ, ಚೌಕೋನಾಕಾರದ ದೊಡ್ಡ ಕಂಡಿ ಮಧ್ಯದಲ್ಲಿಯೋ ಅಥವಾ ಕೆಳ ಅಂಚಿನಲ್ಲಿದೆ. ಪೂರ್ವ ಅಥವಾ ಪಶ್ಚಿಮ ಬದಿಯಲ್ಲಿ ನಿಲುಸುಗಲ್ಲುಗಳು ಇದ್ದಿರಬಹುದಾದ ಸಾಧ್ಯತೆಗಳನ್ನು ಉಲ್ಲೇಖಿಸಲಾಗಿದೆ. ಕಲ್ಮನೆಯ ಸುತ್ತಲೂ ಕಲ್ಲುತುಂಡುಗಳನ್ನು ಸೇರಿಸಿ ಅದರ ಸುತ್ತಲೂ ಒಂದರ ಪಕ್ಕದಲ್ಲೊಂದರಂತೆ ಮೇಲಿನ ಅಡ್ಡ ಚಪ್ಪಡಿಗೆ ಆನಿಸಿ ದೊಡ್ಡ ಚಪ್ಪಡಿಗಳನ್ನು ನಿಲ್ಲಿಸಿರಲಾಗಿರುತ್ತದೆ. ಕೆಲವು ಸಲ ಅಪರೂಪವಾಗಿ ನಿಲ್ಲಿಸಿದ ಕಲ್ಲುಚಪ್ಪಡಿಗಳಲ್ಲಿ ಒಂದು ಕೈಯನ್ನು ಮೇಲಕ್ಕೆತ್ತಿದ ಹಾಗೇ ತೋರುವ ಮನುಷ್ಯನ ಸೂಕ್ಷ್ಮ ಸ್ವರೂಪವನ್ನು ಕಾಣಬಹುದು.

ಇದೇ ಸ್ಥಳದಲ್ಲಿ ಒಂದು ಶಿಲಾಸಮಾಧಿಯೊಂದರಲ್ಲಿ ವಿರುದ್ಧ ದಿಕ್ಕಿಗೆ ಅಡ್ಡ ಬಾಗಿದ ಎರಡು ಕೊಂಬೆಯ ದೊಡ್ಡ ನಿಲುಸುಕಲ್ಲು ಒಂದು ಶಿಲಾ ಸಮಾಧಿಗೆ ಒರಗಿ ನಿಂತಿದೆ. ಈ ನೆಲೆಯ ಸಮೀಪವಿರುವ ಬೆಟ್ಟದ ತಪ್ಪಲಿನಲ್ಲಿ ಮತ್ತು ತಳವಾರನ ಮೂಲೆ ಎಂಬ ಭಾಗದಲ್ಲಿ ಬೃಹತ್ ಶಿಲಾಸಂಸ್ಕೃತಿಯ ಜನವಾಸ್ತವ್ಯದ ನೆಲೆಗಳಿರುವುದು ಬೆಳಕಿಗೆ ಬಂದಿರುವುದನ್ನು ದಾಖಲಿಸಲಾಗಿದೆ.[೧೫] ಹಿರೇಬೆಣಕಲ್ಲು ಪ್ರದೇಶದ ಬೆಟ್ಟದ ಸಾಲುಗಳಲ್ಲಿ ಚಿತ್ರಿತ ಗವಿಗಳು, ಶಿಲಾಸಮಾಧಿಗಳು ಅಧಿಕವಾಗಿವೆ. ಅ.ಸುಂದರ, ಲಿಯೋನಾರ್ಡ್ ಮನ್, ಶರಣಬಸಪ್ಪ ಕೋಲ್ಕಾರ, ಮೋಹನ ಆರ್. ಮೊದಲಾದವರು ಇಲ್ಲಿರುವ ಗವಿವರ್ಣ ಚಿತ್ರಗಳನ್ನು ಅಧ್ಯಯನ ಮಾಡಿ ಅವುಗಳ ಮಹತ್ವವನ್ನು ವಿವರಿಸಿದ್ದಾರೆ.

### ೬.೨. ಮೃತ್ಪಾತ್ರೆಗಳು

ಬೃಹತ್ ಶಿಲಾಯುಗದ ಮಾನವನ ಜೀವನ ಕ್ರಮವನ್ನು ತಿಳಿಯಲು ಮೃತ್ಪಾತ್ರೆಗಳು ಪ್ರಮುಖ ಆಕರಗಳಾಗಿ ಕಂಡುಬರುತ್ತವೆ. ಇವುಗಳ ರಚನಾ ವಿನ್ಯಾಸದಿಂದ ಅಂದಿನ ಸಮಾಜದ ಸ್ಥಿತಿಗತಿಯನ್ನು ತಿಳಿಯಬಹುದು. ಈ ಸಂಸ್ಕೃತಿಯ ಜನರು ನಿಧಾನವಾಗಿ ತಿರುಗುವ ಚಕ್ರದ ಸಹಾಯದಿಂದ ಮೃತ್ಪಾತ್ರೆಗಳನ್ನು ತಯಾರಿಸುವ ತಂತ್ರಗಾರಿಕೆ ಅರಿತಿದ್ದರು.

**ಕಪ್ಪು ಮತ್ತು ಕೆಂಪು ವರ್ಣದ ಮೃತ್ಪಾತ್ರೆ (ಬಿ.ಆರ್.ಡ್ಬ್ಲ್ಯು)**

ಸಾಮಾನ್ಯವಾಗಿ ಕಪ್ಪು ಮತ್ತು ಕೆಂಪು ದ್ವಿವರ್ಣದ ಮೃತ್ಪಾತ್ರೆಗಳನ್ನು ಬೃಹತ್ ಶಿಲಾಯುಗದ ಮೃತ್ಪಾತ್ರೆಗಳು ಎಂದು ಗುರುತಿಸಲಾಗಿದೆ. ಇವು ಶಿಲಾತಾಮ್ರ ಯುಗದಿಂದ ಮುಂದುವರೆದ ಶ್ರೇಷ್ಠ ದರ್ಜೆಯ ಕಾಂತಿಯುತ ಮೃತ್ಪಾತ್ರೆಗಳು. ಕುಂಬಾರಿಕೆ ಸಂಬಂಧಿಸಿದ ಹೆಚ್ಚಿನ ಕೌಶಲ್ಯಗಳನ್ನು ಮಡಕೆಗಳ ತಯಾರಿಕೆಯಲ್ಲಿ ಬಳಸಲಾಗಿದೆ. ಇಂತಹ ಮೃತ್ಪಾತ್ರೆಗಳ ತಾಂತ್ರಿಕತೆ ಬಗ್ಗೆ ಶಾಸ್ತ್ರೀಯ ಅಧ್ಯಯನಗಳಾಗಿವೆ. ಕುಂಬಾರನು ತಯಾರಿಸಿದ ಹಸಿಮಣ್ಣಿನ ಮಡಕೆಯನ್ನು ಬಿಸಿಲಿನಲ್ಲಿ ಒಣಗಿಸಿ ನಂತರ ಭಟ್ಟಿಯಲ್ಲಿ ಬೋರಲು ಇಟ್ಟು ಸುಡುವುದರಿಂದ(Open air Reduction technique) ಗಾಳಿಗೆ ತೆರೆದ ಪಾತ್ರೆಯ ಬುಡದ ಹೊರಭಾಗವು ಕೆಂಪಾಗಿಯೂ ಮುಚ್ಚಿದ ಒಳಭಾಗವು ಕಪ್ಪಾಗಿರುತ್ತದೆ. ಅಲ್ಲದೆ ಒಂದು ಬಾರಿ ಭಟ್ಟಿಯಲ್ಲಿ ಸುಟ್ಟು ತಯಾರಿಸಿದ ಮಡಕೆಯ ಭಾಗಕ್ಕೆಲ್ಲಾ ಕಪ್ಪುಬಣ್ಣವನ್ನು ಲೇಪನಮಾಡಿ

ಎರಡನೆಯ ಬಾರಿ ಭಟ್ಟಿಯಲ್ಲಿ ಸುಟ್ಟಿದ್ದರಿಂದ ಕಪ್ಪು ಮತ್ತು ಕೆಂಪು ದ್ವಿವರ್ಣದ ಪಾತ್ರೆಗಳು ತಯಾರಾಗುತ್ತಿದ್ದವೆಂದು ಪುರಾತತ್ವಜ್ಞರ ಅಭಿಪ್ರಾಯವಾಗಿದೆ.

ದಿನ ಬಳಕೆಯ ಗೃಹೋಪಯೋಗಿ ಮಡಕೆಗಳು ಚಿಕ್ಕ ಮತ್ತು ಮಧ್ಯಮ ಗಾತ್ರದ ಮಡಕೆಗಳು, ಕುಂಭಗಳು, ಮಗಿಗಳು, ಮುಚ್ಚಳಗಳು, ಅಗಲವಾದ ತಟ್ಟೆಗಳು, ಉಂಗುರಾಕಾರದ ಅಡ್ಡಣಿಗೆಗಳು ಮೊದಲಾದವುಗಳನ್ನು ಚಕ್ರದ ಸಹಾಯದಿಂದ ತಯಾರಿಸಲಾಗುತ್ತಿತ್ತು. ದೊಡ್ಡದಾದ ಗುಡಾಣಗಳು, ಬಾನಿಗಳನ್ನು ಹಂತ ಹಂತವಾಗಿ ಕೈಯಿಂದ ಮಾಡಲಾಗುತ್ತಿತ್ತು. ಈ ರೀತಿಯ ಮಡಕೆಗಳು(ಮೃತ್ಪಾತ್ರೆಗಳು) ಅಧ್ಯಯನ ಪ್ರದೇಶದ ವಿವಿಧ ನೆಲೆಗಳಲ್ಲಿ ಕಂಡುಬಂದಿವೆ. ಕಾಕುಬಾಳು, ಕುರುಗೋಡು, ತೆಕ್ಕಲಕೋಟೆ, ಮಾಳೇಹಳ್ಳಿ, ಕಲ್ಲಹಳ್ಳಿ, ಸುಣ್ಣಮರಡಿ, ಕೊಪ್ಪಳ, ಆನೆಗುಂದಿ ಮೊದಲಾದ ನೆಲೆಗಳಲ್ಲಿ ಇಂಥ ಮಡಕೆಗಳು ಸಾಕಷ್ಟು ಪ್ರಮಾಣದಲ್ಲಿ ದೊರಕಿರುವುದನ್ನು ಕಾಣುತ್ತೇವೆ.

ದಕ್ಷಿಣ ಭಾರತದ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳಲ್ಲಿ ದೊರೆತ ಕಪ್ಪು ಬಣ್ಣದ ಮಡಕೆಗಳನ್ನು ಉತ್ತರ ಭಾರತದಲ್ಲಿ ದೊರೆತ ಈ ಸಂಸ್ಕೃತಿಯ ಕಪ್ಪು ಬಣ್ಣದ ಮಡಕೆಗಳಿಗೆ ಹೋಲಿಕೆ ಮಾಡಿದ್ದು ಅವುಗಳನ್ನು ಸುಲಭವಾಗಿ ಪ್ರತ್ಯೇಕಿಸಬಹುದಾಗಿದೆ. ತುಂಗಾಭದ್ರಾ ನದಿ ಪ್ರದೇಶದಲ್ಲಿ ಕಪ್ಪು-ಕೆಂಪು ವರ್ಣದ ಮಡಿಕೆಗಳಲ್ಲದೇ ಬಿಳಿವರ್ಣದ ಚಿತ್ರಗಳಿವೆ.[೧೬] ಈ ರೀತಿಯ ಮಡಿಕೆಗಳು ಮೂಲತಃ ಶಿಲಾತಾಮ್ರಯುಗದಿಂದ ಆರಂಭವಾಗಿ ಬೃಹತ್ ಶಿಲಾಸಂಸ್ಕೃತಿಯಲ್ಲಿ ಹೆಚ್ಚು ವೈವಿಧ್ಯತೆಯನ್ನು ಪಡೆದವು. ನಂತರ ಈ ಕಪ್ಪು-ಕೆಂಪು ದ್ವಿವರ್ಣದ ಮಡಕೆಗಳು ವಿಶಿಷ್ಟ ಅಲಂಕಾರವನ್ನು ಪಡೆದು ಆದಿ ಇತಿಹಾಸ ಕಾಲದಲ್ಲಿಯು ಮುಂದುವರೆದಿವೆಯೆಂದು ಅಭಿಪ್ರಾಯಿಸಬಹುದು.

**ಕಪ್ಪುವರ್ಣದ ಮೃತ್ಪಾತ್ರೆಗಳು(ಬಿ.ಡ್ಲ್ಯೂ)**

ಬೃಹತ್ ಶಿಲಾಯುಗದ ಸ್ಮಶಾನ ನೆಲೆಗಳಲ್ಲಿ ವಿಶೇಷವಾಗಿ ಕಪ್ಪುವರ್ಣದ ಮೃತ್ಪಾತ್ರೆಗಳು ದೊರಕುತ್ತವೆ. ಈ ಮಾದರಿಯ ಮಡಕೆಗಳನ್ನು ತಿರುಗುವ ಚಕ್ರದಿಂದ ತಯಾರಿಸಲಾಗಿದೆ. ಸುಡುವ ಮೊದಲು ತೆಳ್ಳನೆಯ ಲೇಪನವನ್ನು ನೀಡಿ ನಿಯಂತ್ರಿತ ಗಾಳಿಯಾಡುವಿಕೆ ಕ್ರಮಗಳಲ್ಲಿ ಸುಟ್ಟಿದ್ದರಿಂದ ಪಾತ್ರೆಗಳ ಹೊರಮೈಗಳು ಕಪ್ಪಾಗಿರುತ್ತವೆ. ಈ ಬಗೆಯ ಮಡಕೆಗಳಲ್ಲಿ ಬೋಗಣಿ, ಲೋಟ, ಬಟ್ಟಲುಗಳು, ಹಿಡಿಯುಳ್ಳ ಶಂಕುವಿನಾಕಾರದ ಮುಚ್ಚಳಗಳು ಪ್ರಮುಖವಾಗಿವೆ. ಅಧ್ಯಯನ ಪ್ರದೇಶದಲ್ಲಿ ಇಂತಹ ಮೃತ್ಪಾತ್ರೆಗಳು ಕುಡುತಿನಿ, ಕುರುಗೋಡು, ಸಂಗನಕಲ್ಲು, ತೆಕ್ಕಲಕೋಟೆ, ಹಂಪಸಾಗರ, ಅಲ್ಲಿಪುರ, ಹಾಲಸಾಗರ, ತಿಪ್ಪನಾಳ, ಗುಡೂರು, ಜೀರಾಳ್, ಆಗೋಲಿ, ಹಿರೇಬೆಣಕಲ್ಲು ಮೊದಲಾದ ನೆಲೆಗಳಲ್ಲಿ ಶೋಧವಾಗಿವೆ.[೧೭]

**ಕೆಂಪು ವರ್ಣದ ಮೃತ್ಪಾತ್ರೆಗಳು (ಆರ್.ಡ್ಲ್ಯೂ)**

ಕೆಂಪು ವರ್ಣದ ಮೃತ್ಪಾತ್ರೆಗಳನ್ನು ಬಣ್ಣದ ಲೇಪನ ಕೊಟ್ಟು ಹೆಚ್ಚು ಉಷ್ಣತೆಯಲ್ಲಿ ಸುಡಲಾಗಿರುವುದರಿಂದ ಕೆಂಪು ವರ್ಣದ ಹೊಳಪುಳ್ಳ ಮೃತ್ಪಾತ್ರೆಗಳು ಕಡುಗೆಂಪು ಮತ್ತು

ತೆಲುಗೆಂಪಿನವರೆಗೆ ವಿವಿಧ ವರ್ಣಗಳಾಗಿ ರೂಪಗೊಂಡಿರುವುದು ತಿಳಿದುಬರುತ್ತದೆ. ಬೃಹತ್ ಶಿಲಾಯುಗದ ಆಕೃತಿಗಳೆಲ್ಲಾ ಈ ಹಂತದಲ್ಲಿ ಮುಂದುವರೆದಿದ್ದು ಚಕ್ರದಿಂದ ತಯಾರಿಸಿದ ಚಿಕ್ಕ ಹಾಗೂ ಮಧ್ಯಮ ಗಾತ್ರದ ಕುಂಭಗಳು, ಕುಡಿಕೆಗಳು, ಎತ್ತರದ ಜಾಡಿಗಳು, ನೀರಿನ ಬಾನಿಗಳಲ್ಲದೆ, ಧಾನ್ಯ ಸಂಗ್ರಹಣ ಪಾತ್ರೆಗಳು ಪ್ರಮುಖವಾದವು. ಅಧ್ಯಯನ ಪ್ರದೇಶದಲ್ಲಿರುವ ಕಪ್ಪುಗಲ್ಲು, ತೆಕ್ಕಲಕೋಟೆ, ಕುರುಗೋಡು, ಹಂಪಸಾಗರ, ರಾಜವಾಳ, ದಶಮಾಪುರ, ಕುಮತಿ, ಕಲ್ಲಹಳ್ಳಿ, ಪೇಟೆನಹಳ್ಳಿ, ಚಿಕ್ಕಬೆಣಕಲ್ಲು, ಆಗೋಲಿ, ಗಡ್ಡಿ ಎಂಬ ಗ್ರಾಮ ಪರಿಸರಗಳಲ್ಲಿ ಈ ಸಂಸ್ಕೃತಿಯ ಕೆಂಪುವರ್ಣದ ಮೃತ್ಪಾತ್ರೆಗಳು ದೊರೆತಿರುವುದನ್ನು ಗಮನಿಸಬಹುದು. ಅಲ್ಲದೆ ಗುಡೇಕೋಟೆಯಲ್ಲಿ ಈ ಸಂಸ್ಕೃತಿಯ ಕಪ್ಪು-ಕೆಂಪು ವರ್ಣದ ಪಾತ್ರೆಗಳು ಹಾಗೂ ಕೆಂಪು ವರ್ಣದ ಮಡಕೆಗಳು ದೊರಕಿದ್ದು ಅವುಗಳಲ್ಲಿ ಹೋರಿಯ ಕೊಂಬಿನ ಆಕೃತಿ ಮತ್ತು ವೃತ್ತಾಕಾರದ ಮಕ್ಕಳ ಆಟಿಕೆಗಳು ವಿಶೇಷವಾಗಿ ಕಂಡುಬಂದಿವೆ.[೧೮] ವೆಂಕಟಾಪುರದ ಬೂದಿದಿನ್ನೆ ನೆಲೆಯಲ್ಲಿ ಕೆಂಪು ವರ್ಣದ ಮೃತ್ಪಾತ್ರೆಗಳ ಜೊತೆಯಲ್ಲಿ ಕೆಂಪು ವರ್ಣದ ಮಣ್ಣಿನ ಗೊಂಬೆ ದೊರತಿರುವುದು ವಿಶೇಷ.

**೬.೩. ಕಬ್ಬಿಣದ ವಸ್ತು-ಅವಶೇಷಗಳು**

ಮಾನವನ ಇತಿಹಾಸದಲ್ಲಿ ಕಬ್ಬಿಣದ ಆವಿಷ್ಕಾರ ಅತ್ಯಂತ ಮಹತ್ವವಾದುದು. ಪ್ರಪಂಚದಾದ್ಯಂತ ಪ್ರಕೃತಿಯಲ್ಲಿ ಕಬ್ಬಿಣದ ಅದಿರು ಹೇರಳವಾಗಿ ದೊರೆಯುತ್ತದೆ. ಈ ಕಾರಣದಿಂದಾಗಿ ಇತರ ಲೋಹಗಳಿಗಿಂತಲೂ ಹೆಚ್ಚು ಕಬ್ಬಿಣದ ಉತ್ಪಾದನೆಯಾಗುತ್ತದೆ. ಅದಿರಿನಿಂದ ಕಬ್ಬಿಣವನ್ನು ತಯಾರಿಸುವ ಕಾರ್ಯ ಪ್ರಾರಂಭವಾದಂದಿನಿಂದ ಮಾನವನ ಅಥವಾ ನಾಗರೀತೆಯ ಜನಜೀವನದಲ್ಲಿ ಒಂದು ಕ್ರಾಂತಿಕಾರಿ ಬದಲಾವಣೆಯಾಯಿತು. ಕೃಷಿಚಟುವಟಿಕೆಗಳಲ್ಲೂ ಹಲವು ಸುಧಾರಣೆಗಳಾದವು. ಈ ಹಂತದಲ್ಲಿ ಜನರು ಒಂದು ಕಡೆ ನೆಲೆ ನಿಂತು ವಾಸಿಸಲು ಮುಂದಾದರು. ವೈಜ್ಞಾನಿಕವಾಗಿ ಬೆಳವಣಿಗೆ ಹೊಂದುತ್ತ ಅದಿರಿನಿಂದ ಲೋಹವನ್ನು ಬೇರ್ಪಡಿಸುವ ತಂತ್ರವನ್ನು ಕಲಿತುಕೊಂಡರು. ಈ ತಂತ್ರ ನಂತರದ ಕಬ್ಬಿಣ ಉತ್ಪಾದನೆಗೆ ದಾರಿ ಮಾಡಿಕೊಟ್ಟಿತು. ಕಬ್ಬಿಣದಿಂದ ಹಲವು ಕೃಷಿ ಉಪಕರಣಗಳನ್ನು ತಯಾರಿಸಿದರು. ಇದರಿಂದ ಶಿಲೆಯ ಬಳಕೆ ಕಡಿಮೆಯಾಗುತ್ತಾ ಬಂತು. ಭಾರತದಲ್ಲಿ ಕಬ್ಬಿಣದ ಬಳಕೆ ಆರಂಭವಾದಾಗ ಶಿಲೆಯಿಂದ ರಚನೆಯಾಗುವ ಆಯುಧಗಳ ತಯಾರಿಕೆಯನ್ನು ಪೂರ್ಣ ಪ್ರಮಾಣದಲ್ಲಿ ನಿಲ್ಲಿಸಲಾಯಿತು. ನಂತರ ಕಾಲದಲ್ಲಿ ಲೋಹದ ಬಳಕೆಯು ದೊಡ್ಡ ದೊಡ್ಡ ಬಂಡೆಗಳಿಂದ ಸುಲಭವಾಗಿ ಕಲ್ಲುಚಪ್ಪಡಿಗಳನ್ನೆಬ್ಬಿಸಿ ಅವುಗಳಿಂದ ಸತ್ತವರಿಗಾಗಿ ಸಮಾಧಿಗಳನ್ನು ಕಟ್ಟಲು ಹೆಚ್ಚಿನ ಪ್ರಮಾಣದಲ್ಲಿ ಅನುಕೂಲಗಳನ್ನು ಸೃಷ್ಟಿಸಿತು. ಹಾಗಾಗಿ ಈ ಯುಗವನ್ನು 'ಕಬ್ಬಿಣಯುಗ ಸಂಸ್ಕೃತಿ' ಎಂದು ಕರೆಯಲಾಯಿತು. ಕರ್ನಾಟಕದಲ್ಲಿ ಗೌಡಗೇರಿ, ಉಣಚೇರಿ, ರಾಜೂರು, ಹಳ್ಳೂರು, ಕೊಮರನಹಳ್ಳಿ, ಹಳಿಂಗಳಿ ಹಾಗೂ ಹಿಂಗಣಿಗಳಲ್ಲಿ ದೊರೆತಿರುವ ಕಬ್ಬಿಣದ(ಲೋಹದ) ವಸ್ತುಗಳನ್ನು ವೈಜ್ಞಾನಿಕ ಅಧ್ಯಯನಕ್ಕೆ ಒಳಪಡಿಸಿ ಅವುಗಳ ತಯಾರಿಕೆಗೆ ಸಂಬಂಧಿಸಿದ ತಾಂತ್ರಿಕ ವಿಶ್ಲೇಷಣೆ ಮಾಡಲಾಗಿದೆ.[೧೯]

ಪ್ರಾಚೀನ ಕಾಲದಲ್ಲಿ ಕುಲುಮೆಗಳನ್ನು ೩ ರಿಂದ ೪ ಅಡಿ ವ್ಯಾಸದ ಅಷ್ಟೇ ಎತ್ತರವಿದ್ದ ಕುಲುಮೆಗಳು ಬಳಕೆಯಲ್ಲಿದ್ದವು ಎಂಬುದನ್ನು ವರದಿ ಮಾಡಲಾಗಿದೆ. ಕುಲುಮೆಗಳನ್ನು ಜೇಡಿಮಣ್ಣಿನಿಂದ ಕೊಳವೆಗಳನ್ನು ತಯಾರಿಸಿ ಅದಕ್ಕೆ ತಿದ್ದಿಗಳನ್ನು ಜೋಡಿಸಲಾಗುತ್ತಿತ್ತು. ಸಾಮಾನ್ಯವಾಗಿ ಕುಲುಮೆಗಳು ೪ ರಿಂದ ೫ ಗಂಟೆಗಳ ಕೆಲಸ ನಿರ್ವಹಿಸುತ್ತಿದ್ದವು. ತಿದ್ದಿಯಲ್ಲಿ ಒತ್ತಿದ ಗಾಳಿ ಕಬ್ಬಿಣ ಕರಗಲು ಬೇಕಾದ ಉಷ್ಣತೆಯನ್ನು ಕಾಯ್ದುಕೊಳ್ಳಲು ನೆರವಾಗುತ್ತಿತ್ತು[20] ಹಾಗೂ ಇದ್ದಿಲನ್ನು ಶಾಖದ ಮೂಲವಾಗಿ ಬಳಸುತ್ತಿದ್ದರೆಂಬುದು ವಿವಿಧ ಅಧ್ಯಯನಗಳಿಂದ ತಿಳಿದುಬರುತ್ತದೆ.

**ಕುಲುಮೆಯಿಂದ ಕಬ್ಬಿಣ ಪಡೆಯುವ ವಿಧಾನ**

ಬೆಟ್ಟಗುಡ್ಡಗಳಿಂದ ಸಂಗ್ರಹಿಸಿದ ಅದಿರನ್ನು ತಂದು ಆರಿಸಿ ಜಾಲಾಡಿ ಲೋಹದ ಖನಿಜವುಳ್ಳ ಅದಿರನ್ನು ಸಾಂದ್ರೀಕರಿಸುತ್ತಿದ್ದರು. ಆ ಮೇಲೆ ಸಿಕ್ಕಲೋಹದ ಅಂಶವುಳ್ಳ ಅದಿರನ್ನು ಕುಲುಮೆಗೆ ಸ್ಥಳಾಂತರ ಮಾಡುತ್ತಿದ್ದರು. ಕೆಳಭಾಗದಿಂದ ಇಂಧನವಾಗಿ ಇದ್ದಿಲನ್ನು ತುಂಬಿ, ಕೆಂಡ ಮಾಡಿ ಕುಲುಮೆಯನ್ನು ಸಿದ್ದಪಡಿಸಿಕೊಳ್ಳುತ್ತಿದ್ದರು. ಅನಂತರ ಪದರ ಪದರವಾಗಿ ಅದಿರು ಮತ್ತು ಇದ್ದಿಲನ್ನು ತುಂಬುತ್ತಿದ್ದರು. ಕುಲುಮೆಗೆ ಅಳವಡಿಸಿದ ತಿದ್ದಿಗಳನ್ನು ಸತತವಾಗಿ ಒತ್ತಿ ಒತ್ತಡದ ಗಾಳಿಯನ್ನು ಕುಲುಮೆಯೊಳಗೆ ಬಿಡುತ್ತಿದ್ದರು. ಇದರಿಂದ ಹೆಚ್ಚಿನ ಶಾಖ ದೊರೆತು ಲೋಹವು ಅದಿರಿನಿಂದ ಬೇರ್ಪಟ್ಟು ದ್ರುವೀಕರಣಗೊಳ್ಳುತ್ತಿತ್ತು. ಹಗುರವಾದ ಲೋಹವನ್ನು ಕುಲುಮೆಯ ಕೆಳಭಾಗದಲ್ಲಿ ಮುಚ್ಚಿದ್ದ ಕಂಡಿಯನ್ನು ತೆಗೆಯುವುದರ ಮೂಲಕ ಹೊರಗೆ ಬಿಡುತ್ತಿದ್ದರು. ಹೀಗೆ ತಯಾರಾದ ಕಬ್ಬಿಣವು ಅಶುದ್ಧವಾಗಿತ್ತು. ಈ ಅಶುದ್ಧ ಕಬ್ಬಿಣವನ್ನು ಮತ್ತೆ ಕರಗಿಸಿದಾಗ ಶುದ್ಧರೂಪಕ್ಕೆ ಬರುತ್ತಿತ್ತು. ತದ ನಂತರ ಅದನ್ನು ಅಚ್ಚುಗಳಿಗೆ ಹಾಕಿ ತಮಗೆ ಬೇಕಾದ ಆಕೃತಿಗಳನ್ನು ಪಡೆಯುತ್ತಿದ್ದರಬೇಕು. ಹೀಗೆ ಅಶುದ್ದವಾಗಿ ಉಳಿದ ದ್ರವರೂಪದ ಲೋಹವೇ ಕಿಟ್ಟವಾಗಿ ಪರಿಣಮಿಸಿತು. ಈ ರೀತಿಯಾಗಿ ಕಬ್ಬಿಣವನ್ನು ತಯಾರಿಸುವ ತಂತ್ರಜ್ಞಾನ ಬೃಹತ್ ಶಿಲಾಯುಗದ ವೇಳೆಗೆ ಬಳಕೆಗೆ ಬಂದಿರುವುದಲ್ಲದೇ ಎಲ್ಲ ಪ್ರದೇಶಗಳಲ್ಲಿಯು ವಿಸ್ತಾರವಾಗಿ ಹರಡಿಕೊಳ್ಳುತ್ತಾ ಹೋಯಿತು. ಇಂಥ ಚಟುವಟಿಕೆಗಳಿಗೆ ಸಾಕ್ಷಿಯಾಗಿ ಹಲವಾರು ನೆಲೆಗಳನ್ನು ಪರಿಗಣಿಸಬಹುದು.

ಕರ್ನಾಟಕದಲ್ಲಿ ಕಬ್ಬಿಣ ತಯಾರಿಸುವ ಘಟಕಗಳು ಕಬ್ಬಿಣದ ಅದಿರಿನ ನಿಕ್ಷೇಪ ಹೆಚ್ಚಿನ ಪ್ರಮಾಣದಲ್ಲಿ ಇರುವ ಸ್ಥಳಗಳಲ್ಲಿ ಕಂಡುಬಂದಿವೆ. ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ರಾಯಚೂರು, ಧಾರವಾಡ ಮುಂತಾದ ಸ್ಥಳಗಳಲ್ಲಿ ಕಬ್ಬಿಣ ತಯಾರಿಕ ಘಟಕಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದಿವೆ. ಬಳ್ಳಾರಿ ಜಿಲ್ಲೆಯ ಸಂಡೂರು ಪ್ರದೇಶವು ಪ್ರಾಚೀನ ಕಾಲದಲ್ಲಿ ಲೋಹ ತಯಾರಿಕ ಕೇಂದ್ರವಾಗಿತ್ತೆಂಬುದು ಗಮನಾರ್ಹ ಸಂಗತಿಯಾಗಿದೆ. ಕುಡುತಿನಿ ಮತ್ತು ಸಂಡೂರು ಪ್ರದೇಶವನ್ನು ಕಲಿಯುಗದಲ್ಲಿ ಲೋಹಾಚಲವೆಂದು ಕರೆಯಲಾಗುತ್ತಿತ್ತು ಎಂಬ ಐತಿಹ್ಯಗಳು ಗತಕಥನಗಳಲ್ಲಿ ದಾಖಲಾಗಿವೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬಳ್ಳಾರಿ ಜಿಲ್ಲೆಯ ಸಂಡೂರು-ಕೂಡ್ಲಿಗಿ ತಾಲ್ಲೂಕಿನ ಕೆಲವು ನೆಲೆಗಳಲ್ಲಿ ಹಾಗೂ ಕೊಪ್ಪಳ ಜಿಲ್ಲೆಯ ಗಂಗಾವತಿ-ಕುಷ್ಟಗಿ ತಾಲ್ಲೂಕಿನ ಕೆಲವು ನೆಲೆಗಳಲ್ಲಿ ಕಬ್ಬಿಣ

ತಯಾರಿಕ ಘಟಕಗಳಿರುವುದನ್ನು ಗುರುತಿಸಲಾಗಿದೆ. ಅವುಗಳಲ್ಲಿ ಹಾಲಸಾಗರ, ನಡುವಲಹಳ್ಳಿ, ತಿಮ್ಮಪ್ಪನಹಳ್ಳಿ, ಓಬಳಾಪುರ, ಚೆಕ್ಕೆಮಂಡಿ, ಶಿವಗಂಗೆ ಹಾಳೂರು, ದಿಬ್ಬದಹಳ್ಳಿ, ಕಕ್ಕುಪ್ಪಿ, ಚಿಲುಮೆಹಳ್ಳಿ, ಮಾರಮ್ಮನಹಳ್ಳಿ, ಕೆ.ರಾಯಪುರ, ವಡೇರಹಳ್ಳಿ ಮತ್ತಾಜನಹಳ್ಳಿ(ಸಂಡೂರು ತಾಲ್ಲೂಕು). ಜಾಲಿಪೆಂಟೆಗುಡ್ಡ (ಮೊಳಕಾಲ್ಮೂರು) ನೆಲೆಗಳು ಬೆಳಕಿಗೆ ಬಂದಿವೆ. ಅದೇ ರೀತಿ ಕುಷ್ಟಗಿ ತಾಲ್ಲೂಕಿನ ತಾವರಗೇರ, ಯಲಬುರ್ಗಾ ತಾಲ್ಲೂಕಿನ ಲಿಂಗನಬಂಡಿ ಮೊದಲಾದ ನೆಲೆಗಳಲ್ಲಿ ಪುರಾತನ ಕುಲುಮೆ ಅವಶೇಷಗಳು ದೊರೆತಿವೆ. ಆದರೆ ಇವುಗಳ ನಿರ್ಮಾಣದ ಕುರಿತು ಖಚಿತವಾಗಿ ತಿಳಿದು ಬಂದಿಲ್ಲ. ಹಾಗೆಯೇ ಇವುಗಳ ಲಕ್ಷಣಗಳನ್ನು ಆಧರಿಸಿಯೇ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಬಹುತೇಕ ನೆಲೆಗಳಲ್ಲಿ ಕಬ್ಬಿಣದ ಕಿಟ್ಟದ ರಾಶಿ ಮತ್ತು ಕುಲುಮೆಯ ಮೂಸೆಗಳು, ಅವಶೇಷಗಳು ಮಡಕೆ ಭಾಗಗಳು ಕರಕಲು ಮಣ್ಣಿನಲ್ಲಿ ದೊರೆತಿವೆ. ಹಾಗೂ ಕಿಟ್ಟದ ರಾಶಿಯು ಹೇರಳವಾಗಿ ಕಂಡುಬಂದಿರುವುದನ್ನು ಗಮನಿಸಿದರೆ ಕಬ್ಬಿಣವನ್ನು ಶುದ್ಧರೂಪಕ್ಕೆ ತರಲು ಸಾಕಷ್ಟು ಕಚ್ಚಾ ಅದಿರನ್ನು ಸಂಗ್ರಹಿಸಿ ತಯಾರಿಸುತ್ತಿದ್ದರೆಂದು ತೋರುತ್ತದೆ.

ಬಳ್ಳಾರಿ ಜಿಲ್ಲಾ ಪರಿಸರದಲ್ಲಿ ಕಂಡುಬರುವ ಬೆಟ್ಟಗುಡ್ಡಗಳಲ್ಲಿ ಅದರಲ್ಲೂ ಸಂಡೂರು–ಹೊಸಪೇಟೆ ಗುಡ್ಡಗಳಲ್ಲಿ ಕಬ್ಬಿಣದ ಅದಿರಿನ ನಿಕ್ಷೇಪಗಳು ಹೇರಳವಾಗಿ ಕಂಡುಬರುವುದರಿಂದ ಅಂದಿನ ಜನರು ಅದರ ಉಪಯೋಗ ಕಂಡುಕೊಂಡಿದ್ದರೆಂದು ಹೇಳಬಹುದು. ಬೃಹತ್ ಶಿಲಾಯುಗದ ಜನರು ಕಬ್ಬಿಣ ತಯಾರಿಸುವ ಅಥವಾ ಲೋಹದ ಉದ್ಯಮದಲ್ಲಿ ಪರಿಣಿತಿ ಹೊಂದಿದ ಜನಸಮುದಾಯವಾಗಿತ್ತು ಎಂಬುದು ಗಮನಾರ್ಹ ಸಂಗತಿಯಾಗಿದೆ. ಇದಕ್ಕೆ ಪೂರಕವೆನ್ನುವಂತೆ ಇಂದಿಗೂ ಸಹ ಕಬ್ಬಿಣದ ಕೆಲಸ ಮಾಡುವವರನ್ನು ಕಮ್ಮಾರರೆಂದು ಕರೆಯಲಾಗುತ್ತದೆ. ಇಲ್ಲಿ ತಯಾರಿಸಿದ ಕಬ್ಬಿಣವನ್ನು ಬೇರೆ ಕಡೆ ಸಾಗಿಸುತ್ತಿದ್ದಿರಬೇಕು ಇಲ್ಲವೆ ಕಬ್ಬಿಣದ ಆಯುಧೋಪಕರಣಗಳ ಬಳಕೆ ಅವಶ್ಯಕವಾಗಿತ್ತೆಂದು ತೋರುತ್ತದೆ. ಬಳ್ಳಾರಿ ಸುತ್ತಮುತ್ತಲಿನ ಬೆಟ್ಟಗುಡ್ಡಗಳಲ್ಲಿ ಹೇರಳವಾಗಿ ದೊರಕುವ ಕಬ್ಬಿಣದ ಅದಿರಿನ ನಿಕ್ಷೇಪಗಳಿಂದ ಸಂಗ್ರಹಿಸಿದ ಕಚ್ಚಾ ಅದಿರಿನಿಂದ ಕಬ್ಬಿಣ ಉತ್ಪಾದನೆ ಮಾಡಲಾಗುತಿತ್ತೆಂಬ ಸಂಶಯ ಮೂಡುತ್ತದೆ. ಇಲ್ಲವೆ ಇಲ್ಲಿನ ಬೆಟ್ಟಗಳಲ್ಲಿ ಅಲ್ಪ ಪ್ರಮಾಣದಲ್ಲಿ ದೊರೆಯುವ ಕಚ್ಚಾ ಅದಿರನ್ನು ಸಂಗ್ರಹಿಸಿ ಕಬ್ಬಿಣದ ಆಯುಧಗಳನ್ನು ತಯಾರಿಸಿರುವ ಸಾಧ್ಯತೆಯಿದೆ. ಅಧ್ಯಯನ ಪ್ರದೇಶದಲ್ಲಿ ಕಂಡುಬರುವ ಕುಲುಮೆ ತಯಾರಿಕ ಘಟಕದ ನೆಲೆಗಳು ಬ್ರಹ್ಮಗಿರಿ, ಚಂದ್ರವಳ್ಳಿ, ಸಂಗನಕಲ್ಲು, ಹಿರೇಬೆಣಕಲ್ಲು, ಮಸ್ಕಿ, ಸನ್ನತಿ ಸುತ್ತಮುತ್ತಲಿನ ಪ್ರಾಗೈತಿಹಾಸಿಕ ನೆಲೆಗಳ ಸಮೀಪದಲ್ಲಿ ನೆಲೆಗೊಂಡಿರುವುದರಿಂದ ಇಲ್ಲಿ ತಯಾರಾದ ಕಬ್ಬಿಣದ ಆಯುಧಗಳನ್ನು ಇಂತಹ ಪಟ್ಟಣಗಳಿಗೆ ಪೂರೈಕೆ ಮಾಡಲಾಗುತ್ತಿತ್ತು ಎಂಬುದನ್ನು ಪರೋಕ್ಷವಾಗಿ ಅರಿಯಬಹುದಾಗಿದೆ. ಈ ಕುರಿತು ಅಧ್ಯಯನ ಮಾಡಿರುವ ಜಯಣ್ಣ ಉಲ್ಲಾನಹಳ್ಳಿಯವರು ಕೂಡ ಇದೇ ಅಭಿಪ್ರಾಯವನ್ನು ತಮ್ಮ ಸಂಶೋಧನ ಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ.[೨೧]

**ಕಬ್ಬಿಣದ ವಸ್ತುಗಳು**

ಬೃಹತ್ ಶಿಲಾಯುಗದ ಜನರು ಕಬ್ಬಿಣ ಮತ್ತು ಉಕ್ಕಿನ ವಿವಿಧ ಗೃಹೋಪಯೋಗಿ ವಸ್ತುಗಳನ್ನು ಬಳಸುತ್ತಿದ್ದ ಕುರುಹುಗಳು ದೊರಕಿವೆ. ವಸ್ತುಗಳಾದ ಮೂರು ಕಾಲಿನ ಅಡ್ಡಣಿಗ, ಕೈ ನೇಗಿಲ ಕುಳ, ಕುಡಗೋಲು, ಚಾಕು ಬಳಸುತ್ತಿದ್ದರು. ಜೊತೆಗೆ ಆಯುಧಗಳಾದ ಕತ್ತಿ, ಭಲ್ಲೆ, ಮುಳ್ಳು ಚಂಡಿನ ಈಟಿ, ಅಗಲ ಬಾಯಿಯ ಉದ್ದನೆಯ ಚಪ್ಪಟೆ ಕೊಡಲಿ, ಬಿಲ್ಲು ಮೊದಲಾದವು ಸಾಮಾನ್ಯವಾಗಿವೆ. ಬಾಣದ ಮೊನೆಗಳು ವಿವಿಧ ಪ್ರಕಾರದವಾಗಿದ್ದವು. ಒಂದು ಪ್ರಕಾರದ ಮೊನೆಯಲ್ಲಿ ಭುಜದ ಎರಡು ಮೂಲೆಗಳು ಮುಳ್ಳಿನಂತೆ ಮುಂಚಾಚಿರುತ್ತವೆ. ಕಾರ್ಯಕ್ಷಮತೆಯಲ್ಲಿ ತುಂಬಾ ಪರಿಣಾಮಕಾರಿಯಾಗಿದ್ದವು. ನಾಟಿದ ಬಾಣವನ್ನು ಕೀಳಲು ಪ್ರಯತ್ನಿಸಿದರೆ ಅವು ಮಾಂಸವನ್ನು ಸಹಿತ ಕಿತ್ತುಕೊಂಡು ಮಾರಣಾಂತಿಕವಾಗುವಂತೆ ಉಪಕರಣಗಳನ್ನು ಸಿದ್ದಪಡಿಸುತ್ತಿದ್ದರು. ಚಿತ್ರದುರ್ಗ ಜಿಲ್ಲೆ ಕೂನಬೇವು ನೆಲೆಯಲ್ಲಿ ಕಬ್ಬಿಣದ ಕೊಡಲಿ ಮತ್ತು ಖಡ್ಗಗಳು ದೊರೆತಿವೆ(ಇವು ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದಲ್ಲಿ ಸಂರಕ್ಷಿಸಲ್ಪಟ್ಟಿವೆ). ಅಧ್ಯಯನ ಪ್ರದೇಶದಲ್ಲಿರುವ ಬಳ್ಳಾರಿ ಜಿಲ್ಲೆಯ ಕುರುಗೋಡು ನೆಲೆಯ ಉತ್ಖನನದಲ್ಲಿ ಕಬ್ಬಿಣದ ಉಪಕರಣಗಳಾದ ಉಳಿಗಳು(chisels)ದೊರೆತಿವೆ.[೨೨] ತುಂಗಭದ್ರಾ ನದಿ ದಡದಲ್ಲಿನ ಕಡೇಬಾಗಿಲು ನೆಲೆಯ ಉತ್ಖನನದಲ್ಲಿ ಒಟ್ಟು ೩೭ ಲೋಹದ ವಸ್ತುಗಳು ದೊರೆತಿವೆ. ಅವುಗಳಲ್ಲಿ ೩೨ ಕಬ್ಬಿಣದ ವಸ್ತುಗಳಾಗಿದ್ದು, ಅವುಗಳು ಮಸ್ಕಿ, ಬ್ರಹ್ಮಗಿರಿಯಲ್ಲಿ ದೊರೆತ ಉಪಕರಣಗಳನ್ನು ಹೋಲುತ್ತವೆ. ಎರಡೂ ಜಿಲ್ಲಾ ಪ್ರದೇಶಗಳಲ್ಲಿ ದೊರೆತ ವಸ್ತುಗಳ ಸಾಮ್ಯತೆಯಿಂದ ಅಂದಿನ ವಿವಿಧ ಪ್ರದೇಶದ ಜನರು ಸಾಮಾಜಿಕ ಮತ್ತು ಆರ್ಥಿಕವಾಗಿ ಪರಸ್ಪರ ಸಂಬಂಧವನ್ನು ಹೊಂದಿದ್ದರು ಎಂಬುದು ದೃಢವಾಗುತ್ತದೆ.

ಹಿರೇಬೆಣಕಲ್ಲಿನ ವರ್ಣಚಿತ್ರಗಳಲ್ಲಿ ಕಬ್ಬಿಣದ ಆಯುಧ ಹಿಡಿದಿರುವ ಮನುಷ್ಯ ಚಿತ್ರಗಳಿವೆ ಹಾಗೂ ತುಂಗಾಭದ್ರ ನದಿ ಪರಿಸರದಲ್ಲಿ ಈವರೆಗೆ ಒಟ್ಟು ೧೩೪ ಲೋಹದ ವಸ್ತುಗಳು ಮತ್ತು ಅದರಲ್ಲಿ ೮೯ ಕಬ್ಬಿಣದ ವಸ್ತುಗಳಿದ್ದು ಅವು ಉಳಿ, ಮೊಳೆ, ಕೊಕ್ಕೆ ಮೊದಲಾದವು. 'z' ಆಕಾರದ ಕಬ್ಬಿಣದ ವಸ್ತುಗಳು ವಸತಿ ನೆಲೆಗಳಲ್ಲಿ ಉತ್ಖನನದ ಫಲಿತಾಂಶದಲ್ಲಿ ಕಂಡುಬಂದಿವೆ.[೨೩] ಈ ಪ್ರದೇಶದಲ್ಲಿನ ಸಮಾಧಿಗಳ ಉತ್ಖನನದಲ್ಲಿಯೂ ಸಹ ಕಬ್ಬಿಣದ ಉಪಕರಣಗಳು ದೊರೆತಿರುವ ವರದಿಗಳುಂಟು.

**೬.೪. ಕಲಾತ್ಮಕ ಅವಶೇಷಗಳು (ಕುರುಹುಗಳು)**

ಬೃಹತ್ ಶಿಲಾಯುಗದ ಮಾನವನ ಜೀವನ ಸಂಸ್ಕೃತಿಯನ್ನು ಅರಿಯಲು ಕಲಾತ್ಮಕ ಕುರುಹುಗಳು ಅಥವಾ ಅವಶೇಷಗಳು ಪ್ರಮುಖ ಆಕರಗಳಾಗಿ ಮಾಹಿತಿಯನ್ನು ಒದಗಿಸುತ್ತವೆ. ಇಂತಹ ಆಕರಗಳಲ್ಲಿ ಬಂಡೆ ಚಿತ್ರಗಳು ಅದರಲ್ಲೂ ವರ್ಣಚಿತ್ರಗಳು, ರೇಖಾಚಿತ್ರಗಳು, ಕುಟ್ಟುಚಿತ್ರಗಳು, ಸುಡಾವೆ ಮಣ್ಣಿನ ಗೊಂಬೆಗಳು, ಅಲಂಕೃತ ಮಣಿಗಳು ಮುಖ್ಯವಾದವು. ಪ್ರಾಕ್ಚಾರಿತ್ರಿಕ ಕಾಲದಲ್ಲಿ ಮಾನವ ನಿಸರ್ಗ ನಿರ್ಮಿತ ಬೆಟ್ಟಗುಡ್ಡಗಳು, ಗವಿ ಕಲ್ಲಾಸರೆಗಳಲ್ಲಿ ತಾತ್ಕಾಲಿಕವಾಗಿ ಇಲ್ಲವೆ ಶಾಶ್ವತವಾಗಿ ಆಶ್ರಯ

ಪಡೆದಿದ್ದ ನೆಲೆಗಳಲ್ಲಿನ ಗವಿ ಕಲ್ಲಾಸರೆಗಳ ಗೋಡೆಗಳಲ್ಲೊ ಅಥವಾ ಛಾವಣಿಗಳಲ್ಲೊ, ಪ್ರಶಸ್ತವೆನಿಸಿದ ಕಲ್ಲುಬಂಡೆಗಳ ಮೇಲೆ ತನ್ನ ಭಾವನೆ ಮತ್ತು ಅನುಭವಗಳನ್ನು ಬೇರೆಯವರಿಗೆ ತಿಳಿಸುವ ಸಲುವಾಗಿ ಚಿತ್ರದ ಮೂಲಕ ಅಭಿವ್ಯಕ್ತಗೊಳಿಸಿದ. ಇಂಥ ಚಟುವಟಿಕೆಗಳೆ ದಿನಕಳೆದಂತೆ ಚಿತ್ರಕಲೆಯ ಪರಂಪರೆಯಾಗಿ ಅನಾವರಣಗೊಂಡಿತು. ಪ್ರಾರಂಭದಲ್ಲಿ ಆಕಸ್ಮಿಕವಾಗಿ ಇಲ್ಲವೆ ಉದ್ದೇಶಿತವಾಗಿ ರಚಿಸಿದ ಚಿತ್ರಗಳು ಪ್ರಾಗಿತಿಹಾಸಿಕ ಕಲೆಗೆ ನಿದರ್ಶನಗಳಾದವು. ಈ ಚಿತ್ರಗಳ ಸಹಾಯದಿಂದ ಅಂದಿನ ಮಾನವ ಜೀವನ ಸಂಸ್ಕೃತಿಯನ್ನು ತಿಳಿಯುಬಹುದು. ಆರಂಭದಲ್ಲಿ ಆಹಾರಕ್ಕಾಗಿ ಬೇಟೆಯನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡಿದ್ದ ಶಿಲಾಯುಗದ ಮಾನವ ಸ್ವಂತ ಅನುಭವ ಚಟುವಟಿಕೆಗಳನ್ನು ಚಿತ್ರಗಳ ವಿಷಯವಸ್ತುವಾಗಿಸಿಕೊಂಡನು.

ಜಗತ್ತಿನ ಹಲವು ಭಾಗಗಳಲ್ಲಿ ಇಂತಹ ಪ್ರಾಕ್ಚಾರಿತ್ರಿಕ ಕಾಲದ ಬಂಡೆ ಚಿತ್ರಗಳಿರುವ ಗವಿಗಳು, ಕಲ್ಲಾಸರೆಗಳು ಮತ್ತು ಬಯಲು ಬಂಡೆ ಚಿತ್ರಗಳು ಶೋಧವಾಗಿವೆ. ಅದರಲ್ಲೂ ಸ್ಪೇನ್, ಫ್ರಾನ್ಸ್, ಆಫ್ರಿಕಾ, ಜರ್ಮನಿ, ಇಂಗ್ಲೆಂಡ್, ರಷ್ಯಾ, ಜಪಾನ್ ಮತ್ತು ಭಾರತವನ್ನೊಳಗೊಂಡಂತೆ ಶೋಧವಾದ ಚಿತ್ರಗಳು ಈಗಾಗಲೇ ಜಗತ್ಪ್ರಸಿದ್ಧವಾಗಿವೆ. ಪ್ರಾಕ್ತನಶಾಸ್ತ್ರಜ್ಞರು ಸುಮಾರು ನೂರು ವರ್ಷಗಳಿಂದಲೂ ಇಂತಹ ಸ್ವಾರಸ್ಯಕರವಾದ ಪ್ರಾಕ್ಚಾರಿತ್ರಿಕ ವರ್ಣಚಿತ್ರಗಳನ್ನು ಶೋಧಿಸಿದ್ದಾರೆ.[೨೪] ಅಸಂಖ್ಯಾತವಾಗಿರುವ ಬೆಟ್ಟ ಗುಡ್ಡಗಳಲ್ಲಿ ಪ್ರಾಗಿತಿಹಾಸ ಕಾಲ ಮತ್ತು ಇತಿಹಾಸ ಕಾಲದ ವರ್ಣಚಿತ್ರ ಗವಿಗಳು, ಕಲ್ಲಾಸರೆಗಳು ಮತ್ತು ಬಯಲುಬಂಡೆ ಚಿತ್ರಗಳನ್ನು ಜನಪದ ಸಾಹಿತ್ಯದ ಸ್ಥಿತಿಯಂತೆ ತೀರ ಇತ್ತೀಚಿನವರೆಗೂ ಅವುಗಳ ಕಡೆ ತಜ್ಞರು ಚಿತ್ರಕಲಾಧಿ ವಿದ್ವಾಂಸರು ಹೆಚ್ಚಿನ ಪ್ರಮಾಣದಲ್ಲಿ ಗಮನಹರಿಸಿರಲಿಲ್ಲ. ಸುಮಾರು ಹದಿನೆಂಟನೆಯ ಶತಮಾನದಿಂದೀಚೆಗೆ ಆಗಾಗ್ಗೆ ಅಪರೂಪವಾಗಿ ಅಲ್ಲೊಂದು ಇಲ್ಲೊಂದು ಕಲಾಕೃತಿಗಳ ಅವಶೇಷಗಳು ಬೆಳಕಿಗೆ ಬಂದವು. ಮೊದಮೊದಲು ಆಕಸ್ಮಿಕವಾಗಿ, ಕ್ರಮೇಣ ಶಿಸ್ತುಬದ್ಧ ವೈಜ್ಞಾನಿಕ ಅನ್ವೇಷಣೆ ಮತ್ತು ಉತ್ಖನನಗಳಿಂದ ಹೆಚ್ಚಿನ ಸಂಖ್ಯೆ ಅಥವಾ ಪ್ರಾಮಾಣದಲ್ಲಿ ಪ್ರಾಗೈತಿಹಾಸಿಕ ಕಾಲದ ಚಿತ್ರಗಳು ಶೋಧವಾದವು ಎಂಬುದನ್ನು ತಿಳಿಯಬಹುದು. ಪ್ರಪಂಚದ ಹಲವು ಭಾಗಗಳಲ್ಲಿ ಇವುಗಳ ಕುರಿತು ಅಧ್ಯಯನ ನಡೆಯುತ್ತಲಿದ್ದು ನೂರಾರು ಗ್ರಂಥಗಳು ಲೇಖನಗಳು ಪ್ರಕಟವಾಗಿವೆ. ಶಿಲಾಯುಗದ ಮಾನವನು ಸೃಷ್ಟಿಸಿರುವ ಬಂಡೆ ಚಿತ್ರಕಲೆಯನ್ನು ಅಧ್ಯಯನ ದೃಷ್ಟಿಯಿಂದ ಮುಖ್ಯವಾಗಿ ಮೂರು ಪ್ರಕಾರಗಳಾಗಿ ವಿಂಗಡಿಸಿಕೊಂಡು ವಿವರಿಸಲಾಗಿದೆ.

### ೬.೪.೧ ವರ್ಣ ಚಿತ್ರಗಳು

ಪ್ರಕೃತಿದತ್ತವಾಗಿ ದೊರಕುವ ಗಿಡಮೂಲಿಕೆ, ಖನಿಜಾಂಶ ಹಾಗೂ ಪ್ರಾಣಿಗಳ ಕೊಬ್ಬಿನಾಂಶಗಳ ಮಿಶ್ರಣದಿಂದ ತಯಾರಿಸಿಕೊಳ್ಳುತ್ತಿದ್ದ ವರ್ಣದ್ರವ್ಯದಿಂದ ಗವಿ, ಕಲ್ಲಾಸರೆ ಕಡುಬಂಡೆ ಮುಂತಾದವುಗಳ ಒಳಬದಿಯಲ್ಲಿ ರಚನೆ ಮಾಡಿದ ಚಿತ್ರಗಳೇ ವರ್ಣಚಿತ್ರಗಳು. ಈ ವರ್ಣಚಿತ್ರಗಳಲ್ಲಿ ಕೆಮ್ಮಣ್ಣು ಅಥವಾ ಉರುಮಂಜು, ಬಿಳಿ, ಹಳದಿ, ಹಸಿರು ಬಣ್ಣದಲ್ಲಿ ಬಿಡಿಸಿದ ಚಿತ್ರಗಳು ಬೆಳಕಿಗೆ ಬಂದಿವೆ. ಭಾರತದಲ್ಲಿ ಶೇ ೯೦% ರಷ್ಟು ಭಾಗ ಚಿತ್ರಗಳು ಉರುಮಂಜು (ಜಾಜು) ಅಥವಾ ಕೆಂಪು ವರ್ಣದಲ್ಲಿವೆ. ಉಳಿದಂತೆ ಕ್ರಮವಾಗಿ ಬಿಳಿ, ಹಳದಿ ಮತ್ತು ಹಸಿರು ವರ್ಣದಲ್ಲಿವೆ.

### ೬.೪.೨ ಬಯಲುಬಂಡೆ ಚಿತ್ರಗಳು

ವರ್ಣಚಿತ್ರಗಳನ್ನು ಹೊರತು ಪಡಿಸಿದ ಶಿಲಾಚಿತ್ರಗಳೇ ಬಯಲುಬಂಡೆ ಚಿತ್ರಗಳು. ನೈಸರ್ಗಿಕವಾಗಿರುವ ಹುಟ್ಟು ಬಂಡೆಯ ಮೇಲೆ ಅಥವಾ ಬೃಹದಾಕಾರದ ಬಂಡೆಗಳ ರಾಶಿಯಿಂದ ನಿರ್ಮಿತವಾಗಿರುವ ಬೆಟ್ಟಗಳ ಸಾಲಿನ ಮಧ್ಯದ ಮತ್ತು ಮೇಲಿನ ಹಂತಗಳಲ್ಲಿ ಸಮತಟ್ಟಾದ ಮೇಲ್ಮೈ ಮೇಲೆ ಕುಟ್ಟಿ ಮೂಡಿಸಿದ ಅನಂತರ ಮೊನಚಾದ ಕಲ್ಲಿನ ಅಥವಾ ಲೋಹದ ಉಪಕರಣದಿಂದ ರೇಖೆಗಳನ್ನು ಮೂಡಿಸಿದ್ದ ಚಿತ್ರಗಳನ್ನು ಬಯಲುಬಂಡೆ ಚಿತ್ರಗಳೆಂದು ಕರೆಯಲಾಗಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬಯಲುಬಂಡೆ ಚಿತ್ರಗಳು ಹೆಚ್ಚು ಗಮನಸೆಳೆಯುತ್ತವೆ. ಈ ಚಿತ್ರಗಳನ್ನು ಅಧ್ಯಯನ ದೃಷ್ಟಿಯಿಂದ ಎರಡು ಉಪವಿಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

**೧. ಕುಟ್ಟು ಚಿತ್ರಗಳು ಮತ್ತು ಗೀರು ಚಿತ್ರಗಳು**

ಸಾಮಾನ್ಯವಾಗಿ ಗವಿ ಅಥವಾ ಕಲ್ಲಾಸರೆಗಳಲ್ಲಿರದೇ ಪ್ರತ್ಯೇಕವಾದ ಬಂಡೆ ಪಾರ್ಶ್ವಭಾಗದಲ್ಲಿ ಕುಟ್ಟಿ ಕುಟ್ಟಿ ಮೂಡಿಸಿದ್ದ ಚಿತ್ರಗಳನ್ನು ಕುಟ್ಟು ಚಿತ್ರಗಳೆಂದು ಕರೆಯುವರು. ಈ ಪ್ರಕಾರದ ಚಿತ್ರಗಳಲ್ಲಿ ವಿವಿಧ ಪ್ರಾಣಿಗಳು ಮತ್ತು ಮನುಷ್ಯರ ಕುರಿತು ಹೆಚ್ಚಾಗಿ ಬಿಡಿಸಲಾಗಿರುತ್ತವೆ. ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದಲ್ಲಿನ ಬೆಟ್ಟಗುಡ್ಡಗಳಲ್ಲಿನ ಬೃಹತ್ ಬಂಡೆಗಳ ಮೇಲೆ ಇಂತಹ ಚಿತ್ರಗಳು ಅಪಾರವಾಗಿ ಕಂಡುಬಂದಿವೆ. ಅವುಗಳಲ್ಲಿ ಅಪ್ಪಯ್ಯನಹಳ್ಳಿ, ಕಪ್ಪಗಲ್ಲು, ಸಂಗನಕಲ್ಲು, ಕುರುಗೋಡು, ತೆಕ್ಕಲಕೋಟೆ, ಹಳಕುಂಡಿ, ಬೆಳಗಲ್, ರಾಂಪುರ, ಭೈರನಾಯಕನಹಳ್ಳಿ, ಹಾಲಸಾಗರ, ಗುಡೇಕೋಟೆ, ಚಿಕ್ಕಮಂಡಿ, ಮಳೇಹಳ್ಳಿ ನೆಲೆಗಳಲ್ಲಿ ಕಂಡುಬಂದಿವೆ. ಅದೇ ರೀತಿ ಕೊಪ್ಪಳ ಜಿಲ್ಲೆಯ ಮಲ್ಲಾಪುರ, ತಾವರೆಗೇರ, ಕೊಪ್ಪಳ, ಎಮ್ಮಿಗುಡ್ಡ ಮೊದಲಾದ ಕಡೆಗಳಲ್ಲಿ ಈ ಬಗೆಯ ಚಿತ್ರಗಳು ದೊರೆತಿವೆ.

**೨. ಕಲ್ಗುಳಿಗಳು**

ಜಗತ್ತಿನಾದ್ಯಂತ ಕಲ್ಗುಳಿಗಳ ರಚನೆಗಳು ಕಂಡುಬಂದಿದ್ದು ಅವುಗಳ ರಚನೆ ಉದ್ದೇಶ ಅಧ್ಯಯನಗಳು ನಡೆಯುತ್ತಿದ್ದು ಇನ್ನೂ ಸ್ಪಷ್ಟವಾದ ವಿವರಗಳು ಲಭ್ಯವಾಗಿಲ್ಲ. ಬಟ್ಟಲಿನಂತೆ ವೃತ್ತ ಅಥವಾ ಚೌಕಾಕೃತಿಯ ರಚನೆಗಳೇ ಕಲ್ಗುಳಿಗಳು. ಇವುಗಳನ್ನು 'ಕಪ್‌ಮಾರ್ಕ್ಸ್', 'ಕ್ಯೂಪಲ್ಸ್' ಎಂದು ಕರೆಯಲಾಗುತ್ತದೆ. ಇವು ನೈಸರ್ಗಿಕವಾಗಿರುವ ಕುಳಿಗಳಿಗಿಂತ ವಿಶಿಷ್ಟವಾಗಿದ್ದು, ಅಂದಿನ ಮಾನವ ಚೂಪಾದ ಉಳಿಯಂತಹ ಉಪಕರಣದ ಸಹಾಯದಿಂದ ಸತತವಾಗಿ ಒಂದೇ ಕಡೆ ಕೊರೆದಿದ್ದರಿಂದ ಇಂತಹ ಕಲ್ಗುಳಿಗಳು ಉಂಟಾಗಿವೆ. ಇಂಗ್ಲೆಂಡ್‌ನ ಪುರಾತತ್ವ ಶಾಸ್ತ್ರಜ್ಞ ಕ್ಲೈವ್ ವಾಂಡಿಗ್‌ಟನ್ ಅವರ ಪ್ರಕಾರ, 'ಕಲ್ಗುಳಿಗಳನ್ನು ಯಾವ ಉದ್ದೇಶಕ್ಕಾಗಿ ನಿರ್ಮಿಸುತ್ತಿದ್ದರೆಂಬುದರ ಬಗ್ಗೆ ಖಚಿತವಾದ ಮಾಹಿತಿಗಳಿಲ್ಲ. ಆದರೆ ಅವರು ನವಶಿಲಾಯುಗದ ಜನರು ಶಿಲಾಕೊಡಲಿಗಳನ್ನು ಹರಿತವಾಗಿಸಲು ಹಾಗೂ ಧಾರ್ಮಿಕ ಕಾರ್ಯಗಳಿಗೆ ಬಳಸಿರಬಹುದು ಎಂದಿದ್ದಾರೆ. ಎ.ಎಲ್. ವಾಡೆಲ್ ಅವರ ಪ್ರಕಾರ, ಸೌರಪೂಜೆ ಹಾಗೂ ಗ್ರಹಗಳ ವರ್ತನೆ ಸಂಬಂಧಿಸಿದ ಅಂದಿನ ಜನರ ತಿಳುವಳುವಳಿಕೆಯ ಸಾಧನಗಳಾಗಿರಬಹುದು ಎಂಬ ಅಭಿಪ್ರಾಯ ಮೂಡಿಸಿದ್ದಾರೆ.

ಇತ್ತೀಚೆಗೆ ಕೆ.ಪಿ.ರಾವ್ ಅವರು ಆಂಧ್ರಪ್ರದೇಶದ ಮೆಹಬೂಬ್‌ನಗರ ಜಿಲ್ಲೆಯ 'ಮುಡುಮಲ್ಲ' ಎನ್ನುವ ನೆಲೆಯಲ್ಲಿ ಇಂತಹ ಕಲ್ಗುಳಿಗಳನ್ನು ಶೋಧಿಸಿದ್ದು ಅವುಗಳ ಕುರಿತು ವೈಜ್ಞಾನಿಕವಾಗಿ ಅಧ್ಯಯನ ಮಾಡಿರುವ ಅವರು ರಾತ್ರಿ ವೇಳೆ ಖಗೋಳದಲ್ಲಿ ಗೋಚರಿಸುವ ಸಪ್ತರ್ಷಿ ಮಂಡಲಕ್ಕೆ ಸಮೀಕರಿಸಿದ್ದಾರೆ.[೨೫] ಇಂತಹ ಕಲ್ಗುಳಿಗಳು ಪ್ರಾದೇಶಿಕವಾಗಿ ವಿವಿಧ ಕಾಲಘಟ್ಟದ ನೆಲೆಗಳಲ್ಲಿ ಕಂಡುಬಂದಿವೆ. ಮಧ್ಯಪ್ರದೇಶದ ಭಿಂಬೆಟ್ಕ ಹಾಗೂ ಚಂಬಲ್ ಕಣಿವೆ ಪ್ರದೇಶದಲ್ಲಿ ನಡೆದ ಉತ್ಖನನಗಳಲ್ಲಿ ಹಳೆಯ ಶಿಲಾಯುಗದ ಉಪಕರಣಗಳಿರುವ ಸ್ತರಗಳಡಿಯಲ್ಲಿ ಕಲ್ಗುಳಿಗಳು ಕಂಡುಬಂದಿವೆ.

ವೇದಾವತಿ (ಹಗರಿ) ನದಿತೀರ ಪ್ರದೇಶದಲ್ಲಿ ಅತಿ ಹೆಚ್ಚಿನ ಪ್ರಮಾಣದಲ್ಲಿ ಕಲ್ಗುಳಿ ನೆಲೆಗಳು ಕಂಡುಬಂದಿವೆ. ಅಧ್ಯಯನ ಪ್ರದೇಶದಲ್ಲಿ ಬಳ್ಳಾರಿ ಜಿಲ್ಲೆಯ ಗುಡೇಕೋಟೆ, ಹುರುಳಿಹಾಳು (ಕೂಡ್ಲಿಗಿ ತಾಲೂಕು) ನೆಲೆಗಳ ಶಿಲಾಸಮಾಧಿಯ ಮೇಲೆ ಕಲ್ಗುಳಿಗಳ ರಚನೆಗಳಿರುವುದು ವಿಶೇಷ. ತಜ್ಞರಾದ ಲಕ್ಷ್ಮಣ್ ತೆಲಗಾವಿ ಅವರು ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಬೊಗ್ಗಲುರಂಗಪ್ಪನಹಳ್ಳಿ, ಬೆಳಗಟ್ಟ, ಚಿತ್ರದುರ್ಗದ ಕೋಟೆ, ಭೀಮನಗುಂಡು ಮತ್ತು ಅಜ್ಜಿಗುಂಡು ನೆಲೆಗಳಲ್ಲಿ ಇಂತಹ ಕಲ್ಗುಳಿಗಳನ್ನು ಶೋಧಿಸಿದ್ದಾರೆ. ಕೆಲವೊಂದು ಸ್ಥಳಗಳಲ್ಲಿರುವ ಕಲ್ಗುಳಿಗಳಲ್ಲಿ ಪಿತೃಪಕ್ಷದ ಸಂದರ್ಭದಲ್ಲಿ ಹಿರಿಯರಿಗೆ ಎಡೆಹಾಕಲಾಗುತ್ತದೆ ಎಂಬ ವರದಿಗಳಿವೆ.

ಅಧ್ಯಯನ ಪ್ರದೇಶದಲ್ಲಿ ಕುರುಗೋಡು(ತಾ.), ಮಾಳೇಹಳ್ಳಿ (ಕೂಡ್ಲಿಗಿ ತಾ.), ಕೊಟ್ನಕಲು (ಹಡಗಲಿ ತಾ), ರಾಜಾಪುರ, ಜೋಗಿಕಲ್ಲು (ಸಂಡೂರು ತಾ), ಕಮಲಾಪುರ (ಹೊಸಪೇಟೆ ತಾ.), ಅಗೋಲಿ ಮತ್ತು ಕಡೇಬಾಗಿಲು (ಗಂಗಾವತಿ ತಾ), ಹಿರೇಬೆಣಕಲ್ಲು, ಕುಮ್ಮಟದುರ್ಗ ಮುಂತಾದ ನೆಲೆಗಳಲ್ಲಿ ಕಲ್ಗುಳಿಗಳು ಕಂಡುಬಂದಿವೆ. ಕಲ್ಗುಳಿಗಳ ಸಂಖ್ಯೆ ಮತ್ತು ಅವುಗಳ ಆಕಾರ, ನೆಲೆ ಎಲ್ಲವನ್ನು ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ಕೆಲವೊಂದು ಕಡೆ ಅಳಗುಳಿ ಮನೆ ಆಟಕ್ಕೆ ಬಳಸಿದರೆ, ಇನ್ನೂ ಕೆಲವು ಕಡೆ ವರ್ಣಚಿತ್ರಗಳ ರಚನೆಗೆ ಬೇಕಾದ ವರ್ಣದ್ರವ್ಯಗಳನ್ನು ತಯಾರಿಸಿಕೊಳ್ಳಲು ಇಂತಹ ರಚನೆಗಳನ್ನು ಮಾಡುತ್ತಿದ್ದರೆಂಬ ಅಭಿಪ್ರಾಯಗಳಿವೆ. ಆದರೆ ಕಲ್ಗುಳಿಗಳ ರಚನೆಯ ಬಗ್ಗೆ ಇರುವ ಮತ್ತೊಂದು ವಿಶೇಷ ಅಭಿಪ್ರಾಯವೆಂದರೆ, ಕುಮ್ಮಟದುರ್ಗ ಬೆಟ್ಟದ ಬೃಹತ್ ಬಂಡೆಗಳ ಮೇಲೆ ಶತೃಗಳು ಬರದಂತೆ ಮತ್ತು ಕಾಲಾಳುಗಳು ನಡೆಯಲು ಬಾರದಂತೆ ರಕ್ಷಣೆಯ ಸಲುವಾಗಿ ಕಲ್ಗುಳಿಗಳನ್ನು ನಿರ್ಮಿಸಲಾಗಿದೆ ಎಂಬ ಅಭಿಪ್ರಾಯಗಳಿವೆ.

**೩. ಬೃಹದಾಕೃತಿ ಚಿತ್ರಗಳು**

ಬೃಹದಾಕೃತಿ ಚಿತ್ರಗಳ ಪ್ರಕಾರಗಳು ಗೀರುಚಿತ್ರಗಳಾಗಿದ್ದು, ನಾಲ್ಕು ಮೀಟರ್‌ಗಿಂತ ದೊಡ್ಡ ಪ್ರಮಾಣದಲ್ಲಿರುವ ಇಂತಹ ಚಿತ್ರಗಳು ಹಾಸುಬಂಡೆಗಳಲ್ಲಿ ಮಾತ್ರ ಕಂಡುಬರುತ್ತವೆ. ಇಂತಹ ಚಿತ್ರಗಳು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಬೆಳಕಿಗೆ ಬಂದಿವೆ. ಹೊರತು ನಮ್ಮ ದೇಶದಲ್ಲಿ ಇತ್ತೀಚೆಗೆ ಸ್ವಲ್ಪ ಪ್ರಮಾಣದಲ್ಲಿ ಅಧ್ಯಯನಗಳು ಪ್ರಾರಂಭವಾಗಿವೆ.

## ಭಾರತದಲ್ಲಿ ಬಂಡೆ ಚಿತ್ರಗಳ ಅಧ್ಯಯನ

ಸ್ವಾತಂತ್ರ್ಯ ಪೂರ್ವದಲ್ಲಿ ಬಂಡೆ ಚಿತ್ರಗಳ ಅಧ್ಯಯನವು ಆಕಸ್ಮಿಕವಾಗಿ ಪ್ರಾರಂಭವಾಯಿತೆನ್ನಬಹುದು. ೧೮೫೬ರಲ್ಲಿ ಹೆನ್‌ವುಡ್‌ರವರು ಮೊಟ್ಟಮೊದಲ ಬಾರಿಗೆ ಉತ್ತರಖಂಡದ ಅಲ್ಮೋರ ನೆಲೆಯಲ್ಲಿ ಗೀರು ಚಿತ್ರಗಳನ್ನು ಬೆಳಕಿಗೆ ತಂದರು. ಆದರೆ ಅದು ಹೆಚ್ಚು ಗಮನ ಸೆಳೆದದ್ದು ಉತ್ತರ ಪ್ರದೇಶದ ಕೈಮೂರ್ ಬೆಟ್ಟಶ್ರೇಣಿ ಸೋಹಂಜಿಘಟನ್ ಕಲ್ಲಾಸರೆಗಳಲ್ಲಿನ ವರ್ಣಚಿತ್ರಗಳು. ಇವುಗಳನ್ನು ೧೮೬೭ರಲ್ಲಿ ಆರ್ಚಿಬಾಲ್ಡ್ ಸಿ. ಕಾರ್ಲೈರವರು ಪ್ರಪ್ರಥಮವಾಗಿ ಶೋಧಿಸಿದರು. ವಿಶ್ವಪ್ರಸಿದ್ಧ ಸ್ಪೇನಿನ ಅಲ್ತಮೀರ ನೆಲೆಗಿಂತ (ಯುರೋಪ್ ಖಂಡದ) ಮುಂಚೆಯೇ ಬೆಳಕಿಗೆ ತಂದಿರುವುದು ಗಮನಾರ್ಹ. ಕಾರ್ಲೈ ಅವರು ತಮ್ಮ ಸಂಶೋಧನೆಯ ಬಗ್ಗೆ ಎಲ್ಲೂ ಪ್ರಕಟಿಸದೇ ತಮ್ಮ ದಿನಚರಿಯಲ್ಲಿ ಬರೆದಿಟ್ಟಿದ್ದರು. ಅದೃಷ್ಟವಶಾತ್ ಈ ದಿನಚರಿಯು ತನ್ನ ಆಪ್ತಮಿತ್ರ ರಿಜಿನಾಲ್ಡ್‌ಗಟ್ಟಿಯವರ ಮುಖಾಂತರ ವಿನ್ಸಂಟ್ ಎ. ಸ್ಮಿತ್ ಅವರ ಕೈ ಸೇರಿತು. ನಂತರ ಅವರು ೧೯೦೬ರಲ್ಲಿ ಇಂಡಿಯನ್ ಆ್ಯಂಟಿಕ್ವಿಟಿ ನಿಯತಕಾಲಿಕೆಯಲ್ಲಿ ಲೇಖನ ರೂಪದಲ್ಲಿ ಪ್ರಕಟಿಸಿದರು.[೨೬]

ಬಂಡೆ ಚಿತ್ರಗಳ ಅಧ್ಯಯನದಲ್ಲಿ ಸ್ಮಿತ್ ಅವರ ಕೊಡುಗೆಯು ಸಹ ಅಪಾರವಾದದ್ದು, ಮೊಟ್ಟಮೊದಲ ಬಾರಿಗೆ ವರ್ಣಚಿತ್ರಗಳ ಕಾಲಾನುಕ್ರಮಣಿಕೆಯಲ್ಲಿ ಅನಾವರಣಗೊಳಿಸಲು ಪ್ರಯತ್ನಿಸಿದರು. ಕಾಕ್ಬರ್ನ್ ಅವರು ಬ್ರಿಟಿಷ್ ಅಧಿಕಾರಿಯಾಗಿದ್ದುಕೊಂಡು ಸ್ಮಿತ್ ಅವರ ಸಹಾಯದೊಂದಿಗೆ ಉತ್ತರ ಪ್ರದೇಶದ ಮಿರ್ಜಾಪುರ ಜಿಲ್ಲೆಯಲ್ಲಿ ಹಲವು ವರ್ಣಚಿತ್ರಗಳನ್ನು ಪತ್ತೆಹಚ್ಚಿದರು. ಅಷ್ಟೇ ಅಲ್ಲದೇ ಕಾಕ್ಬರ್ನ್ ಕೈಮೂರ್ ಬೆಟ್ಟಶ್ರೇಣಿಯಲ್ಲಿನ ಹಲವಾರು ವರ್ಣಚಿತ್ರಗಳನ್ನು ಕ್ರೋಢೀಕರಿಸಿ ಅವುಗಳ ವೈಜ್ಞಾನಿಕ ಅಧ್ಯಯನಕ್ಕೆ ನಾಂದಿ ಹಾಡಿದರು. ಆರ್ಚಿಬಾಲ್ಡ್ ಸಿ. ಕಾರ್ಲೈ ಮತ್ತು ಕಾಕ್ಬರ್ನ್ ಸೇರಿ ಕೈಮೂರ್ ಶ್ರೇಣಿಯಲ್ಲಿನ ವರ್ಣಚಿತ್ರಗಳನ್ನ ಗಮನಿಸಿದರು. ೧೮೮೦ರ ದಶಕದಲ್ಲಿ ಆರ್ಚಿಬಾಲ್ಡ್ ಸಿ. ಕಾರ್ಲೈಯರು ರೇವಾ ಮತ್ತು ಮಿರ್ಜಾಪುರ ಪರಿಸರದಲ್ಲಿ ಕಾರ್ಯನಿರ್ವಹಿಸಿದರು. ಆದರೆ ಕಾಕ್ಬರ್ನ್ ಅವರ ಬಂಡಾದಲ್ಲಿ ಕ್ಷೇತ್ರಕಾರ್ಯವನ್ನು ನಿರ್ವಹಿಸಿದರು. ಮುಂದುವರೆದ ಶೋಧನೆ ೧೮೯೨ರಲ್ಲಿ ಪ್ರಪ್ರಥಮ ಬಾರಿಗೆ ಕರ್ನಾಟಕದಲ್ಲಿ ಅದರಲ್ಲೂ ಬಳ್ಳಾರಿ ಸಮೀಪವಿರುವ ಕಪ್ಪಗಲ್ಲು ನೆಲೆಯಲ್ಲಿನ ಕುಟ್ಟುಚಿತ್ರಗಳನ್ನು ಶೋಧಿಸಿದರು. ಈ ಕಪ್ಪಗಲ್ಲು ನೆಲೆಯ ಬಂಡೆಚಿತ್ರಗಳ ಹೆಚ್ಚಿನ ವಿವರಣೆಯನ್ನು ಭಾರತದ ಪ್ರಾಗಿತಿಹಾಸದ ಪಿತಾಮಹರೆನಿಸಿಕೊಂಡಿರುವ ರಾಬರ್ಟ್ ಬ್ರೂಸ್ ಫೂಟ್ ಅವರ 'ದಿ ಫೂಟ್ ಕಲೆಕ್ಷನ್ ಆಫ್ ದಿ ಇಂಡಿಯನ್ ಪ್ರೀ ಹಿಸ್ಟಾರಿಕ್ ಆ್ಯಂಡ್ ಪ್ರೋಟೋ ಹಿಸ್ಟಾರಿಕ್ ಆ್ಯಂಟಿಕ್ವಿಟೀಸ್: ನೋಟ್ಸ್ ಆನ್ ದೇರ್ ಏಜಸ್ ಆ್ಯಂಡ್ ಡಿಸ್ಟ್ರಿಬ್ಯೂಷನ್ಸ್' ಎಂಬ ಪುಸ್ತಕದಲ್ಲಿ ದಾಖಲಾಗಿವೆ.[೨೭]

೨೦ನೇ ಶತಮಾನದ ಆರಂಭದಲ್ಲಿಯೇ ದಕ್ಷಿಣ ಭಾರತದಲ್ಲಿ ಬಂಡೆಚಿತ್ರಗಳ ಅಧ್ಯಯನ ಪ್ರಾರಂಭಗೊಂಡವು. ೧೯೦೧ರಲ್ಲಿ ಫಾಸೆಟ್ ಅವರು ಕೇರಳದ ಪ್ರಸಿದ್ಧ ಗೀರುಚಿತ್ರಗಳ ನೆಲೆ ಎಲ್ಲಕಡ ನೆಲೆಯಲ್ಲಿ ಶೋಧಿಸಿದರು. ನಂತರ ೧೯೦೭ರಲ್ಲಿ ಭಾರತೀಯ ಆಡಳಿತ ಸೇವೆಯಲ್ಲಿ ಉನ್ನತ ಅಧಿಕಾರಿಯಾಗಿದ್ದ ಸಿಲ್ಬೆರ್ಡ್ ಅವರು ಉತ್ತರ ಪ್ರದೇಶದ ಬಂಡಾ ಜಿಲ್ಲಾ ಪರಿಸರದಲ್ಲಿ ಅಧಿಕ

ಸಂಖ್ಯೆಯಲ್ಲಿ ಬಂಡೆ ಚಿತ್ರಗಳನ್ನು ಶೋಧಿಸಿದರು. ನಂತರ ಕಲೆ ಮತ್ತು ವಾಸ್ತುಶಿಲ್ಪ ತಜ್ಞರಾದ ಪಾರ್ಸಿಬ್ರೌನ್ ಅವರು ತಮ್ಮ ಇಂಡಿಯನ್ ಪೈಂಟಿಂಗ್ಸ್ ಎಂಬ ಪುಸ್ತಕದ ಪುಟ ೧೬ರಲ್ಲಿ ಭಾರತೀಯ ಕೆಲವು ವರ್ಣಚಿತ್ರ ನೆಲೆಗಳನ್ನು ಉಲ್ಲೇಖಿಸಿದ್ದಾರೆ. ನಂತರ ೧೯೧೮ರಲ್ಲಿ ಆ್ಯಂಡರ್ಸನ್ ಅವರು ಛತ್ತೀಸಗಡ ರಾಜ್ಯದ ರಾಜಧಾನಿ ರಾಯ್‌ಪುರ ಸುತ್ತಮುತ್ತಲಿನ ಪರಿಸರದಲ್ಲಿ ವರ್ಣಚಿತ್ರಗಳನ್ನು ಪರಿಶೋಧಿಸಿದರು.[೨೮]

ಶ್ರೀಧರ್ ವಾಕಣಕರ್ ಅವರು ಬಂಡೆಚಿತ್ರಗಳ ಅಧ್ಯಯನದಲ್ಲಿ ಅತ್ಯಂತ ಮಹತ್ವದ ಸಂಶೋಧನೆ ಕೈಗೊಂಡವರಾಗಿದ್ದಾರೆ. ೧೯೫೭ರಲ್ಲಿ ಮಧ್ಯಪ್ರದೇಶದ ಭಿಂಬೆಟ್ಕ ನೆಲೆಯನ್ನು ಶೋಧಿಸಿದ್ದು ಅತ್ಯಂತ ಮಹತ್ವದ ಸಂಶೋಧನೆಯಾಗಿದೆ. ವಾಕಣ್‌ಕರ್ ಅವರಿಗೆ ಫ್ರಾನ್ಸ್ ಮತ್ತು ಸ್ಪೇನ್ ದೇಶಗಳಲ್ಲಿರುವ ವರ್ಣಚಿತ್ರಗಳ ಬಗ್ಗೆ ಪರಿಚಯವಿತ್ತು. ಆದ್ದರಿಂದ ಭಿಂಬೆಟ್ಕ ನೆಲೆಯ ವರ್ಣಚಿತ್ರಗಳ ಬಗ್ಗೆ ಅಪಾರವಾದ ಆಸಕ್ತಿ ಅಭಿರುಚಿಯನ್ನು ಹೊಂದಿದ್ದರು. ಇವರ ಆಸಕ್ತಿಯ ಫಲವಾಗಿ ದೇಶದ ಇತರ ಭಾಗಗಳಲ್ಲಿಯೂ ಅನ್ವೇಷಣೆ ಮಾಡಿ ಸಾವಿರಾರು ಸಂಖ್ಯೆಯಲ್ಲಿ ವರ್ಣಚಿತ್ರಗಳನ್ನು ಶೋಧಿಸಿದರು. ಇವರ ಸಂಶೋಧನೆಯಲ್ಲಿ ಕರ್ನಾಟಕದ ಬಾದಾಮಿ ಮತ್ತು ಅದರ ಸುತ್ತಮುತ್ತಲಿನ ಪರಿಸರದಲ್ಲೂ ಕೆಲವು ಮಹತ್ವದ ಚಿತ್ರಗಳನ್ನು ಪತ್ತೆಹಚ್ಚಿದರು. ವಾಕಣಕರ್ ಅವರು ೧೯೭೩ರಲ್ಲಿ ಪಿಎಚ್.ಡಿ ಸಂಶೋಧನೆಯನ್ನು 'ಪೈಂಟೆಡ್ ರಾಕ್ ಶೆಲ್ಟರ್ಸ್ ಆಫ್ ಇಂಡಿಯಾ' ಎಂಬ ವಿಷಯ ಕುರಿತು ಡೆಕ್ಕನ್ ಕಾಲೇಜು, ಸ್ನಾತಕೋತ್ತರ ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಕೈಗೊಂಡರು. ಹಾಗೆಯೇ ಈ ಕ್ಷೇತ್ರದಲ್ಲಿ ಹೆಚ್ಚು ಆಸಕ್ತಿಯಿಂದ ಶ್ರಮಿಸಿದರು. ೧೯೭೫ರಲ್ಲಿ ಭಾರತ ಸರ್ಕಾರ ನಾಲ್ಕನೆಯ ಪ್ರತಿಷ್ಠಿತ ನಾಗರೀಕ ಪ್ರಶಸ್ತಿಯಾದ ಪದ್ಮಶ್ರೀಯನ್ನು ನೀಡಿ ಗೌರವಿಸಿತು. ತರುವಾಯ ಭಾರತೀಯ ಬಂಡೆಚಿತ್ರಗಳ ಪಿತಮಹಾ ಎಂಬ ಕೀರ್ತಿಗೆ ಪಾತ್ರರಾದರು. ಇತ್ತೀಚೆಗೆ ಮಧ್ಯಪ್ರದೇಶದಲ್ಲಿಯ ಇತರೆಡೆಗಳಲ್ಲಿ ಉತ್ತರ ಪ್ರದೇಶ, ಗುಜರಾತ್, ರಾಜಸ್ಥಾನ್, ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು ಮತ್ತು ಕೇರಳ ರಾಜ್ಯಗಳಲ್ಲಿ ನೂರಾರು ಇಂತಹ ಚಿತ್ರಗಳು ಬೆಳಕಿಗೆ ಬಂದಿವೆ. ಸುಮಾರು ಐದು ಸಾವಿರಕ್ಕೂ ಹೆಚ್ಚು ನೆಲೆಗಳು ಉತ್ತರ ಭಾರತದಲ್ಲಿ ಪತ್ತೆಯಾಗಿವೆ. ಸುಮಾರು ಒಂದು ದಶಕಗಳಿಂದೀಚೆಗೆ 'ಸ್ಟೋನ್ ಏಜ್ ಪೈಂಟಿಂಗ್ಸ್ ಇನ್ ಇಂಡಿಯಾ ಮತ್ತು ಪ್ರೀ ಹಿಸ್ಟಾರಿಕ್ ಇಂಡಿಯನ್ ಪೈಂಟಿಂಗ್ಸ್' (ಇರ್ವಿನ್ ನ್ಯೂ ಮೇಯರ್) ಎಂಬ ಪುಸ್ತಕಗಳು ಪ್ರಕಟವಾಗಿವೆ. ೧೯೫೧ರಲ್ಲಿ ಮಧ್ಯಪ್ರದೇಶ ಸರ್ಕಾರ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ಶಾಖೆಯು ಭೂಪಾಲ್‌ನಲ್ಲಿ ಗವಿವರ್ಣ ಬಂಡೆಚಿತ್ರಗಳ ಶೋಧನೆಯ ಶತಮಾನೋತ್ಸವದ ಅಂಗವಾಗಿ 'ರಾಕ್ ಪೈಂಟಿಂಗ್ಸ್ ಇನ್ ಇಂಡಿಯಾ' ಎಂಬ ವಿಷಯ ಕುರಿತು ರಾಷ್ಟ್ರೀಯ ವಿಚಾರ ಸಂಕಿರಣ ಏರ್ಪಡಿಸಿತು. ಈ ಸಂದರ್ಭದಲ್ಲಿ ಮಂಡನೆಯಾದ ಲೇಖನಗಳು ಪುಸ್ತಕ ರೂಪದಲ್ಲಿ ಪ್ರಕಟಣೆಯಾಗಿವೆ.[೨೯]

ಮಧ್ಯಪ್ರದೇಶದ ಭಿಂಬೆಟ್ಕ ನೆಲೆಯನ್ನು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯು ವಿಶ್ವಪಾರಂಪರಿಕ ವರ್ಣಚಿತ್ರಗಳ ತಾಣಗಳ ಪಟ್ಟಿಗೆ ಸೇರಿಸಿದೆ. ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ

ಭಿಂಬೆಟ್ಕ ನೆಲೆಗೆ ಭೇಟಿನೀಡಿ ಅಲ್ಲಿನ ವರ್ಣಚಿತ್ರಗಳ ಸ್ವರೂಪವನ್ನು ಅರ್ಥಮಾಡಿಕೊಳ್ಳಲಾಯಿತು. ಭಿಂಬೆಟ್ಕ ನೆಲೆಯಲ್ಲಿ ೨೪೩ ಕಲ್ಲಾಸರೆಗಳು ದಾಖಲೆಯಾಗಿದ್ದು ಅವುಗಳಲ್ಲಿ ೧೩೩ ಕಲ್ಲಾಸರೆಗಳಲ್ಲಿ ವರ್ಣಚಿತ್ರಗಳಿವೆ.[೨೦] 'ದೆಹಲಿಯ ಇಂದಿರಾಗಾಂಧಿ ನ್ಯಾಶನಲ್ ಸೆಂಟರ್ ಫಾರ್ ದಿ ಆರ್ಟ್ಸ್' ಎಂಬ ಪ್ರತಿಷ್ಠಿತ ಸಂಸ್ಥೆಯು ಭಾರತದಲ್ಲಿ ಬಂಡೆಚಿತ್ರಗಳ ವಿಶೇಷ ಅಧ್ಯಯನವನ್ನು ಪೂರ್ಣಗೊಳಿಸಿದೆ. ಈ ಅಧ್ಯಯನದಲ್ಲಿ ಹೊಸತಂತ್ರ ಮತ್ತು ಕ್ರಮಗಳನ್ನು ಅಳವಡಿಸಿಕೊಳ್ಳಲು ೧೯೯೧ರಲ್ಲಿ ಒಂದು ಕಮ್ಮಟವನ್ನು ಏರ್ಪಡಿಸಿತು. ನಂತರ ೧೯೯೨ರಲ್ಲಿ ಅಂತರರಾಷ್ಟ್ರೀಯ ವಿಚಾರ ಸಂಕಿರಣವನ್ನು ಏರ್ಪಡಿಸಿ ಅದರಲ್ಲಿ ಮಂಡಿಸಿದ ಪ್ರಬಂಧಗಳನ್ನು ಸಂಗ್ರಹಿಸಿ ೧೯೯೩ರಲ್ಲಿ ಗ್ರಂಥವನ್ನು ಪ್ರಕಟಿಸಿತು. ಭಾರತದಲ್ಲಿ ಇಂಥ ಶೋಧನೆಗಳನ್ನು ಒಂದೆಡೆಯಲ್ಲಿ ಚರ್ಚಿಸಲು 'ರಾಕ್ ಆರ್ಟ್ ಸೊಸೈಟಿ ಆಫ್ ಇಂಡಿಯಾ ಮತ್ತು ಇಂದಿರಗಾಂಧಿ ನ್ಯಾಷನಲ್ ಸೆಂಟರ್ ಫಾರ್ ಆರ್ಟ್ಸ್', ನವದೆಹಲಿ. ವಿ.ಎಸ್. ವಾಕಣಕರ್ ಆರ್ಕಿಯಾಲಾಜಿಕಲ್ ರಿಸರ್ಚ ಇನಸ್ಟಿಟ್ಯೂಟ್ ಮತ್ತು ಇಂದಿರಾ ಗಾಂಧಿ ಮಾನವ ವಸ್ತುಸಂಗ್ರಹಾಲಯ, ಭೂಪಾಲ್(ಮಧ್ಯಪ್ರದೇಶ) ಎಂಬ ನಾಲ್ಕು ಸಂಸ್ಥೆಗಳು ಹುಟ್ಟಿಕೊಂಡಿವೆ.

### ಕರ್ನಾಟಕದಲ್ಲಿ ಬಂಡೆ ಚಿತ್ರಗಳ ಸಂಶೋಧನೆ

ಕರ್ನಾಟಕದಲ್ಲಿಯೂ ಸಹ ಬಂಡೆ ಚಿತ್ರಗಳ ಕುರಿತು ಸಾಕಷ್ಟು ಅಧ್ಯಯನಗಳು ಹೆಚ್ಚಿನ ಪ್ರಮಾಣದಲ್ಲಿ ನಡೆದಿವೆ. ಇತರೆ ಪ್ರದೇಶಕ್ಕೆ ಹೋಲಿಸಿದರೆ ಇಲ್ಲಿನ ವರ್ಣಚಿತ್ರಗಳ ವಸ್ತು ವಿಷಯ ಭಿನ್ನತೆಯಿಂದ ಕೂಡಿವೆ. ಕರ್ನಾಟಕಲ್ಲಿ ಮೊಟ್ಟಮೊದಲು ೧೮೭೯ರಲ್ಲಿ ಪ್ಲಾಸೆಟ್ ಅವರು ಬಳ್ಳಾರಿ ಜಿಲ್ಲೆಯ ಕಪ್ಪಗಲ್ಲು ನೆಲೆಯಲ್ಲಿ ಶೋಧಿಸಿದರು. ಈ ನೆಲೆಯು ಬಹುತೇಕ ಕುಟ್ಟುಚಿತ್ರಗಳಿಂದ ಕೂಡಿದೆ. ಇಲ್ಲಿನ ಒಂದು ಬಂಡೆಯ ಮೇಲಿರುವ ಗೂಳಿ ಮತ್ತು ಮನುಷ್ಯರ ಕುಟ್ಟುಚಿತ್ರಗಳು ಹೆಚ್ಚು ಆಕರ್ಷಕವಾಗಿವೆ. ಕಪ್ಪಗಲ್ಲಿ ಶೋಧಗೊಂಡ ಚಿತ್ರಗಳು ಇಡೀ ದಕ್ಷಿಣ ಭಾರತದಲ್ಲಿಯೇ ಮೊದಲ ಶೋಧನೆ ಎನಿಸಿವೆ. ನಂತರ ೧೯೧೫ರಲ್ಲಿ ಲಿಯೋನಾರ್ಡ್‌ಮನ್ ಅವರು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಹಿರೇಬೆಣಕಲ್ಲು ಗುಡ್ಡಪ್ರದೇಶದಲ್ಲಿ ಮೂರು ವರ್ಣಚಿತ್ರ ಕಲ್ಲಾಸರೆಗಳನ್ನು ಹಾಗೂ ಭಿಲ್ಲಮರಾಯನ ಗುಡ್ಡದಲ್ಲಿ ಕುಟ್ಟು ಚಿತ್ರಗಳನ್ನು ಶೋಧಿಸಿದರು.[೨೧] ೧೯೬೮ರಲ್ಲಿ ಅ.ಸುಂದರ ಅವರು ಲಿಯೋನಾರ್ಡ್‌ಮನ್ ಹಿರೇಬೆಣಕಲ್ಲಿನಲ್ಲಿ ಶೋಧಿಸಿದ ಚಿತ್ರಗಳ ಕಲ್ಲಾಸರೆಗಳನ್ನು ಹುಡುಕುವ ಸಂದರ್ಭದಲ್ಲಿ ಇನ್ನೂ ಒಂಭತ್ತು ಹೊಸ ವರ್ಣಚಿತ್ರ ಕಲ್ಲಾಸರೆಗಳನ್ನು ಬೆಳಕಿಗೆ ತಂದರು.[೨೨] ಹೈದರಾಬಾದ್ ಸಂಸ್ಥಾನದ ಪುರಾತತ್ವ ಸರ್ವೇಕ್ಷಣಾ ಇಲಾಖೆ ಮತ್ತು ಭೂ ವಿಜ್ಞಾನ ಇಲಾಖೆಗಳು ೧೯೪೦ರ ದಶಕದಲ್ಲಿ ರಾಯಚೂರು ಜಿಲ್ಲೆಯ ಮಸ್ಕಿ, ಕಲ್ಲೂರು, ಯಾದಗಿರಿ ಜಿಲ್ಲೆಯ ಬಲಿಚಕ್ರ ಮತ್ತು ಗುಲ್ಬರ್ಗ ಜಿಲ್ಲೆಯ ಆತನೂರು ನೆಲೆಗಳಲ್ಲಿ ಕುಟ್ಟು ಮತ್ತು ವರ್ಣಚಿತ್ರಗಳನ್ನು ಶೋಧಿಸಿ ತಮ್ಮ ಶಾಖೆಯ ವಾರ್ಷಿಕ ವರದಿಗಳಲ್ಲಿ ಪ್ರಕಟಿಸಿವೆ. ನಂತರ ಆಗಿನ ಮುಂಬೈ ಸರ್ಕಾರದ ಕನ್ನಡ ಸಂಶೋಧನಾ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಆರ್.ಎಸ್. ಪಂಚಮುಖಿ ಅವರು ೧೯೩೯–೪೦ರಲ್ಲಿ ಕಳ್ಳೊಳ್ಳಿಯ ಎಮ್ಮಿಗುಟ್ಟದಲ್ಲಿರುವ ಬಯಲು ಬಂಡೆ ಚಿತ್ರಗಳನ್ನು ಸಂಶೋಧಿಸಿದರು.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಫಾಸೆಟ್ ನಂತರ ಗೋರ್ಡನ್ ಅವರು ಕಪ್ಪಗಲ್ಲು ನೆಲೆಯಲ್ಲಿ ಸಂಶೋಧನೆಯನ್ನು ಮುಂದುವರೆಸಿದರೆ, ಎಂ.ಎಸ್. ನಾಗರಾಜರಾವ್ ಮತ್ತು ಮಲ್ಹೋತ್ರ ಅವರು ತೆಕ್ಕಲಕೋಟೆ ಪ್ರದೇಶದಲ್ಲಿ ವರ್ಣಚಿತ್ರ ಕಲ್ಲಾಸರೆ ಮತ್ತು ಬಯಲು ಬಂಡೆ ಚಿತ್ರಗಳನ್ನು ಬೆಳಕಿಗೆ ತಂದರು.[೩೩] ನಂತರ ೧೯೬೯ರಲ್ಲಿ ಜೆಡ್.ಎ. ಅನ್ಸಾರಿ ಮತ್ತು ಎಮ್. ಎಸ್ ನಾಗರಾಜರಾವ್ ಅವರು ಸಂಗನಕಲ್ಲು ನೆಲೆಯಲ್ಲಿ ಬಂಡೆ ಚಿತ್ರಗಳನ್ನು ಶೋಧಿಸಿದರು.[೩೪] ಹಾಗೆಯೇ ಅಸುಂದರ ಅವರು ಹಲಕುಂದಿ ಪರಿಸರದಲ್ಲಿನ ಕುಟ್ಟು ಚಿತ್ರಗಳನ್ನು ಪತ್ತೆಹಚ್ಚಿದರು.[೩೫] ನಂತರ ರವಿ ಕೋರಿಶೆಟ್ಟರ್ ಮತ್ತು ಅವರ ಸಂಶೋಧನ ತಂಡ ಕಪ್ಪಗಲ್ಲು ಸಂಗನಕಲ್ಲು ಆರ್ಕಿಯಾಲಾಜಿಕಲ್ ರಿಸರ್ಚ್ ಪ್ರಾಜೆಕ್ಟ್ ಮೂಲಕ ಹಲವು ಸಂಶೋಧನೆಗಳಿಗೆ ಕಾರಣೀಭೂತರಾಗಿದ್ದಾರೆ.

ಅ.ಸುಂದರ ಅವರು ಕರ್ನಾಟಕದಾದ್ಯಂತ ಪ್ರಾಗಿತಿಹಾಸ ಕಾಲದ ವರ್ಣಚಿತ್ರ, ಕುಟ್ಟು ಚಿತ್ರಗಳನ್ನು ಹಾಗೂ ಗೀರುಚಿತ್ರಗಳನ್ನು ಶೋಧಿಸಿ ಪ್ರಕಟಿಸಿದರು. ಅಷ್ಟೇ ಅಲ್ಲದೇ ಹೆಚ್ಚಿನ ಅಧ್ಯಯನಕ್ಕಾಗಿ ಈ ಹಿಂದೆ ಸಂಶೋಧಿಸಿದ ನೆಲೆಗಳನ್ನು ಪುನರ್ ಪರಿಶೀಲಿಸುವ ವೇಳೆ ಇನ್ನು ಹಲವು ನೆಲೆಗಳ ಮೇಲೆ ಬೆಳಕು ಚೆಲ್ಲುವುದರ ಮೂಲಕ ವಿಶ್ಲೇಷಣಾತ್ಮಕ ಲೇಖನಗಳನ್ನು ಪ್ರಕಟಿಸಿದರು. ೧೯೭೪-೧೯೯೪ ವರೆಗಿನ ಪ್ರಕಟಿಸಿದ ಎಲ್ಲಾ ಲೇಖನಗಳನ್ನು ಕ್ರೋಢಿಕರಿಸಿ ೧೯೯೪ರಲ್ಲಿ 'ಕನಾಟಕ ಪ್ರಾಗಿತಿಹಾಸದ ಕಾಲದ ಕಲೆ' ಎನ್ನುವ ಪುಸ್ತಕವನ್ನು ಪ್ರಕಟಿಸಿದರು. ಇವರ ಕಾರ್ಯ ಸಾಧನೆಗೆ ಕರ್ನಾಟಕ ಸರ್ಕಾರವು ೨೦೧೫ರಲ್ಲಿ 'ಕರ್ನಾಟಕ ಪುರಾತತ್ವ ರತ್ನ' ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಹಾಗೂ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯು 'ಎಕ್ಸಲೆನ್ಸ್ ಫಾರ್ ಆರ್ಕಿಯಾಲಾಜಿ' ಮತ್ತು ಮಧ್ಯಪ್ರದೇಶ ಸರ್ಕಾರ

ಡಾ. ವಿ.ಎಸ್. ವಾಕಣಕರ್ ಪ್ರಶಸ್ತಿ ನೀಡಿ ಗೌರವಿಸಿದೆ. ನಂತರ ೧೯೬೧ರಲ್ಲಿ ತುಂಗಭದ್ರಾ ನದಿ ತೀರದಲ್ಲಿನ ಆನೆಗೊಂದಿ, ಚಿಕ್ಕರಾಮಪುರ ನೆಲೆಗಳಲ್ಲಿ ವರ್ಣಚಿತ್ರಗಳನ್ನು ಶೋಧಿಸಿದರು. ಬಾದಾಮಿ, ಹೊಸ ಮಹಾಕೂಟ, ಐಹೊಳೆ, ಕೊಪ್ಪಳ, ಬಿಳೇಭಾವಿ, ಮಲ್ಲಾಪುರ, ತಿಮ್ಮಲಾಪುರ, ನಾರಾಯಣಪುರ, ಬಂಡಿ ಹರ್ಲಾಪುರ, ತಾವರಗೇರ, ಮಾನ್ವಿ ಬಯಲು ಮರ್ಚೆಡ್, ಕುರುಗೋಡು, ಹಲಕುಂದಿ, ಬೆಳಗಲ್ಲು, ಹಂಪಿ, ಬ್ರಹ್ಮಗಿರಿ, ಜಟ್ಟಂಗಿ ರಾಮೇಶ್ವರ, ಚಿತ್ರದುರ್ಗ ಮೊದಲಾದ ನೆಲೆಗಳನ್ನು ಸಂಶೋಧಿಸಿದರು.[೩೬]

ಶರಣಬಸಪ್ಪ ಕೋಲ್ಕಾರ ಅವರು ಕೊಪ್ಪಳ-ಗಂಗಾವತಿ ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಗವಿವರ್ಣ ಚಿತ್ರಗಳ ಅಧ್ಯಯನವನ್ನು ಕೈಗೊಂಡು ೨೦೧೦ರಲ್ಲಿ 'ಶಿಲಾಯುಗದ ಗವಿಚಿತ್ರಗಳು' ಎಂಬ ಹೊತ್ತಿಗೆಯನ್ನು ಪ್ರಕಟಿಸಿದರು. ಈ ಕೃತಿಯಲ್ಲಿ ಕೊಪ್ಪಳ, ಗಂಗಾವತಿ ಮತ್ತು ಹೊಸಪೇಟೆ ಪರಿಸರದಲ್ಲಿನ ೧೭ ಹೊಸ ನೆಲೆಗಳ ಜೊತೆಗೆ ಒಟ್ಟು ೭೬ ಗವಿ ಕಲ್ಲಾಸರೆ ಬಂಡೆಚಿತ್ರ ನೆಲೆಗಳನ್ನು ಶೋಧಿಸಿ ಈ ಪ್ರದೇಶದ ಪ್ರಾಗೈತಿಹಾಸಿಕ ಗವಿಚಿತ್ರಗಳ ಮಹತ್ವವನ್ನು ಅನಾವರಣಗೊಳಿಸಿದರು.೩೭ ೨೦೧೦ರಲ್ಲಿ ಪ್ರಕಟವಾದ 'ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಎಂಬ ಗ್ರಂಥದಲ್ಲಿ ಅ.ಲ.ನರಸಿಂಹನ್ ಅವರು ಕೊಪ್ಪಳ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಗಳು ಎಂಬ ಸಂಶೋಧನ ಲೇಖನವನ್ನು ಪ್ರಕಟಿಸಿದ್ದಾರೆ.

ಅದೇ ರೀತಿ ಬಿ.ಸಿ.ಪಾಟೀಲ್ ಅವರು ಕೊಪ್ಪಳದ ನೂತನ ಶಿಲಾಯುಗದ ನೆಲೆ ಮತ್ತು ಪ್ರಾಗೈತಿಹಾಸಿಕ ವರ್ಣಚಿತ್ರಗಳು ಹಾಗೂ ಟಿ.ಎಂ ಕೇಶವ, ಜಿ.ಎಸ್.ನರಸಿಂಹನ್, ಎಂ.ಪಿ.ವಿಶ್ವೇಶ್ವರ ಮತ್ತು ಸಿ.ಎಸ್.ಶೇಷಾದ್ರಿ ಅವರು ಚಿಕ್ಕರಾಮಪುರದಲ್ಲೊಂದು ಪ್ರಾಗೈತಿಹಾಸಿಕ ನಕ್ಷೆಯೇ? ಎಂಬ ಲೇಖನವನ್ನು ಪ್ರಕಟಿಸಿದರು.[೩೮]

೨೦೧೧ರಲ್ಲಿ ಸಿನೋಪೊಲಿಯವರು ಆನೆಗೊಂದಿ ಬಳಿಯಿರುವ ಕಡೇಬಾಗಿಲು ನೆಲೆಯಲ್ಲಿನ ವರ್ಣಚಿತ್ರಗಳನ್ನು ಶೋಧಿಸಿ ಅವುಗಳ ಪ್ರಾಗೈತಿಹಾಸಿಕ ಮಹತ್ವವನ್ನು ವಿವರಿಸಿದ್ದಾರೆ. ೨೦೧೯ರಲ್ಲಿ ಮೋಹನ ಆರ್. ಅವರು 'ಕರ್ನಾಟಕದ ಆದಿಮ ಚಿತ್ರಕಲೆ' ಎಂಬ ಕೃತಿಯನ್ನು ಹೊರ ತಂದಿದ್ದಾರೆ. ಈ ಗ್ರಂಥದಲ್ಲಿ ಕೊಪ್ಪಳದ ಏಳುಗುಡ್ಡ ಪ್ರದೇಶದಲ್ಲಿರುವ ಬಂಡೆಚಿತ್ರಗಳು ಒಳಗೊಂಡಂತೆ ಕರ್ನಾಟಕದ ಬೇರೆ ಬೇರೆ ಸ್ಥಳದಲ್ಲಿ ದೊರಕಿರುವ ವರ್ಣಚಿತ್ರಗಳನ್ನು ಕುರಿತು ವೈಜ್ಞಾನಿಕ ವಿಧಾನಗಳನ್ನು ಅನುಸರಿಸಿ ಅಧ್ಯಯನ ಮಾಡಿದ್ದಾರೆ.[೩೯]

**ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಯ ಗವಿ/ಕಲ್ಲಾಸರೆಯ ಚಿತ್ರಗಳು**

**ನೆಲೆ:** ೧. ತೆಕ್ಕಲಕೋಟೆಯ ಸುತ್ತಮುತ್ತಲಿರುವ ಉಡೇದಗುಡ್ಡ, ಹಿರೇಹರ್ಲ, ಕರಿಮಟ್ಟಿಗುಡ್ಡ, ಕಡೇಗುಡ್ಡ, ಜಕ್ಕೇರುಗುಡ್ಡ ಮುಂತಾದ ಬೆಟ್ಟಗಳ ಕಲ್ಲಾಸರೆಗಳಲ್ಲಿ ಶಿಲಾಯುಗದ ಮಾನವನು ರಚಿಸಿದ ಪ್ರಾಗೈತಿಹಾಸಿಕ ವರ್ಣಚಿತ್ರಗಳು ಬೆಳಕಿಗೆ ಬಂದಿವೆ. ಅವುಗಳಲ್ಲಿ ಉಡೇದಗುಡ್ಡದಲ್ಲಿನ ವರ್ಣಚಿತ್ರಗಳು ಪ್ರಕಟಣೆಯಾಗಿದ್ದು, ಅದರಲ್ಲಿರುವ ವಿವಿಧ ಪ್ರಾಣಿ, ಪಕ್ಷಿ, ಮನುಷ್ಯರ ಚಿತ್ರಗಳು ಮನಮೋಹಕವಾಗಿವೆ. ಪಕ್ಷಿಗಳಲ್ಲಿ ನವಿಲಿನ ಚಿತ್ರ, ಕೃಷ್ಣಮೃಗ, ಜಿಂಕೆಚಿತ್ರಗಳು ಆಕರ್ಷಕವಾಗಿವೆ. ಹಾಗೂ ಕೈ ಕೈ ಹಿಡಿದು ಸಾಮೂಹಿಕ ನೃತ್ಯ ಮಾಡುವ ಮನುಷ್ಯನ ಚಿತ್ರಗಳು ಬೇಟೆ ಆಚರಣೆಗೆ ಸಂಬಂಧಿಸಿವೆ. ಅವುಗಳನ್ನು ಹೊರತುಪಡಿಸಿ ಇತ್ತೀಚೆಗೆ ಕೈಗೊಂಡ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹೊಸದಾಗಿ ತೆಕ್ಕಲಕೋಟೆಯಿಂದ ಉಡೇಗೋಳಕ್ಕೆ ಸಂಚರಿಸುವ ರಸ್ತೆಯ ಬಲಭಾಗದಲ್ಲಿರುವ ಜಕ್ಕೇರು ಗುಡ್ಡದ ಕಲ್ಲಾಸರೆಗಳಲ್ಲಿ ಉಡೇದಗುಡ್ಡದಲ್ಲಿರುವ ಚಿತ್ರಗಳಿಗಿಂತ ಭಿನ್ನವಾದ ವರ್ಣಚಿತ್ರಗಳನ್ನು ಶೋಧಿಸಲಾಯಿತು.[೪೦] ಅವುಗಳಲ್ಲಿ ಕಡವೆ, ಎತ್ತು, ಜಿಂಕೆ ಮತ್ತು ಹಸ್ತಮುದ್ರೆಯ ಕೆಂಪು ವರ್ಣದ ಚಿತ್ರಗಳವೆ. ಕೆಂಪುವರ್ಣದ(ಉರುಮುಂಜಿ) ಪ್ರಾಣಿ ಚಿತ್ರಗಳ ಒಳಭಾಗವು ಬಹುರೇಖೆಗಳಿಂದ ಕೂಡಿದ್ದು, ಅವುಗಳು ಶೈಲಿಯಲ್ಲಿ ವಿಶಿಷ್ಟ ಅಲಂಕಾರವನ್ನು ಹೊಂದಿವೆ. ಕೆಲವು ಹಸ್ತಮುದ್ರೆಗಳನ್ನು ಹಾಗೂ ಕಡ್ಡಿ ಅಕೃತಿಯ ಬಿಳಿವರ್ಣದ ಚಿತ್ರಗಳು ಆದಿ ಇತಿಹಾಸಿಕ ಕಾಲಕ್ಕೆ ಸಂಬಂಧಿಸಿವೆ. ಕೆಂಪು ಅಥವಾ ಕಂದು ವರ್ಣದ ಚಿತ್ರಗಳು ನವಶಿಲಾಯುಗ– ತಾಮ್ರ ಶಿಲಾಯುಗದ ಮಾನವನು ರಚಿಸಿದವುಗಳಾಗಿವೆ. ದ್ವಿಬಾಹ್ಯ ರೇಖೆಗಳಿಂದ ಪ್ರಾಣಿಗಳ ಮುಂಡಗಳನ್ನು ರಚಿಸಿರುವ ಚಿತ್ರವು ಅಪರೂಪವೆನಿಸುತ್ತದೆ. ಹಾಗೂ ಸ್ವಸ್ತಿಕ್, ಚಕ್ರದ ಚಿಹ್ನೆಗಳ ವರ್ಣಚಿತ್ರವು ವಿಶೇಷತೆಯಿಂದ ಕೂಡಿವೆ.

ಕರಿಮಟ್ಟಿಗುಡ್ಡದಲ್ಲಿರುವ ಬಂಡೆಯ ಮೇಲೆ ಎರಡು ಗೂಳಿ ಚಿತ್ರಗಳು ಮತ್ತು ಎರಡು ಹಸ್ತದ ಚಿತ್ರಗಳನ್ನು ಬಿಡಿಸಲಾಗಿದ್ದು ಅವುಗಳು ಆಕರ್ಷಕವಾಗಿವೆ. ಒಂದು ಗೂಳಿಯ ಚಿತ್ರವು ಬಾಹ್ಯ

ರೇಖೆಗಳಿಂದ ಕೂಡಿದ್ದು v ಆಕಾರದ ಕೋಡುಗಳನ್ನು ಹೊಂದಿದೆ. ಡುಬ್ಬವಿರುವ ಭುಜ ಸಮಾನಾಂತರ ರೇಖೆಯಲ್ಲಿರುವ ಬೆನ್ನಿನ ರಚನೆಯಿದೆ. ಇಳಿಬಿದ್ದಿರುವ ಬಾಲದಲ್ಲಿ ಗೆರೆಗಳನ್ನು ಎಳೆಯಲಾಗಿದ್ದು, ಅದು ಬಾಲದಲ್ಲಿ ಕೂದಲಿರುವುದನ್ನು ಸೂಚಿಸುತ್ತದೆ. ನಾಲ್ಕು ಕಾಲುಗಳು, ಕೊರಳಲ್ಲಿ ಅಡ್ಡಗೆರೆಯನ್ನು ಎಳೆದಿದ್ದು ಅದು ಕೊರಳು ಪಟ್ಟಿ ಮೂಗುದಾರದ ರಚನೆಯನ್ನು ತೋರಿಸುತ್ತದೆ. ಇದರಿಂದ ಗೂಳಿಯನ್ನು ಪಳಗಿಸಲಾಗುತ್ತಿತ್ತು ಎಂದು ಹೇಳಬಹುದು. ಮತ್ತೊಂದು ಗೂಳಿಯ ಚಿತ್ರವು ಮೊದಲನೆಯ ಗೂಳಿ ಚಿತ್ರಕ್ಕಿಂತ ಭಿನ್ನವಾಗಿದೆ. ಎರಡನೆಯ ಗೂಳಿಯ ಚಿತ್ರವನ್ನು ಛಾಯಾರೂಪದಲ್ಲಿ ತೋರಿಸಲಾಗಿದೆ. ಇದರಲ್ಲಿ ಗೂಳಿಯ ಕೋಡುಗಳು v ಆಕಾರದಲ್ಲಿದ್ದು ಹಿಂದಕ್ಕೆ ಬಾಗಿಕೊಂಡಿರುವಂತೆ ಬಿಡಿಸಲಾಗಿದೆ. ಗೂಳಿಯ ಮುಖವು ಉದ್ದವಾಗಿದೆ ಭುಜವನ್ನು ಎತ್ತರಿಸಲಾಗಿದೆ. ಬೆನ್ನಿನ ರಚನೆಯು ತಗ್ಗಾಗಿದ್ದು ಬಾಲವನ್ನು ಮೇಲಕ್ಕೆ ಎತ್ತರಿಸಿ ಕಾಲುಗಳನ್ನು ಅಗಲವಾಗಿ ಚಿತ್ರಿಸಿರುವುದರಿಂದ ಗೂಳಿಯು ಜಿಗಿಯುತ್ತಿರುವಂತೆ ತೋರುತ್ತದೆ. ಇದೇ ಸ್ಥಳದಲ್ಲಿ ಬೆಟ್ಟದ ತುದಿಯಲ್ಲಿರುವ ಕಲ್ಲಾಸರೆಯಲ್ಲಿ ಎರಡು ಛಾಯಾರೂಪದ ಹಸ್ತಗಳ ಗುರುತನ್ನು ಮೂಡಿಸಿರುವುದು ವಿಶೇಷವಾಗಿದೆ.[೪೧] ಪ್ರಾಯಶಃ ಕುಟ್ಟು ಚಿತ್ರದಲ್ಲಿ ಹಸ್ತದ ಗುರುತುಗಳನ್ನು ಮೂಡಿಸಿರುವುದು ಇದೇ ಮೊದಲು ಎಂದು ಹೇಳಬಹುದು.

**ನೆಲೆ:೨** ಸಿರುಗುಪ್ಪ ತಾಲೂಕಿನ ಸಿದ್ದರಾಂಪುರ ಗ್ರಾಮದ ದಕ್ಷಿಣಕ್ಕೆ ಸಿರಿಗೇರಿ ಮಾರ್ಗವಾಗಿ ಹೋಗುವ ರಸ್ತೆಯ ಎಡಭಾಗದಲ್ಲಿ ಕಂಡುಬರುವ ಗವಿಸಿದ್ದೇಶ್ವರ ಬೆಟ್ಟದಲ್ಲಿ ಏಕಶಿಲಾ ಬಂಡೆಯ ಆಸರೆಯಲ್ಲಿ ಏಳು ಕಂದುಬಣ್ಣದ ಚಿತ್ರಗಳಿವೆ.[೪೨] ಅವುಗಳಲ್ಲಿ ಐದು ಜನ ಪುರುಷರು, ಒಬ್ಬ ಮಹಿಳೆ ಹಾಗೂ ಗೂಳಿಯ ಚಿತ್ರಗಳಿವೆ. ಇವುಗಳು ಉತ್ತರಾಭಿಮುಖವಾಗಿರುವ ಶಿಲಾಶ್ರಯದಲ್ಲಿ ಕಂಡುಬಂದಿದ್ದು, ಮೊದಲಿಗೆ ಇರುವ ಮೇಲ್ಭಾಗದ ಚಿತ್ರದಲ್ಲಿ ವ್ಯಕ್ತಿಯ ಚಿತ್ರವಿದ್ದು ಅದು ನೃತ್ಯದ ಭಂಗಿಯಲ್ಲಿದೆ. ಇದು ೩೦ ಸೆಂ.ಮೀ, ಉದ್ದ ಅಳತೆ ಹೊಂದಿದೆ. ಇದರ ಪಕ್ಕದಲ್ಲಿರುವ ಚಿತ್ರವು ಗಾತ್ರದಲ್ಲಿ ಚಿಕ್ಕದಾಗಿದ್ದು, ಅದರಲ್ಲಿ ಸ್ತ್ರಿ ಪುರುಷರು ಜೊತೆಯಲ್ಲಿರುವುದನ್ನು ಕಾಣಬಹುದು. ಇವುಗಳ ಕೆಳಭಾಗದಲ್ಲಿ ಸಮಾನ ಅಳತೆಯಲ್ಲಿರುವ ಚಿತ್ರದಲ್ಲಿ ಮೂರು ಜನ ಪುರುಷರು ಕೈ ಕೈ ಹಿಡಿದು ಕುಣಿತದಲ್ಲಿ ತೊಡಗಿರುವಂತಿದೆ. ಹಾಗೂ ಎಡ ಭಾಗದಲ್ಲಿರುವ ಚಿತ್ರವು ಎತ್ತಿನದಾಗಿದ್ದು, ಇದು ೩೮ ಸೆಂ.ಮೀ, ಉದ್ದ ಹಾಗೂ ೩೫ ಸೆಂ. ಮೀ,ಅಗಲ ಅಳತೆಯನ್ನು ಹೊಂದಿದೆ. ಇದರ ಮೈ ಮೇಲೆ ವಿಶಿಷ್ಟವಾದ ರೇಖೆಗಳಿಂದ ಅಲಂಕರಿಸಲಾಗಿದೆ. ಇದರಲ್ಲಿ ಸ್ಪಷ್ಟವಾಗಿ ಅಲಂಕರಣೆಯ ಉದ್ದೇಶವೇ ಪ್ರಧಾನವಾಗಿರುವುದನ್ನು ಗುರುತಿಸಬಹುದು. ಇಲ್ಲಿನ ಬಹುತೇಕ ಚಿತ್ರಗಳು ಮಳೆ ನೀರಿನಿಂದ ಹಾಳಾಗಿದ್ದು, ಇನ್ನುಳಿದ ಅವುಗಳ ವಿನ್ಯಾಸವನ್ನು ಸ್ಪಷ್ಟವಾಗಿ ಗುರುತಿಸುವುದು ಕಷ್ಟಕರವಾಗಿದೆ.

**ನೆಲೆ:೩.** ಕಮಲಾಪುರದಲ್ಲಿ(ಹೊಸಪೇಟೆ ತಾ.) ಕನ್ನಡ ವಿಶ್ವವಿದ್ಯಾಲಯದ ಕುಲಪತಿ ನಿವಾಸದ ಪೂರ್ವಕ್ಕೆ ಇರುವ ಒಂಟಿಕಲ್ಲು ಗುಂಡಿನ ಕಲ್ಲಾಸರೆಯಲ್ಲಿ ಜಿಂಕೆಯ (ಕಡವೆ) ವರ್ಣಚಿತ್ರ ಹಾಗೂ ಒಂದರ ಹಿಂದೆ ಒಂದರಂತೆ ಸಾಲಾಗಿ ನಿಂತಿರುವ ನಾಲ್ಕು ಎತ್ತು ಚಿತ್ರಗಳ ಮುಂಭಾಗದಲ್ಲಿ ತ್ರಿಶೂಲಾಕೃತಿಯ ಚಿತ್ರಣವಿದೆ.[೪೩] ಈ ಎಲ್ಲಾ ಚಿತ್ರಗಳಲ್ಲಿರುವ ಪ್ರಾಣಿಗಳು ಪೂರ್ವದ ದಿಕ್ಕಿನ ಕಡೆಗೆ ಮುಖಮಾಡಿರುವುದನ್ನು ಕಾಣಬಹುದು.

**ನೆಲೆ:೪.** ಕಮಲಾಪುರ ಹತ್ತಿರ ತಳವಾರಘಟ್ಟಕ್ಕೆ ಹೋಗುವ ರಸ್ತೆ ಬದಿಯ ಬೆಟ್ಟದಲ್ಲಿರುವ ಕೋಟಮ್ಮ ಗುಹಾಲಯದ ಕಲ್ಲಾಶ್ರಯದಲ್ಲಿ ಸಿಂಧೂ ಲಿಪಿಯನ್ನು ಹೋಲುವ ಕೆಂಪುವರ್ಣದ ಚಿತ್ರಿತ ಅಕ್ಷರಗಳಿವೆ. ಈ ಲಿಪಿಗಳನ್ನು ಕುರಿತು ಅಧ್ಯಯನ ಮಾಡಿರುವ ಕೆ.ಎಂ ಮೇತ್ರಿ ಅವರು ಗೊಂಡಿ ಭಾಷೆಗೆ ಸಮೀಕರಿಸಿ ವ್ಯಾಖ್ಯಾನಿಸಲು ಪ್ರಯತ್ನಿಸಿದ್ದಾರೆ.[೪೪]

**ನೆಲೆ:೫.** ಹಂಪಿಯ ಭರಮದೇವರ ಗುಂಡಿನಲ್ಲಿ ಸ್ವಲ್ಪವೇ ಹಿಂದೆ ಸರಿದ ಅರ್ಧ ಗೋಲಾಕೃತಿಯ ಚಿತ್ರ ಒಂದಿದ್ದು ಇದರ ಮೇಲೆ ಒಂದು ಕಡೆಯಿಂದ ಮತ್ತೊಂದು ಕಡೆಯವರೆಗೆ ಕುಣಿತದಲ್ಲಿ ತೊಡಗಿದ ನಾಲ್ಕು ದೊಡ್ಡ ಮನುಷ್ಯಾಕೃತಿಗಳಿವೆ.[೪೫] ಎಡಗಡೆಯಿಂದ ಕಾಣುವ ಮೊದಲನೆಯ ಮೂರು ಚಿತ್ರಗಳು ಬಲಬದಿ ನೋಟದಲ್ಲಿವೆ. ಕೊನೆಯದು ಮುಂಬದಿ ನೋಟದಲ್ಲಿದೆ. ಮೊದಲನೆಯ ಎರಡು ಚಿತ್ರಗಳಲ್ಲಿ ಸ್ಪಷ್ಟವಾಗಿ ಉಬ್ಬಿದ ಸ್ತನವೂ ಕಾಣಿಸುವುದರಿಂದ ಅವು ಸ್ತ್ರೀ ಆಕೃತಿಗಳು. ಮೊದಲನೆಯದು ಸಣ್ಣಾಕೃತಿಯಲ್ಲಿದ್ದು ಬಹುಶಃ ಹುಡುಗನಿರಬೇಕು. ತಲೆಯ ಭಾಗವು ಅಳಿಸಿ ಹೋಗಿರಬಹುದು. ಈ ಮೂರು ಚಿತ್ರಗಳು ಸ್ವಲ್ಪ ಕುಗ್ಗಿ ನಿಂತ ಭಂಗಿಯಲ್ಲಿವೆ. ಮುಂಡದ ಭಾಗವು ಸ್ವಲ್ಪ ಮುಂದೆ ಬಾಗಿದೆ. ಕೈಗಳನ್ನು ನೆಟ್ಟಗೆ ಮುಂಚಾಚಿದ ಬೆರಳುಗಳನ್ನು ಬಿಡಿಸಲಾಗಿದೆ. ಮುಖವು ಬಲಕ್ಕೆ ಅಂದರೆ ಮುಂಬದಿಗೆ ತಿರುಗಿದೆ. ಮೊದಲನೆಯದಕ್ಕೆ ಬಾಲವಿದ್ದಂತಿದ್ದು, ಮೇಲಕ್ಕೆತ್ತಲ್ಪಟ್ಟಿದೆ. ತಲೆಯಿಂದ ಹಿಡಿದು ಕಾಲಿನವರೆಗೂ ಇಡೀ ಮೈಯಲ್ಲ ರೇಖಾಚಿತ್ರಗಳಿಂದ ತುಂಬಿದೆ. ಮುಖದ ಮೇಲೆ ಗುಣಕಾರ ಆಕೃತಿಯದ್ದು, ಪ್ರತಿಯೊಂದು ಕವಲಿನಲ್ಲಿಯೂ ಒಂದೊಂದು ಅರ್ಧ ಕಂಸವಿದೆ. ಕೈಗಳ ಮೇಲೆ ಉದ್ದಕ್ಕೂ ನೀಳ ರೇಖೆಗಳಿವೆ. ಮುಂಡದ ಭಾಗದ ಮೇಲೆ ದ್ವಿರೇಖೆಯ ಗುಣಾಕಾರ ಆಕೃತಿಯಿದ್ದು, ರೇಖೆಗಳ ಮಧ್ಯದಲ್ಲಿ ಅಡ್ಡ ರೇಖೆಗಳಿವೆ. ನಾಲ್ಕನೆಯ ವ್ಯಕ್ತಿಯ ಎರಡೂ ಕೈಗಳು ಆ ಕಡೆ ಈ ಕಡೆ ಮುಂಚಾಚಿವೆ. ಇದರ ತಲೆಯ ಭಾಗ ಅಷ್ಟಾಗಿ ಸ್ಪಷ್ಟವಾಗಿ ಕಾಣುತ್ತಿಲ್ಲ. ಎದೆಯ ಭಾಗ ತೀರ ಸಣ್ಣಗಿದ್ದು, ಹೊಟ್ಟೆಯ ಭಾಗ ಅತಿರೇಕವಾಗಿ ಉಬ್ಬಿದಂತೆ ಕಾಣುತ್ತದೆ. ಕಾಲುಗಳು ಅಗಲಿಸಿದ್ದು, ಕೈಗಳಂತೆ ತೆಳ್ಳಗಿವೆ. ಇದು ಗರ್ಭಿಣಿ ಸ್ತ್ರೀ ಚಿತ್ರವೆಂದು ಅಭಿಪ್ರಾಯಿಸಬಹುದು.[೪೬] ತುಂಗಭದ್ರಾ ನದಿಯ ತೀರದಲ್ಲಿ ಚಕ್ರ ತೀರ್ಥದ ಹತ್ತಿರ ಈ ಕಲ್ಲಾಸರೆ ಇದೆ. ಇಲ್ಲಿ ದೊಡ್ಡ ಪಕ್ಷಿ ಮತ್ತು ಮನುಷ್ಯ ಚಿತ್ರಗಳಿವೆ. ಮನುಷ್ಯನು ಕೈಯಲ್ಲಿ ಆಯುಧವನ್ನು ಹಿಡಿದಿದ್ದಾನೆ. ಪಕ್ಷಿ ಮತ್ತು ಮನುಷ್ಯನ ದೇಹದ ಮೇಲೆ ರೇಖೆಗಳ ಅಲಂಕರಣಗಳಿವೆ. ಇಲ್ಲಿಯೇ ಹಿಡಿಕೆಯುಳ್ಳ ಖಡ್ಗದ ಚಿತ್ರವಿದೆ.

**ನೆಲೆ:೬.** ಬಾಲಕೃಷ್ಣ ದೇವಾಲಯದ ಎದುರಿಗೆ ಇರುವ ಕಲ್ಲಾಸರೆಯಲ್ಲಿ ಉದ್ದ ಕತ್ತಿನ ಕಡವೆಯ ಚಿತ್ರ ಮತ್ತು ಮನುಷ್ಯ ಚಿತ್ರಗಳಿವೆ. ಕಡವೆಯದು ಬಾಹ್ಯ ರೇಖಾ ಚಿತ್ರ ಕೇವಲ ಅದರಲ್ಲಿರುವ ಕತ್ತು ಮುಖ ಮಾತ್ರ ಕಾಣುತ್ತೇವೆ. ಚಿತ್ರದ ಕೆಳಗೆ ಪಾರ್ಶ್ವಬದಿಯಲ್ಲಿ ಮನುಷ್ಯನ ಚಿತ್ರವಿದೆ. ಕಾಲುಗಳನ್ನು ಸ್ವಲ್ಪ ಬಗ್ಗಿಸಿ ನಿಂತಿದ್ದು ಕೈಗಳು ಹಾಗೂ ಮುಖ ಮಾಸಿ ಹೋಗಿವೆ. ಮುಂಡದಲ್ಲಿ ಸೊಂಟದವರೆಗೆ ಉದ್ದ ಚುಕ್ಕಿಗಳ ಸೊಂಟದಿಂದ ಕೆಳಗೆ ಕಾಲಿನಲ್ಲಿ ಚುಕ್ಕೆ ಸಾಲುಗಳ ಅಲಂಕಾರಗಳಿವೆ. ಮೇಲ್ಬದಿಯಲ್ಲಿ ನಕ್ಷತ್ರಾಕಾರದ ಅಸ್ಪಷ್ಟ ಚಿತ್ರವಿದೆ. ಒಟ್ಟಾರೆಯಾಗಿ ಹಂಪಿ ಪರಿಸರದ ಶಿಲಾ ಸಮುಚ್ಛಾಯಗಳಲ್ಲಿ

ವರ್ಣಚಿತ್ರಗಳು, ರೇಖಾಚಿತ್ರಗಳು ಹೆಚ್ಚಾಗಿ ಕಂಡುಬಂದಿದ್ದು, ಇನ್ನು ಹೆಚ್ಚಿನ ಪ್ರಮಾಣದಲ್ಲಿದ್ದ ಅವಶೇಷಗಳು ಪ್ರಾಯಶಃ ವಿಜಯನಗರ ಪಟ್ಟಣದ ಬೆಳವಣಿಗೆಯ ಪ್ರಮುಖ ಕಾರಣಗಳಿಂದಾಗಿ ನಾಶದ ಅಂಚಿಗೆ ಸರಿಯುತ್ತಾ ಹೋಗಿರಬಹುದೆಂದು ಅಭಿಪ್ರಾಯಿಸಬಹುದು.

**ನೆಲೆ:೭.** ವೆಂಕಟಾಪುರದ ಕಲ್ಲಾಸರೆಯಲ್ಲಿರುವ ಬಂಡೆಚಿತ್ರಗಳಲ್ಲಿ ವರ್ಣಚಿತ್ರಗಳು, ಕುಟ್ಟುಚಿತ್ರಗಳಲ್ಲಿ ಮನುಷ್ಯ, ಹುಲಿ, ಮುಂತಾದ ಪ್ರಾಣಿಗಳ ಚಿತ್ರಗಳು ಹಾಗೂ ಕೆಲವು ಕೆಂಪುವರ್ಣದ ವಿಶಿಷ್ಟ ಚಿಹ್ನೆಗಳಿವೆ. ಮನುಷ್ಯ ಚಿತ್ರಗಳು ಕಡ್ಡಿಯಂತ ರೂಪದಲ್ಲಿದ್ದು ಕೈಗಳು ಮೇಲಕ್ಕೆತ್ತಿವೆ. ಹಾಗೂ ಹುಲಿಯ ಚಿತ್ರ ಸಹಜವಾಗಿದೆ. ಕೆಲವು ಪ್ರಾಣಿಗಳು ಕುದುರೆಗಳಂತೆ ತೋರುತ್ತವೆ. ಎರಡನೆಯ ಕಲ್ಲಾಸರೆಯಲ್ಲಿ ಮನುಷ್ಯರ ಮತ್ತು ಪ್ರಾಣಿಗಳ ಚಿತ್ರಗಳಿವೆ. ಒಬ್ಬರಿಗೊಬ್ಬರು ಕೈ ಕೈ ಹಿಡಿದು ನೃತ್ಯದಲ್ಲಿ ತೊಡಗಿರುವಂತ ಮನುಷ್ಯ ಚಿತ್ರಗಳ ಎರಡು ಸಾಲುಗಳಿವೆ. ಈ ರೀತಿಯ ಒಬ್ಬರಿಗೊಬ್ಬರು ಕೈ ಕೈ ಹಿಡಿದು ನೃತ್ಯ ಮಾಡುತ್ತಿರುವ ಚಿತ್ರಗಳು ಜಿಲ್ಲೆಯ ಹಲವು ಕಡೆಗಳಲ್ಲಿ ಕಂಡುಬಂದಿವೆ. ಮೇಲಿನದು ಛಾಯಾರೂಪದ್ದು, ಕೆಳಗಿನದು ಬಾಹ್ಯ ರೇಖಾರೂಪದ್ದಾಗಿವೆ. ಮೇಲಿನ ಮನುಷ್ಯ ಚಿತ್ರಗಳು ತ್ರಿಕೋನಾಕಾರದವು. ಕೆಳಗಿನವು ತ್ರಿಕೋನ ರೀತಿಯ ಮುಂಡವನ್ನು ಹೊಂದಿದವು, ಮೇಲಿನ ಕೆಲವು ಚಿತ್ರಗಳಲ್ಲಿ ತಲೆಯ ಸುತ್ತಲೂ ಗೆರೆಗಳಿದ್ದು ಅವು ಕೂದಲನ್ನು ನಿದರ್ಶಿಸುತ್ತವೆ ಎಂದು ಶರಣಬಸಪ್ಪ ಕೋಲ್ಕಾರ ಅವರು ತಮ್ಮ ಶಿಲಾಯುಗದ ಗವಿಚಿತ್ರಗಳು ಎಂಬ ಹೊತ್ತಿಗೆಯಲ್ಲಿ ವಿವರಿಸಿದ್ದಾರೆ.[೪೭]

**ನೆಲೆ:೮.** ಹೊಸಪೇಟೆ ತಾಲೂಕಿನ ಗುಡಿ ಓಬಳಾಪುರದಲ್ಲಿ ಶಿಲಾ–ತಾಮ್ರಯುಗ ಸಂಸ್ಕೃತಿಯ ವರ್ಣಚಿತ್ರಗಳು ಬಂಡೆಯ ಮೇಲೆ ದೊರೆತಿದ್ದು ಅವು ಮಾಸಿದಂತಾಗಿವೆ. ನಾಗೇನಹಳ್ಳಿಯ ಧರ್ಮರಗುಡ್ಡವಿದ್ದು ಗುಡ್ಡದಲ್ಲಿಯ ದೇವಾಲಯದ ಹಿಂಭಾಗದಲ್ಲಿ ಚಿತ್ರಿತ ಕಲ್ಲಾಸರೆ ಇದೆ. ಈ ಕಲ್ಲಾಸರೆ ಉತ್ತರಮುಖದಲ್ಲಿ ಕೆಂಪುಬಣ್ಣದ ಚಿತ್ರಗಳಿವೆ. ಕೆಳಭಾಗದಲ್ಲಿ ಮೂರು ಎತ್ತಿನ ಕಣ್ಣು ಛಾಯಾರೂಪದ ಚಿತ್ರಗಳಿವೆ. ಶೈಲಿಯಿಂದ ಅವು ಶಿಲಾಯುಗ ಚಿತ್ರಗಳೆಂದು ದಾಖಲಾಗಿವೆ. ಉಳಿದಂತೆ ಗೂಳಿ, ಕಡ್ಡಿಯಾಕಾರದ ಮನುಷ್ಯ, ಎತ್ತಿನ ಸವಾರ, ಕಡ್ಡಿಯಾಕಾರದ ಚಿತ್ರಗಳು ಸಾಮಾನ್ಯವಾಗಿವೆ.

**ನೆಲೆ:೯.** ಬಳ್ಳಾರಿ ಜಿಲ್ಲೆಯ ಮಾಳೇಹಳ್ಳಿಯ (ಕೂಡ್ಲಿಗಿ ತಾಲೂಕು) ಉತ್ತರಕ್ಕೆ ಹಾಗೂ ತಿಪ್ಪೇಹಳ್ಳಿಗೆ ಹೋಗುವ ದಾರಿಯ ಎಡಬದಿಯಲ್ಲಿ ಎತ್ತರದ ಹೆಬ್ಬಂಡೆಗಳಿದ್ದು ಇವುಗಳನ್ನು 'ದವನಪ್ಪನ ಗುಂಡು' ಗಳೆಂದು ಕರೆಯಲಾಗುತ್ತದೆ. ಈ ಗುಂಡುಗಳ ಮಧ್ಯಭಾಗದಲ್ಲಿ ಜಿಂಕೆ ಮತ್ತು ಹಾವಿನ ಕುಟ್ಟು ಚಿತ್ರಗಳಿವೆ. ಜಿಂಕೆಯ ಚಿತ್ರವು ಗಿಡ್ಡ ದೇಹವನ್ನು ಹೊಂದಿದ್ದು, ಹಿಂದಕ್ಕೆ ಬಾಗಿದ ಕೋಡುಗಳಿಂದ ಹಾಗೂ ಕಾಲುಗಳನ್ನು ಅಸ್ಪಷ್ಟವಾಗಿ ಚಿತ್ರಿಸಲಾಗಿದೆ. ಈ ಭಾಗದಲ್ಲಿ ನೆಲಸಿದ್ದ ಬೃಹತ್ ಶಿಲಾಯುಗದ ಜನರಿಗೆ ಜಿಂಕೆ ಮತ್ತು ಹಾವಿನ ಪರಿಚಯವಿತ್ತೆಂದು ತೋರುತ್ತದೆ.[೪೮]

**ನೆಲೆ:೧೦.** ಗುಡೆಕೋಟೆಯ ಬೆಟ್ಟಗಳಲ್ಲಿ ಬಯಲು ಬಂಡೆಯ ಚಿತ್ರವಿದ್ದು, ಅದರಲ್ಲಿ ಮನುಷ್ಯನ ತಲೆಯು ದೇಹಕ್ಕೆ ಅಂಡಿಕೊಂಡಿರುವಂತೆ ಕಾಲುಗಳನ್ನು ಅಗಲವಾಗಿಸಿ ಮತ್ತು ಪಾದಗಳನ್ನು ಸಂಪೂರ್ಣವಾಗಿ ಪರಸ್ಪರ ವಿರದ್ಧ ದಿಕ್ಕಿಗಿರುವಂತೆ ಮತ್ತು ಕೈಗಳನ್ನು ಭುಜಕ್ಕೆ ಸಮನಾಗಿರುವಂತೆ

ಚಿತ್ರಿಸಲಾಗಿದೆ. ರೇಖಾಚಿತ್ರವನ್ನು ತುಂಬಾ ದಪ್ಪವಾಗಿ ಕೊರೆಯಲಾಗಿದೆ. ಇದರ ಪಕ್ಕದ ಮತ್ತೊಂದು ಎತ್ತರದ ಬಂಡೆಯ ತುದಿಯಲ್ಲಿ ಮಾನವಾಕೃತಿಯ ಚಿತ್ರವನ್ನು ಬಿಡಿಸಲಾಗಿದೆ. ಇದು ಸಹ ಪೂರ್ವಾಭಿಮುಖವಾಗಿದ್ದು ಮಾನವ ನಿಂತಿರುವ ಭಂಗಿಯಲ್ಲಿ ತನ್ನ ಎಡ ಕೈಯನ್ನು ಮೇಲಕ್ಕೆ ಎತ್ತಿರುವಂತೆ ಹಾಗೂ ಬಲ ಕೈಯಲ್ಲಿ ಆಯುಧವನ್ನು ಹಿಡಿದಿರುವಂತೆ ತೋರುತ್ತದೆ.[೪೯]

**ನೆಲೆ:೧೧.** ಚಿಕ್ಕಮಂಡೆಯ ಸಮೀಪದಲ್ಲಿರುವ ಸನ್ಯಾಸಪ್ಪ ಕೆರೆಯ ದಂಡೆಯ ಹಾಸುಬಂಡೆಯ ಮೇಲೆ ಮಾನವಾಕೃತಿಯು ನಗ್ನ ಚಿತ್ರವನ್ನು ನಿಂತಭಂಗಿಯುಲ್ಲಿ ಎರಡು ಕೈಗಳನ್ನು ಅಗಲಿಸಿ ಸಮಾನಾಂತರಗೊಳಿಸಲಾಗಿದೆ. ಹಾಗೂ ಕಾಲುಗಳನ್ನು ಅಗಲಿಸಿರುವ ಮನುಷ್ಯನ ಚಿತ್ರವಿದೆ. ಗುಡೇಕೋಟೆಯ ಕೋಟೆ ಪರಿಸರದಲ್ಲಿ ನೈಸರ್ಗಿಕ ಕಲ್ಮನೆಯಂತೆ ಕಾಣುವ ಕಲ್ಲಾಸರೆಯಲ್ಲಿ ಮಾನವ ಬೇಟೆಯಲ್ಲಿ ತೊಡಗಿರುವ ದೃಶ್ಯವನ್ನು ಕೆಂಪು ಮತ್ತು ಬಿಳಿ ಬಣ್ಣದ ಚಿತ್ರಗಳಿದ್ದು ಇದರಲ್ಲಿ ಐದು ಚಿತ್ರಗಳು ಮಾನವ ಕುದುರೆಯ ಸವಾರನ ಚಿತ್ರಗಳಿವೆ. ಬಿಳಿವರ್ಣದ ಚಿತ್ರ ಮತ್ತು ಕೆಂಪು ಬಣ್ಣದ ಚಿತ್ರಗಳೆರಡು ಒಂದೇ ರೀತಿಯಾಗಿದ್ದು ಕೆಂಪು ವರ್ಣದ ಗೆರೆಗಳು ಮಾತ್ರ ದಪ್ಪವಾಗಿವೆ. ಕೆಂಪು ಬಣ್ಣದಲ್ಲಿ ಕಂಡುಬರುವ ಪ್ರಾಣಿಯು ಕೋಣನ ಚಿತ್ರವೆಂದು ತರ್ಕಿಸಬಹುದು. ಬಯಲು ಬಂಡೆ ಚಿತ್ರಗಳು ಮುಖ್ಯವಾಗಿ ಪಶುಪಾಲಕರ ರಚನೆಗಳೆಂದು ಹೇಳಬಹುದು ಅವು ಪಶುಪಾಲನೆಯ ಸಂದರ್ಭದಲ್ಲಿ ರಚಿತವಾಗಿರುವ ಸಾಧ್ಯತೆಗಳು ಹೆಚ್ಚು ಎಂಬ ಅಭಿಪ್ರಾಯವನ್ನು ಹೊಂದಬಹುದು.

**ನೆಲೆ: ೧೨.** ಅಪ್ಪಯ್ಯನಹಳ್ಳಿಯ ಶರಣರಗುಡ್ಡದ ಮೇಲೆ ವಿಶಾಲವಾದ ಹಾಸುಬಂಡೆಯ ಮೇಲೆ ಪ್ರಾಣಿಗಳ ಸಮೂಹ ಹಾಗೂ ಮಂಡಲದ ಬಯಲು ಬಂಡೆ ರೇಖಾಚಿತ್ರಗಳು ಶೋಧವಾಗಿವೆ. ಅವುಗಳಲ್ಲಿ ಎತ್ತು, ದನ, ಜಿಂಕೆ ಮೊದಲಾದ ಚಿತ್ರಗಳು ಸಾಕಷ್ಟು ಸಂಖ್ಯೆಯಲ್ಲಿರುವುದನ್ನು ಕಾಣುತ್ತೇವೆ.[೫೦]

**ನೆಲೆ: ೧೩.** ಕೊಪ್ಪಳದ ಗವಿಮಠದ ಗುಡ್ಡ ಪ್ರದೇಶದಲ್ಲಿ ಸುಮಾರು ನಾಲ್ಕು ಗವಿಗಳಿವೆ. ಅವುಗಳಲ್ಲಿ ಮುಖ್ಯವಾಗಿ ಅಶೋಕನ ಶಾಸನವಿರುವ ಸ್ಥಳದ ಸಮೀಪದಲ್ಲಿಯೇ ಪೂರ್ವಕ್ಕೆ ಅಭಿಮುಖವಾಗಿ ಮತ್ತೊಂದು ಕಿರುಬೆಟ್ಟವಿದ್ದು, ಆ ಬೆಟ್ಟದ ಎರಡೂ ಗವಿಗಳಲ್ಲಿ ಶಿಲಾಯುಗದ ವರ್ಣದ ಚಿತ್ರಗಳಿವೆ.[೫೧] ಗವಿಯ ಮೇಲ್ಛಾವಣಿ ಭಾಗದಲ್ಲಿ ಹಳದಿ–ಮುಸುಕು ಬಿಳಿಯ ಮಿಶ್ರಿತ ದ್ವಿವರ್ಣದಲ್ಲಿ ಗಂಡು ಹೆಣ್ಣಿನ ಚಿತ್ರಗಳಿವೆ. ಅನತಿ ದೂರದಲ್ಲಿಯೇ ಇರುವ ಮತ್ತೊಂದು ಗುಹೆಯಲ್ಲಿ ಕೆಂಪುಬಣ್ಣದ ಸೂರ್ಯ, ಮನುಷ್ಯ(?)–ನೃತ್ಯ ಸಮೂಹದ ಚಿತ್ರಗಳಿವೆ. ಈ ಎರಡೂ ಗುಹೆಯ ವರ್ಣಚಿತ್ರಗಳು ಗವಿಯ ಮೇಲ್ಭಾಗದ ಕಲ್ಲಾಸರೆಯಲ್ಲಿ ಮಾತ್ರ ಚಿತ್ರಿಸಲಾಗಿದ್ದು ಬೆಳಕಿನ ಸಹಾಯದಿಂದ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮಾತ್ರ ಗೋಚರಿಸುತ್ತವೆ. ಇದೇ ಬೆಟ್ಟದಲ್ಲಿ ಒಟ್ಟು ಒಂಭತ್ತು ಕಲ್ಲಾಸರೆಗಳಿವೆ. ಗವಿಮಠದಿಂದ ಆಗ್ನೇಯ ದಿಕ್ಕಿಗೆ ಈ ವಿಶಾಲವಾದ ಗವಿ ಇದೆ. ಅದರಲ್ಲಿ ಕೆಂಪುವರ್ಣದ ಹದಿಮೂರು ಪ್ರಾಣಿಗಳ ರೇಖಾಚಿತ್ರಗಳಿವೆ. ಅವುಗಳಲ್ಲಿ ಐದು ಜಿಂಕೆಗಳಿದ್ದು ಉಳಿದಂತೆ ಒಂದೊಂದು ಕೆಚ್ಚಲುಳ್ಳ ಆಕಳು, ಟಗರು, ಕಾಡುಕೋಣ, ಕುದುರೆ, ಎತ್ತು, ಮೊಲ, ತೋಳ ಹಾಗೂ ಇನ್ನೊಂದು ಗುರುತಿಸಲಾಗದ ಪ್ರಾಣಿಯ ಚಿತ್ರಗಳಿವೆ. ಈ ಎಲ್ಲ ಪ್ರಾಣಿಗಳಲ್ಲಿ ಕಾಡುಕೋಣ ಮತ್ತು ಮೊಲಗಳು ಛಾಯಾರೂಪದವು.

ಉಳಿದವು ಬಾಹ್ಯರೇಖಾ ರೂಪದವು. ಕೆಲವು ಜಿಂಕೆ, ಆಕಳು, ಎತ್ತಿನ ಮೂರ್ತಿಯನ್ನು ಕೆಂಪು ವರ್ಣದಿಂದ ತುಂಬಲಾಗಿದೆ. ಕಲ್ಲಾಸರೆ ಎರಡರಲ್ಲಿ ಗವಿಮಠದ ಅಶೋಕನ ಶಾಸನವಿರುವ ಬಂಡೆಯಿಂದ ಈಶಾನ್ಯಕ್ಕೆ ಅನತಿ ದೂರದಲ್ಲಿರುವ ಕಲ್ಲಾಸರೆಯಲ್ಲಿ ಅರೆವೃತ್ತಾಕಾರದಲ್ಲಿ ಬಾಗಿರುವ ಬಂಡೆಯ ಒಡಲಲ್ಲಿ ಕಲ್ಲಾಸರೆ ಉಂಟಾಗಿದೆ. ಇದರ ಛಾವಣಿಯಲ್ಲಿ ಕೆಂಪುವರ್ಣದ ಬಾಹ್ಯರೇಖಾ ರೂಪದ ಚಿತ್ರಗಳಿವೆ. ಇಲ್ಲಿ ಒಟ್ಟು ಒಬ್ಬ ಮನುಷ್ಯ ಮತ್ತು ನಾಲ್ಕು ಪ್ರಾಣಿಗಳು ಸಹಿತ ಐದು ಚಿತ್ರಗಳಿವೆ.[೫೨]

ಕಲ್ಲಾಸರೆ ಮೂರಲ್ಲಿ ಗವಿಮಠದ ಬೆಟ್ಟದ ಮೇಲೆ ಇರುವ ಕಲ್ಲಾಸರೆಯಲ್ಲಿಯೂ ಕೂಡ ಮೊದಲೆರಡರ ಕಲ್ಲಾಸರೆಗಳಂತೆ ಚಿತ್ರಗಳು ರೇಖಾ ರೂಪದಲ್ಲಿವೆ. ಇಲ್ಲಿ ನಾಲ್ಕು ಎತ್ತುಗಳ ಮತ್ತು ಒಂದು ಗುರುತಿಸಲಾಗದ ಪ್ರಾಣಿಯ ಚಿತ್ರಗಳಿವೆ. ಕಲ್ಲಾಸರೆ ನಾಲ್ಕರಲ್ಲಿ ಗವಿಮಠದ ಗುಡ್ಡದಲ್ಲಿ ಅಶೋಕನ ಶಾಸನವಿರುವ ಸ್ಥಳದಿಂದ ಈಶಾನ್ಯಕ್ಕೆ ಸನಿಹದಲ್ಲಿ ಈ ಕಲ್ಲಾಸರೆ ಇದೆ. ಇದೊಂದು ಬೃಹತ್ ಗುಂಡು. ಒಡೆದು ಸೀಳಿದೆ. ಈ ಸೀಳಿದ ಒಡಲಲ್ಲಿ ಕೆಂಪು ವರ್ಣದ ಹುಲಿಯ ಚಿತ್ರವನ್ನು ಬಿಡಿಸಲಾಗಿದೆ. ಹುಲಿಯು ಮೇಲಕ್ಕೆ ನೆಗೆದ ಭಂಗಿಯಲ್ಲಿದೆ.(ಮುಖ ನಾಶವಾಗಿದೆ.) ಮೈಮೇಲಿನ ಪಟ್ಟೆಗಳನ್ನು ವಕ್ರರೇಖೆಗಳ ಮೂಲಕ ತೋರಿಸಲಾಗಿದೆ. ಕಾಲುಗಳ ಬೆರಳುಗಳಲ್ಲಿ ಉದ್ದವಾದ ಉಗುರುಗಳಿವೆ. ಬಾಲ ಕೂಡ ನೀಳವಾಗಿದೆ. ಐದನೆಯ ಕಲ್ಲಾಸರೆಯ ಛಾವಣಿಯಲ್ಲಿ ಹಳದಿ ಮಿಶ್ರಿತ ತಿಳಿ ಬಿಳಿವರ್ಣದಲ್ಲಿ ಸ್ತ್ರೀ ಪುರಷ ಜೋಡಿಯ ಚಿತ್ರವಿದೆ. ಆರನೆಯ ಕಲ್ಲಾಸರೆಯಲ್ಲಿ ಕೆಂಪುವರ್ಣದ ಸೂರ್ಯನ ರೀತಿಯ ಚಿತ್ರ ಮನುಷ್ಯ, ಪ್ರಾಣಿ ಮತ್ತು ಸಮೂಹ ಕುಣಿತದ ಮನುಷ್ಯರ ಚಿತ್ರಗಳಿವೆ.[೫೩]

ಕೆಂಪುವರ್ಣದಲ್ಲಿ ಮೂಡಿಬಂದಿರುವ ಮನುಷ್ಯರ ಸಮೂಹವು ಕುಣಿಯುತ್ತಿರುವ ಚಿತ್ರವು ಕಲ್ಲಾಸರೆ ಏಳರಲ್ಲಿ ಮೂಡಿಬಂದಿದೆ. ಮನುಷ್ಯರ ಚಿತ್ರಗಳು ಛಾಯಾರೂಪದವು. ನಾಲ್ಕೈದು ಸ್ಪಷ್ಟ ಇವೆ. ಪರಸ್ಪರ ಕೈ–ಕೈ ಹಿಡಿದು ಸಾಲಾಗಿ ನೃತ್ಯ ಭಂಗಿಯಲ್ಲಿವೆ. ಸೊಂಟಕ್ಕೆ ಉಡುಪನ್ನು ಧರಿಸಿದ ರೀತಿಯ ರಚನೆಯು ಗಮನಾರ್ಹವಾದುದು. ಕಲ್ಲಾಸರೆ ಎಂಟರಲ್ಲಿ ಬಿಳಿವರ್ಣದ ದನಗಳ ಚಿತ್ರಗಳಿವೆ. ದನಗಳು ಕೋಡು, ಇಣಿ, ಬಾಲ, ಕಾಲುಗಳು, ಶಿಶ್ನ ರಚನೆಯಿಂದ ಕೂಡಿದ್ದು ಪರಸ್ಪರ ಕಾದಾಡುತ್ತಿರುವಂತೆ ತೋರುತ್ತದೆ. ಕಾದಟಕ್ಕೆ ಹೆದರಿ ಒಬ್ಬ ಮನುಷ್ಯ ಓಡುತ್ತಿರುವಂತೆ ಚಿತ್ತವನ್ನು ರಚಿಸಲಾಗಿದೆ. ಕಲ್ಲಾಸರೆ ಒಂಭತ್ತರಲ್ಲಿ ಮಳೆಮಲ್ಲೇಶ್ವರ ದೇವಾಲಯದ ಮೇಲ್ಭಾಗದಲ್ಲಿ ಹರಿವಿನ ಬಯಲು ಪಶ್ಚಿಮ ಅಂಚಿನಲ್ಲಿ ಈ ಕಲ್ಲಾಸರೆ ಇದೆ. ಇದು ಬೃಹದಾಕಾರದ ಸೀಳಿದ ಬಂಡೆ. ಸೀಳು ಭಾಗದಲ್ಲಿ ಕೆಂಪು ಬಿಳಿವರ್ಣದ ಒಂದು ಚಿತ್ರವಿದೆ. ಉದ್ದ ರೇಖೆಗೆ ಮೇಲೆ ಕೆಳಗೆ ತ್ರಿಕೋನಾಕಾರದ ಭಾಗಗಳಿವೆ. ಒಟ್ಟಾರೆಯಾಗಿ ಕೊಪ್ಪಳ ತಾಲ್ಲೂಕಿನ ಸುತ್ತಮುತ್ತ ಇರುವ ಬೆಟ್ಟಗುಡ್ಡಗಳಲ್ಲಿ ಹಲವು ಬೆಗೆಯ ರೇಖಾಚಿತ್ರಗಳು, ವರ್ಣ ಚಿತ್ರಗಳು, ಶಿಲಾಸಮಾಧಿಗಳು ಕಂಡುಬರುವುದರಿಂದ ಈ ಭಾಗದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಶಿಲಾಯುಗದ ಜನ ಸಮೂಹವಿತ್ತೆಂದು ತೋರುತ್ತದೆ.

**ನೆಲೆ: ೧೪.** ತಾವರೆಗೆರೆಯ(ಕುಷ್ಟಗಿ ತಾಲೂಕು) ಗಾಣಗಿತ್ತಿ ಗುಡ್ಡದ ಉತ್ತರ ಭಾಗ ಮತ್ತು ದಕ್ಷಿಣದ ಭಾಗದಲ್ಲಿ ಕಲ್ಲಾಸರೆಗಳಲ್ಲಿ ವರ್ಣಚಿತ್ರಗಳು, ರೇಖಾಚಿತ್ರಗಳಿದ್ದು ಅಧ್ಯಯನಕ್ಕೆ ಯೋಗ್ಯವಾಗಿವೆ.

ಕಲ್ಲಾಸರೆಯಲ್ಲಿ ಹನ್ನೆರಡು ಜಿಂಕೆಗಳನ್ನು ಚಿತ್ರಿಸಲಾಗಿದ್ದು, ಅವೆಲ್ಲವುಗಳು ಒಂದರ ಹಿಂದೆ ಒಂದರಂತೆ ಮುಂದಕ್ಕೆ ಸಾಗುತ್ತಿವೆ ಎಂಬಂತೆ ತೋರುತ್ತದೆ. ದೇಹದ ಬಾಹ್ಯರೇಖೆಯನ್ನು ಚಿತ್ರಿಸಿ ಅದರ ಒಳಮೈಯಲ್ಲಾ ಬಣ್ಣದಿಂದ ತುಂಬಿರುವರು. ಅವುಗಳ ಕೋಡುಗಳು ತುಂಬಾ ಉದ್ದವಾಗಿದ್ದು ಇಂಗ್ಲೀಷ್ ಮೂಲಾಕ್ಷರದ ಗ ಮತ್ತು ಗಿ ಆಕಾರಲ್ಲಿವೆ. ಇದೇ ಕಲ್ಲಾಸರೆಯಲ್ಲಿ ಇನ್ನೂ ಹಲವಾರು ವರ್ಣಚಿತ್ರಗಳಿವೆ.[೫೪] ಚಿತ್ರವೊಂದರಲ್ಲಿ ಮಂಗನ ಚಿತ್ರವಿದ್ದು, ಅದು ತನ್ನ ಎರಡೂ ಕಾಲುಗಳನ್ನು ಮುಂದೆ ಚಾಚಿ ಗಿಡದಿಂದ ಜಿಗಿಯುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಬಾಹ್ಯ ರೇಖೆಯನ್ನು ಮಾತ್ರ ಚಿತ್ರಿಸಲಾಗಿದ್ದು ಕಣ್ಣು, ಮೂಗು, ಬಾಯಿಯನ್ನು ತೋರಿಸಿರುವರು. ಇದು ಒಂದು ಅಪರೂಪದ ಚಿತ್ರದಂತೆ ತೋರುತ್ತದೆ. ಮಂಗನ ಚಿತ್ರದ ಬದಿಯಲ್ಲಿಯೇ ಹುಲಿಯಂತೆ ಕಾಣುವ ಪ್ರಾಣಿಯ ಚಿತ್ರವಿದೆ. ಅದು ತನ್ನ ಬಾಲವನ್ನು ಸ್ವಲ್ಪ ಮೇಲಕ್ಕೆತ್ತಿದ್ದಂತೆ ಚಿತ್ರಿಸಲಾಗಿದೆ. ಇದರ ದೇಹದ ಬಾಹ್ಯ ರೇಖೆಯನ್ನು ಚಿತ್ರಿಸಿ ಅದರ ಒಳಮೈಯನ್ನು ಬಣ್ಣದಿಂದ ತುಂಬಲಾಗಿದೆ. ಇಬ್ಬರು ಮನುಷ್ಯರು ಒಬ್ಬರ ಬದಿಯಲ್ಲಿ ಮತ್ತೊಬ್ಬರು ನಿಂತು ತಮ್ಮ ಹೆಗಲ ಮೇಲೆ ಒಂದೇ ಉದ್ದವಾದ ಕೋಲನ್ನು ಎತ್ತಿಕೊಂಡು ತಮ್ಮ ಒಂದು ಕಾಲನ್ನು ಮೇಲಕ್ಕೆತ್ತಿ ಕುಣಿಯುತ್ತಿರುವಂತೆ ತೋರುವುದು. ಕುಣಿತದಲ್ಲಿ ಇಬ್ಬರು ಒಂದೇ ರೀತಿಯಾಗಿ ಅನುಕರಣೆ ಮಾಡಿರುವುದು ವಿಶೇಷವಾಗಿದೆ. ಮೇಲಿನ ಚಿತ್ರಗಳ ಕೊನೆಯಲ್ಲಿ ಒಂದು ಜಲಪಾತದ ರೀತಿಯಲ್ಲಿ ಚಿತ್ರಿಸಿರುವುದನ್ನು ಕಾಣಬಹುದು. ಅದರಲ್ಲಿ ಬೆಟ್ಟದಿಂದ ನೀರು ಕೆಳಕ್ಕೆ ಧುಮುಕುತ್ತಿರುವಂತೆ ಚಿತ್ರಿಸಿರುವುದು ವಿಶೇಷವಾಗಿದೆ.

ಗಾಣಗಿತ್ತಿಗುಡ್ಡದ ದಕ್ಷಿಣ ಭಾಗದಲ್ಲಿ ಕಲ್ಲಾಸರೆಯ ವರ್ಣಚಿತ್ರಗಳಿರುವುದನ್ನು ಕಾಣುತ್ತೇವೆ. ಒಂದು ದೊಡ್ಡ ಬಂಡೆಯ ತಳಭಾಗದಲ್ಲಿ ಮೂರು ಜಿಂಕೆಗಳನ್ನು ಚಿತ್ರಿಸಲಾಗಿದ್ದು, ಅವುಗಳು ಒಂದರ ಹಿಂದೆ ಒಂದು ಕೂಡಿಕೊಂಡು ಮುಂದೆ ಸಾಗುವಂತೆ ತೋರುತ್ತದೆ. ಇವುಗಳ ಕೊಂಬುಗಳು ಇಂಗ್ಲೀಷ್ ಮೂಲಾಕ್ಷರದ ಗ ಮತ್ತು ಗಿ ಆಕಾರದಲ್ಲಿವೆ.[೫೩] ಇದರ ಪಕ್ಕದಲ್ಲಿರುವ ಮತ್ತೊಂದು ಬಂಡೆಯ ತಳಭಾಗದಲ್ಲಿ ಇಬ್ಬರು ಬೇಟೆಗಾರರ ಚಿತ್ರವನ್ನು ಬಿಡಿಸಲಾಗಿದೆ. ಒಬ್ಬನು ಬಿಲ್ಲಿಗೆ ಬಾಣವನ್ನು ಹೂಡಿ ಪ್ರಾಣಿಯ ಬೇಟೆಗಾಗಿ ಗುರಿ ಇಟ್ಟಿರುವಂತೆ, ಮತ್ತೊಬ್ಬನು ತನ್ನ ಎಡಭಾಗದ ಹೆಗಲ ಮೇಲೆ ಆಯುಧವನ್ನು ಹಿಡಿದಿದ್ದು, ಬಲಗೈಯಲ್ಲಿ ಬೇಟೆಯಾಡಿದ ಪ್ರಾಣಿಯನ್ನು ಎತ್ತಿಕೊಂಡು ಮುನ್ನಡೆಯುವಂತೆ ಚಿತ್ರಿಸಲಾಗಿದೆ. ಮತ್ತೊಂದು ಬಂಡೆಯ ಮೇಲೆ ನೀಳದೇಹದ ಒಬ್ಬ ವ್ಯಕ್ತಿಯನ್ನು ಚಿತ್ರಿಸಲಾಗಿದ್ದು, ಆತನ ತಲೆಯು ಮಾತ್ರ ದುಂಡಾಗಿ ದೊಡ್ಡದಾಗಿ ಬಿಡಿಸಲಾಗಿದೆ. ಕೈ-ಕಾಲು ತಲೆಗಿಂತ ಚಿಕ್ಕದಾಗಿವೆ. ಈ ಚಿತ್ರದ ಬದಿಯಲ್ಲಿಯೇ ದ್ವಿರೇಖೆಯಲ್ಲಿ ಇನ್ನೊಬ್ಬ ವ್ಯಕ್ತಿಯನ್ನು ಮೇಲಕ್ಕೆ ಎತ್ತಿದಂತೆ ಎರಡು ಕಾಲುಗಳನ್ನು ಅಗಲಿಸಿದಂತಿದ್ದು, ಇವುಗಳ ಬಾಹ್ಯರೇಖೆಯನ್ನು ಮಾತ್ರ ಚಿತ್ರಿಸಲಾಗಿದೆ. ಬೇರೊಂದು ಭಾಗದಲ್ಲಿ ಒಂದು ಮೇಜಿನಂಥ ಪೀಠೋಪಕರಣದ ಚಿತ್ರವನ್ನು ಚಿತ್ರಿಸಲಾಗಿದ್ದು, ಅದಕ್ಕೆ ಮುಂದಿನ ಎರಡು ಕಾಲುಗಳನ್ನು ಮಾತ್ರ ತೋರಿಸಲಾಗಿದೆ. ಒಂದು ಕಾಲಿಗೆ ಅಡ್ಡರೇಖೆ ಎಳೆದಿರುವುದನ್ನು ಕಾಣುತ್ತೇವೆ. ಈ ಬೆಟ್ಟದ ದಕ್ಷಿಣ ಭಾಗದ ಮತ್ತೊಂದು ಸ್ಥಳದಲ್ಲಿ ದೊಡ್ಡ ಬಂಡೆಯ ಬದಿಯಲ್ಲಿ ಎರಡು ದೊಡ್ಡ ಪಾತ್ರೆಗಳ ಸುತ್ತಲೂ ವಕ್ರರೇಖೆಯನ್ನು ಎಳೆಯಲಾಗಿದೆ. ಒಂದು ಪಾತ್ರೆಗೆ ಹಿಡಿಕೆಯನ್ನು ತೋರಿಸಲಾಗಿದೆ.

ಹಾಗೂ ಇಲ್ಲಿನ ಒಂಟೆಗುಡ್ಡದ ಪೂರ್ವಭಾಗದ ಅತೀ ಮೇಲುಗಡೆ ಒಂದು ಬದಿಯಲ್ಲಿ ಎರಡು ಚಿಕ್ಕ ಚಿಕ್ಕ ಮೀನುಗಳನ್ನು ಒಂದರ ಎದುರು ಇನ್ನೊಂದನ್ನು ಚಿತ್ರಿಸಿ, ಅವುಗಳ ಬಾಹ್ಯರೇಖೆಯನ್ನು ಮಾತ್ರ ಎಳೆಯಲಾಗಿದೆ.[೫೫] ಇದೇ ನೆಲೆಯಲ್ಲಿ ಕ್ಷೇತ್ರಕಾರ್ಯಕೈಗೊಂಡಾಗ ಹೊಸದಾಗಿ ಮಾನಪ್ಪಯ್ಯ ಗುಡ್ಡದ ಪೂರ್ವಕ್ಕೆ ಇರುವ ದೊಡ್ಡ ಬಂಡೆಯ ದಕ್ಷಿಣಾಭಿಮುಖವಾಗಿರುವ ಎತ್ತರದ ಗೋಡೆಯ ಮೇಲೆ ಕಲ್ಲಿನಿಂದ ಕೊರೆದ ಉದ್ದನೆಯ ಕೊಂಬುಗಳುಳ್ಳ ಜಿಂಕೆಯ ಚಿತ್ರವಿದೆ. ಇದರ ತಳಭಾಗದಲ್ಲಿರುವ ಕಲ್ಲಾಸರೆಯಲ್ಲಿ ಐದು ಕೊಂಬುಗಳುಳ್ಳ ಜಿಂಕೆ, ಗೂಳಿ ಮತ್ತಿತರ ಚಿತ್ರಗಳು ಹಾಗೂ ಉಜ್ಜಿ ನಯಗೊಳಿಸಿದ ಕೈಗೊಡಲಿಯನ್ನು ಪತ್ತೆಹಚ್ಚಲಾಗಿದೆ.[೫೬]

**ನೆಲೆ: ೧೫.** ಕೊಪ್ಪಳ ತಾಲೂಕಿನ ಬಿಳೇಬಾವಿಯ ಸಮೀಪದ ಮೋರೆಯರ ಹನುಮಪ್ಪನ ಬೆಟ್ಟದಲ್ಲಿರುವ ಕಲ್ಲಾಸರೆಗಳಲ್ಲಿ ಕೆಂಪು ಮತ್ತು ಬಿಳಿ ವರ್ಣದ ಚಿತ್ರಗಳಿವೆ. ಅವುಗಳಲ್ಲಿ ಒಂದು ಪ್ರಾಣಿ, ಎತ್ತುಗಳ ಮೂರು ಚೌಕಮಂಡಲಗಳು ಮೂರು ಹೂವಿನ ಸಸ್ಯದ ಚಿತ್ರಗಳು ಪ್ರಮುಖವಾಗಿವೆ. ಬಿಳಿಬಣ್ಣದ ಮನುಷ್ಯಾಕೃತಿ ಮತ್ತು ಎತ್ತಿನ ಚಿತ್ರವೂ ಇದೆ. ಮಂಡಲದ ಚಿತ್ರಗಳಿಂದ ತಿಳಿಯಬಹುದಾದ ಮುಖ್ಯ ಅಂಶಗಳೆಂದರೆ ಅಂದಿನ ಜನರಿಗೆ ಧಾರ್ಮಿಕ ನಂಬಿಕೆ ಆಚರಣೆಗಳನ್ನು ಸೂಚಿಸುತ್ತದೆ. ಹೂ ಬಿಡುವ ಸಸ್ಯದ ಚಿತ್ರದ ರಚನೆಯಿಂದ ಅವರಲ್ಲಿ ಸೌಂದರ್ಯಪ್ರಜ್ಞೆ ಇತ್ತೆಂದು ತಿಳಿಯುತ್ತದೆ. ಎರಡನೆಯ ಕಲ್ಲಾಸರೆಯೂ ಮೋರೆಯರ ಬೆಟ್ಟದ ಕೆಳಭಾಗದಲ್ಲಿರುವ ಒಂದು ಸ್ವತಂತ್ರ ಗುಂಡೊಂದರ ಕೆಳಭಾಗದಲ್ಲಿರುವ ಪೊಳ್ಳಾದ ಆಸರೆಯ ಮೇಲ್ಚಾವಣಿಯಲ್ಲಿ ಕೆಂಪು ಮತ್ತು ಬಿಳಿಬಣ್ಣದ ಚಿತ್ರಗಳಿವೆ. ಈ ಚಿತ್ರಗಳಲ್ಲಿ ಕುದುರೆ ಸವಾರ ಸೂರ್ಯ, ಮಂಡಲ, ವೃತ್ತ, ಎತ್ತುಗಳ ಚಿತ್ರಗಳು ಪ್ರಮುಖವಾಗಿವೆ. ಒಂದರೊಳಗೊಂದರಂತೆ ಮೂರು ಅಸಮ ವೃತ್ತಗಳನ್ನೊಳಗೊಂಡ ಸೂರ್ಯನ ಚಿತ್ರದ ಕೊನೆಯ ಬಾಹ್ಯ ರೇಖೆಗೆ ಸುತ್ತಲೂ ಸೂರ್ಯನ ಕಿರಣಗಳಂತೆ ರೇಖೆಗಳನ್ನು ಎಳೆಯಲಾಗಿದೆ. ವೃತ್ತದ ಒಳಗೆ ಚೌಕವು ಇದ್ದು ಅದರ ನಾಲ್ಕು ಮೂಲೆಗಳಿಂದ ರೇಖೆಯನ್ನು ಎಳೆಯಲಾಗಿರುವ ಚಿತ್ರವೂ ಬೃಹತ್ ಶಿಲಾಯುಗ ಕಾಲದ್ದಾಗಿದೆ. ಎತ್ತಿನ ಚಿತ್ರಗಳು ನಾಲ್ಕು ಕಾಲು, ಬಾಲ, ಕೋಡುಗಳ ರಚನೆಯಿಂದ ಕೂಡಿವೆ. ಅಲ್ಲಲ್ಲಿ ಅಸ್ಪಷ್ಟವಾಗಿ ಗೋಚರಿಸುವ ಕೆಂಪು ಬಿಳಿವರ್ಣದ ಚಿತ್ರಗಳಿವೆ.

**ನೆಲೆ: ೧೬.** ಕಡೇಬಾಗಿಲು ನೆಲೆಯ ಕಲ್ಲಾಸರೆಯಲ್ಲಿ ಎರಡು ಸಾಲಿನಲ್ಲಿರುವ ಮನುಷ್ಯರ ಮತ್ತು ಗೂಳಿ ವರ್ಣಚಿತ್ರಗಳಿದ್ದು ಮೇಲಿನ ಮತ್ತು ಕೆಳಗಿನ ಸಾಲಿನ ಚಿತ್ರಗಳಲ್ಲಿ ಪ್ರಾಣಿಯ ಚಿತ್ರಗಳಿವೆ.[೫೭] ಈ ನೆಲೆಯು ಬೃಹತ್ ಶಿಲಾಯುಗದ ವಸತಿ ನೆಲೆಯಾಗಿದ್ದು, ಕಪ್ಪು ಕೆಂಪು-ವರ್ಣದ ಮಡಿಕೆಯ ಚೂರಿನ ಮೇಲೆ ಕೆಂಪು ವರ್ಣದ ಚಿತ್ರಗಳಿದ್ದು, ಅವು ಕಲ್ಲಾಸರೆಯಲ್ಲಿರುವ ಮನುಷ್ಯನ ಚಿತ್ರಗಳಂತೆಯೇ ಸಾಮ್ಯತೆಯನ್ನು ಒಳಗೊಂಡಿರುವುದರಿಂದ ಇವು ಹೆಚ್ಚು ಮಹತ್ವವನ್ನು ಪಡೆದುಕೊಂಡಿವೆಯೆಂದು ಅಭಿಪ್ರಾಯಿಸಬಹುದು.

**ನೆಲೆ: ೧೭.** ಕೊಪ್ಪಳ ಜಿಲ್ಲೆಯ ಹಿರೇಬೆಣಕಲ್ಲು ಬೆಟ್ಟದಲ್ಲಿರುವ ದುರ್ಗದ ದಡಿ ಎಂದು ಕರೆಯುವ ಸ್ಥಳದಲ್ಲಿ ಹತ್ತು ಚಿತ್ರಿತ ಕಲ್ಲಾಸರೆಗಳಿದ್ದು, ಐದು ನೂರಕ್ಕೂ ಹೆಚ್ಚು ವರ್ಣಚಿತ್ರಗಳು ಕಂಡುಬಂದಿವೆ.

ಇಲ್ಲಿನ ಶಿಲಾಸಮಾಧಿ ನೆಲೆಗೆ ಹೋಗುವ ಹಾದಿಯಲ್ಲಿ ಚಿತ್ರಿತ ಕಲ್ಲಾಸರೆಯಿದ್ದು ಪೂರ್ವ ಮತ್ತು ದಕ್ಷಿಣಕ್ಕೆ ಅಭಿಮುಖವಾಗಿ ಹಲವು ವರ್ಣಚಿತ್ರಗಳು ಇರುವುದನ್ನು ಗಮನಿಸಬಹುದು. ಚಿತ್ರವೊಂದರಲ್ಲಿ ಕುದುರೆ ಸವಾರರು ಮತ್ತು ಸಾಲುಸಾಲಾಗಿ ಕಂಡುಬರುವ ಮನುಷ್ಯನ ಚಿತ್ರಗಳು ಸೌಂದರ್ಯ ದೃಷ್ಟಿಯಿಂದ ಆಕರ್ಷಿತವಾಗಿವೆ. ಎಂಟು ಜನ ಕುದುರೆ ಸವಾರರ ಚಿತ್ರಗಳಿದ್ದು, ಕುತ್ತಿಗೆ ಮತ್ತು ಬಾಲದಲ್ಲಿ ಕೂದಲನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಇಬ್ಬರು ಅಶ್ವ ಸವಾರರ ಕೈಗಳಲ್ಲಿ ಕೊಡಲಿ ಮತ್ತು ಇನ್ನಿಬ್ಬರ ಕೈಯಲ್ಲಿ ಭರ್ಜಿಗಳಿವೆ. ಅದರಲ್ಲಿ ಮನುಷ್ಯ ಚಿತ್ರವು ವಿಭಿನ್ನ ಭಂಗಿಯಲ್ಲಿದ್ದು, ಕೈಯಲ್ಲಿ ಕೊಡಲಿ ಹಿಡಿದು ಕೊಂಡಿರುವುದು ಬೇಟೆಯಲ್ಲಿ ತೊಡಗಿದ ಸನ್ನಿವೇಶವನ್ನು ಚಿತ್ರದಲ್ಲಿ ತೋರಿಸಲಾಗಿದೆ. ಅದರಲ್ಲಿ ಐದು ನವಿಲುಗಳು, ನಾಲ್ಕು ಕೊಂಬುವುಳ್ಳ ಜಿಂಕೆ, ನಾಯಿ, ಚಿರತೆ, ಮೊಲ, ಮತ್ತಿತ್ತರ ಪ್ರಾಣಿಗಳ ಚಿತ್ರಗಳು ಆಕರ್ಷಕವಾಗಿವೆ. ಇಲ್ಲಿನ ವರ್ಣಚಿತ್ರಗಳಲ್ಲಿ ಸ್ತ್ರೀ ಪ್ರಸವದ ಚಿತ್ರವೂ ಅಧ್ಯಯನ ದೃಷ್ಟಿಯಿಂದ ಗಮನಾರ್ಹವಾದುದು. ತಾಯಿಯು ತನ್ನ ಮಗುವಿಗೆ ಜನ್ಮ ನೀಡುತ್ತಿರುವ ಚಿತ್ರಣವನ್ನು ನೈಜವಾಗಿ ಚಿತ್ರದಲ್ಲಿ ತೋರಿಸಲಾಗಿದೆ. ಇಂತಹ ಚಿತ್ರಗಳು ಬಂಡೆಚಿತ್ರದಲ್ಲಿ ಬೆಳಕಿಗೆ ಬಂದಿರುವ ಪುರಾವೆಗಳಿಲ್ಲ.[೫೮]

**ನೆಲೆ: ೧೮.** ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಮಲ್ಲಾಪುರ ಗ್ರಾಮದಲ್ಲಿ ಹದಿನಾಲ್ಕು ಕಲ್ಲಾಸರೆಗಳಿವೆ. ಅವುಗಳಲ್ಲಿ ೧, ೩, ಮತ್ತು ೪ನೇ ಕಲ್ಲಾಸರೆಯಲ್ಲಿ ಬೃಹತ ಶಿಲಾಯುಗ ಕಾಲದ ವರ್ಣಚಿತ್ರಗಳಿವೆ. ಒಂದನೇ ಕಲ್ಲಾಸರೆಯು ಮಲ್ಲಾಪುರದಿಂದ ಉತ್ತರಕ್ಕೆ ೨ ಕಿ.ಮೀ ದೂರದಲ್ಲಿ ಅರವಟ್ಟಿಗೆ ಹೋಗುವ ಮಾರ್ಗದ ಬೆಟ್ಟದ ಮಧ್ಯಭಾಗದಲ್ಲಿದೆ. ಈ ಕಲ್ಲಾಸರೆಯ ಬಂಡೆಯು ದಕ್ಷಿಣಕ್ಕೆ ಮುಖವಾಗಿ ಹೊರ ಚಾಚಿದೆ. ಇದರಲ್ಲಿ ನಗ್ನ ಮನುಷ್ಯನ ಹಾಗೂ ಹಿಂಬದಿಯ ಕಲ್ಲಾಸರೆಯಲ್ಲಿ ಕೆಂಪುವರ್ಣದಲ್ಲಿ ಮೂಡಿಸಿದ ನಗ್ನ ಮನುಷ್ಯನ ಎರಡು ಚಿತ್ರಗಳಿದ್ದು ಅವುಗಳಲ್ಲಿರುವ ಒಂದರಲ್ಲಿ ಪುರಷನ ಒಂದು ಚಿತ್ರದಲ್ಲಿ ಎರಡು ಕಾಲುಗಳನ್ನು ಅಗಲಿಸಿ ಕೈಗಳನ್ನು ಮೇಲಕೆತ್ತಿ ನಿಂತಿದ್ದಾನೆ. ಮುಂಗೈಗಳು, ಪಾದಗಳು ರಚನೆಯಲ್ಲಿ ಎರಡೂ ತೊಡೆಗಳ ಮಧ್ಯ ವೃಷಣ, ಶಿಷ್ನಗಳ ಮೇಲೆಲ್ಲಾ ರೇಖೆಗಳಿವೆ. ದೇಹದಲ್ಲಿ ಎರಡೂ ಕಂಕುಳದಿಂದ ವಿರುದ್ಧವಾಗಿ ಸೊಂಟದವರೆಗೆ ರೇಖೆಗಳನ್ನು ಎಳೆದಿದ್ದು ಅದರಿಂದ ದೇಹದಲ್ಲಿ ನಾಲ್ಕು ತ್ರಿಕೋನಾಕಾರದ ಭಾಗಗಳಾಗಿವೆ. ಅದರಲ್ಲಿ(ತ್ರಿಕೋನಾಕಾರದಲ್ಲಿ) ಹಲವಾರು ರೇಖೆಗಳನ್ನು ರಚಿಸಲಾಗಿದೆ. ತಲೆ ಮತ್ತು ತೊಡೆ ಕಾಲುಗಳಲ್ಲಿ ಇಂತಹ ಸಂಕೀರ್ಣ ರೇಖೆಗಳಿವೆ. ಇಂಥ ಲಕ್ಷಣಗಳಿಂದ ತಿಳಿಯಬಹುದಾದ ಬಹುಮುಖ್ಯ ಸಂಗತಿಗಳೆಂದರೆ ಇದು ಪ್ರಾಯಶಃ ಮಾಂತ್ರಿಕ ವಿಧಾನಗಳಿಗೆ ಸಂಬಂಧಿಸಿದ ನೃತ್ಯದಲ್ಲಿ ತೊಡಗಿರುವ ಪುರುಷನ ಚಿತ್ರವೆಂದು ತಿಳಿಯಬಹುದಾಗಿದೆ. ಇದೇ ಕಲ್ಲಾಸರೆಯ ಉತ್ತರ ಬದಿಯಲ್ಲಿ ಪಶ್ಚಿಮಕ್ಕೆ ಮುಖವಿರುವ ಮತ್ತೊಂದು ಭಾಗದಲ್ಲಿ ಕೆಂಪುವರ್ಣದ ಚಿತ್ರಗಳಿವೆ. ಇಲ್ಲಿ ವಿಚಿತ್ರವಾದ ಎರಡು ಮನುಷ್ಯಾಕೃತಿಗಳು, ಎರಡು ಎತ್ತುಗಳು ಹಾಗೂ ಗುರುತಿಸಲಾಗದ ಇನ್ನೊಂದು ಪ್ರಾಣಿ ಒಳಗೊಂಡಂತೆ ಕೆಲ ಅಸ್ಪಷ್ಟ ಚಿತ್ರಗಳಿವೆ.

ಎರಡನೆಯ ಕಲ್ಲಾಸರೆಯ ಚಿತ್ರಗಳಲ್ಲಿ ಮೊದಲನೆಯ ಚಿತ್ರವು ಕಾಲುಗಳನ್ನು ಅಗಲಿಸಿನಿಂತ ಹಾಗೆ ಕಾಣುತ್ತದೆ. ಪ್ರಾಯಶಃ ಇದು ನಗ್ನ ಮಾನವನದು. ಲಂಬ ಆಯತಾಕಾರದ ದೇಹ ಭುಜದಿಂದ ಸ್ವಲ್ಪವೇ ಹೊರಬಂದ ಕೈಗಳು, ಸೊಂಟದಿಂದ ಸ್ವಲ್ಪ ಹೊರಬಂದ ಅಗಲಿಸಿ ನೆಲಕ್ಕೆ ಊರಿರುವ ಕಾಲುಗಳು ಅವುಗಳ ನಡುವೆ ಮುಂಡದಷ್ಟು ಅಗಲದ ಭಾಗವಿದೆ. ಅದು ಶಿಷ್ನವನ್ನ ನಿರ್ದೇಶಿಸುತ್ತಿರಬೇಕು. ಮೇಲೆ ಸ್ವಲ್ಪ ಉದ್ದವಿರುವ ತಲೆ, ದೇಹ ಮತ್ತು ಕೆಳಗಿನ ಅರೆ ವೃತ್ತದ ಭಾಗದಲ್ಲಿ ಗುಣಾಕಾರ ಚಿನ್ನೆಯ ರೀತಿಯಲ್ಲಿ ರೇಖೆಯನ್ನು ಹಾಕಲಾಗಿದೆ. ನಗ್ನ ಮನುಷ್ಯನ ಬಳಿ ಮತ್ತೊಂದು ವ್ಯಕ್ತಿಚಿತ್ರ ರೀತಿಯ ರೇಖೆಯ ಕತ್ತಿನ ಕೆಳಗೆ ಎರಡೂ ಬದಿ ರೇಖೆಗಳಿಗೆ ಹೊಂದಿಕೊಂಡು ಕೆಳಗೆ ದಪ್ಪವಾದ ತೊಡೆಗಳು, ತೆಳುವಾದ ಕಾಲುಗಳಿವೆ. ಪಾದಗಳ ರಚನೆಯಿಲ್ಲ. ತೊಡೆಗಳಲ್ಲಿ ರೇಖೆಗಳಿದ್ದು ಎಡಗೈಯಲ್ಲಿ ಹಸ್ತವಿದೆ.

ಕಲ್ಲಾಸರೆ ಮೂರರಲ್ಲಿ, ಮಲ್ಲಾಪುರದಿಂದ ದಕ್ಷಿಣಕ್ಕೆ ಸುಮಾರು ೩ ಕಿ.ಮೀ ದೂರದ ಬೆಟ್ಟದಲ್ಲಿ ಅತ್ಯಂತ ವಿಸ್ತಾರವಾದ ನೈಸರ್ಗಿಕ ಗುಹೆಯ ಬೃಹತ್ತಾದ ಕಲ್ಲುಚಪ್ಪಡಿಯೊಂದು ದೊಡ್ಡಕಲ್ಲುಗಳ ಮೇಲೆ ಚಾಚಿದ್ದು, ಕೆಳಗೆ ವಿಶಾಲವಾದ ಗವಿಯುಂಟಾಗಿದೆ. ಚಪ್ಪಡಿಯ ವಿಶಾಲವಾದ ಕಲ್ಲಾಸರೆಯಲ್ಲಿ ದೊಡ್ಡ ಅಳತೆಯ ಹಲವು ಮನುಷ್ಯರ ಮತ್ತು ಪ್ರಾಣಿಗಳು ಚಿತ್ರಗಳಿವೆ. ಈ ಚಿತ್ರಗಳನ್ನು ದಕ್ಷಿಣ ಭಾಗ ಮತ್ತು ಉತ್ತರ ಭಾಗ, ದಕ್ಷಿಣ ಭಾಗದಲ್ಲಿ ಎರಡು ಜೋಡಿ ದಂಪತಿಗಳು ನಾಲ್ಕುಬಿಡಿ ಮನುಷ್ಯರ, ಒಂದು ಹಂದಿ, ಒಂದು ಜಿಂಕೆ, ಮತ್ತು ಒಂದು ಸಾರಂಗದ ಚಿತ್ರಗಳಿವೆ. ಉತ್ತರ ಭಾಗದಲ್ಲಿ ಎರಡು ಕೋಣ, ಹಂದಿ, ನವಿಲು, ಮೀನು ಮತ್ತು ಗಿಡದ ಒಂದೊಂದು ಚಿತ್ರಗಳಿವೆ. ಇಲ್ಲಿ ಒಟ್ಟು ಆರು ಮನುಷ್ಯನ ಬಿಡಿ ಚಿತ್ರಗಳಿವೆ.

ಕಲ್ಲಾಸರೆ ನಾಲ್ಕರಲ್ಲಿ ಮಲ್ಲಾಪುರ ಗ್ರಾಮದಿಂದ ಪಶ್ಚಿಮಕ್ಕೆ ಸುಮಾರು ೩ ಕಿ.ಮೀ ದೂರದಲ್ಲಿ 'ಬಳಿಗಾರ ಊಟಿ' ಎಂಬಲ್ಲಿ ಕಲ್ಲಾಸರೆಯೊಂದರಲ್ಲಿ ಚಿತ್ರಗಳಿವೆ. ದೊಡ್ಡ ಬಂಡೆಯಲ್ಲಿ ಮನುಷ್ಯಾಕೃತಿಗಳ ಒಂದೊಂದು ಹಂದಿ (ಮುಖ) ಮತ್ತು ನಾಯಿಯ ಚಿತ್ರಗಳಿವೆ. ಇವು ಮಳೆ ನೀರಿಗೆ ಸಿಲುಕಿ ಬಹಳಷ್ಟು ಮಾಸಿವೆ. ಈ ಬಂಡೆಚಿತ್ರಗಳು ಸ್ಪಷ್ಟವಾಗಿಲ್ಲ. ಮನುಷ್ಯ ಚಿತ್ರಗಳು ಮಾಂತ್ರಿಕ ನೃತ್ಯ ಆಚರಣೆಯಲ್ಲಿ ತೊಡಗಿರುವಂತೆ, ಕಾಲುಗಳನ್ನು ಅಗಲಿಸಿ, ಕೈಗಳನ್ನು ಭುಜದ ಸಮಾನಾಂತರದಲ್ಲಿ ಅಗಲಿಸಿ ಮುಂಗೈಗಳನ್ನು ಕೆಳ ಮುಖವಾಗಿ ನಿರ್ದಿಷ್ಟವಾಗಿ ಬರೆದ ರೇಖೆಗಳಿವೆ. ಮನುಷ್ಯನ (೧ಮೀ, ೦.೫೦ಮೀ) ಮೈಮೇಲೆ ನಿರ್ದಿಷ್ಟವಾಗಿ ಬರೆದ ರೇಖೆಗಳಿವೆ. ಅದರ ಬದಿಯಲ್ಲಿ ಅಪೂರ್ಣವಾಗಿ ಗೋಚರಿಸುವ ಎರಡು ಮನುಷ್ಯ ಕೃತಿಗಳಿವೆ. ಕಣ್ಣು, ಮೂತಿ, ಬಾಯಿಗಳನ್ನು ಗುರುತಿಸಿಲ್ಲ. ಮನುಷ್ಯ ಚಿತ್ರಗಳ ಮೇಲ್ಭಾಗದಲ್ಲಿ ನಾಯಿಯ ಚಿಕ್ಕ ರೇಖಾಚಿತ್ರವಿದೆ.[೫೯]

**ನೆಲೆ: ೧೯**. ಗಂಗಾವತಿ ತಾಲೂಕಿನ ಚಿಕ್ಕರಾಮಪುರದ ಒನಕೆ ಕಂಡಿ ನೆಲೆಯನ್ನು ಅ.ಸುಂದರ ಅವರು ೧೯೬೧ರಲ್ಲಿ ಬೆಳಕಿಗೆ ತಂದರು. ಈ ನೆಲೆಯಲ್ಲಿ ಸುಂದರ ಅವರು ಒಟ್ಟು ಆರು ಕಲ್ಲಾಸರೆಗಳನ್ನು ಶೋಧಿಸಿ ಸುದೀರ್ಘ ಲೇಖನವನ್ನು ೧೯೮೭ರಲ್ಲಿ ಪ್ರಕಟಿಸಿದರು. ಬೃಹತ್ ಶಿಲಾಯುಗದ ಕಲ್ಲುವೃತ್ತ

ಸಮಾಧಿಯ ವರ್ಣಚಿತ್ರವು ಸ್ವಾರಸ್ಯಕರವಾಗಿದೆ. ನಂತರ ಇವುಗಳ ಬಗೆಗೆ ಶರಣಬಸಪ್ಪ ಕೋಲ್ಕಾರ ಅವರು ಹೆಚ್ಚಿನ ಅಧ್ಯಯನ ಮಾಡಿದರು. ನಂತರ ಟಿ.ಎಂ ಕೇಶವ, ಜಿ.ಎಸ್ ನರಸಿಂಹನ್ ಮೊಲಾದವರು ಇದೊಂದು ಪ್ರಾಗೈತಿಹಾಸಿಕ ನಕ್ಷೆಯಾಗಿರಬಾರದು? ಎಂದು ತರ್ಕಿಸಿದ್ದಾರೆ.[೬೦] ಮತ್ತೊಂದು ಕಲ್ಲಾಸರೆಯಲ್ಲಿ ಮೂರು ಜೋಡಿ ಚಿತ್ರಗಳು, ಬಿಲ್ಲುಧಾರಿಗಳಿಬ್ಬರು ಹಾಗೂ ಓರ್ವ ಅಶ್ವ ಸವಾರನ ಚಿತ್ರಗಳಿವೆ. ಎತ್ತುಗಳಿಗೆ ನಾಲ್ಕು ಕಾಲುಗಳನ್ನು ಬಿಡಿಸಿ ಮತ್ತು ಬಾಲದ ತುದಿಗಳನ್ನು ಗೆರೆಗಳಿಂದ ಅಲಂಕರಿಸಿ ರೋಮಗಳನ್ನು ಸೂಚಿಸಲಾಗಿದೆ. ಇಬ್ಬರು ಬಿಲ್ಲುಧಾರಿಗಳು ಪರಸ್ಪರ ಎದುರಾಗಿ ನಿಂತಿದ್ದು ಕೈಗಳಲ್ಲಿ ಬಿಲ್ಲುಬಾಣಗಳನ್ನು ಹೂಡಿದ್ದು ಬಾಣಗಳಿಗೆ ತ್ರಿಕೋನಾಕಾರದ ಮೊನೆಗಳಿವೆ. ಒಂದನೆಯ ಗವಿಯಲ್ಲಿ ಚಿತ್ರಿತಗೊಂಡಿರುವ ಮನುಷ್ಯನ ಚಿತ್ರಕ್ಕಿಂತ ಭಿನ್ನವಾಗಿ ಕೈಕಾಲುಗಳನ್ನು ದಪ್ಪವಾಗಿ ತೋರಿಸಲಾಗಿದೆ. ಭುಜದ ಭಾಗ ಸ್ವಲ್ಪ ಎತ್ತರಿಸಲಾಗಿದೆ. ಕುದುರೆಯ ಬಲಕ್ಕೆ ಹಲವು ಗೆರೆಗಳನ್ನು ಕುದುರೆಯ ಸಹಜತೆಗೆ ತರಲಾಗಿದೆ. ಕುದುರೆ ಸಾವರನು ಹಿಡಿದ ಲಗಾಮು ಸ್ಪಷ್ಟವಾಗಿದ್ದು ಕುದುರೆಯ ಕತ್ತಿನ ಮೇಲೆ ರೋಮವನ್ನು ತೋರಿಸಲಾಗಿದೆ. ಹಾಗೂ ಮೇಲ್ಬಾಗದ ಜೋಡಿಯ ಎತ್ತುಗಳ ಮಧ್ಯದಲ್ಲಿ ಓರ್ವ ಮನುಷ್ಯನ ಚಿತ್ರವಿದ್ದು, ಎದೆಯ ಭಾಗ, ಭುಜ ಮತ್ತು ರುಂಡ ಮಾತ್ರ ಬಿಡಿಸಲಾಗಿದೆ. ತಲೆಯಲ್ಲಿ ಎಡ ಭಾಗಕ್ಕೆ ಹೊರಳಿರುವ ಕೂದಲುಗಳನ್ನು ಹಾಗೆ ಗೆರೆಗಳನ್ನು ಎಳೆಯಲಾಗಿದೆ. ಇದರ ಜೊತೆಗೆ ಎರಡು ಬಿಳಿ ವರ್ಣದ ಚಿತ್ರಗಳಿವೆ.[೬೧]ಮೋಹನ್ ಆರ್ ಅವರು ತಮ್ಮ ಸಂಶೋಧನೆಯ ಅವಧಿಯಲ್ಲಿ ಹನ್ನೆರಡು ಹೊಸ ಕಲ್ಲಾಸರೆಗಳನ್ನು ಶೋಧಿಸಿದ್ದಾರೆ. ಮುಖ್ಯವಾಗಿ ಇಲ್ಲಿನ ವರ್ಣಚಿತ್ರದಲ್ಲಿರುವ ಮಂಡಲದ ಚಿತ್ರದ ಜೊತೆಗೆ ಮಂಡಲದ ಕುಟ್ಟು ಚಿತ್ರವು ವರ್ಣಚಿತ್ರದಂತೆ ಹೋಲಿಕೆ ಇರುವುದನ್ನು ಗುರುತಿಸಿದ್ದಾರೆ.[೬೧]

**ನೆಲೆ: ೨೦.** ಗಂಗಾವತಿ ಮುನಿರಾಬಾದ್ ರಸ್ತೆಯಲ್ಲಿ ಚಿಕ್ಕರಾಂಪುರ ಕ್ರಾಸ್‌ನಿಂದ ಮುಂದೆ ೧/೨ ಕಿ.ಮೀ ದೂರದಲ್ಲಿ ಅಂಜನಹಳ್ಳಿ ಗ್ರಾಮವಿದೆ. ಇಲ್ಲಿ ಎರಡು ಕಲ್ಲಾಸರೆಗಳಿವೆ. ಪಂಪಾ ಸರೋವರ ತಿರುವಿಗೆ ಸಿಗುವ ಅಂಜನಹಳ್ಳಿ ರಸ್ತೆ ಕ್ರಾಸ್ ಎದುರಿಗೆ ಬೆಟ್ಟವಿದೆ. ಅದರ ಎಡಬದಿಯಲ್ಲಿರುವ ಕಲ್ಲಾಸರೆಯಲ್ಲಿ ೨.೪೨ ಮೀ ಅಳತೆಯ ಒಂದು ದೊಡ್ಡ (ಹಡಗಿನ) ದೋಣಿಯ ರೇಖಾಚಿತ್ರವಿದೆ.[೬೨] ಅದರ ಮಧ್ಯಭಾಗಲ್ಲಿ ೧.ಮೀ ಎತ್ತರಾಗಿದ್ದು ಎರಡು ತುದಿಗಳು ಚೂಪಾಗಿವೆ. ದೋಣಿಯ ಮೈಭಾಗದಲ್ಲಿ ಜಿಂಕೆ, ನವಿಲು ಎದುರಾಗಿ ನಿಂತ ಜೋಡಿ ಎತ್ತುಗಳ ಚಿಕ್ಕ ಚಿಕ್ಕ ಚಿತ್ರಗಳಿವೆ. ದೋಣಿಯ ಮೇಲ್ಭಾಗದಲ್ಲಿ ಗೂಳಿಯ ಹಾಗೂ ನವಿಲಿನ ಒಂದೊಂದು ಚಿತ್ರಗಳು, ದೋಣಿಯ ಕೆಳಗೆ ಎತ್ತುಗಳನ್ನು ಚಿತ್ರಿಸಿರುವ ಚಿತ್ರಗಳಿವೆ. ಹಾಗೂ ಮತ್ತೊಂದು ಕಲ್ಲಾಸರೆಯು ಬೆಟ್ಟದ ಹಿಂಭಾಗದಲ್ಲಿದೆ. ಗೂಳಿ ಅಥವಾ ಆನೆಯ ಕೆಂಪು ವರ್ಣದ ಚಿತ್ರಗಳಿವೆ. ಇವು ಛಾಯಾರೂಪದ ಚಿತ್ರಗಳು ದೊಡ್ಡ ಕೋಡುಗಳನ್ನು ಇಣಿಯನ್ನು ಹೊಂದಿರುವ ಗೂಳಿಯ ಚಿತ್ರ ಗಾಂಭೀರ್ಯಕ್ಕೆ ನಿದರ್ಶನವಾಗಿದೆ. ಆನೆ ಚಿತ್ರ ಸರಳವಾಗಿದೆ.

ಪ್ರಾಗೈತಿಹಾಸಿಕ ಮಾನವರು ಪ್ರಾಯಶಃ ಬೇಟೆಗೆ ಹೊರಡುವ ಮುನ್ನ ಇಲ್ಲವೇ ಬೇಟೆ ನಂತರದ ಸಾಮೂಹಿಕ ನೃತ್ಯದಲ್ಲಿ ತೊಡಗಿರುವ ಮೊದಲಾದ ಚಿತ್ರಗಳಲ್ಲಿ ತನ್ನ ಆಹಾರವನ್ನು ಒದಗಿಸುವ

ಜಿಂಕೆ, ಗೂಳಿ, ಕೋಣ ಹಾಗೂ ವಂಶಾಭಿವೃದ್ಧಿಗೋಸ್ಕರ ಇವುಗಳ ವೈರಿ ಪ್ರಾಣಿಗಳಾದ ಹುಲಿ, ಚಿರತೆ ಮೊದಲಾದ ಪ್ರಾಣಿಗಳ ಉಪಟಳವನ್ನು ತಪ್ಪಿಸಲು ಮತ್ತು ಬೇಟೆಯಲ್ಲಿ ಆ ಪ್ರಾಣಿಗಳು ವಶವಾಗಬೇಕೆಂಬ ಉದ್ದೇಶದಿಂದ ಇಂತಹ ಮಾಂತ್ರಿಕ ರಚನೆ ಮಾಡುತ್ತಿದ್ದರೆಂದು ತೋರುತ್ತದೆ. ಈ ಚಿತ್ರಗಳು ಕೇವಲ ಬಾಹ್ಯರೇಖೆಗಳ ಛಾಯಾಚಿತ್ರಗಳೇ ಆಗಿದ್ದರೂ ಆ ಪ್ರಾಣಿಗಳೊಡನೆ ನಿಕಟ ಸಂಬಂಧವಿದ್ದುದರಿಂದ ಅವುಗಳ ಸ್ವರೂಪ, ನಡವಳಿಕೆ ಬಗೆಗೆ ಅವನು ಹೊಂದಿದ್ದ ಸೂಕ್ಷ್ಮ ಪರಿಚಯದಿಂದ ಹಾಗೂ ಅವನಲ್ಲಿ ಅವುಗಳ ಬಗ್ಗೆ ಇರುವ ಕುತೂಹಲದ ಮನೋಭಾವವನ್ನು ಅವನು ಬಿಡಿಸಿದ ಹಲವಾರು ಚಿತ್ರಗಳಿಂದ ವ್ಯಕ್ತವಾಗುತ್ತದೆ.

### ಬಂಡೆ ಚಿತ್ರಗಳ ರಚನೆಯ ಉದ್ದೇಶಗಳು

ಶಿಲಾಯುಗದ ಮಾನವನ ಚಿತ್ರರಚನೆಯ ಉದ್ದೇಶಗಳ ಬಗೆಗೆ ವಿಭಿನ್ನ ಅಭಿಪ್ರಾಯಗಳಿವೆ. ಅಧ್ಯಯನ ಪ್ರದೇಶದಲ್ಲಿ ಕಂಡುಬಂದಿರುವ ಬಂಡೆಚಿತ್ರಗಳನ್ನು ಗಮನಿಸಿದಾಗ ವಿವಿಧ ಉದ್ದೇಶಕ್ಕಾಗಿ ಚಿತ್ರಗಳನ್ನು ರಚಿಸಿರುವುದು ಸ್ಪಷ್ಟವಾಗುತ್ತದೆ. ಅವುಗಳಲ್ಲಿ ಭಾವನಾತ್ಮಕ ಅಭಿವ್ಯಕ್ತಿಯ ಪ್ರೇರಣೆ ಸೌಂದರ್ಯ ಪ್ರಜ್ಞೆ ಅಥವಾ ಅಲಂಕರಣೆಯ ಉದ್ದೇಶ. ಮಾಂತ್ರಿಕ ಕಟ್ಟಳೆಯ ಉದ್ದೇಶಗಳು ಮುಖ್ಯವಾಗಿವೆ.[೬೩]

### ೧. ಭಾವನಾತ್ಮಕ ಅಭಿವ್ಯಕ್ತಿಯ ಪ್ರೇರಣೆ

ಮಾನವ ಸ್ವಭಾವತಃ ಭಾವನಾಜೀವಿ, ತನ್ನ ಭಾವನೆಗಳ ತೀವ್ರ ಪ್ರೇರಣೆಯಾದಾಗ ಅದನ್ನು ವಿವಿಧ ಮಾಧ್ಯಮ ಮೂಲಕ ಅಭಿವ್ಯಕ್ತಿಸುತ್ತಾನೆ. ಇದು ತಕ್ಷಣದ ಪ್ರೇರಣೆಯಾಗಿರುತ್ತದೆ. ಅಧ್ಯಯನ ಪ್ರದೇಶದಲ್ಲಿ ಇಂತಹ ಉದ್ದೇಶದಿಂದ ರಚಿಸಲಾದ ಚಿತ್ರಗಳನ್ನು ಗಮನಿಸಲಾಗಿದೆ.

### ೨. ಸೌಂದರ್ಯ ಪ್ರಜ್ಞೆ ಅಥವಾ ಅಲಂಕರಣೆ

ಮಾನವ ನಿಸರ್ಗದ ಜೀವಿ ಅವನಲ್ಲಿ ಸೌಂದರ್ಯ ಪ್ರಜ್ಞೆ ಸುಪ್ತವಾಗಿರುತ್ತದೆ. ಆದರೆ ಎಲ್ಲರಲ್ಲೂ ಜಾಗೃತಪಡಿಸಲಾಗಿರುವುದಿಲ್ಲ. ಆ ರೀತಿಯ ಕಲಾವಂತಿಕೆಯು ಕೆಲವು ಪ್ರಾಗಿತಿಹಾಸ ಕಾಲದ ಜನರಲ್ಲಿತ್ತು. ಅವರು ತಾವು ನೆಲೆಸಿದ್ದ ನೆಲೆಗಳನ್ನು ಅಲಂಕರಿಸುವ ಉದ್ದೇಶದಿಂದ ಇಂತಹ ಚಿತ್ರಗಳನ್ನ ಬಿಡಿಸಿದ್ದಾರೆ ಎನ್ನಬಹುದು.

### ೩. ಮಾಂತ್ರಿಕ ಕಟ್ಟಳೆಯ ಉದ್ದೇಶ

ಮಾನವನು ಹಲವು ಚಿತ್ರಗಳನ್ನು ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳಲು ತಮ್ಮ ತಮ್ಮ ಸಮಾಜದ ನಂಬಿಕೆಯಂತೆ ಮಾಂತ್ರಿಕ ಕಟ್ಟಳೆಗಳನ್ನು ನಡೆಸುವ ಕಾಲದಲ್ಲಿ ಅವುಗಳ ಅಂಗವಾಗಿ ರೂಪಿಸಿದ ಚಿತ್ರಗಳೆಂದು ಅ.ಸುಂದರ ಅವರು ತರ್ಕಿಸಿದ್ದಾರೆ. ಒಬ್ಬ ಮನುಷ್ಯ ಅಥವಾ ಪ್ರಾಣಿಯ ಛಾಯಾಚಿತ್ರಗಳನ್ನು ತೆಗೆದು ಮಂತ್ರಿಸಿದರೆ ಅದು ತನ್ನ ವಶವಾಗಬಹುದೆಂಬ ನಂಬಿಕೆ ಪುರಾತನ ಕಾಲದಿಂದಲೂ ಬಂದಿರುವಂತಹದ್ದು ಅಥವಾ ಅವನು ಶತ್ರುವಾಗಿದ್ದರೆ ನಾಶವಾಗುವ ನಂಬಿಕೆ

ಕೂಡ ಇದೆ. ಬೇಟೆ, ಪಶುಪಾಲನೆ, ಸಮೂಹ ಕುಣಿತ, ನಗ್ನ ಕುಣಿತ, ಮಂಡಲ ಇವೆಲ್ಲಾ ಮಾಂತ್ರಿಕ ಕಟ್ಟಳೆ ಉದ್ದೇಶಿತ ರಚನೆಗಳೆಂದು ಹೇಳಬಹುದು. ಇಂತಹ ಚಿತ್ರಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಪ್ರಾಚೀನ ಮಾನವನ ಆಹಾರ ಸಂಬಂಧಿ ವಿಷಯದ ಸುತ್ತ ಕೇಂದ್ರೀಕೃತವಾಗಿರುವುದನ್ನು ಗಮನಿಸಬಹುದು. ನಗ್ನ ಮನುಷ್ಯನು ಮೈತುಂಬ ಚಿತ್ರಗಳನ್ನು ಬರೆದುಕೊಂಡು ಅಥವಾ ಮುಖವಾಡ ಹಾಕಿಕೊಂಡಿರುವುದನ್ನು ಹಾಗೂ ಕೈಗಳನ್ನು ಮೇಲಕ್ಕೆತ್ತಿ ತೊಡೆಗಳನ್ನು ಅಗಲಿಸಿ ನಿಂತಿರುವ ಭಂಗಿಯನ್ನು ಗಮನಿಸಿದರೆ ಅವನೊಬ್ಬ ಮಾಂತ್ರಿಕ ಮನುಷ್ಯನೆಂದು ತಿಳಿಯಬಹುದು. ಇಂತಹ ವೇಷ ಭೂಷಣಗಳನ್ನು ಆದಿವಾಸಿ ಬುಡಕಟ್ಟು ಜನರಲ್ಲಿ ಇಂದಿಗೂ ಕಾಣುತ್ತೇವೆ.

ಬೆನ್ನಿಗೆ ಬಾಣ ನಾಟಿರುವ ಜಿಂಕೆ, ಗಬ್ಬದ ಜಿಂಕೆ ಮೊದಲಾದ ಪ್ರಾಣಿಗಳ ಚಿತ್ರಗಳು ಮನುಷ್ಯರ ಸಂಭೋಗ ಕ್ರಿಯೆ ಚಿತ್ರಗಳು ಹಾಗೂ ಸಾಮೂಹಿಕ ನೃತ್ಯ ಮೊದಲಾದ ಚಿತ್ರಗಳು ತನ್ನ ಆಹಾರವನ್ನು ಒದಗಿಸುವ ಜಿಂಕೆ, ಗೂಳಿ, ಕೋಣ ಹಾಗೂ ತನ್ನ ವಂಶಾಭಿವೃದ್ಧಿಗೋಸ್ಕರ ಇಂತಹ ಪ್ರಾಣಿಗಳ ವೈರಿಯಾದ ಹುಲಿ, ಚಿರತೆ ಮೊದಲಾದ ಪ್ರಾಣಿಗಳ ನಾಶಕ್ಕಾಗಿ ಮತ್ತು ಪ್ರಾಣಿಗಳು ತಮ್ಮ ವಶವಾಗುವುದಕ್ಕೋಸ್ಕರ ಇಂತಹ ಚಿತ್ರಗಳನ್ನು ಬರೆದು ಮಂತ್ರ ತಂತ್ರ ವಿದ್ಯೆಗಳಿಗೆ ಈ ವಿವರಗಳು ಪುರಸ್ಕಾರವಾದವು ಹಾಗೂ ಇಂಥ ಕಾರಣಗಳಿಗೆ ಪ್ರಾಚೀನ ಚಿತ್ರಗಳ ಸೃಷ್ಠಿಗೆ ಕಾರಣವಾದ ಅಂಶಗಳಾದವು ಎಂದು ಅಭಿಪ್ರಾಯಿಸಬಹುದು. ಹೀಗೆ ಶಿಲಾಯುಗದ ಜನರು ವಿವಿಧ ಉದ್ದೇಶದಿಂದ ರಚಿಸಿದ ಚಿತ್ರಗಳು ಅವರ ಕಲೆ ಮತ್ತು ಸಂಸ್ಕೃತಿಯನ್ನು ಅರಿಯಲು ನೆರವಾಗಿವೆ.

**ಸುಡಾವೆ ಮಣ್ಣಿನ ಗೊಂಬೆಗಳು**

ಬ್ರಹ್ಮಗಿರಿ, ಪಿಕ್ಲಿಹಾಳ, ಸಂಗನಕಲ್ಲು, ತೆಕ್ಕಲಕೋಟೆ, ಕುರುಗೋಡು ಮೊದಲಾದ ಪ್ರಾಚೀನ ನೆಲೆಗಳ ಉತ್ಖನನಗಳಲ್ಲಿ ನೂತನ ಶಿಲಾಯುಗ ಅಥವಾ ಶಿಲಾ ತಾಮ್ರಯುಗ ಜನಜೀವನದ ನಿತ್ಯೋಪಯೋಗಿ ವಸ್ತುಗಳ ಅವಶೇಷಗಳೊಡನೆ ಕೆಲವು ಸುಡಾವೆ ಮಣ್ಣಿನ ಗೊಂಬೆಗಳು ಲಭ್ಯವಾಗಿವೆ. ಬಹಳ ಹಿಂದೆಯೇ ರಾಬರ್ಟ್ ಬ್ರೂಸ್ ಫೂಟ್ ಅವರು ಕಪ್ಪಗಲ್ಲು ನೆಲೆಯಲ್ಲಿ ದೊರೆತ ಮಣ್ಣಿನ ಗೊಂಬೆಯ ಬಗ್ಗೆ ವರದಿ ಮಾಡಿದ್ದಾರೆ.[೬೪]

**ಪಶುಗಳ ಆಕೃತಿಗಳು**

ಸಾಮಾನ್ಯವಾಗಿ ಈ ಗೊಂಬೆಗಳು ದನ ಕುರಿ ಪಕ್ಷಿ ಮತ್ತು ಮನುಷ್ಯ ಇವುಗಳ ಪ್ರತಿಕೃತಿಗಳಾಗಿವೆ. ಇವುಗಳಲ್ಲಿ ಪ್ರಾಣಿ ಗೊಂಬೆಗಳೇ ಹೆಚ್ಚಿನ ಸಂಖ್ಯೆಯಲ್ಲಿ ದೊರಕಿವೆ. ಇವು ಕೈಯಿಂದ ಮಾಡಿದ ಗಟ್ಟಿ ಗೊಂಬೆಗಳಾಗಿದ್ದು, ಮೈಮಾಟವು ಸಾಮಾನ್ಯವಾಗಿ ಆಕರ್ಷಕವಾಗಿರುತ್ತದೆ. ಆದರೆ ಬಾಯಿ, ಕಣ್ಣು, ಕಿವಿ ಮೊದಲಾದ ಮುಖ ಲಕ್ಷಣಗಳು ಅಷ್ಟೇನೂ ಸ್ಪಷ್ಟವಾಗಿರುವುದಿಲ್ಲ. ಕಣ್ಣುಗಳನ್ನು ಸಣ್ಣ ವೃತ್ತಗಳಿಂದ ಸೂಚಿಸಲಾಗಿರುತ್ತದೆ. ಕೆಲಮುಖ ಸಪೂರವಾದ ಸಣ್ಣ ಸಣ್ಣ ಹಿಂಡುಗಳು, ಕಾಲುಗಳು, ದನ ಇಲ್ಲವೆ ಗೂಳಿಗಳ ಗೊಂಬೆಗಳೇ ಹೆಚ್ಚು. ಇವುಗಳನ್ನು ಸೃಷ್ಟಿಸಿದ ಜನರ ಆರ್ಥಿಕ ಸ್ಥಿತಿಯನ್ನು ಪರಿಶೀಲಿಸಿದಾಗ

ಈ ಗೊಂಬೆಗಳು ಹೆಚ್ಚಿರುವುದು ಅರ್ಥವಾಗುತ್ತದೆ. ಈ ಜನರು ಹೆಚ್ಚು ಬೇಸಾಯಗಾರರು ಆದ್ದರಿಂದ ಇವರು ಎತ್ತು, ದನಗಳನ್ನು ಸಾಕುತ್ತಿದ್ದರು. ಹಳ್ಳಿಗಳಲ್ಲಿ ಇದು ಇಂದಿಗೂ ರೂಢಿಯಲ್ಲಿದೆ. ಗೂಳಿಗಳ ಗೊಂಬೆಗಳಲ್ಲಿ ಅವುಗಳ ಬಲಿಷ್ಠತೆ ಮತ್ತು ಠೀವಿಯನ್ನು ಪುಷ್ಠವಾದ ಶರೀರ ಮತ್ತು ಸೊಗಸಾಗಿ ಬಿಡಿಸಿದ ಇಣಿಗಳಿಂದ ಆಕರ್ಷಕವಾಗುವಂತೆ ಸೂಚಿಸಲಾಗಿದೆ. ಇಂತಹ ಗೊಂಬೆಗಳು ಸಂಗನಕಲ್ಲು, ಕುರುಗೋಡು, ತೆಕ್ಕಲಕೋಟೆ, ಪಿಕ್ಲಿಹಾಳ ಮೊದಲಾದ ಶಿಲಾ–ತಾಮ್ರಯುಗದ ನೆಲೆಗಳ ಉತ್ಖನನಗಳಲ್ಲಿ ದೊರಕಿವೆ.[೬೫]

ಸಂಗನಕಲ್ಲು ನೆಲೆಯಲ್ಲಿ ದೊರೆತ ನಾಲ್ಕು ಗೊಂಬೆಗಳಲ್ಲಿ ಒಂದರ ಮೈ ಮಾಟವು ಅತ್ಯಂತ ಸುಂದರವಾಗಿದೆ. ದುರಾದೃಷ್ಟವಶಾತ್ ಇದರ ತಲೆ ಭಾಗ ಮುರಿದು ಹೋಗಿದೆ. ನೀಳವಾದ ಮುಂಡ, ಹಿಂದಣ ಕಾಲುಗಳ ಆಕಾರವು ಆಕರ್ಷಕ, ಬಾಲ ಸ್ವಲ್ಪ ಮೇಲಕ್ಕೆತ್ತಿದಂತಿದೆ. ಕೆಲವುದರಲ್ಲಿ ಇಣಿಯನ್ನು ತೋರಿಸಿರುವುದಿಲ್ಲ. ಕೋಡುಗಳು ಸಾಮಾನ್ಯವಾಗಿ ಕವಲೊಡೆದ ಕೊಂಬೆಯಂತಿವೆ. ಈ ರೀತಿಯ ಗೊಂಬೆಗಳು ಒಂದೇ ಪ್ರಕಾರದಲ್ಲಿ ಇರುವುದಿಲ್ಲ. ಇಲ್ಲಿನ ಮತ್ತೆರಡು ಗೊಂಬೆಗಳಲ್ಲಿ ಮುಂಡವು ಪ್ರಮಾಣ ಬದ್ಧವಾಗಿದ್ದು, ಸಣ್ಣ ಮತ್ತು ದಪ್ಪ ಕೋಡುಗಳಿಂದ ಕೂಡಿದೆ. ಪ್ರಾಯಶಃ ಇವುಗಳನ್ನು ರಚನೆ ಮಾಡಿದ ಕುಶಲಕರ್ಮಿಯು ಈ ಪ್ರಾಣಿಗಳ ವೈವಿದ್ಯತೆಯನ್ನು ಚೆನ್ನಾಗಿ ಗಮನಿಸಿರಬೇಕು. ದೇಹದ ಭಾಗಗಳು ಅಂದರೆ ಮುಂಡ, ಕಾಲುಗಳು ಮತ್ತು ಕುತ್ತಿಗೆ ಸೇರಿದಂತೆ ಉದ್ದ, ಮತ್ತು ಸಪೂರ ಮತ್ತು ದುಂಡಾಗಿರುತ್ತವೆ. ಇಲ್ಲಿ ಇದೊಂದು ವಿಶಿಷ್ಟ ಮಾದರಿ. ಒಂದು ವೇಳೆ ಎರಡೂ ಕಾಲುಗಳನ್ನು ಒಟ್ಟಾಗಿ ಜೋಡಿಸಿ ಮಾಡಿಸಿದ್ದು ಇದೆ. ಇವುಗಳಲ್ಲಿ ಪಿಕ್ಲಿಹಾಳದ ಒಂದು ಗೂಳಿ ಮಾತ್ರ ಆಕರ್ಷಕ ದೃಢಕಾಯಾಕೃತಿ ಹೊಂದಿದ್ದು ಎದ್ದು ಕಾಣುವ ಇಣಿ, ಪುಷ್ಠವಾದ ಕಾಲುಗಳು ಸಣ್ಣ ನಡುವು ಮತ್ತು ಸಹಜವಾಗಿ ಇಳಿಬಿಟ್ಟ ಬಾಲ ಒಟ್ಟಿನಲ್ಲಿ ಇದು ಮಣ್ಣಿನ ಗೊಂಬೆಗಳಲ್ಲಿಯೇ ತುಂಬಾ ಶ್ರೇಷ್ಠವಾದ ಆಕೃತಿ ಎಂಬ ಅಭಿಪ್ರಾಯವಿದೆ.

### ಪಕ್ಷಿ ಆಕೃತಿ

ಸಂಗನಕಲ್ಲು ನೆಲೆಯಲ್ಲಿ ಮತ್ತೊಂದು ಗೊಂಬೆಯಲ್ಲಿ ಪಕ್ಷಿಯೊಂದು ದೊರಕಿದೆ. ಇದರ ಕುತ್ತಿಗೆ ಸ್ವಲ್ಪ ಮೇಲಕ್ಕೆತ್ತಿದೆ. ಬಹುಶಃ ಇದು ಪಾರಿವಾಳದ ಪ್ರತಿಕೃತಿ ಇರಬಹುದೆಂದು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ.[೬೬]

### ಸುಡಾವೆ ಮಣ್ಣಿನ ಗೊಂಬೆಗಳ ತಾಂತ್ರಿಕ ರಚನೆ

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಲಭ್ಯವಾಗಿರುವ ಸುಡಾವೆ ಮಣ್ಣಿನ ಗೊಂಬೆಗಳು ಗಟ್ಟಿಗೊಂಬೆಗಳಾಗಿದ್ದು ಯಾವುದೇ ಯಾಂತ್ರಿಕ ಸಾಧನವನ್ನು ಉಪಯೋಗಿಸದೇ ಸಿದ್ದಮಾಡಿದ ಕಲಸುಮಣ್ಣಿನ ಮುದ್ದೆಯನ್ನು ಕೈಯಿಂದಲೇ ರೂಪಿಸಿ ತೀಡಿ ಇಂಥ ಗೊಂಬೆಗಳನ್ನು ಮಾಡಿರುವಂತೆ ತೋರುತ್ತದೆ. ಕಾಲುಗಳನ್ನು ಕೋಡುಗಳನ್ನು ಪ್ರತ್ಯೇಕ ಮಾಡಿ ಜೋಡಿ ಶರೀರಕ್ಕೆ ಸರಿಯಾಗಿ ಜೋಡಣೆ

ಮಾಡಲಾಗಿದೆ. ನಂತರ ಇವುಗಳಿಗೆ ಸರಿಹೊಂದುವ ಲೇಪನವನ್ನು ಬಳಿದು ನಂತರ ಆವಿಗೆಯಲ್ಲಿ ಸುಟ್ಟು ಸಿದ್ದಪಡಿಸಲಾಗಿದೆ.

**ಮಾನವಾಕೃತಿಗಳು**

ಈ ಆಕೃತಿಯು ಕೂಡ ಸಾಮಾನ್ಯವಾಗಿ ಬಾಹ್ಯ ಸ್ವರೂಪದ ರೂಪಣವೇ ಹೊರತು ಅಂಗಾಂಗಳ ಪ್ರತಿಯೊಂದು ಭಾಗವನ್ನು ಮತ್ತು ಅವುಗಳ ಲಕ್ಷಣಗಳನ್ನು ಮಾಡಿಸಿರುವುದಿಲ್ಲ. ತೆಕ್ಕಲಕೋಟೆ ಮತ್ತು ಪಿಕ್ಲಿಹಾಳಗಳಲ್ಲಿ ದೊರೆತ ಇಂಥ ಗೊಂಬೆಗಳ ಕೈಕಾಲುಗಳು ಮತ್ತು ತಲೆಯ ಭಾಗ ಮುರಿದು ಹೋಗಿವೆ. ಆದರೆ ಮುಂಡದ ಭಾಗವು ಸ್ವಲ್ಪ ದುಂಡಾಗಿದ್ದು, ಮುರಿದು ಹೋಗಿದೆ ಎನ್ನಲಾದ ತೋಳಿನ ತುದಿಯು ತೀಡಿ ತಿದ್ದಿದಂತಿದೆ. ಆದ್ದರಿಂದ ಇವು ನಿಜವಾಗಿಯೂ ಮನುಷ್ಯಾಕೃತಿಗಳೇ ಅಥವಾ ಗೂಳಿಗಳಿರಬಹುದೆಂದು ವಿದ್ವಾಂಸರು ಸಂಶಯ ವ್ಯಕ್ತಪಡಿಸಿದ್ದಾರೆ. ೨೦೧೧ರಲ್ಲಿ ಕುರುಗೋಡಿನ ಬೂದಿಕೊಳ್ಳ, ಬಾಳೇಕೊಳ್ಳದಲ್ಲಿ ನಡೆದ ಉತ್ಖನನದಲ್ಲಿ ಶಿಲಾತಾಮ್ರಯುಗದ ಹಂತದ ಸ್ತರದಲ್ಲಿ ಗೂಳಿ, ನಾಯಿ, ಪಕ್ಷಿ, ಹೆಣ್ಣಿನ ಗೊಂಬೆಗಳು(ಮಾತೃದೇವತೆ) ಲಭ್ಯವಾಗಿವೆ.[೬೮] ಈ ಹಂತದ ಜನರು ಸಿಂಧೂ ನಾಗರೀಕತೆಯ ಜನರಂತೆ ಮಾತೃದೇವತೆಯನ್ನು ಪೂಜಿಸುತ್ತಿದ್ದರೆಂಬುದು ದೊರಕಿರುವ ಗೊಂಬೆಗಳಿಂದ ತಿಳಿಯುತ್ತದೆ. ಇಂತಹ ಸುಡಾವೆ ಮಣ್ಣಿನ ಗೊಂಬೆಗಳ ತಯಾರಿಕೆ ಕೌಶಲ್ಯವೂ ಮುಂದೆ ಆದಿ ಇತಿಹಾಸಕಾಲದಲ್ಲಿ ಪ್ರಸಿದ್ದಿಯನ್ನು ಪಡೆಯಿತು.

**ಮಣಿಗಳು**

ಬೃಹತ್ ಶಿಲಾಯುಗದ ಜನರು ಹಿಂದಿನ ಸಂಸ್ಕೃತಿಯ ಜನರಂತೆ ಅಗೇಟ, ಕಾರ್ನೇಲಿಯ, ಲ್ಯಾಪೀಜ್-ಲಜೂಲಿ ಮುಂತಾದ ಬೆಲೆಬಾಳುವ ಶಿಲೆಗಳಿಂದ ಮಣಿಗಳನ್ನು ತಯಾರಿಸಿ ಅವುಗಳನ್ನು ಸರದ ರೀತಿ ಸಿದ್ದಪಡಿಸಿ ಧರಿಸುತ್ತಿದ್ದರು. ಇವುಗಳಲ್ಲದೆ ಶಂಖ, ಮಣ್ಣಿನಿಂದ, ಅಪರೂಪವಾಗಿ ಚಿನ್ನದಿಂದಲೂ ಮಣಿಯನ್ನು ತಯಾರಿಸಿ ಅದನ್ನು ಕೊಳವೆಯಾಕಾರ ಮಾಡಿ ಅವುಗಳ ಸರಗಳನ್ನು ಉಪಯೋಗಿಸಿದ್ದಾರೆ. ಕರ್ನಾಟಕದಲ್ಲಿ ನೂತನ ಶಿಲಾಯುಗ, ಶಿಲಾ-ತಾಮ್ರಯುಗ ಹಾಗೂ ಬೃಹತ್ ಶಿಲಾಯುಗ ಸಾಂಸ್ಕೃತಿಕ ಹಂತಗಳಲ್ಲಿ ಚಿನ್ನವು ವಿಶೇಷವಾಗಿ ಬಳಕೆಯಲ್ಲಿದ್ದಿತ್ತು. ತೆಕ್ಕಲಕೋಟೆಯಲ್ಲಿ ಎರಡು ಚಿನ್ನದ ಆಭರಣಗಳು ದೊರೆತಿವೆ[೬೮] ಹಾಗೂ ಟಿ. ನರಸಿರಪುರ ಉತ್ಖನನದಲ್ಲಿ ನವಶಿಲಾಯುಗದ ಸ್ತರಗಳಲ್ಲಿ ಒಂದು ಚಿನ್ನದ ಮಣಿ ದೊರಕಿದೆ.[೬೯] ಅದೇ ರೀತಿ ಹಳ್ಳೂರಿನ ಕಬ್ಬಿಣಯುಗದ ಸ್ತರಗಳಲ್ಲಿ ಚಿನ್ನದ ಮಣಿಯೊಂದು ದೊರಕಿದೆ.[೭೦] ಮಸ್ಕಿಯಲ್ಲಿ ಬೃಹತ್ ಸಮಾಧಿಯುಗದ ಸ್ತರಗಳಲ್ಲಿ ಚಿನ್ನದ ಮಣಿ ಹಾಗೂ ಚಿನ್ನದ ಎಲೆಯ ಭಾಗ ದೊರಕಿದೆ. ಬ್ರಹ್ಮಗಿರಿಯ ಬೃಹತ್ ಶಿಲಾ ಸಮಾಧಿಯೊಂದರಲ್ಲಿ ಮೂವತ್ತೂರು ಚಿನ್ನದ ಮಣಿಗಳು ದೊರಕಿವೆ. ಇತ್ತೀಚೆಗೆ ೨೦೧೦-೧೧ರಲ್ಲಿ ಮಹದೇವಯ್ಯನವರ ನೇತೃತ್ವದಲ್ಲಿ ನಡೆದ ಕುರುಗೋಡು ಉತ್ಖನನದಲ್ಲಿ ಶಿಲಾ-ತಾಮ್ರಯುಗದ ಸ್ತರದಲ್ಲಿ ಚಿನ್ನದ ಸುರಳಿಗಳು, ಉಂಗುರ, ಹಾಗೂ ತಾಮ್ರದ ಬಳೆ, ಉಂಗುರಗಳು ಲಭ್ಯವಾಗಿವೆ.[೭೧]

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕುರುಗೋಡಿನ ಬೂದಿಕೊಳ್ಳದ ಬಳಿ ಸುಡಾವೆ ಮಣ್ಣಿನ ಎರಡು ಮಣಿಗಳು ಹಾಗೂ ಒಂದು ಬಿಳಿಯ ಸಿಟ್ರೈಟ್‌ನಿಂದ ತಯಾರಿಸಿದ ಕೋವಿಯಾಕಾರದ ಮಣಿಗಳು ದೊರಕಿವೆ. ಸುಡಾವೆ ಮಣ್ಣಿನ ಮಣಿಗಳು ಕಂದು ಬಣ್ಣದಲ್ಲಿವೆ. ಅವುಗಳಲ್ಲಿ ಮಣಿಯು ೧ ಇಂಚು ಉದ್ದವಿದ್ದು, ೩ ಇಂಚು ಸುತ್ತಳತೆಯಿದೆ. ಇದರ ಮಧ್ಯದಲ್ಲಿ ದಾರವನ್ನು ಪೋಣಿಸಲು ರಂಧ್ರ ರಚಿಸಲಾಗಿದೆ. ಮಣಿಯು ತಳಭಾಗದಲ್ಲಿ ಚಪ್ಪಟೆಯಾಗಿದ್ದು ಮೇಲ್ಭಾಗ ಚೂಪಾಗಿ ಕೊನೆಗೊಂಡಿರುವುದು. ತಳದಿಂದ ಸ್ವಲ್ಪ ಮೇಲೆ ಅಸ್ಪಷ್ಟವಾದ ಗೆರೆಯ ಎಳೆದು ಅಲಂಕಾರ ಮಾಡಲಾಗಿದೆ. ಮತ್ತೊಂದು ಮಣಿಯು ಸಹ ಸುಡಾವೆ ಮಣ್ಣಿನದಾಗಿದ್ದು, ಇದು ೧ ಇಂಚು ಉದ್ದ, ೨.೫ ಇಂಚು ಸುತ್ತಳತೆ ಇದೆ. ಇದರ ತಳಭಾಗವು ಚಪ್ಪಟೆಯಾಗಿದ್ದು ಮೇಲ್ಭಾಗ ಚೂಪಾಗಿ ಕೊನೆಗೊಂಡಿದೆ. ತಳದಿಂದ ಸ್ವಲ್ಪ ಎತ್ತರದಲ್ಲಿ ಸುತ್ತಲೂ ಗೆರೆ ಎಳೆದು ಅಲಂಕಾರಗೊಳಿಸಲಾಗಿದೆ. ಮತ್ತೊಂದು ಮಣಿಯು ಕೋವಿಯಾಕಾರದಲ್ಲಿದ್ದು ಸಿಟ್ರೈಟ್‌ನಿಂದ ತಯಾರಿಸಲಾಗಿದೆ. ೧ ಇಂಚು ಉದ್ದ, ೦.೫ ಇಂಚು ಸುತ್ತಳತೆಯಿದೆ. ಹಾಗೂ ಇದರ ಮಧ್ಯದಲ್ಲಿಯೂ ಸಹ ದಾರವನ್ನು ಪೋಣಿಸಲು ರಂಧ್ರವಿದೆ. ಇವು ಬ್ರಹ್ಮಗಿರಿಯ ಶಿಲಾಸಮಾಧಿಗಳ ಉತ್ಖನನದಲ್ಲಿ ದೊರೆತ ಸುಡಾವೆ ಮಣ್ಣಿನ ಮಣಿಗಳನ್ನು ಹೋಲುತ್ತವೆ. ಇವುಗಳಿಂದ ಈ ಕಾಲದ ಜನರು ಸೌಂದರ್ಯ ಪ್ರಜ್ಞೆಯುಳ್ಳವರಾಗಿದ್ದು ಅಲಂಕಾರದ ದೃಷ್ಟಿಯಿಂದ ವಿವಿಧ ಬಗೆಯ ಆಭರಣಗಳನ್ನು ಧರಿಸುತ್ತಿದ್ದರೆಂದು ತಿಳಿದುಬರುತ್ತದೆ. ಉತ್ಖನನದಲ್ಲಿ ಚಿನ್ನದ ಮಣಿಗಳು ದೊರೆತಿರುವುದರಿಂದ ಚಿನ್ನದ ಉಪಯೋಗ ಕಂಡುಕೊಂಡಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಆಭರಣಗಳು ಸ್ಥಳೀಯವಾಗಿ ತಯಾರಾಗುತ್ತಿದ್ದವು ಎಂಬುದನ್ನು ಒಪ್ಪಿಕೊಂಡರೂ ಇವುಗಳಿಗೆ ಬೇಕಾದ ಚಿನ್ನವು ಎಲ್ಲಿಂದ ತರಿಸುತ್ತಿದ್ದರು ಎಂಬುದು ಮುಖ್ಯವಾದ ಪ್ರಶ್ನೆಯಾಗಿದೆ. ಇಂತಹ ಸಾಧ್ಯತೆಗಳನ್ನು ಗಮನಿಸಿದರೆ ಚಿನ್ನವು ಕೋಲಾರದ ಚಿನ್ನದ ಗಣಿಗಳಿಂದ ಈ ನೆಲೆಗಳಿಗೆ ಇತಿಹಾಸ ಪೂರ್ವ ಕಾಲದಲ್ಲಿ ಪೂರೈಕೆಯಾಗುತ್ತಿದ್ದಿತು ಹಾಗೂ ಅದರಿಂದ ಆಭರಣಗಳನ್ನು ತಯಾರಿಸುತ್ತಿದ್ದರು ಎಂಬುದನ್ನು ಒಪ್ಪಬೇಕಾಗುತ್ತದೆ.

ಬೃಹತ್ ಶಿಲಾಯುಗ ಪೂರ್ವದ ಶಿಲಾ-ತಾಮ್ರಯುಗದ ಜನರಿಗೆ ಚಿನ್ನದ ಪರಿಚಯವಿದ್ದು, ಅಂದಿನ ಜನರು ಆಭರಣ ಪ್ರಿಯರಾಗಿದ್ದರೆಂಬುದು ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ಮಣ್ಣಿನ ಮಣಿಸರಗಳನ್ನು ತೀರ ಸಾಮಾನ್ಯ ಜನರು ಧರಿಸುತ್ತಿದ್ದಿರಬೇಕು. ಹಾಗೂ ಮೇಲ್ವರ್ಗದವರು ಚಿನ್ನ ಹಾಗೂ ಬಿಳಿ ರೇಖಾಚಿತ್ರದ ಕಾರ್ನೀಲಿಯ ಮಣಿ ಸರಗಳಿಂದ ಅಲಂಕರಿಸಿಕೊಳ್ಳುತ್ತಿದ್ದರು ಎಂಬ ಸಂಗತಿ ತಿಳಿಯುತ್ತದೆ. ಅಪರೂಪವಾಗಿ ತಾಮ್ರ ಮತ್ತು ಕಬ್ಬಿಣದ ಉಂಗುರಗಳನ್ನು ತಮ್ಮ ಬೆರಳಿಗೆ ಹಾಕಿಕೊಳ್ಳುತ್ತಿದ್ದರು ಹಾಗೂ ತಮ್ಮ ತಮ್ಮ ಅಂತಸ್ತಿಗೆ ಅನುಗುಣವಾಗಿ ಆಭರಣಗಳನ್ನು ಧರಿಸುತ್ತಿದ್ದರೆಂದು ತರ್ಕಿಸಬಹುದು. ಅಧ್ಯಯನ ಪ್ರದೇಶದಲ್ಲಿರುವ ಬೃಹತ್ ಶಿಲಾಯುಗದ ನೆಲೆಗಳಲ್ಲಿಯೂ ಕೂಡ ನೂತನ ಶಿಲಾಯುಗ ಪೂರ್ವ ಹಂತದ ಸಾಂಸ್ಕೃತಿಕ ಅವಶೇಷಗಳು ಬೆಳಕಿಗೆ ಬಂದಿರುವುದನ್ನು ವಿವೇಚಿಸಿ ದಾಖಲಿಸಲಾಗಿದೆ. ಅವುಗಳಿಂದ ಮಾನವ ಸಂಸ್ಕೃತಿಯ ಹಂತಗಳು ನಿರಂತರವಾಗಿ

ಬೆಳೆದು ಬಂದಿರುವುದು ಸ್ಪಷ್ಟವಾಗುತ್ತದೆ. ಇಲ್ಲಿನ ಭೌಗೋಳಿಕ ಪ್ರದೇಶವೂ ಕೂಡ ಪ್ರಾಗಿತಿಹಾಸ ಕಾಲದ ಮಾನವ ನೆಲೆಗೊಳ್ಳಲು ಅತ್ಯಂತ ಹೆಚ್ಚಿನ ಪ್ರಶಸ್ತ ಪ್ರದೇಶವಾಗಿತ್ತೆಂಬುದು ಸ್ಪಷ್ಟವಾಗುತ್ತದೆ.

**ಬೃಹತ್ ಶಿಲಾಯುಗ ಸಂಸ್ಕೃತಿಯ ಉಗಮ ಮತ್ತು ವಿಕಾಸ**

ಬೃಹತ್ ಶಿಲಾಯುಗ ಸಂಸ್ಕೃತಿಯು ಬೇರೆ-ಬೇರೆ ಪ್ರದೇಶಗಳಲ್ಲಿ ವಿಭಿನ್ನ ಕಾಲಘಟ್ಟಗಳಲ್ಲಿ ಬೆಳೆದು ಬಂದಿದೆ. ಈ ಸಂಸ್ಕೃತಿಯ ಕಾಲಮಾನವನ್ನು ಕುರಿತಂತೆ ಹಲವು ಪುರಾತತ್ವಜ್ಞರು ವಿಭಿನ್ನ ಕಾಲಮಾನವನ್ನು ಗುರುತಿಸಿದ್ದಾರೆ. ಕರ್ನಾಟಕದ ಪ್ರಸಿದ್ಧ ಪುರಾತತ್ವಜ್ಞರಾದ ಎಂ.ಎಚ್.ಕೃಷ್ಣ ಅವರು ಚಂದ್ರವಳ್ಳಿಯ ಉತ್ಖನನದಲ್ಲಿ ದೊರೆತ ಸಾಂಸ್ಕೃತಿಕ ಹಂತಗಳನ್ನು ಆಧರಿಸಿ ಕ್ರಿ.ಪೂ. ೨೦೦೦ದಿಂದ ಕ್ರಿ.ಪೂ.೨೦೦ ಅವಧಿಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿ ಅಸ್ತಿತ್ವದಲ್ಲಿತ್ತು ಎಂಬುದಾಗಿ ತಿಳಿಸಿದ್ದಾರೆ.[೨]

ಆರ್.ಎಸ್. ಪಂಚಮುಖಿಯವರು ಕ್ರಿ.ಪೂ. ಸು.೧೨೦೦ ರಿಂದ ಕ್ರಿ.ಪೂ ೧೦೦೦ವೆಂದು ಈ ಸಂಸ್ಕೃತಿಯ ಕಾಲವನ್ನು ನಿರ್ಧರಿಸಿದ್ದಾರೆ.[೩] ನಂತರ ಡಿ.ಎಚ್. ಗೋರ್ಡನ್ ಅವರು ಕಬ್ಬಿಣವನ್ನು ಉಪಯೋಗಿಸುವ ಬೃಹತ್ ಶಿಲಾಯುಗದ ಜನರು ಪಶ್ಚಿಮದಿಂದ ನೇರವಾಗಿ ಅರೇಬಿಯಾದ ಸಾಗರ ಮಾರ್ಗವಾಗಿ ಕ್ರಿ.ಪೂ.೭೦೦ ರಿಂದ ೪೦೦ರಲ್ಲಿ ಭಾರತವನ್ನು ಪ್ರವೇಶಿಸಿದರೆಂದು ಹೇಳಿದ್ದರಾದರೂ, ಆದರೆ ಅದಕ್ಕೆ ಪುಷ್ಠಿ ನೀಡುವಂತಹ ಪುರಾತತ್ವ ಸಾಕ್ಷಿಗಳು ದೊರಕಿಲ್ಲ.[೪] ಹೈಮನ್ ಡೋರ್ಫ್‌ರವರು ಈ ಸಂಸ್ಕೃತಿಯ ಜನರು ಕ್ರಿ.ಪೂ ಸುಮಾರು ೫೦೦ರಲ್ಲಿ ಸಮುದ್ರ ಮಾರ್ಗದ ಮೂಲಕ ದಕ್ಷಿಣ ಭಾರತಕ್ಕೆ ಬಂದರೆಂದು ಅಭಿಪ್ರಾಯಿಸಿದ್ದಾರೆ.[೫] ಬಿ.ಕೆ. ಥಾಪರ್ ಅವರು ಕ್ರಿ.ಪೂ. ಸು.೩ನೆಯ ಶತಮಾನದಿಂದ ೧ನೆಯ ಶತಮಾನವೆಂದು ಗುರುತಿಸಿದ್ದಾರೆ.[೬] ಬಿ.ಸುಬ್ಬರಾವ್ ಅವರು ಕ್ರಿ.ಪೂ ಸು. ೫೦೦ ಎಂದೂ, ಡಿ.ಡಿ ಕೋಸಂಬಿ ಮತ್ತು ಆರ್.ಎಸ್. ಶರ್ಮಾ ಅವರು ಅತ್ತರಂಜಿಕೇರ ಮತ್ತು ಹಳ್ಳೂರು(ಧಾರವಾಡ ಜಿಲ್ಲೆ)ನಲ್ಲಿ ಕ್ರಿ.ಪೂ.೧೧ನೇ ಶತಮಾನದವೆಂದು ಗೊತ್ತುಪಡಿಸಿದ್ದಾರೆ.[೭] ಹೀಗೆ ವಿವಿಧ ಪುರಾತತ್ವಜ್ಞರು ಈ ಸಂಸ್ಕೃತಿಗೆ ಸಂಬಂಧಿಸಿದಂತೆ ವಿವಿಧ ಕಾಲಮಾನವನ್ನು ನಿಗಧಿಗೊಳಿಸಿದ್ದಾರೆ.

ದಕ್ಷಿಣ ಭಾರತದಲ್ಲಿ ಈ ಸಂಸ್ಕೃತಿಯು ಕ್ರಿ.ಪೂ ಸುಮಾರು ೧೦೦೦ ದಿಂದ ಕ್ರಿ.ಪೂ.೧೫೦೦ ರವರೆಗೆ ಆಚರಣೆಯಲ್ಲಿತ್ತೆಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಅ.ಸುಂದರ ಅವರು ಉತ್ತರ ಕರ್ನಾಟಕದಲ್ಲಿ ಕ್ರಿ.ಪೂ ೧೨೦೦ ರಿಂದ ೧೦೦೦ ಸುಮಾರಿನಲ್ಲಿ ಪ್ರಾರಂಭವಾಗಿ ಕ್ರಿ.ಪೂ ೩-೨ನೆಯ ಶತಮಾನ ಮತ್ತು ಕೆಲವು ನೆಲೆಗಳಲ್ಲಿ ೧ನೆಯ ಶತಮಾನದವರೆಗೆ ರೂಢಿಯಲ್ಲಿತ್ತೆಂದು ಅಭಿಪ್ರಾಯಿಸಿದ್ದಾರೆ.[೮] ದಕ್ಷಿಣ ಕರ್ನಾಟಕದಲ್ಲಿ ಕ್ರಿ.ಪೂ ೧೨೦೦ ರಿಂದ ೧೦೨೫ರವರೆಗೆ ಈ ಸಂಸ್ಕೃತಿ ಪ್ರವರ್ಧಮಾನದಲ್ಲಿತ್ತೆಂದು ಕೆಲವು ವೈಜ್ಞಾನಿಕ ವಿಶ್ಲೇಷಣೆಯಿಂದ ತಿಳಿದುಬಂದಿದೆ. ಹಳ್ಳೂರಿನಲ್ಲಿ ಈ ಸಂಸ್ಕೃತಿಯ ಕಾಲಮಾನವು ಕ್ರಿ.ಪೂ. ೧೦೦೦ವೆಂದು ಇಂಗಾಲ೧೪ರ ಕಾಲನಿರ್ಣಯ ಪರೀಕ್ಷೆಯಿಂದ ಖಚಿತವಾಗಿದೆ.[೯] ಬಿ.ಕೆ. ಥಾಪರ್ ಮತ್ತು ಎಂ. ಶೇಷಾದ್ರಿಯವರು ಅನುಕ್ರಮವಾಗಿ ಮಸ್ಕಿ(೧೯೫೪)

ಟಿ.ನರಸೀಪುರ(೧೯೭೫) ನೆಲೆಗಳಲ್ಲಿ ನಡೆಸಿದ ಭೂ ಉತ್ಖನನಗಳಿಂದ ಈ ಪ್ರದೇಶದಲ್ಲಿನ ಬೃಹತ್ ಶಿಲಾಯುಗ ಸಂಸ್ಕೃತಿಯ ಕಾಲಮಾನ ನಿರ್ಧರಿಸಲು ಸಾಧ್ಯವಾಯಿತು. ಒಟ್ಟಿನಲ್ಲಿ ಎಲ್ಲಾ ಪುರಾತತ್ವಜ್ಞರ ವಿವಿಧ ಅಭಿಪ್ರಾಯಗಳಿಂದ ತಿಳಿಯಬಹುದಾದ ಮುಖ್ಯ ಸಂಗತಿ ಏನೆಂದರೆ ಕ್ರಿ.ಪೂ.ಸು. ೧೪೦೦-೨೦೦ ವರ್ಷಗಳ ಅವಧಿಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯು ಅಸ್ತಿತ್ವದಲ್ಲಿತ್ತು ಹಾಗೂ ಇಂಥ ಅಭಿಪ್ರಾಯಗಳಿಗೆ ಪುಷ್ಠಿ ಎಂಬಂತೆ ವೈಜ್ಞಾನಿಕ ಪರೀಕ್ಷೆಗಳಿಂದ ದೃಢಪಟ್ಟ ಸಂಗತಿಗಳಾಗಿವೆಯೆಂಬುದು ಖಚಿತವಾದ ನಿಲುವುಗಳಾಗಿವೆ.[೮] ನವಶಿಲಾಯುಗ ಮತ್ತು ಶಿಲಾ ತಾಮ್ರಯುಗದ ಹಂತದಲ್ಲಿ ಜನರು ಅನುಸರಿಸುತ್ತಿದ್ದ ಜೀವನ ಪದ್ಧತಿಯು ಬೃಹತ್ ಶಿಲಾಯುಗ ಹಂತದಲ್ಲಿ ಸಾಕಷ್ಟು ಸುಧಾರಣೆ ಹೊಂದಿರುವುದು ಅಧ್ಯಯನ ಪ್ರದೇಶದ ವಿವಿಧ ನೆಲೆಗಳಲ್ಲಿ ದೊರೆತಿರುವ ವಸ್ತು ಅವಶೇಷಗಳಿಂದ ತಿಳಿಯುತ್ತದೆ. ಬೃಹತ್ ಶಿಲಾಯುಗ ಹಂತದಲ್ಲಿ ಖನಿಜ ಸಂಪನ್ಮೂಲಗಳ ಬಳಕೆ, ಕಬ್ಬಿಣದ ಆವಿಷ್ಕಾರ, ವಾಸ್ತು ನಿರ್ಮಿತಿಗಳ ರಚನೆ, ಸುಧಾರಿತ ಮಡಕೆಗಳ ತಯಾರಿಕೆ, ಜಲಸಂಗ್ರಹಾಕಗಳ ನಿರ್ಮಾಣ ಮತ್ತು ಕೃಷಿ ವಿಸ್ತರಣೆ, ಜನಸಂಖ್ಯೆ ಹೆಚ್ಚಳ ಮೊದಲಾದ ತಾಂತ್ರಿಕ ಕೌಶಲ್ಯಗಳನ್ನು ರೂಢಿಸಿಕೊಂಡಿದ್ದು ಮುಂದಿನ ಆದಿ ಇತಿಹಾಸ ಕಾಲದ ಸಂಸ್ಕೃತಿ ಬೆಳವಣಿಗೆಗೆ ಕಾರಣವಾದವು.

**ಕೊನೆ ಟಿಪ್ಪಣಿಗಳು**

೧. ಸುಂದರ ಅ, (ಸಂ), (ಮರು ಮುದ್ರಣ), ೨೦೧೮, ಕರ್ನಾಟಕ ಚರಿತ್ರೆ ಸಂಪುಟ-೧, ಪು. ೩೬೨.

೨. ಸಂಡೂರು ತಾಲ್ಲೂಕಿನ ಹಿರೇಹಾಳು ಗ್ರಾಮದಲ್ಲಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶಿಲಾವೃತ್ತ ಸಹಿತ ಕಲ್ಮನೆ ಸಮಾಧಿಯನ್ನು ಶೋಧಿಸಲಾಗಿದೆ.

೩. ಇಂ. ಆ. ರಿ, ೧೯೭೭-೭೮, ಪು. ೨೫.

೪. ಸುಬ್ಬರಾವ್ ಬಿ., ೧೯೪೮, ಸ್ಟೋನ್ ಏಜ್ ಕಲ್ಚರ್ಸ್ ಆಫ್ ಬಳ್ಳಾರಿ, ಪು. ೬೪.

೫. ದುರುಗಪ್ಪ ಎಂ.ಕೆ., ೨೦೦೪, ಹಗರಿಬೊಮ್ಮನಹಳ್ಳಿ ತಾಲ್ಲೂಕು ದಶಮಾಪುರ ಪರಿಸರದ ಪ್ರಾಗೈತಿಹಾಸಿಕ ಕುರುಹುಗಳು ಇ.ದ, ಸಂ, ೧೯ ಪು. ೧೪-೧೫.

೬. ಸುಬ್ಬರಾವ್ ಬಿ., ೧೯೪೮, ಪೂರ್ವೋಕ್ತ, ಪು. ೬೪.

೭. ಕಪ್ಪಗಲ್ಲು ಗ್ರಾಮದ ನೈರುತ್ಯ ದಿಕ್ಕಿಗೆ ಐದು ನಿಲುಸುಗಲ್ಲುಗಳಿದ್ದು ಅವುಗಳಲ್ಲಿ ಎರಡು ಮಾತ್ರ ಸುಸ್ಥಿತಿಯಲ್ಲಿವೆ. ಅವುಗಳು ದೂರದಿಂದ ಗಮನಿಸಿದರೆ ಸಾಲಾಗಿ ನಿಲ್ಲಿಸಿರುವ ಅಲೈನ್‌ಮೆಂಟ್‌ಗಳಂತೆ ಗೋಚರಿಸುತ್ತವೆ.

೮. ತಿಪ್ಪೇಸ್ವಾಮಿ ಹೆಚ್., ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು, ಇ.ದ.ಸಂ, ೧೪, ಪು. ೨೦

೯. ಅದೇ, ಪು. ೨೦.

೧೦. ಗುಡೇಕೋಟೆಯಲ್ಲಿರುವ ಕಂಡಿಕೋಣೆ ಸಮಾಧಿಯ ಒಳ ಭಾಗದಲ್ಲಿ ಕಡ್ಡಿ ಚಿತ್ರಗಳಿದ್ದು ಅವುಗಳು ಮನುಷ್ಯನನ್ನು ಹೋಲುತ್ತವೆ. ಶಿಲಾಸಮಾಧಿಯೊಂದರಲ್ಲಿ ವರ್ಣಚಿತ್ರಗಳಿರುವುದು ವಿಶೇಷವೆನಿಸಿದೆ.

೧೧. ವೀಣಾ ಎಂ.ಪಿ., ೧೯೯೮, ಕೊಟ್ನಕಲ್ಲು ಪರಿಸರದ ಪ್ರಾಗೈತಿಹಾಸಿಕ ನೆಲೆಗಳು, ಇ.ದ.ಸಂ, ೧೪, ಪು. ೨೦.

೧೨. ಗುರುರಾಜ ಬಿ.ಕೆ. ೧೯೭೨, ಮೆಗಾಲಿಥಿಕ್ ಕಲ್ಚರ್ಸ್ ಇನ್ ಸೌಥ್ ಇಂಡಿಯಾ, ಪು. ೧೬೩.

೧೩. ಸುಂದರ ಅ., ೧೯೭೫, ಅರ್ಲಿ ಚೇಂಬರ್ಸ್ ಟೋಂಬ್ಸ್ ಆಫ್ ಸೌಥ್ ಇಂಡಿಯಾ, ಪು. ೭೧.

೧೪. ಅದೇ, ಪು. ೭೨.

೧೫. ಅದೇ, ಪು. ೭೨.

೧೬. ಷೇಕ್ ಅಲಿ ಬಿ., ಪೂರ್ವೋಕ್ತ, ಪು. ೧೩೬.

೧೭. ಸುಂದರ ಅ., ೧೯೭೩, ಗಂಗಾವತಿ ತಾಲೂಕಿನ ಪ್ರಾಚ್ಯವಸ್ತುಗಳು, ಕ.ಭಾ ೬–೧ (ಸ.–೬) ಪು. ೪೦೦.

೧೮. ಜಯಣ್ಣ ಉಲ್ಲಾನಹಳ್ಳಿ, ಮೊಳಕಾಲ್ಮೂರು ತಾಲೂಕಿನ ಪುರಾತತ್ವೀಯ ಪರಿಸರ ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಪು. ೧೪೨.

೧೯. ಶ್ರೀನಿವಾಸ ಪಾಡಿಗಾರ್, ೨೦೧೦, ಪುರಾತತ್ವ ಪರಿಚಯ, ಪು. ೨೪೭.

೨೦. ಮುದೋಳ್ ಎಂ.ಎಸ್., ೧೯೯೭, ಎ ಟೆಕ್ನಿಕಲ್ ಸ್ಟಡಿ ಆಫ್ ಮೆಟಲ್ ಆಬ್ಜೆಕ್ಟ್ಸ್, ಪು. ೮.

೨೧. ವಾಸುದೇವ ಬಡಿಗೇರ, ೧೯೯೯, ಹಂಪಿ ಪರಿಸರದ ಲೋಹಶಾಸ್ತ್ರಕಲೆ, ಇ.ದ.ಸಂ, ೧೪, ಪು. ೨೩–೨೫.

೨೨. ಜಯಣ್ಣ ಉಲ್ಲಾನಹಳ್ಳಿ, ೨೦೦೩, ಕೂಡ್ಲಿಗಿ ತಾಲೂಕು ಗುಡೇಕೋಟೆ ಪರಿಸರದ ಪುರಾತತ್ವ ಸಮೀಕ್ಷೆ, ಇ.ದ.ಸಂ, ೧೮, ಪು. ೧.

೨೩. ಮಹದೇವಯ್ಯ ಎಂ., ವೀರರಾಘವನ್, ೨೦೧೪, ಎಕ್ಸ್‌ಕವೇಷನ್ ಅಟ್ ಕುರುಗೋಡು ಇನ್ ಕರ್ನಾಟಕ, ಮೆಗಲಿಥಿಕ್ ಕಲ್ಚರ್ಸ್ ಆಫ್ ಸೌಥ್ ಇಂಡಿಯಾ, ಸ್ಪೆಷಲ್ ರಿಪೋರ್ಟ್, ಪು. ೪೫–೪೬..

೨೪. ಗೋಪಾಲ್ ಆರ್., (ಸಂ) ೨೦೧೦, ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೫೧

೨೫. ಸುಂದರ ಅ., ಕರ್ನಾಟಕ ಪ್ರಾಗಿತಿಹಾಸ ಕಲೆ, ಪು. ೮೧

೨೬. ರಾವ್ ಕೆ.ಪಿ., ೨೦೧೪, ಸಿಗ್ನಿಫಿಕೆನ್ಸ್ ಕ್ಯಾರಕ್ಟರ್ಸ್ ಆಫ್ ಮೆಗಲಿಥಿಕ್ ಕಲ್ಚರ್ಸ್ ಆಫ್ ಇನ್ ಆಂಧ್ರಪ್ರದೇಶ, ಮೆಗಲಿಥಿಕ್ ಕಲ್ಚರ್ಸ್ ಆಫ್ ಸೌಥ್ ಇಂಡಿಯಾ, ಸ್ಪೆಷಲ್ ರಿಪೋರ್ಟ್, ಪು. ೧೭೨

೨೭. ಮೋಹನ ಆರ್., ೨೦೧೯, ಕರ್ನಾಟಕದ ಆದಿಮ ಚಿತ್ರಕಲೆ, ಪು. ೫.

೨೮. ಅದೇ, ಪು. ೬.

೨೯. ಅದೇ, ಪು. ೭.

೩೦. ಅದೇ, ಪು. ೧೪.

೩೧. ಅದೇ, ಪು. ೧೮.

೩೨. ಅದೇ, ಮ. ೧೯.

೩೩. ಇಂ. ಆ. ರಿ, ೧೯೬೭-೬೮, ಮ. ೧೦.

೩೪. ನಾಗರಾಜರಾವ್, ಎಂ.ಎಸ್., ಮತ್ತು ಮಲ್ಹೋತ್ರ. ಕೆ.ಸಿ., ೧೯೬೫, ದಿ ಸ್ಟೋನ್ ಏಜ್ ಹಿಲ್‌ಡ್ವೆಲರ್ಸ್ ಆಫ್ ತೆಕ್ಕಲಕೋಟೆ, ಮ. ೬೦.

೩೫. ಅನ್ಸಾರಿ ಜೆಡ್.ಡಿ. ಮತ್ತು ನಾಗರಾಜ್‌ರಾವ್ ಎಂ.ಎಸ್, ೧೯೬೯, ಎಕ್ಕ್‌ಕವೇಷನ್ಸ್ ಅಟ್ ಸಂಗನಕಲ್, ೧೯೬೪-೬೫, ಪು. ೧೧.

೩೬. ಸುಂದರ ಅ., ಪೂರ್ವೋಕ್ತ, ಪು. ೫೧.

೩೭. ಅದೇ, ಪು. ೫೧.

೩೮. ಶರಣಬಸಪ್ಪ ಕೋಲ್ಕಾರ, ೨೦೧೦, ಶಿಲಾಯುಗದ ಗವಿ ಚಿತ್ರಗಳು, ಪು. ೫೦.

೩೯. ಗೋಪಾಲ್ ಆರ್., ೨೦೧೦, ಪೂರ್ವೋಕ್ತ, ಪು. ೩೪.

೪೦. ಮೋಹನ್ ಆರ್, ೨೦೧೯, ಪೂರ್ವೋಕ್ತ, ಪು. ೩೩.

೪೧. ತೆಕ್ಕಲಕೋಟೆಯಿಂದ ಉಡೇಗೊಳಕ್ಕೆ ಸಂಚರಿಸುವ ರಸ್ತೆಯ ಬಲಭಾಗದಲ್ಲಿರುವ ಜಕ್ಕೇರು ಗುಡ್ಡದ ಕಲ್ಲಾಸರೆಗಳಲ್ಲಿ ಉಡೇದಗುಡ್ಡದಲ್ಲಿರುವ ಚಿತ್ರಗಳಿಗಿಂತ ಭಿನ್ನವಾದ ಕಡವೆ, ಎತ್ತು, ಜಿಂಕೆ ಮತ್ತು ಹಸ್ತಮುದ್ರೆಯ ಕೆಂಪು ವರ್ಣದ ವರ್ಣಚಿತ್ರಗಳನ್ನು ಶೋಧಿಸಲಾಯಿತು.

೪೨. ತೆಕ್ಕಲಕೋಟೆಯ ಕರಿಮಟ್ಟಿಗುಡ್ಡದ ಕಲ್ಲಾಸರೆಯಲ್ಲಿ ಛಾಯಾರೂಪದ ಹಸ್ತಗಳ ಗುರುತಗಳನ್ನು ಮೂಡಿಸಿರುವುದು ವಿಶೇಷ ವೆನಿಸಿದೆ. ಕುಟ್ಟು ಚಿತ್ರದಲ್ಲಿ ಹಸ್ತದ ಗುರುತುಗಳು ಬೆಳಕಿಗೆ ಬಂದಿರುವುದು ಇದೇ ಮೊದಲು ಎಂದು ಹೇಳಬಹುದು.

೪೩. ಸಿರುಗುಪ್ಪ ತಾಲ್ಲೂಕಿನ ಸಿದ್ದರಾಂಪುರದಲ್ಲಿರುವ ಕಲ್ಲಾಸರೆಯಲ್ಲಿ ಐದು ಜನ ಪುರುಷರು, ಒಬ್ಬ ಮಹಿಳೆ ಹಾಗೂ ಗೂಳಿ ಚಿತ್ರಗಳನ್ನು ಕ್ಷೇತ್ರಕಾರ್ಯದಲ್ಲಿ ಶೋಧಿಸಲಾಯಿತು.

೪೪. ಶರಣಬಸಪ್ಪ ಕೋಲ್ಕಾರ, ಪೂರ್ವೋಕ್ತ, ಪು. ೪೦.

೪೫. ಅದೇ, ಪು. ೪೦.

೪೬. ಶರಣಬಸಪ್ಪ ಕೋಲ್ಕಾರ, ಪೂರ್ವೋಕ್ತ, ಪು. ೫೦.

೪೭. ತಿಪ್ಪೇಶ ಹೆಚ್.ಎಂ., ೨೦೧೬, ಹುರುಳಿಹಾಳು ಮತ್ತು ಮಾಳೇಹಳ್ಳಿಯ ಬೃಹತ್ ಶಿಲಾಯುಗದ ಕುರುಹುಗಳು, ಇ.ದ.ಸಂ, ೩೧, ಪು. ೧೦-೧೧.

೪೮. ಅದೇ, ೨೦೧೬, ಕೂಡ್ಲಿಗಿ ತಾಲೂಕಿನ ಬೃಹತ್ ಶಿಲಾಯುಗದ ನೆಲೆಗಳು, ಅಪ್ರಕಟಿತ ಎಂ.ಫಿಲ್, ನಿಬಂಧ. ಪು. ೫೧.

೪೯. ಅದೇ, ಪು. ೫೧.

೫೦. ಸುಂದರ ಅ., ಪೂರ್ವೋಕ್ತ, ಪು. ೩೦.

೫೧. ಶರಣಬಸಪ್ಪ ಕೋಲ್ಕಾರ, ಪೂರ್ವೋಕ್ತ, ಪು. ೩೫.

೫೨. ಅದೇ, ಪು. ೩೮.

೫೩. ಅದೇ, ಪು. ೪೦.

೫೪. ಅದೇ, ಪು. ೫೫.

೫೫. ಅದೇ, ಪು. ೫೬.

೫೬. ತಾವರೆಗೇರ ಮಾನಪಯ್ಯ ಮತ್ತು ತಿಮ್ಮಪಯ್ಯ ಗುಡ್ಡದ ಸುತ್ತಮುತ್ತ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗವಿಕಲ್ಲಾಸರೆಯಲ್ಲಿ ಐದು ಕೊಂಬುವುಳ್ಳ ಜಿಂಕೆ, ಗೂಳಿಯ ಚಿತ್ರವನ್ನು ಶೋಧಿಸಲಾಯಿತು. ಪ್ರಾಯಶಃ ಗವಿಕಲ್ಲಾಸರೆಯನ್ನು ವಸತಿ ನೆಲೆಯಾಗಿ ಮಾಡಿಕೊಂಡಿದ್ದರು ಎನ್ನುವುದಕ್ಕೆ ದೊರೆತ ಸುಟ್ಟು ಬೂದಿಯಾಗಿರುವ ಮಣ್ಣು, ಮಡಕೆಗಳು ಸಾಕ್ಷಿಯಾಗಿವೆ.

೫೭. ಶರಣಬಸಪ್ಪ ಕೋಲ್ಕಾರ, ಪೂರ್ವೋಕ್ತ, ಪು. ೨೪.

೫೮. ಅದೇ, ಪು. ೨೫.

೫೯. ಸುಂದರ ಅ., ೧೯೯೪, ಪೂರ್ವೋಕ್ತ ಪು. ೮೧ : ಶರಣಬಸಪ್ಪ ಕೋಲ್ಕಾರ, ಪೂರ್ವೋಕ್ತ, ಪು. ೧೦

೬೦. ಗೋಪಾಲ್ ಆರ್., (ಸಂ), ೨೦೧೦, ಪೂರ್ವೋಕ್ತ, ಪು. ೩೪.

೬೧. ಸುಂದರ ಅ., ೧೯೯೪, ಪೂರ್ವೋಕ್ತ, ಪು. ೫.

೬೨. ಮೋಹನ ಆರ್, ಪೂರ್ವೋಕ್ತ, ಪು. ೧೧.

೬೩. ಅದೇ, ಪು. ೧೩.

೬೪. ಸುಂದರ ಅ., ಪೂರ್ವೋಕ್ತ, ಪು. ೩೬೨.

೬೫. ಷೇಕ್ ಅಲಿ, ಪೂರ್ವೋಕ್ತ, ಪು. ೩೬೨.

೬೬. ಅದೇ, ಪು. ೩೬೨.

೬೭. ಅದೇ, ಪು. ೩೬೩.

೬೮. ನಾಗರಾಜರಾವ್, ಎಂ.ಎಸ್., ಮತ್ತು ಮಲ್ಹೋತ್ರ. ಕೆ.ಸಿ., ೧೯೬೫, ದಿ ಸ್ಟೋನ್ ಏಜ್ ಹಿಲ್‌ಡ್ವೆಲರ್ಸ್ ಆಫ್ ತೆಕ್ಕಲಕೋಟೆ, ಪು. ೬೦.

೬೯. ಮಹದೇವ ಎಂ., ವೀರರಾಘವನ್, ಪೂರ್ವೋಕ್ತ, ಪು. ೪೬-೪೭.

೭೦. ನಾಗರಾಜರಾವ್ ಎಂ.ಎಸ್., ೧೯೮೪, ಪ್ರೋಟೊ ಹಿಸ್ಟಾರಿಕ್ ಕಲ್ಚರ್ಸ್ ಆಫ್ ದಿ ತುಂಗಭದ್ರ ವ್ಯಾಲಿ, ಪು. ೯೪.

೭೧. ಶೇಷಾದ್ರಿ ಎಂ., ೧೯೭೧, ಎಕ್ಸ್‌ಕವೇಷನ್ಸ್ ಅಟ್ ಟಿ.ನರಸೀಪುರ, ಪು. ೭೦

೭೩. ಏನ್ಸಿಯಂಟ್ ಇಂಡಿಯಾ, ನಂ.೧೩, ಪು. ೧೧೯.

೭೪. ಅದೇ, ಪು. ೧೧೯.

೭೫. ಷೇಕ್‌ಅಲಿ, ಪೂರ್ವೋಕ್ತ ಪು. ೩೬೨.

೭೫. ಗುರುರಾಜ ಬಿ.ಕೆ. ಪೂರ್ವೋಕ್ತ, ಪು. ೩೧೦.

೭೬. ಅದೇ, ಪು. ೩೧೦.

೭೭. ಅದೇ, ಪು. ೩೧೧.

೭೮. ಅದೇ, ಪು. ೩೧೨.

೭೯. ನಾಗರಾಜರಾವ್ ಎಂ.ಎಸ್., ಪೂರ್ವೋಕ್ತ, ಪು. ೩೧೦.

೮೦. ಸುಂದರ ಅ., ಪೂರ್ವೋಕ್ತ, ಪು. ೨೧೦.

# ಅಧ್ಯಾಯ : ಏಳು
# ಬೃಹತ್ ಶಿಲಾಯುಗ ಮತ್ತು ಆದಿ ಐತಿಹಾಸಿಕ ಕಾಲದ ಸಂಬಂಧಗಳು

೭.೧ ಕೃಷಿ ಚಟುವಟಿಕೆಗಳು

೭.೨ ಜನಸಮುದಾಯಗಳು

೭.೩ ನಗರೀಕರಣ ಪ್ರಕ್ರಿಯೆಗಳು

೭.೪ ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳು

೭.೫ ರಾಜ್ಯ ನಿರ್ಮಾಣ ಪ್ರಕ್ರಿಯೆಗಳು

## ಅಧ್ಯಾಯ : ಏಳು

## ಬೃಹತ್ ಶಿಲಾಯುಗ ಮತ್ತು ಆದಿ ಇತಿಹಾಸ ಕಾಲದ ಸಂಬಂಧಗಳು

ಮಾನವ ಸಂಸ್ಕೃತಿ ಅಥವಾ ನಾಗರೀಕತೆಯ ಬೆಳವಣಿಗೆಯ ಹಂತದಲ್ಲಿ ಬೃಹತ್ ಶಿಲಾಯುಗ ಹಂತವು ತುಂಬಾ ವಿಶಿಷ್ಟವಾದ ಪಾತ್ರವಹಿಸಿತು. ಈ ಸಂಸ್ಕೃತಿಯು ಶಿಲಾ-ತಾಮ್ರಯುಗದ ಸುಧಾರಿತ ಮುಂದುವರೆದ ಹಂತವಾಗಿದೆ. ಈ ಕಾಲದ ಪ್ರಮುಖ ಲಕ್ಷಣವೆಂದರೆ ಬೃಹತ್ ಶಿಲಾಯುಗದಲ್ಲಿ ಸತ್ತವರಿಗಾಗಿ ದೊಡ್ಡ ದೊಡ್ಡ ಕಲ್ಲುಗಳನ್ನು ನಿಲ್ಲಿಸಿ ಸಮಾಧಿಗಳನ್ನು ನಿರ್ಮಿಸುತ್ತಿದ್ದರು. ಶವದ ಜೊತೆಗೆ ಮಡಕೆ-ಕುಡಿಕೆಗಳಲ್ಲಿ ಆಹಾರ ಧಾನ್ಯ, ಕಬ್ಬಿಣದ ಉಪಕರಣಗಳನ್ನಿಟ್ಟು ಅಂತ್ಯಸಂಸ್ಕಾರ ಮಾಡುತ್ತಿದ್ದರಿಂದ ಈ ಸಂಸ್ಕೃತಿಯನ್ನು ಬೃಹತ್ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ಆ ಕಾಲದ ಜನರು ಮೃದುವಾದ ತಾಮ್ರದ ಉಪಕರಣದ ಬದಲು ಕಠಿಣವಾಗಿದ್ದ ಕಬ್ಬಿಣ ಉಪಕರಣಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಸಲು ಪ್ರಾರಂಭಿಸಿದ್ದರಿಂದ ಈ ಹಂತವನ್ನು ಕಬ್ಬಿಣಯುಗವೆಂತಲೂ ಸಹ ಕರೆಯಲಾಯಿತು. ಇಂತಹ ವಿಶಿಷ್ಟ ಸಂಪ್ರದಾಯಗಳಿಂದ ಕೂಡಿದ ಬೃಹತ್ ಶಿಲಾಯುಗವು ಉತ್ತರ ಕರ್ನಾಟಕದ ಪೂರ್ವ ಭಾಗದಲ್ಲಿ ಕ್ರಿ.ಪೂ. ೧೦೦೦-೯೦೦ ರಿಂದ ಕ್ರಿ.ಶ.ಪೂ. ೨೦೦ರ ಕಾಲಾವಧಿಯಲ್ಲಿ ಅಸ್ತಿತ್ವದಲ್ಲಿತ್ತೆಂದು ನಿರ್ಣಯಿಸಲಾಗಿದೆ. ಇಂಥ ನಿರ್ಣಯಗಳಿಗೆ ಪುಷ್ಠಿದಾಯಕ ಸಾಕ್ಷಿಗಳಂತೆ ಹಲವಾರು ನೆಲೆಗಳನ್ನು ಕಾಣುತ್ತೇವೆ.

ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ಐತಿಹಾಸಿಕ ಕಾಲದ ಆರಂಭದವರೆಗೂ ನಿರಂತರವಾಗಿ ಕಂಡುಬಂದವು. ಐತಿಹಾಸಿಕ ಕಾಲದ ಮೊದಲ ಹಂತದಲ್ಲಿ ರೂಪುಗೊಂಡ ಮೌರ್ಯ ಮತ್ತು ಶಾತವಾಹನರು ಬೃಹತ್ ಶಿಲಾಯುಗ ಸಂಸ್ಕೃತಿಯ ಸುಧಾರಿತ ಮುಂದುವರೆದ ಭಾಗವೆಂದು ಗುರುತಿಸಲಾಗುತ್ತದೆ. ಇದಕ್ಕೆ ಸಿಗುವ ಪುರಾವೆಗಳೆಂದರೆ, ಬೃಹತ್ ಶಿಲಾಸಮಾಧಿಗಳಲ್ಲಿ ಹುದುಗಿರುವ ವಸ್ತು-ಅವಶೇಷಗಳು ಮೌರ್ಯ ಮತ್ತು ಶಾತವಾಹನರ ಸಂಬಂಧ ಸೂಚಕಗಳಾಗಿ ಪಾತ್ರನಿರ್ವಹಿಸುತ್ತವೆ. ಅಲ್ಲದೇ ಶಾಸನಗಳು ಹಾಗೂ ನಾಣ್ಯಗಳು ದೊರೆತ ಪ್ರದೇಶದಲ್ಲಿದ್ದ ಸ್ಥಳೀಯ ಜನರು ಮೌರ್ಯ ಮತ್ತು ಶಾತವಾಹನರೊಡನೆ ಸಂಪರ್ಕವನ್ನು ಇಟ್ಟುಕೊಂಡಿದ್ದರೆಂದು ಸೂಚಿಸುತ್ತವೆ.[೧] ಪುರಾತತ್ವಜ್ಞರ ಪ್ರಕಾರ ಆದಿ ಇತಿಹಾಸ ಕಾಲವು ಹೆಚ್ಚೆಂದರೆ ಕ್ರಿ.ಪೂ. ೧ನೆಯ ಶತಮಾನದಿಂದ ಆರಂಭಗೊಳ್ಳುತ್ತದೆ. ಈಗಾಗಲೇ ಉಲ್ಲೇಖಿಸಿದ ವಿವಿಧ ಬಗೆಯ ವಸ್ತು ಅವಶೇಷಗಳಲ್ಲದೇ ಕೆಂಪು ಲೇಪನದಡಿ ಬರೆದ

ಬಿಳಿವರ್ಣದ ಚಿತ್ರಗಳಿರುವ ಮೃತ್ಪಾತ್ರೆಗಳ(ಆರ್.ಸಿ.ಪಿ.ಡಬ್ಲ್ಯೂ) ಈ ಹಂತದಲ್ಲಿಯೂ ಕಂಡುಬರುವುದರಿಂದ ಪುರಾತತ್ವಜ್ಞರು ಕಾಲಮಾನದ ಕುರಿತು ಈ ಬಗೆಯ ನಿರ್ಧಾರ ತಾಳಲು ಕಾರಣವಾಗಿದೆ.[೨] ಆದರೆ ಇತಿಹಾಸಕಾರರ ದೃಷ್ಟಿಯಲ್ಲಿ ಕರ್ನಾಟಕವು ಅಶೋಕನ ಕಾಲದಲ್ಲಿಯೇ(ಕ್ರಿ.ಪೂ ೩ನೆಯ ಶತಮಾನದಿಂದಲೆ) ಆದಿ ಇತಿಹಾಸ ಕಾಲಕ್ಕೆ ಕಾಲಿಟ್ಟಿತು. ಬೃಹತ್ ಶಿಲಾಯುಗ ಕಾಲದ ಅವಸಾನವು ಆದಿ ಇತಿಹಾಸ ಕಾಲದ ಪ್ರಾರಂಭ ಅಥವಾ ಬೆಳವಣಿಗೆಗೆ ಹೇಗೆ ಪೂರಕವಾಗಿ ಪರಿಗಣಿತವಾಯಿತು ಎಂಬ ಸಂಗತಿಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಕರ್ನಾಟಕದಲ್ಲಿ ಆದಿ ಇತಿಹಾಸ ಕಾಲದ ಆರಂಭದ ಅವಧಿಗೆ ಸೇರಿದ ಸುಮಾರು ೨೫೦ ನೆಲೆಗಳು ಕಂಡುಬಂದಿದ್ದು, ಅವುಗಳಲ್ಲಿ ಸನ್ನತಿ, ಚಂದ್ರವಳ್ಳಿ, ಬ್ರಹ್ಮಗಿರಿ, ಮಸ್ಕಿ, ಪಿಕ್ಲಿಹಾಳ, ಟಿ.ನರಸೀಪುರ, ಹಳ್ಳೂರು, ಬಾದಾಮಿ, ಪಟ್ಟದಕಲ್ಲು, ಬನವಾಸಿ, ಐಹೊಳೆ, ಜೇವರ್ಗಿ, ವಡಗಾಂವ್–ಮಾಧವಪುರ, ಹೆಮ್ಮಿಗೆ ಮೊದಲಾದವು. ಹೆಸರಿಸಿರುವ ಈ ನೆಲೆಗಳ ವಿಸ್ತೀರ್ಣ ಹಾಗೂ ಭೌಗೋಳಿಕ ಸ್ಥಾನದ ದೃಷ್ಟಿಯಿಂದ ಉಲ್ಲೇಖನೀಯವಾಗಿವೆ.[೩] ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡುಬರುವ ಆದಿ ಇತಿಹಾಸ ಕಾಲದ ನೆಲೆಗಳು ಮತ್ತು ಅವುಗಳ ಸಾಂಸ್ಕೃತಿಕ ಅವಶೇಷಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಿ ದಾಖಲಿಸಲಾಗಿದೆ.

ಅಧ್ಯಯನ ಪ್ರದೇಶದಲ್ಲಿರುವ ಆದಿ ಇತಿಹಾಸ ಕಾಲದ ನೆಲೆಗಳು ಪ್ರಾಗೈತಿಹಾಸಿಕ ಕಾಲದಿಂದಲೇ ನಡೆಯುತ್ತಿದ್ದ ಸರಕು ಸಾಮಗ್ರಿಗಳ ಹಾಗೂ ಜನರ ಚಲನವಲನಗಳಿಗೆ ಅನುಕೂಲವಾಗಿರುವ ಮಾರ್ಗಗಳಲ್ಲಿ ಸ್ಥಾಪಿತಗೊಂಡ ಆಯಕಟ್ಟಿನ ಸ್ಥಳಗಳಾಗಿವೆ. ಅವುಗಳಲ್ಲಿ ಕಪ್ಪಗಲ್ಲು,[೪] ಸಂಗನಕಲ್ಲು,[೫] ತೆಕ್ಕಲಕೋಟೆ,[೬] ಉದೇಗೊಳಂ,[೭] ನಿಟ್ಟೂರು,[೮] ನಡವಿ,[೯] ಬಾಗವಾಡಿ,[೧೦] ಹಚ್ಚೊಳ್ಳಿ,[೧೧] ಹಿರೇಕಲ್ಲು,[೧೨] ಜೋಗಿಕೊಳ್ಳ,[೧೩] ತೋರಣಗಲ್ಲು,[೧೪] ಹಂಪಸಾಗರ,[೧೫] ಮಾಗಳ,[೧೬] ಕಾಕುಬಾಳ,[೧೭] ಗಾದಿಗನೂರು,[೧೮] ಗುಡಿಓಬಳಾಪುರ,[೧೯] ಭುವನಹಳ್ಳಿ,[೨೦] ಹಂಪಿ,[೨೧] ಅಪ್ಪಯ್ಯನಹಳ್ಳಿ,[೨೨] ಕುಮತಿ,[೨೩] ಹಾಲಸಾಗರ,[೨೪] ಜರಿಮಲೆ,[೨೫] ಗುಡೇಕೋಟೆ,[೨೬] ತಾವರೆಗೆರೆ,[೨೭] ಬೆಣಕಲ್,[೨೮] ಸಿರಿವಾಳ,[೨೯] ಹಿರೇಬೆಣಕಲ್ಲು,[೩೦] ಲಿಂಗನಬಂಡಿ,[೩೧] ಕೆರೆಹಳ್ಳಿ,[೩೨] ಕೊಪ್ಪಳ,[೩೩] ಬಿಳೇಬಾವಿ,[೩೪] ಹೇರೂರು,[೩೫] ಸೋಮನಾಳ,[೩೬] ಕಡೇಬಾಗಿಲು[೩೭] ನೆಲೆಗಳಲ್ಲಿ ಈ ಸಂಸ್ಕೃತಿಯ ಕುರುಹುಗಳು ಲಭ್ಯವಾಗಿವೆ.

ಅಧ್ಯಯನ ಪ್ರದೇಶದ ವಿವಿಧ ನೆಲೆಗಳಲ್ಲಿ ಮಣ್ಪಾತ್ರೆಗಳು(ಮಡಕೆಗಳು), ಬಿಳಿವರ್ಣದ ಚಿತ್ರಗಳು, ನಾಣ್ಯಗಳು, ಶಾಸನಗಳು, ಇಟ್ಟಿಗೆ ಕಟ್ಟಡದ ಕುರುಹುಗಳು, ಅಲಂಕೃತ ಮಡಿಕೆಗಳು, ಕಲಾತ್ಮಕ ಗೊಂಬೆಗಳು ಇತ್ಯಾದಿ ಕುರುಹುಗಳು ದೊರೆತಿದ್ದು ಅವು ಆದಿ ಇತಿಹಾಸ ಕಾಲದ ಸಂಸ್ಕೃತಿಯನ್ನು ಅರಿಯಲು ಸಹಾಯಕವಾಗಿವೆ. ಈ ಎಲ್ಲಾ ಕುರುಹುಗಳು ಶಿಲಾತಾಮ್ರಯುಗ ಮತ್ತು ಬೃಹತ್ ಶಿಲಾಯುಗದ ನೆಲೆಗಳಲ್ಲಿ ದೊರೆತಿರುವುದರಿಂದ ಆ ನೆಲೆಗಳಲ್ಲಿ ಮಾನವ ಸಂಸ್ಕೃತಿಯ ಹಂತಗಳು ನಿರಂತರವಾಗಿ ಬೆಳೆದಿರುವುದು ಸ್ಪಷ್ಟವಾಗುತ್ತದೆ. ಬೃಹತ್ ಶಿಲಾಯುಗವು ಆದಿ ಇತಿಹಾಸ ಕಾಲದಲ್ಲಿ ಮುಂದುವರಿದ

ಸುಧಾರಿತ ಹಂತವೆಂಬುದು ಸ್ಪಷ್ಟವಾಗುತ್ತದೆ. ಆದಿ ಇತಿಹಾಸ ಕಾಲದಲ್ಲಿ ಕೆಂಪು ಲೇಪನದಡಿ ಬಿಳಿಚಿತ್ರವಿರುವ ಮೃತ್ಪಾತ್ರೆಗಳು(ಆರ್.ಸಿ.ಪಿ.ಡಬ್ಲ್ಯೂ) ಈ ಹಂತದ ಹೆಚ್ಚಿನ ನೆಲೆಗಳಲ್ಲಿ ಕಂಡುಬರುವ ವೈಶಿಷ್ಟ್ಯವೆನಿಸಿವೆ. ಈ ಮೃತ್ಪಾತ್ರೆಗಳನ್ನು 'ಆಂಧ್ರ ಮೃತ್ಪಾತ್ರೆಗಳು' ಅಥವಾ 'ಶಾತವಾಹನರ ಕಾಲದ ಮಡಕೆಗಳು' ಎಂದು ಕರೆಯಲಾಗುತ್ತದೆ. ಆಂಧ್ರ ಮೃತ್ಪಾತ್ರೆಗಳೆಂದು(ಎ.ಡಬ್ಲ್ಯೂ) ಕರೆಯುವುದು ತಪ್ಪಾದ ಕ್ರಮವೆಂದು ವಿದ್ವಾಂಸರು ಅಭಿಪ್ರಾಯಿಸಿದ್ದಾರೆ.[೩೮] ಈ ಬಗೆಯ ಮೃತ್ಪಾತ್ರೆಗಳು ಬ್ರಹ್ಮಗಿರಿ, ಚಂದ್ರವಳ್ಳಿ ಮಾತ್ರವಲ್ಲದೆ ಕರ್ನಾಟಕದ ಇತರ ಕೆಲವೊಂದು ನೆಲೆಗಳಲ್ಲಿ ದೊರೆತಿವೆ. ಇವುಗಳ ಜೊತೆಗೆ ಕಪ್ಪು-ಕೆಂಪು ದ್ವಿವರ್ಣದ ಪಾತ್ರೆ(ಬಿ.ಆರ್.ಡಬ್ಲ್ಯೂ) ಕೆಂಪು ಲೇಪನವುಳ್ಳ ಪಾತ್ರೆ (ಆರ್.ಎಸ್.ಡಬ್ಲ್ಯೂ) ಕಪ್ಪುಲೇಪನವುಳ್ಳ ಪಾತ್ರೆ(ಬಿ.ಎಸ್.ಡಬ್ಲ್ಯೂ) ಮಸುಕುಕಪ್ಪು(ಡಿ.ಬಿ.ಡಬ್ಲ್ಯೂ) ಕೆಂಪು ಮತ್ತು ಬೂದು ಬಣ್ಣದ ಪಾತ್ರೆಗಳು(ಆರ್.ಜಿ.ಡಬ್ಲ್ಯೂ) ಆದಿ ಇತಿಹಾಸ ಕಾಲದಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಮುಖ್ಯವಾಗಿ ಮಣ್ಪಾತ್ರೆಗಳು ತಟ್ಟೆ ಮತ್ತು ಬಟ್ಟಲುಗಳು ಪ್ರಧಾನ ಪಾತ್ರೆಗಳಾಗಿವೆ. ಸಣ್ಣ ಮತ್ತು ದೊಡ್ಡ ಮಡಕೆಗಳನ್ನು ಕೆಂಪು ಬಣ್ಣದ ಮಣ್ಪಾತ್ರೆ ಪ್ರಕಾರದಲ್ಲಿ ತಯಾರಿಸಲಾಗಿದೆ. ಅಧ್ಯಯನ ಪ್ರದೇಶದ ವಿವಿಧ ನೆಲೆಗಳಲ್ಲಿ ಈ ಬಗೆಯ ಮಣ್ಪಾತ್ರೆಗಳು, ದಿನ ಬಳಕೆಯ ವಸ್ತುಗಳು ಲಭ್ಯವಾಗಿದ್ದು ಅವು ಜನಜೀವನವನ್ನು, ಅರಿಯಲು ಸಹಾಯಕವಾಗಿವೆ.

ಮೌರ್ಯ ಅರಸ ಅಶೋಕನ ಶಾಸನಗಳು ಕೊಪ್ಪಳ, ಬಳ್ಳಾರಿ, ಚಿತ್ರದುರ್ಗ, ರಾಯಚೂರು, ಗುಲ್ಬರ್ಗ ಜಿಲ್ಲೆಗಳಲ್ಲಿ ಬೆಳಕಿಗೆ ಬಂದಿವೆ. ಕೊಪ್ಪಳದ ಗವಿಮಠ,[೩೯] ಪಾಲ್ಕಿಗುಂಡು,[೪೦] ಬಳ್ಳಾರಿಯ ಉದೇಗೊಳಂ,[೪೧] ನಿಟ್ಟೂರಿನಲ್ಲಿ[೪೨] ತಲಾ ಎರಡೆರಡು ಶಿಲಾಶಾಸನಗಳು ದೊರೆತಿವೆ. ಶಾಸನಗಳು ಅಂದಿನ ರಾಜಕೀಯ, ಧಾರ್ಮಿಕ ಮತ್ತು ಕೆಲವು ಸಾಮಾಜಿಕ ಅಂಶಗಳನ್ನು ತಿಳಿಸುತ್ತವೆಯೇ ಹೊರತು ವಸ್ತು ಅವಶೇಷಗಳು ತಿಳಿಸುವಷ್ಟು ವಿಷಯಗಳನ್ನು ತಿಳಿಸುವುದಿಲ್ಲ. ಅಶೋಕನ ಶಾಸನಗಳಲ್ಲಿ ಅವನ ಹೆಸರು, ಬಿರುದು ಹಾಗೂ ದಕ್ಷಿಣ ಪ್ರಾಂತ್ಯದ ಪ್ರಮುಖ ಕೇಂದ್ರಗಳಾದ ಸುವರ್ಣಗಿರಿ ಮತ್ತು ಇಸಿಲಾಗಳ ಉಲ್ಲೇಖಗಳಿವೆ. ಹೀಗೆ ಶಾಸನದಲ್ಲಿ ಉಲ್ಲೇಖಗೊಂಡ ಸುವರ್ಣಗಿರಿಯನ್ನು ಅಧಿಕೃತವಾಗಿ ಗುರುತಿಸದಿದ್ದರೂ ಇಸಿಲಾವನ್ನು ಗುರುತಿಸಲಾಗಿದೆ. ಅಂದರೆ ಇಸಿಲಾ ನಗರವು ಸುವರ್ಣಗಿರಿ ಪ್ರಾಂತ್ಯದಲ್ಲಿತ್ತೆಂದು ಉಲ್ಲೇಖಿಸಲ್ಪಟ್ಟಿದೆ. ಡಿ.ಎಲ್. ನರಸಿಂಹಾಚಾರ್ ಅವರು 'ಇಸಿಲಾ' ಪದವು ದ್ರಾವಿಡ ಅಥವಾ ಆರ್ಯೇತರ ಪದವೆಂದು ಅದು ಕೋಟೆಯನ್ನು ಸೂಚಿಸುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಅದು ಪ್ರಾಯಶಃ ಕನ್ನಡ ಪದ ಇರಬಹುದಾದ ಸಾಧ್ಯತೆಯನ್ನು ತಿಳಿಸಿದ್ದಾರೆ. ಎಸ್. ಶೆಟ್ಟರ್‌ರವರು ಸಹ ಸ್ಥಳೀಯ ಪದವೆಂದು ಗುರುತಿಸಿದ್ದಾರೆ. ಲಕ್ಷ್ಮಣ್ ತೆಲಗಾವಿಯವರು ಶಾಸನದಲ್ಲಿ ಉಲ್ಲೇಖಿತವಾಗಿರುವ ಸ್ಥಳಕ್ಕೂ ಅಲ್ಲಿ ದೊರೆಯುವ ಮೌರ್ಯ ಕಾಲದ ಪ್ರಾಕ್ತಾನಾವಶೇಷಗಳಿಗೂ ಇರುವ ಸಂಬಂಧಗಳ ಆಧಾರದ ಮೇಲೆ ಮೌರ್ಯ ಕಾಲದ ಪಟ್ಟಣಗಳ ಸ್ವರೂಪವನ್ನು ನಿಖರವಾಗಿ ತಿಳಿಯಬಹುದಾಗಿದೆ ಎಂದಿದ್ದಾರೆ.

ಅಶೋಕನ ಶಾಸನದಲ್ಲಿ ಉಲ್ಲೇಖವಾಗಿರುವ ಸುವರ್ಣಗಿರಿಯಲ್ಲಿ ಮೌರ್ಯ ಸಾಮ್ರಾಜ್ಯದ ಆರ್ಯಪುತ್ರರು ಅಂದರೆ ಪ್ರಾಂತ್ಯಾಧಿಕಾರಿಗಳು ನೆಲೆಸುತ್ತಿದ್ದರು. ಇವರು ಮಹಾಮಾತ್ರರಿಗಿಂತಲೂ ಉನ್ನತ ಶ್ರೇಣಿಯವರು.

ಅಂದರೆ ಸುವರ್ಣಗಿರಿಯು ಆಯಾಕಟ್ಟಿನ ಸ್ಥಳವಾಗಿದ್ದು ಪ್ರಾಂತ್ಯದ ಆಡಳಿತ ಕೇಂದ್ರವಾಗಿತ್ತು. ಶಾಸನಗಳಲ್ಲಿ ಉಲ್ಲೇಖವಾದ ಸುವರ್ಣಗಿರಿಯ ಸ್ಥಳದ ಬಗ್ಗೆ ವಿಭಿನ್ನ ಅಭಿಪ್ರಾಯಗಳಿವೆ. ರಾಯಚೂರು ಜಿಲ್ಲೆಯ ಮಸ್ಕಿ ಮತ್ತು ಹಂಪಿಯ ನಡುವೆ ಇರುವ ಕೊಪ್ಪಳ ಜಿಲ್ಲೆಯ ಕನಕಗಿರಿಯೇ 'ಸುವರ್ಣಗಿರಿ' ಎಂಬ ವಾದವಿದೆ. ಸುವರ್ಣ ಎಂದರೆ 'ಚಿನ್ನ' ಅಥವಾ 'ಕನಕ' ಎಂಬ ಅರ್ಥವಿದೆ. ಟಾಲೆಮಿಯು ಕನಕಗಿರಿಯನ್ನು 'ಕಲ್ಲಿಗೇರಿಸ್'[೪೩] ಎಂದು ಉಲ್ಲೇಖಿಸಿದ್ದಾನೆ. ಆದರೆ ಮಸ್ಕಿಯೇ ಸುವರ್ಣಗಿರಿಯಾಗಿರಬೇಕೆಂಬ ವಾದವೂವುಂಟು. ಚಿನ್ನದ ನಿಕ್ಷೇಪಗಳಿರುವ ಮತ್ತು ಅಶೋಕನ ಹೆಸರನ್ನು ಉಲ್ಲೇಖಿಸಿರುವ ಮಸ್ಕಿಯು ಮೌರ್ಯರ ಕಾಲದ ಸುವರ್ಣಗಿರಿಯೆಂದು ಹೈದ್ರಾಬಾದ್ ರಾಜ್ಯದ ಅಂದಿನ ಪುರಾತತ್ವ ಇಲಾಖೆಯ ಅಧಿಕಾರಿಯಾಗಿದ್ದ ಯಾಜ್ದಾನಿಯವರು ಗುರುತಿಸುತ್ತಾರೆ. ಆದರೆ ಸಿ.ಆರ್.ಕೃಷ್ಣಮಾಚಾರ್ಯರು ಅಶೋಕನ ಮುಖ್ಯ ಮತ್ತು ಲಘು ಶಿಲಾಶಾಸನಗಳು ಒಂದೆಡೆ ದೊರಕಿದ ಆಂಧ್ರದ ಕರ್ನೂಲ್ ಜಿಲ್ಲೆಯ ಎರ್ರಗುಡಿ ಅಥವಾ ಅದರ ಸಮೀಪವಿರುವ 'ಜೊನ್ನಗಿರಿ ಬೆಟ್ಟ ಪರಿಸರ'ವೇ ಅಶೋಕನು ಸೂಚಿಸಿದ ಪಟ್ಟಣವೇ 'ಸುವರ್ಣಗಿರಿ' ಎಂದು ಗುರುತಿಸುತ್ತಾರೆ. ಆದರೆ ಈಗಾಗಲೇ ಉಲ್ಲೇಖಿಸಿದ ಸ್ಥಳಗಳಲ್ಲಿ ಮೌರ್ಯರ ಕಾಲದ ಪ್ರಾಚೀನ ಅವಶೇಷಗಳು ದೊರೆತಿಲ್ಲ. ಆದ್ದರಿಂದ ಆ ಸ್ಥಳವನ್ನು ಮೌರ್ಯರ ಕಾಲದ 'ಸುವರ್ಣಗಿರಿ ಪಟ್ಟಣ'ವೆಂದು ಗುರುತಿಸುವುದು ಕಷ್ಟ. ಕಲ್ಬುರ್ಗಿ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನಲ್ಲಿರುವ ಸನ್ನತಿ ಗ್ರಾಮದಲ್ಲಿ ಪ್ರಾಚೀನ ಕೋಟೆ ಇರುವ ಪಟ್ಟಣವನ್ನು ಗುರುತಿಸಲಾಗಿದೆ. ಇಲ್ಲಿ ಅಶೋಕನ ಮುಖ್ಯ ಅಥವಾ ಬೃಹತ್ ಬಂಡೆಗಲ್ಲು ಶಾಸನ ಮತ್ತು ಕಿರು ಶಾಸನಗಳು ದೊರಕಿವೆ. ಅಲ್ಲದೇ ಅಶೋಕನ ಭಾವಶಿಲ್ಪ ಸಹ ಇಲ್ಲಿನ ಸ್ತೂಪದಲ್ಲಿ ದೊರೆತಿರುವುದು ವಿಶೇಷ. ಈ ಹಿನ್ನಲೆಯಲ್ಲಿ ಸನ್ನತಿಯೇ ಮೌರ್ಯರ ಕಾಲದ ಸುವರ್ಣಗಿರಿಯಾಗಿರುವ ಸಾಧ್ಯತೆಯಿದೆ. ಆದರೆ ಆ ನೆಲೆಗಳಲ್ಲಾಗಲಿ ಮತ್ತು ಸುತ್ತಮುತ್ತಲಿನ ನೆಲೆಗಳಲ್ಲಾಗಲಿ ನಡೆದ ಉತ್ಖನನಗಳಿಂದ ಮೌರ್ಯ ಸಂಸ್ಕೃತಿಯ ಹೆಚ್ಚಿನ ಪ್ರಾಕ್ತನ ಕುರುಹುಗಳು ಲಭ್ಯವಾಗಿಲ್ಲ. ಅಲ್ಲದೇ ಬೃಹತ್ ಶಿಲಾಯುಗಕ್ಕೂ ಸೇರಿದ ಮತ್ತು ಶಾತವಾಹನ ಸಂಸ್ಕೃತಿಗೆ ಸೇರಿದ ಅವಶೇಷಗಳು ಸಿಗದಿರುವುದು ಗಮನಾರ್ಹ. ಹೀಗಾಗಿ ಮೌರ್ಯರ ಪ್ರಭಾವ ಪಟ್ಟಣಗಳಿಗಷ್ಟೇ ಸೀಮಿತವಾಗಿತ್ತು ಎಂದು ಹೇಳಬಹುದು. ಮೌರ್ಯರಿಗೆ ಕರ್ನಾಟಕದಲ್ಲಿನ ಆರ್ಥಿಕತೆಯಲ್ಲಿನ ಲಾಭವನ್ನು ಪಡೆಯುವುದೇ ಅವರ ಧೋರಣೆಯಾಗಿತ್ತೇ ಹೊರತು ಹೊಸದಾಗಿ ಆರ್ಥಿಕ ವಲಯವನ್ನು ನಿರ್ಮಿಸುವ ಅಥವಾ ರೂಪಿಸುವ ಆಸಕ್ತಿಗಳು ಆ ಕಾಲದ ವ್ಯವಸ್ಥೆಯದ್ದಾಗಿರಲಿಲ್ಲವೆಂದು ತಜ್ಞರು ಹೆಚ್ಚಿನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ಬೃಹತ್ ಶಿಲಾಯುಗ ಮತ್ತು ಶಾತವಾಹನರ ಸಂಬಂಧಗಳನ್ನು ಪಿತೃತ್ವದ ಸಂಬಂಧವೆಂಬ ದಾಟಿಯಲ್ಲಿರುವ ಅಭಿಪ್ರಾಯಗಳು ದಾಖಲಾಗಿವೆ. ಬೃಹತ್ ಶಿಲಾಯುಗದ ಜನರು ಚಿತ್ರಿಸಿದ ಕುದುರೆ ಸವಾರರ ಚಿತ್ರಗಳು ಹಾಗೂ ಶಿಲಾಸಮಾಧಿಗಳಲ್ಲಿ ಕುದುರೆಗಳನ್ನು ಹುಗಿದುದರ ನಿದರ್ಶನಗಳಿಂದ ಈ ಜನರಿಗೆ ಕುದುರೆಯು ನಿಕಟವರ್ತಿಯಾದುದು ತಿಳಿಯುತ್ತದೆ. ಜುನ್ನಾರದಲ್ಲಿ ದೊರಕಿರುವ ಅತ್ಯಂತ ಪ್ರಾಚೀನ ಶಾಸನದಲ್ಲಿ ಶಾತವಾಹನ ವಂಶದ ಬಗೆಗೆ ಉಲ್ಲೇಖಗಳಿವೆ. ಅಲ್ಲಿ ಶಾತವಾಹನರಿಗೆ

‘ಸಾದವಾಹನ’ ಎಂಬ ಪದ ಬಳಸಿದೆ. ‘ಸಾದವಾಹನ’ ಎಂಬುದರ ಅರ್ಥ ಕುದುರೆ ಸವಾರರು.[೪೪] ವಿದ್ವಾಂಸರಲ್ಲಿ ‘ಸಾದವಾಹನ’ ಎಂಬ ಪದದ ಬಗ್ಗೆ ಒಮ್ಮತದ ಅಭಿಪ್ರಾಯವಿಲ್ಲ. ‘ಶಾತವಾಹನ’ ಎನ್ನುವ ಪದವನ್ನು ಶಾತವಾಹನರೇ ಜುನ್ನಾರ್ ಶಾಸನದ ನಂತರ ಶಾಸನಗಳಲ್ಲಿ ಶಾತವಾಹನರೆಂದೇ ಬಳಸಿರುವುದು ಕಂಡುಬಂದಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬೃಹತ್ ಶಿಲಾಯುಗದ ನಿವೇಶನಗಳಲ್ಲಿ ಶಾತವಾಹನರ ಕಾಲದ ಕುರುಹುಗಳು ದೊರೆತಿವೆ. ಇದರಿಂದ ಬೃಹತ್ ಶಿಲಾಯುಗ ಸಂಸ್ಕೃತಿಯು ಐತಿಹಾಸಿಕ ಕಾಲಾವಧಿಯವರೆಗೆ ನಿರಂತರವಾಗಿ ಮುಂದುವರೆಯಿತೆಂದು ಅಭಿಪ್ರಾಯಿಸಬಹುದು.

ಬೃಹತ್ ಶಿಲಾಯುಗದ ಸಮುದಾಯಗಳು ಮೌರ್ಯರ ಪ್ರಭಾವದಿಂದ ಲಿಖಿತ ಸಮುದಾಯಗಳಾಗಿ ಪರಿವರ್ತನೆಗೊಂಡದ್ದು ಪ್ರಮುಖ ಸಂಗತಿಯಾಗಿದೆ. ಬೃಹತ್ ಶಿಲಾಯುಗದ ಜನರು ಕಬ್ಬಿಣದ ಉಪಯೋಗದಲ್ಲಿ ನುರಿತವರಾಗಿದ್ದರೂ ಆರಂಭದಲ್ಲಿ ಕೃಷಿಯಲ್ಲಿ ಯಶಸ್ವಿಯಾಗಿರಲಿಲ್ಲ. ಕ್ರಿ.ಪೂ. ೩ನೇ ಶತಮಾನದ ವೇಳೆಗೆ ಬೆಟ್ಟದ ಮೇಲಿಂದ ಫಲವತ್ತಾದ ನದಿಬಯಲಿಗೆ ಇಳಿದು ನಾಗರೀಕತೆ ಉಗಮಕ್ಕೆ ಕಾರಣರಾದರು. ಜೈನ ಮತ್ತು ಬೌದ್ಧ ಪ್ರಚಾರಕರು, ವ್ಯಾಪಾರಿಗಳ ಸಂಪರ್ಕದಿಂದ ದೊರೆತ ಪ್ರಚೋದನೆಯಿಂದಾಗಿ ಈ ಸಂಸ್ಕೃತಿಯ ಜನರು ಭತ್ತದ ನಾಟಿ ಕೃಷಿ ಕಲಿತರು ಹಾಗೂ ಹಳ್ಳಿಗಳು ಅಥವಾ ಗ್ರಾಮಗಳನ್ನು ಸ್ಥಾಪಿಸಿದರು ಎಂದು ಅಭಿಪ್ರಾಯಿಸಬಹುದು.

**೭.೧. ಕೃಷಿ ಚಟುವಟಿಕೆಗಳು**

ಕರ್ನಾಟಕದಲ್ಲಿ ಕೃಷಿಯ ಉಗಮಕ್ಕೆ ಸಂಬಂಧಿಸಿದಂತೆ ಪುರಾತತ್ವ ಕುರುಹುಗಳು ಲಭ್ಯವಿಲ್ಲ. ಆದರೆ ಕ್ರಿ.ಪೂ. ೨೨೦೦ರ ಸುಮಾರಿಗೆ ಕೃಷಿ ಚಟುವಟಿಕೆ ಕುರಿತಾಗಿರುವ ಸುಸ್ಪಷ್ಟ ದಾಖಲೆಗಳು ಕಾಣಸಿಗುತ್ತವೆ. ಮೊಟ್ಟ ಮೊದಲು ಧಾನ್ಯವಶೇಷಗಳು ಬಳ್ಳಾರಿ, ಕೊಪ್ಪಳ ಹಾಗೂ ರಾಯಚೂರುಗಳಲ್ಲಿನ ನವಶಿಲಾಯುಗದ ನೆಲೆಗಳಲ್ಲಿ ದೊರೆತಿರುವುದು ಗಮನಾರ್ಹವಾಗಿದೆ. ಅರೆ-ಒಣ ಹವೆಯ ಗ್ರಾನೈಟ್ ಗುಡ್ಡಗಳಿಂದ ಕೂಡಿರುವ ಈ ಬಯಲು ಪ್ರದೇಶ ಕೃಷಿಯ ಪ್ರಾರಂಭಿಕ ಹಂತಗಳನ್ನು ಸೂಚಿಸುತ್ತವೆ. ಕ್ರಿ.ಪೂ. ೨೨೦೦–೧೮೦೦ರ ಕಾಲಾವಧಿಯಲ್ಲಿದ್ದ ನವಶಿಲಾಯುಗದ ದನಗಾಹಿ ಸಮುದಾಯಗಳು ಗುಡ್ಡಗಾಡು ಪ್ರದೇಶಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತಿದ್ದರು. ಹಾಗೂ ವರ್ಷವಿಡೀ ನೀರು ಲಭ್ಯವಾಗುವ ಸ್ಥಳಗಳೊಂದಿಗೆ ಸಂಪರ್ಕ ಹೊಂದಿದ್ದರು. ಇವರ ಆಹಾರ ಕ್ರಮಗಳು ಸರಳವೂ ಸ್ಥಳೀಯ ಧಾನ್ಯ-ಕಾಳುಗಳನ್ನು ಅವಲಂಬಿಸಿದುದು ಬಹುಶಿಸ್ತೀಯ ಸಂಶೋಧನೆಯಿಂದ ದೃಢಪಟ್ಟಿದೆ. ಮುಖ್ಯವಾಗಿ ಇವರು ಎರಡು ಬಗೆಯ ಧಾನ್ಯಗಳನ್ನು ಬೆಳೆಯುತ್ತಿದ್ದರು. ಇವು ಕಾಡು ಬರಗು ಅಥವಾ ಬೆಣ್ಣೆ ಅಕ್ಕಿ ಹುಲ್ಲು, ಸಣ್ಣ ಅಂಟು ಪುರ್ಲೆ ಹುಲ್ಲು ಹಾಗೂ ಹೆಸರುಕಾಳು, ಹುರುಳಿಕಾಳುಗಳನ್ನು ಬಳಸುತ್ತಿರುವ ಕುರುಹುಗಳು ಉತ್ತರ ಕರ್ನಾಟಕದ ನವಶಿಲಾಯುಗದ ನೆಲೆಗಳಲ್ಲಿ ಸರ್ವೇಸಾಮಾನ್ಯವಾಗಿ ಕಂಡುಬಂದಿವೆ. ಆದುದ್ದರಿಂದ ಕ್ರಿ.ಪೂ. ೨೦೦೦ರ ಹೊತ್ತಿಗಾಗಲೇ ಇವುಗಳ ಸಾಗುವಳಿ ಇಲ್ಲಿ ನಡೆಯುತ್ತೆಂದು ತಿಳಿದುಬರುತ್ತದೆ.[೪೬] ಬೃಹತ್ ಶಿಲಾಯುಗದ ಜನರು ನವಶಿಲಾಯುಗ ಮತ್ತು ಶಿಲಾ ತಾಮ್ರಯುಗದ ಜನರಂತೆ ಸಾಧಾರಣವಾಗಿ ಬೆಟ್ಟಗಳ ಅಥವಾ ಕಲ್ಲುಬಂಡೆಗಳಿಂದ ಆವೃತ್ತವಾದ ಪ್ರದೇಶಗಳಲ್ಲಿ

ನೆಲೆಸಿದ್ದ ಇವರು ಬೆಟ್ಟದ ಇಳಿಜಾರು ಪ್ರದೇಶದಲ್ಲಿ ಬಿದ್ದ ಮಳೆ ನೀರನ್ನು ಕೃತಕ ಜನ ಸಂಗ್ರಹಾಕಗಳನ್ನು ನಿರ್ಮಿಸಿಕೊಂಡು ಏರಿಗಳಲ್ಲಿ ತೆರೆದಿಟ್ಟು ಮೈದಾನದಲ್ಲಿ ತಮ್ಮ ಭೂಮಿಯ ಸಾಗುವಳಿಗೆ ಉಪಯೋಗಿಸುತ್ತಿದ್ದರು. ಇಂತಹ ಜಲ ಸಂಗ್ರಾಹಕ ನಿರ್ಮಿಸಲು ಹೆಚ್ಚಿನ ಜನಸಂಖ್ಯೆಯ ಅವಶ್ಯಕತೆ ಇತ್ತೆಂದು ಹೇಳಬಹುದು.

**ಕೃಷಿ ಉಪಕರಣಗಳು**

ಹನ್ನೆರಡಕ್ಕೂ ಹೆಚ್ಚು ನೆಲೆಗಳಲ್ಲಿ ಕೃಷಿ ಉಪಕರಣಗಳಾದ ಕೊಡಲಿ, ನೇಗಿಲು, ಕುಡುಗೋಲು, ಸಲಿಕೆ, ಮೂರು ಕಾಲಿನ ಅಡ್ಡಣಿಗ, ಕೈನೇಗಿಲು, ಕುಳ, ಜಾರು, ಕತ್ತಿ ಮುಂತಾದ ಸಲಕರಣೆಗಳು ಉತ್ಖನನ ನೆಲೆಗಳಲ್ಲಿ ಲಭ್ಯವಾಗಿವೆ. ಈ ಉಪಕರಣಗಳು ಕೃಷಿ ಉತ್ಪಾದನೆಯಲ್ಲಿ ಬಳಕೆಯಲ್ಲಿದ್ದುದು ದೃಢವಾಗುತ್ತದೆ. ತುಂಗಭದ್ರ ನದಿ ಪರಿಸರದಲ್ಲಿ ಒಟ್ಟು ೧೩೪ ಲೋಹದ ವಸ್ತುಗಳು ಮತ್ತು ಅದರಲ್ಲಿ ೮೯ ಕಬ್ಬಿಣದ ವಸ್ತುಗಳು ದೊರಕಿರುವುದು ವಿಶೇಷ.[೪೭] ಅವು ಉಳಿ, ಮೊಳೆ, ಕೊಕ್ಕೆ ಮೊದಲಾದವು. 'ಚ' ಆಕಾರದ ಕಬ್ಬಿಣದ ವಸ್ತುಗಳು ವಸತಿ ನೆಲೆಗಳಲ್ಲಿ ದೊರಕಿದ್ದು ಬೃಹತ್ ಶಿಲಾಯುಗಕ್ಕೆ ಸೇರಿದವುಗಳಾಗಿವೆ.[೪೮] ಮೂರುಕಾಲಿನ ಅಡ್ಡಣಿಗ, ಕೈನೇಗಿಲು, ಕುಳ, ಕುಡಗೋಲು, ಚಾಕು, ಕತ್ತಿ, ಭಲ್ಲೆ, ಮುಳ್ಳುಚೆಂಡಿನ ಈಟಿ, ಅಗಲ ಬಾಯಿಯ ಉದ್ದನೆಯ ಚಪ್ಪಟೆ ಕೊಡಲಿ, ಬಿಲ್ಲು ಮೊದಲಾದವು ಗೃಹ ಉಪಯೋಗಿ ಉಪಕರಣಗಳಾಗಿವೆ. ಕೃಷಿ ಉಪಕರಣಗಳು ಅಷ್ಟೇ ಅಲ್ಲದೆ ಬೇಟೆಗೆ ಬಳಸುವ ಮತ್ತು ಶಸ್ತ್ರಾಸ್ತ್ರಗಳು ದೊರೆತಿರುವ ವಿವರಗಳು ಉತ್ಖನನ ವರದಿಗಳಲ್ಲಿವೆ. ಇನ್ನು ಕೆಲವು ವಿದ್ವಾಂಸರ ಪ್ರಕಾರ ಬೃಹತ್ ಶಿಲಾಯುಗದ ಸಮಾಧಿಗಳಲ್ಲಿ ಕೃಷಿ ಉಪಕರಣಗಳಿಗಿಂತ ಹೆಚ್ಚಾಗಿ ಯೋಧ ವರ್ಗಕ್ಕೆ ಸೇರಿದ ಆಯುಧಗಳು ದೊರೆತಿರುವುದು ಗಮನಾರ್ಹ ಸಂಗತಿ ಎಂದಿದ್ದಾರೆ.

ಬೃಹತ್ ಶಿಲಾಯುಗದ ಸಮಾಧಿಗಳಲ್ಲಿ ಭತ್ತ, ರಾಗಿ, ಧಾನ್ಯಗಳ ಕುರುಹುಗಳು ದೊರೆತಿವೆಯಾದರೂ ಅವು ಕೃಷಿಯುಲ್ಲಾದ ಪ್ರಗತಿಯನ್ನು ಸೂಚಿಸುವುದಿಲ್ಲ. ಉತ್ಖನನಗಳಲ್ಲಿ ದೊರೆತಿರುವ ಆಯುಧೋಪಕರಣಗಳು ಹಾಗೂ ಅವುಗಳ ತಯಾರಿಕೆ ಮಾಡುವ ಕಸುಬಾಗಿ ಹೊಂದಿದ್ದ ಜನವರ್ಗದ ಕುರುಹುಗಳಾಗಿದ್ದು ಉತ್ತರ ಮತ್ತು ದಕ್ಷಿಣ ಭಾರತಗಳೆರಡಲ್ಲೂ ಚಲಾವಣೆಯಲ್ಲಿದ್ದ ವಿಚಾರವನ್ನು ಎಲ್.ಬಿ. ಲೆಶ್ನಿಕ್ ಅವರು ಪ್ರತಿಪಾದಿಸಿದರು.[೪೯] ಆದಿ ಇತಿಹಾಸ ಕಾಲದಲ್ಲಿ ಕೃಷಿ ಹಾಗೂ ಪಶುಪಾಲನೆ, ಗ್ರಾಮ ಜೀವನ ಚಟುವಟಿಕೆಗಳು ಪ್ರಧಾನ ಲಕ್ಷಣಗಳಾಗಿ ಗೋಚರಿಸುತ್ತವೆ. ಈ ಅವಧಿಯಲ್ಲಿಯೂ ಸಹ ವ್ಯವಸಾಯ ವಿಧಾನ ಮತ್ತು ಬೆಳೆಗಳ ಬಗ್ಗೆ ಹೆಚ್ಚಿನ ವಿವರಗಳು ಲಭ್ಯವಿಲ್ಲವಾದರೂ ಅವು ಬೃಹತ್ ಶಿಲಾಯುಗದ ಮುಂದುವರಿಕೆ(Overlap) ಆಗಿರುವುದರಿಂದ ಹಿಂದೆ ಅನುಸರಿಸುತ್ತಿದ್ದ ಕೃಷಿ ಕ್ರಮಗಳೇ ಈ ಹಂತದಲ್ಲಿಯೂ ಮುಂದುವರೆದಿದ್ದಾಗಿ ಗ್ರಹಿಸಬಹುದು.

ಈ ಸಂಸ್ಕೃತಿಯ ಜನರು ಲೋಹೋದ್ಯಮದಲ್ಲಿ ಹೆಚ್ಚು ಪರಿಣಿತರಾಗಿದ್ದು ಕಬ್ಬಿಣದ ತಂತ್ರಜ್ಞಾನದಿಂದ ಗುಣಮಟ್ಟದ ಕಬ್ಬಿಣದ ಆಯುಧಗಳು ಹಾಗೂ ಕೃಷಿ ಉಪಕರಣಗಳನ್ನು ತಯಾರಿಸುತ್ತಿದ್ದರೆಂದು

ಹೇಳಲಾಗುತ್ತದೆ. ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಬಳ್ಳಾರಿ, ಕೊಪ್ಪಳ, ಚಿತ್ರದುರ್ಗ ಪ್ರದೇಶದಿಂದ ಮೌರ್ಯ ಸಾಮ್ರಾಜ್ಯಕ್ಕೆ ಕಬ್ಬಿಣದ ಉತ್ತಮ ಗುಣಮಟ್ಟದ ಆಯುಧಗಳ ಪೂರೈಕೆಯನ್ನು ಮಾಡಲಾಗುತ್ತಿತ್ತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇದಕ್ಕೆ ನಿದರ್ಶನವಾಗಿ ಬಳ್ಳಾರಿ, ಸಂಡೂರು, ಹೊಸಪೇಟೆ ಬೆಟ್ಟಗಳಲ್ಲಿ ಹೇರಳವಾಗಿ ಕಬ್ಬಿಣದ ಅದಿರು ದೊರೆಯುತ್ತದೆ. ಇಲ್ಲಿ ಪ್ರಾಚೀನ ಕಾಲದಿಂದಲೂ ಗಣಿಗಾರಿಕೆ ನಡೆಯುತ್ತಿದ್ದ ಹಿನ್ನೆಲೆಯಲ್ಲಿ ಇಲ್ಲಿ ತಯಾರಾದ ಕಬ್ಬಿಣದ ಉಪಕರಣಗಳು ಉತ್ಕೃಷ್ಟವಾಗಿದ್ದವು ಎಂದು ಹೇಳಬಹುದು. ಕಬ್ಬಿಣದ ತಂತ್ರಜ್ಞಾನದ ಬಳಕೆಯಿಂದ ಮೌರ್ಯರ ಕಾಲದಲ್ಲಿ ಉಂಗುರ ಬಾವಿಗಳ ಅಸ್ತಿತ್ವವು ಕಂಡುಬಂದಿತು. ಇದರಿಂದ ಅಂತರ್ಜಲದ ಬಳಕೆಯನ್ನು ಮಾಡಲಾಯಿತು. ಬೃಹತ್ ಶಿಲಾಯುಗವನ್ನೊಳಗೊಂಡಂತೆ ಐತಿಹಾಸಿಕ ಕಾಲದ ಹಲವು ನೆಲೆಗಳಲ್ಲಿ ಕಂಡುಬರುವ ಸಲಕರಣೆಗಳು ಕೆರೆ ನೀರಾವರಿಯನ್ನಾಧರಿಸಿದ ಬೇಸಾಯ ಪರಂಪರೆಯನ್ನು ಸೂಚಿಸುತ್ತವೆ.[೫೦] ಈ ಪ್ರಕ್ರಿಯೆಯು ಮುಂದೆ ಆದಿ ಇತಿಹಾಸ ಕಾಲದಲ್ಲಿ ಬೆಳವಣಿಗೆಯಾಯಿತು. ಆದಿ ಇತಿಹಾಸ ಕಾಲದಲ್ಲಿ ಬೆಳೆಯಲಾಗುತ್ತಿದ್ದ ಬೆಳೆಗಳ ಕುರುಹುಗಳು ವಡಗಾಂವ್-ಮಾಧವಪುರದ ಕಣಜವೊಂದರಲ್ಲಿ ದೊರೆತ ಸುಟ್ಟ ಅಕ್ಕಿ ಕಾಳುಗಳು ಭತ್ತದ ಕೃಷಿಗೆ ಸಾಕ್ಷಿಯಾಗಿವೆ. ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದಲ್ಲಿನ ಸಮಕಾಲೀನ ವಸತಿ ನೆಲೆಗಳಲ್ಲಿ ಗೋಧಿ, ಭತ್ತ, ರಾಗಿ, ಜೋಳ, ಹುರುಳಿ, ಬಟಾಣಿ, ಉದ್ದು, ಕಡಲೆ ಮೊದಲಾದ ಧಾನ್ಯಗಳನ್ನು ವ್ಯವಸಾಯ ಚಟುವಟಿಕೆಗಳ ಮೂಲಕ ಉತ್ಪಾದಿಸಲಾಗುತ್ತಿತ್ತು ಎಂಬುದಕ್ಕೆ ಇತ್ತೀಚಿನ ವರ್ಷಗಳಲ್ಲಿ ಹತ್ತಾರು ಕುರುಹುಗಳು ದೊರೆತಿವೆ.[೫೧] ಅಲ್ಲದೆ ಅಧ್ಯಯನ ಪ್ರದೇಶದ ವಿವಿಧ ನೆಲೆಗಳಲ್ಲಿ ಕಂಡುಬರುವ ಗವಿಕಲ್ಲಾಸರೆಗಳು ಮತ್ತು ಬಯಲು ಬಂಡೆಗಳಲ್ಲಿ ಮೂಡಿಸಿರುವ ವಿವಿಧ ಪ್ರಾಣಿ ಚಿತ್ರಗಳು ಪಶುಪಾಲನೆ ಮತ್ತು ಕೃಷಿಗೆ ಪೂರಕವಾದ ಮಾಹಿತಿಯನ್ನು ನೀಡುತ್ತವೆ. ನಂತರ ವಿವಿಧ ನೆಲೆಗಳಲ್ಲಿ ನಡೆದಿರುವಂತಹ ಉತ್ಖನನಗಳಲ್ಲಿ ಜಾನುವಾರು, ಕುರಿ ಮತು ಇತರೆ ಪ್ರಾಣಿಗಳ ಮೂಳೆಗಳು ಪಳೆಯುಳಿಕೆಗಳಾಗಿ ಲಭಿಸಿದ್ದು, ಇವು ಪಶುಪಾಲನೆಯ ಬಗೆಗೆ ಮಾಹಿತಿಯನ್ನು ಒದಗಿಸುತ್ತವೆ. ಬೇಟೆ, ಪಶುಪಾಲನೆ ಹಾಗೂ ಕೃಷಿಯಲ್ಲಿ ತೊಡಗಿಕೊಂಡ ಮಾನವ ಹಂತ ಹಂತವಾಗಿ ವಿಕಾಸ ಹೊಂದಿದ, ಇದೇ ಸಂದರ್ಭದಲ್ಲಿ ಜನಸಂಖ್ಯೆಯು ಸಹ ಹೆಚ್ಚಳವಾಯಿತು. ಜನಸಂಖ್ಯೆ ಹೆಚ್ಚಿದಂತೆಲ್ಲಾ ಗ್ರಾಮಗಳು ಹೆಚ್ಚು ವಿಸ್ತಾರಗೊಂಡವು. ಕಬ್ಬಿಣದ ಆವಿಷ್ಕಾರ ಮತ್ತು ಉತ್ಪಾದಕ ವಸ್ತುಗಳ ಮಾರಾಟದಿಂದ ವಿವಿಧ ಜನವರ್ಗಗಳ ಸಂಪರ್ಕ ದೊರೆಯಿತು.

ಕೃಷಿ ಉತ್ಪಾದನೆ ಹೆಚ್ಚಳಕ್ಕೆ ಕರಕುಶಲಕರ್ಮಿಗಳು ಮತ್ತು ಲೋಹ ತಯಾರಿಕೆಯ ತಂತ್ರಜ್ಞರು ಕಾರಣಕರ್ತರಾದರು. ಆಹಾರ ಉತ್ಪಾದನೆಯು ಹೆಚ್ಚಿದಂತೆ ಕೃಷಿಯೇತರ ಚಟುವಟಿಕೆಗಳಾದ ಕರಕುಶಲ ಉದ್ಯಮಗಳು ಹುಟ್ಟಿಕೊಂಡವು. ಈ ಕುಶಲಕರ್ಮಿಗಳಿಗೆ ಕೃಷಿಕರು ಆಹಾರ ಉತ್ಪಾದಿಸುವ ಪೂರಕವರ್ಗವಾಗಿ ರೂಪುಗೊಂಡರು. ಕೃಷಿಕರು ಮತ್ತು ಕುಶಲಕರ್ಮಿಗಳು/ತಂತ್ರಜ್ಞರುಗಳಿಬ್ಬರೂ ಪರಸ್ಪರ ಸಹಾಯಕರಾಗಿ ರೂಪುಗೊಂಡರು. ಇದರಿಂದ ಸಮಾಜದಲ್ಲಿ ಶ್ರಮಿಕ ವರ್ಗಗಳ ಸೃಷ್ಟಿಗೆ ಕಾರಣವಾಯಿತು. ಈ ಸಾಮಾಜಿಕ ಬದಲಾವಣೆಯ ಕ್ರಾಂತಿಗೆ ಲೋಹದ ಉತ್ಪಾದನೆಗೆ ಪ್ರಮುಖ

ಕಾರಣವಾಯಿತು ಎಂಬ ಅಭಿಪ್ರಾಯಗಳಿವೆ. ಕುಶಲಕರ್ಮಿಗಳು ಮತ್ತು ಕೃಷಿಕರ ನಡುವಿನ ಪರಸ್ಪರ ವಿನಿಮಯದಿಂದಾಗಿ ಆಹಾರದ ಉತ್ಪಾದನೆಯಲ್ಲಿ ಹೆಚ್ಚಳವಾಯಿತು. ಅಂದರೆ ಒಂದು ಸಮಾಜದ ಜೀವನಾವಶ್ಯಕತೆಗಿಂತ ಹೆಚ್ಚಿನ ಆಹಾರಧಾನ್ಯದ ಉತ್ಪಾದನೆಯಾಯಿತು. ಹೀಗೆ ಉಂಟಾದ ಹೆಚ್ಚುವರಿ ಧಾನ್ಯಗಳನ್ನು ಅಗತ್ಯವಿರುವ ಸಮಾಜಕ್ಕೆ ತಲುಪಿಸುವ ಮತ್ತು ಅವಶ್ಯವಿರುವ ಸಮಾಜದಿಂದ ಉತ್ಪಾನೆಯಾಗಿರುವ ಹೆಚ್ಚುವರಿ ಧಾನ್ಯವನ್ನು ಈ ಸಮಾಜಕ್ಕೆ ತಲುಪಿಸುವ ವರ್ಗವೊಂದು ಹುಟ್ಟಿಕೊಂಡಿತು. ಆ ವರ್ಗವೇ ವ್ಯಾಪಾರಿ ವರ್ಗವಾಗಿದೆ. ಈ ವರ್ಗವು ಆಹಾರ ಧಾನ್ಯ ಮತ್ತು ಕರಕುಶಲ ವಸ್ತುಗಳನ್ನು ಕೊಳ್ಳುವ ಮತ್ತು ಮಾರಾಟ ಮಾಡುವ ನಿರ್ದಿಷ್ಟ ಸ್ಥಳಗಳೇ ಕ್ರಮೇಣವಾಗಿ ಪೇಟೆ, ಪಟ್ಟಣ, ನಗರ ಕೇಂದ್ರಗಳ ಬೆಳವಣಿಗೆಗೆ ನಾಂದಿಯಾದವು.

**೭.೨ ಜನಸಮುದಾಯಗಳು**

ಜನಸಮುದಾಯಗಳನ್ನು ಗುರುತಿಸುವಲ್ಲಿ ಹಿಂದಿನ ಶಿಲಾತಾಮ್ರಯುಗದ ಜನರನ್ನು ಗಮನದಲ್ಲಿಟ್ಟುಕೊಳ್ಳಲಾಗಿದೆ. ಬ್ರಹ್ಮಗಿರಿ, ತೆಕ್ಕಲಕೋಟೆ, ಟಿ.ನರಸಿಪುರ, ಪಿಕ್ಲಿಹಾಳ ನಿವೇಶನಗಳಲ್ಲಿ ದೊರೆತ ಮಾನವ ಅಸ್ಥಿ ಅವಶೇಷಗಳ ಪರೀಕ್ಷೆಯಿಂದ ಎರಡು ಜನಾಂಗಗಳನ್ನು ತಜ್ಞರು ಗುರುತಿಸಿದ್ದಾರೆ. ಅವುಗಳಲ್ಲಿ ಸ್ಥಳೀಯ ಪ್ರೋಟೋ ಆಸ್ಟ್ರಾಲಾಯಿಡ್ ಮತ್ತು ಮೆಡಿಟೇರಿಯನ್ (ದ್ರವಿಡಿಯನ್) ಜನಾಂಗಗಳಾಗಿವೆ. ಇವುಗಳ ಜೊತೆಗೆ ಸೈಥೋ ಇರಾನಿಯನ್ ಜನಾಂಗಕ್ಕೆ ಸಾಮ್ಯತೆಯಿರುವ ಹೊಸ ಜನಾಂಗವು ಪ್ರಥಮವಾಗಿ ಕಂಡುಬರುತ್ತದೆ. ಆದ್ದರಿಂದ ಅಂದಿನ ಜನರು ಮಿಶ್ರತಳಿ ಎಂದು ಗುರುತಿಸಬಹುದಾಗಿದೆ. ಬಹುತೇಕವಾಗಿ ಮೆಡಿಟೇರಿಯನ್ ಜನಾಂಗದ ಲಕ್ಷಣಗಳೇ ಹೆಚ್ಚಾಗಿ ಕಂಡುಬರುತ್ತದೆ.

ಇಂದಿಗೂ ದಕ್ಷಿಣ ಭಾರತದಲ್ಲಿ ಮೆಡಿಟೇರಿಯನ್ ಜನಾಂಗದ ಜನರು ಹೆಚ್ಚಾಗಿ ಕಂಡುಬರುತ್ತಾರೆ. ಮಾನವಶಾಸ್ತ್ರಜ್ಞರು ಜನಾಂಗಗಳ ವರ್ಗೀಕರಣ ಮಾಡಿರುವರು. ಪ್ರಸ್ತುತ ಅಧ್ಯಯನ ಪ್ರದೇಶವು ಕರ್ನಾಟಕದ ಮಧ್ಯ ಭಾಗದಲ್ಲಿ ಅದರಲ್ಲೂ ಉತ್ತರ ಕರ್ನಾಟಕಕ್ಕೆ ಒಳಪಡುವುದರಿಂದ ಇಲ್ಲಿನ ಕೆಲವು ನೆಲೆಗಳಲ್ಲಿ ದೊರೆತ ಅಸ್ಥಿ ಅವಶೇಷಗಳ ಪರೀಕ್ಷೆಯಿಂದ ಮೆಡಿಟೇರಿಯನ್ ಮತ್ತು ಪ್ರೋಟೋ ಆಸ್ಟ್ರಾಲಾಯಿಡ್ ಜನಾಂಗಗಳ ಜನರು ಇಲ್ಲಿ ವಾಸವಿದ್ದರು ಎಂಬ ಸಂಗತಿ ತಿಳಿಯುತ್ತದೆ.[೫೨] ಆದರೆ ಇತ್ತೀಚಿನ ಅಧ್ಯಯನಕಾರರು ವಿಶಿಷ್ಟ ದೈಹಿಕ ಲಕ್ಷಣಗಳಿಂದ ವಿವಿಧ ಜನಾಂಗಗಳ ಬಗ್ಗೆ ಸಂಶಯ ವ್ಯಕ್ತಪಡಿಸಿದ್ದಾರೆ. ಅಂದರೆ ಯಾವುದೇ ಒಂದು ಜನಾಂಗವನ್ನು ಗುರುತಿಸಬೇಕಾದರೆ ಹಲವಾರು ದೈಹಿಕ ಲಕ್ಷಣಗಳನ್ನು ಪರಿಗಣಿಸಬೇಕಾಗುತ್ತದೆ. ಲಕ್ಷಾಂತರ ವರ್ಷಗಳಿಂದ ವರ್ಣಸಂಕರವಾಗುತ್ತಲಿರುವುದು ಈಗಿನ ಮಿಶ್ರತಳಿಯ ಸಮುದಾಯಗಳು ಕೆಲವೇ ಕೆಲವು ಅಂಶಗಳು ದೊರೆಯಬಹುದಾದ ಪ್ರಾಚೀನ ಅಸ್ಥಿ ಅವಶೇಷಗಳ ಆಧಾರದ ಮೇಲೆ ಜನಾಂಗಗಳನ್ನು ಗುರುತಿಸುವುದು ಸರಿಯಾದ ಕ್ರಮವಲ್ಲವೆಂದು ತಜ್ಞರು ಅಭಿಪ್ರಾಯಿಸಿದ್ದಾರೆ.[೫೩] ಹೀಗೆ ಮಿಶ್ರ ಜನಾಂಗಗಳಿಂದ ಕೂಡಿದ್ದ ಜನರು ಬೃಹತ್ ಶಿಲಾಯುಗದಲ್ಲಿದ್ದರೆಂಬುದು ಸ್ಪಷ್ಟವಾಗುತ್ತದೆ. ಈ ಬೃಹತ್ ಶಿಲಾಯುಗದಿಂದ

ಮುಂದುವರೆದ ಸುಧಾರಿತ ಜನರೇ, ಆದಿ ಇತಿಹಾಸ ಕಾಲದಲ್ಲಿ ನೆಲೆಸಿದ್ದರು. ಇವರು ಮೊಟ್ಟ ಮೊದಲ ಅಕ್ಷರ ಜ್ಞಾನವನ್ನು ಕಲಿತ ಲಿಖಿತ ಸಮುದಾಯವಾಗಿ ಗೋಚರಿಸುತ್ತಾರೆ. ಇದರೊಟ್ಟಿಗೆ ಸಮಾಜದಲ್ಲಿ ಶ್ರಮಿಕವರ್ಗ ಸೃಷ್ಟಿಯಾಗುತ್ತದೆ. ಅವರಲ್ಲಿ ಕೃಷಿಕರು ಮತ್ತು ಕುಶಲಕರ್ಮಿಗಳು ಪ್ರಧಾನವಾಗಿ ಕಂಡುಬರುತ್ತಾರೆ. ಕೃಷಿಕರು ಗ್ರಾಮೀಣ ಪ್ರದೇಶದಲ್ಲಿ ಕಂಡುಬಂದರೆ, ಕುಶಲಕರ್ಮಿಗಳು ನಗರವಾಸಿಗಳಾಗಿದ್ದು, ಕೃಷಿಯೇತರ ಚಟುವಟಿಕೆಗಳಾದ ಗುಡಿಕೈಗಾರಿಕೆಗಳಂತಹ ಕಸುಬುಗಳನ್ನು ಮಾಡುವವರಾಗಿದ್ದರು.

ಕೃಷಿಕರು ಸಮೀಪದ ನಗರಗಳಿಗೆ ಬೇಕಾಗುವ ಸಾಮಗ್ರಿಗಳನ್ನು ಹಾಗೂ ದಿನನಿತ್ಯದ ವಸ್ತುಗಳನ್ನು ಪೂರೈಸುವವರಾಗಿದ್ದರು. ಕುಶಲಕರ್ಮಿಗಳಲ್ಲಿ ಕಮ್ಮಾರ, ಕುಂಬಾರ, ಬಡಗಿ, ಅಕ್ಕಸಾಲಿಗ (ಮಣಿ ಮಾಡುವವರು) ಕಲ್ಲುಕುಟಿಗರು, ಶಿಲ್ಪಿಗಳು, ಯೋಧ ವರ್ಗಕ್ಕೆ ಸೇರಿದವರು ಹೀಗೆ ವಿಭಿನ್ನ ಬಗೆಯ ಜನಸಮುದಾಯ ರೂಪುಗೊಂಡು ಪರಸ್ಪರ ನೆರವಾಗಿದ್ದರು. ಈ ಜನಸಮುದಾಯಗಳು ಉತ್ಪಾದಿಸಿದ ವಸ್ತುಗಳನ್ನು ಮಾರಾಟ ಮಾಡಲು ವ್ಯಾಪಾರಿ ವರ್ಗ ಹುಟ್ಟಿಕೊಂಡಿತು. ಇದರೊಟ್ಟಿಗೆ ಬೌದ್ಧ ಮತ್ತು ಜೈನಧರ್ಮದ ಅನುಯಾಯಿಗಳು ಸೇರಿಕೊಂಡರು. ಪ್ರಾಯಶಃ ನಗರ ಸಂಸ್ಕೃತಿಯನ್ನು ಬೆಳೆಸುವಲ್ಲಿ ಧರ್ಮಾನುಯಾಯಿಗಳೇ ಕಾರಣಕರ್ತರಾದರು. ಹೀಗೆ ಹೊಸ ಜನರ ಸಂಪರ್ಕದಿಂದ ಜನಸಂಖ್ಯೆ ಹೆಚ್ಚಳವಾಯಿತು ಇದರಿಂದ ಗ್ರಾಮಗಳು, ಪಟ್ಟಣ ಮತ್ತು ನಗರ ಕೇಂದ್ರಗಳಾಗಿ ರೂಪುಗೊಂಡವು. ವ್ಯಾಪಾರಿವರ್ಗ, ಧರ್ಮಾನುಯಾಯಿಗಳಿಂದ ದೂರದ ಪ್ರದೇಶಗಳಿಗೆ ಸಂಪರ್ಕ ಬೆಳೆಯಿತು ಎಂದು ಹೇಳಬಹುದು.

### ೭.೩ ನಗರೀಕರಣ ಪ್ರಕ್ರಿಯೆಗಳು

ನಗರೀಕರಣ ಕುರಿತು ಇಪ್ಪತ್ತನೆಯ ಶತಮಾನದ ದ್ವಿತೀಯಾರ್ಧದಲ್ಲಿ ಅಧ್ಯಯನ ನಡೆಸುವುದು ಬೆಳಕಿಗೆ ಬಂದಿತು. ನಗರೀಕರಣವು ನಗರ ವ್ಯವಸ್ಥೆಯನ್ನು ಕುರಿತದ್ದಾಗಿದೆ. ನಗರ ಚರಿತ್ರೆಯನ್ನು ಚರಿತ್ರೆ, ಪುರಾತತ್ವ, ಭೂಗೋಳಶಾಸ್ತ್ರ, ಮಾನವಶಾಸ್ತ್ರ, ಸಮಾಜಶಾಸ್ತ್ರ, ಅರ್ಥಶಾಸ್ತ್ರದ ಜ್ಞಾನ ಶಾಖೆಗಳಲ್ಲಿ ನಗರ ಚರಿತ್ರೆಯನ್ನು ಅಧ್ಯಯನ ಮಾಡಲಾಗುತ್ತದೆ. ನಗರಗಳು ಅಸ್ತಿತ್ವಕ್ಕೆ ಬಂದ ಬಗೆ ಅವುಗಳ ಹುಟ್ಟು ಬೆಳವಣಿಗೆ, ಅವನತಿ ಹಾಗೂ ವಿಧಾನ ಕುರಿತು ಹಲವು ವಿದ್ವಾಂಸರು ಈಗಾಗಲೇ ಚರ್ಚೆ ನಡೆಸಿದ್ದಾರೆ. ಅವರುಗಳಲ್ಲಿ ವಿದೇಶಿ ಮತ್ತು ದೇಶಿ ವಿದ್ವಾಂಸರು ಹೆಚ್ಚು ಅಧ್ಯಯನ ಮಾಡಿದ್ದಾರೆ. ಅರ್ನಾಡ್ ಟಾಯ್ನಬಿ. ಸ್ಪೆಂಗ್ಲರ್, ಗೋರ್ಡನ್ ಚೈಲ್ಡ್, ಕಿಂಗ್‌ಸ್ಲಿ ಡೇವಿಡ್, ಹೆನ್ರಿಪೈರಸ್, ಲೂಯಿ ಮುಮ್‌ಪರ್ಡ್, ಮಾರ್ಕ್ಸ್ ವೆಬರ್ ಮೊದಲಾದ ವಿದೇಶಿ ವಿದ್ವಾಂಸರು ಈ ಬಗೆಯ ಅಧ್ಯಾಯನಗಳನ್ನು ರೂಪಿಸಿದ್ದಾರೆ. ಅದೇ ರೀತಿ ಬಿ.ಬಿ. ದತ್ತ, ಜಿ.ಎಸ್. ಘುರ್ಯೆ, ಆರ್.ಎಸ್. ಶರ್ಮಾ, ಚಂಪಕ ಲಕ್ಷ್ಮೀ, ರಜತ್‌ಕಾಂತರೆ, ಇರ್ಫಾನ್ ಹಬೀಬ್, ವಿಜಯಕುಮಾರ್ ಠಾಕೂರ್, ದಿಲೀಪ್ ಬಸು, ಆಶಿಸ್ ಬೋಸ್, ಓಂಪ್ರಕಾಶ್ ಪ್ರಸಾದ್, ಮೋತೀಚಂದ್ರ ಮೊದಲಾದವರು ಭಾರತದ ನಗರೀಕರಣದ ಕುರಿತು ವಿವೇಚಿಸಿದ ಭಾರತೀಯ ಇತಿಹಾಸಕಾರರಲ್ಲಿ ಅಗ್ರಗಣ್ಯರೆನಿಸಿದ್ದಾರೆ.[೫೪]

ನಗರಗಳ ಹುಟ್ಟು ಬೆಳವಣಿಗೆಯನ್ನು ನಗರೀಕರಣದ ಪರಿಕಲ್ಪನೆಯಲ್ಲಿ ಅಧ್ಯಯನ ಮಾಡಲಾಗುತ್ತದೆ. ನಗರೀಕರಣವನ್ನು ಇಂಗ್ಲೀಷ್‌ನಲ್ಲಿ 'ಅರ್ಬನೈಸೇಶನ್' ಎಂದು ಕರೆಯಲಾಗುತ್ತದೆ. ಬ್ರಿಟಿಷ್ ಇತಿಹಾಸಕಾರರಾದ ಅರ್ನಾಲ್ಡ್ ಟಾಯ್ನಬಿಯವರು ಹೇಳುವಂತೆ ನಾಗರೀಕತೆಯ ಏಳುಬೀಳಿನ ಕಥೆಯೇ ಇತಿಹಾಸ ಎಂದಿದ್ದಾರೆ. ಈ ಹಿನ್ನೆಲೆಯಲ್ಲಿ ನಗರೀಕರಣವನ್ನು ಅಧ್ಯಯನ ಮಾಡಲಾಗುತ್ತದೆ. ನಾಗರೀಕತೆಯ ಒಳಗೆ ನಗರೀಕರಣವನ್ನು ಕಾಣಬಹುದು. ಯಾವುದೇ ಒಂದು ನಾಗರೀಕತೆಗೆ ಒಳಪಡುವ ಜನರು ಒಂದು ಸಂಸ್ಕೃತಿಯನ್ನು ರೂಢಿಸಿಕೊಂಡಿರುತ್ತಾರೆ. ಆದರೆ ಅವರು ಒಂದು ನಗರಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲವೆಂಬ ಅಭಿಪ್ರಾಯಗಳಿವೆ. ನಗರ ಚರಿತ್ರೆಕಾರರು ಭಾರತದ ನಗರ ವ್ಯವಸ್ಥೆ ಕುರಿತಂತೆ ಮತ್ತು ನಗರೀಕರಣದ ವಿವಿಧ ಹಂತಗಳನ್ನು ಗುರುತಿಸಿದ್ದಾರೆ. ಹೆಚ್ಚಿನ ಅಧ್ಯಯನಗಳು ಉತ್ತರ ಭಾರತದ ನಗರೀಕರಣ ಕುರಿತು ತಿಳಿಸುತ್ತವೆ. ಆದರೆ ಕರ್ನಾಟಕವನ್ನೊಳಗೊಂಡಂತೆ ದಕ್ಷಿಣ ಭಾರತದ ನಗರೀಕರಣ ಕುರಿತು ಅಧ್ಯಯನಗಳಾಗಿಲ್ಲವೆಂದು ಇತಿಹಾಸಕಾರರಾದ ಮೋಹನ್‌ಕೃಷ್ಣ ರೈ ಕೆ. ಅವರು ತಮ್ಮ 'ವಸಾಹತು ಪೂರ್ವ ಕರ್ನಾಟಕದ ನಗರ ಚರಿತ್ರೆ' ಎಂಬ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ.[೫೫] ಅವರು ಕರ್ನಾಟಕದ ನಗರೀಕರಣದ ಕುರಿತು ಅಧ್ಯಯನಗಳಾಗಿದ್ದರೂ ಅವು ಟಿಪ್ಪಣಿಗಳಿಗಷ್ಟೇ ಸೀಮಿತವಾಗಿವೆ. ಆದಾಗ್ಯೂ ಅವುಗಳಿಂದ ಕರ್ನಾಟಕ ನಗರ ವ್ಯವಸ್ಥೆಯ ಬಗ್ಗೆ ಕೆಲವೊಂದು ನಿರ್ಣಯಗಳನ್ನು ತೆಗೆದುಕೊಳ್ಳಲು ಸಾಧ್ಯವಿದೆ ಎಂದಿದ್ದಾರೆ.

ಕೃಷಿ ಪ್ರಧಾನವಾದ ಭಾರತದಲ್ಲಿ ಪೇಟೆ–ಪಟ್ಟಣಗಳ ಹುಟ್ಟು ಕುತೂಹಲಕಾರವಾದ ಅಧ್ಯಯನವಾಗಿದೆ. ವಿವಿಧ ಚಾರಿತ್ರಿಕ ಘಟ್ಟಗಳಲ್ಲಿ ಬೇರೆ ಬೇರೆ ಪ್ರದೇಶಗಳಿಗೆ ಗ್ರಾಮ ಪ್ರದೇಶಗಳು ನಗರ ಪ್ರದೇಶಗಳಾಗಿ ಪರಿವರ್ತನೆ ಹೊಂದಿದವು ಎಂಬುದು ಮಹತ್ವದ ವಿಷಯ. ಭಾರತದ ಪ್ರಥಮ ನಗರೀಕರಣವನ್ನು ಸಿಂಧೂ ನಾಗರೀಕತೆಯಿಂದ ಗುರುತಿಸಲಾಗಿದೆ. ಆದರೆ ಈ ನಾಗರೀಕತೆಯು ಕೃಷಿಕೇಂದ್ರಿತವೇ ಅಥವಾ ನಗರಕೇಂದ್ರಿತವೇ ಎನ್ನುವುದು ಚರ್ಚಿತ ವಿಷಯವಾಗಿದೆ. ಈ ನಾಗರೀಕತೆ ಸಂದರ್ಭದಲ್ಲಿ ನಗರಗಳಿದ್ದವು ಎಂಬುದಕ್ಕೆ ಉತ್ಖನನಗಳಿಂದ ಒದಗಿ ಬಂದ ಕುರುಹುಗಳೇ ನಿದರ್ಶನಗಳಾಗಿವೆ. ಇಲ್ಲಿ ಹರಪ್ಪ, ಮೊಹೆಂಜೋದಾರೋ, ಚಾನ್ಹುದಾರೋ, ಲೋಥಲ್, ಕಾಲಿಬಂಗನ್ ಮತ್ತು ಬನವಲಿ ಎಂಬ ಆರು ನಗರಗಳು ಬೆಳಕಿಗೆ ಬಂದಿವೆ.

ಪ್ರಥಮ ಹಂತದ ನಗರೀಕರಣವು ಉತ್ತರ ಭಾರತಕ್ಕೆ ಮಾತ್ರ ಸೀಮಿತಗೊಂಡು ಕರ್ನಾಟಕದ ಮೇಲೆ ಪ್ರಭಾವ ಬೀರಿಲ್ಲ ಎಂಬುದನ್ನು ಊಹಿಸಬಹುದು. ಅದೇ ರೀತಿ ಭಾರತದಲ್ಲಿ ಎರಡನೇ ಹಂತದ ನಗರೀಕರಣವು ಕ್ರಿ.ಪೂ.ಸು. ಆರನೇ ಶತಮಾನದಲ್ಲಿ ಪ್ರಾರಂಭಗೊಳ್ಳುತ್ತದೆ. ಅದು ಸು. ಕ್ರಿ.ಶ. ಮೂರನೇ ಶತಮಾನದವರೆಗೆ ಮುಂದುವರಿದು ಶಾತವಾಹನರ ಅವನತಿಯ ವೇಳೆಗೆ ಅವನತಿಯತ್ತ ಸಾಗಿತು. ಎರಡನೇ ಹಂತದ ನಗರೀಕರಣದ ಭೌಗೋಳಿಕ ವ್ಯಾಪ್ತಿಯು ಹೆಚ್ಚು ವಿಸ್ತಾರವಾಗಿತ್ತು. ಇದು ವೇದಗಳ ಕಾಲ ನಂತರದ ಆಕರಗಳಲ್ಲಿ ನಗರೀಕರಣದೆಡೆಗೆ ಪ್ರವೃತ್ತಿ ರೂಪದಲ್ಲಿ ಕಾಣಿಸಿಕೊಂಡು ಬುದ್ಧನ ಕಾಲಕ್ಕೆ ಸಮಕಾಲೀಕವಾಗಿ ಹರಳುಗಟ್ಟಿದ ಪ್ರಕ್ರಿಯೆಯಾಗಿತ್ತು. ಆರ್.ಎಸ್. ಶರ್ಮಾ, ಎ.

ಘೋಷ್, ವಿಜಯಕುಮಾರ್ ಠಾಕೂರು ಮೊದಲಾದ ವಿದ್ವಾಂಸರು ಕ್ರಿ.ಪೂ. ೬ನೆಯ ಶತಮಾನದ ರಾಜಕೀಯ ಬೆಳವಣಿಗೆಗಳ ಹಾಗೂ ಅವು ನಗರೀಕರಣಕ್ಕೆಡೆ ಮಾಡಿಕೊಟ್ಟಿರುವುದರ ಕುರಿತು ತಮ್ಮ ಕೃತಿಗಳಲ್ಲಿ ವಿವರವಾಗಿ ಚರ್ಚಿಸುತ್ತಾರೆ. ಈ ಅವಧಿಯಲ್ಲಿ ರಾಜ್ಯ ವ್ಯವಸ್ಥೆಯ ಕೆಲವು ಮೂಲಭೂತ ಅಂಗಗಳು ರೂಪುಗೊಂಡವು.[೫೬] ಅವುಗಳನ್ನು ಮಹಾಜನಪದಗಳೆಂದು ಕರೆಯಲಾಯಿತು. ಲಿಚ್ಚವಿ, ಯೌಧೇಯ, ಮಾಳ್ವ, ಶಾಖ್ಯ, ಕೋಳಿಯ, ಕೋಶಲ, ಮಗಧ ಮುಂತಾದ ರಾಜ್ಯಗಳು ಅಸ್ತಿತ್ವಕ್ಕೆ ಬರಲಾರಂಭಿಸಿದವು. ಈ ಜನಪದಗಳಲ್ಲಿ ಮಗಧವು ಹೆಚ್ಚು ಬಲಿಷ್ಠ ಮತ್ತು ಆಕ್ರಮಣಶೀಲ ರಾಜ್ಯವಾಗಿತ್ತು. ಈ ರಾಜ್ಯವು ಇನ್ನಿತರೆ ಜನಪದಗಳನ್ನು ಸೋಲಿಸಿ ತನ್ನ ರಾಜ್ಯದ ಗಡಿಯನ್ನು ವಿಸ್ತರಿಸಿದ್ದಲ್ಲದೆ ಕೃಷಿ, ವ್ಯಾಪಾರ ಚಟುವಟಿಕೆಗಳು ರೂಪುಗೊಳ್ಳುವಂತೆ ಮಾಡಿತು.

ದಕ್ಷಿಣ ಭಾರತದಲ್ಲಿ ಕ್ರಿ.ಪೂ. ೪೫೦೦ ವರ್ಷಗಳಿಂದ ನವಶಿಲಾಯುಗದ ಕಾಲದಲ್ಲಿ ಬದುಕನ್ನು ಕಟ್ಟಿಕೊಂಡು ಚಿಕ್ಕದಾದ ಗ್ರಾಮಗಳನ್ನು ರಚಿಸಿಕೊಳ್ಳುವ ಕ್ರಮವನ್ನು ಕಾಣುತ್ತೇವೆ. ತದನಂತರ ಅವುಗಳಲ್ಲಿ ಕೆಲವು ಆಯಕಟ್ಟಿನ ಹಳ್ಳಿಗಳು ಅಥವಾ ಗ್ರಾಮಗಳು ಕ್ರಮೇಣವಾಗಿ ಪಟ್ಟಣಗಳಾಗಿ ಮಾರ್ಪಾಡುಗೊಳ್ಳುವ ಪ್ರಕ್ರಿಯೆಯನ್ನು ನವಶಿಲಾಯುಗದ ನಂತರ ಬೃಹತ್ ಶಿಲಾಯುಗದ ಕಾಲದಲ್ಲಿ ಕಾಣಬಹುದು. ಈ ಪ್ರಕ್ರಿಯೆಯು 'ನಗರೀಕರಣ ಪ್ರಕ್ರಿಯೆ' ಎಂದು ಕರೆಯಲ್ಪಡುತ್ತದೆ. ಈ ನಗರೀಕರಣ ಪ್ರಕ್ರಿಯೆಯು ಏಕಾಏಕಿ ಆರಂಭಗೊಂಡಿದ್ದಲ್ಲ. ಇದರ ಹಿಂದೆ ಹಲವು ಶತಮಾನಗಳ ತಯಾರಿಯೇ ಬೇಕಾಯಿತು ಎಂಬುದನ್ನು ಇತಿಹಾಸದಿಂದ ತಿಳಿಯಬಹುದು. ನಗರೀಕರಣ ಪ್ರಕ್ರಿಯೆಯಲ್ಲಿ ನಗರಗಳ ಹುಟ್ಟು ಮತ್ತು ಅವುಗಳ ಬೆಳವಣಿಗೆ ಪ್ರಧಾನ ಅಂಶಗಳು. ನಗರ ಕೇಂದ್ರಗಳ ಹೆಚ್ಚಳ ಮತ್ತು ನಗರಗಳ ವಿಸ್ತಾರದ ಮೂಲಕ ಅವುಗಳ ಬೆಳವಣಿಗೆಯನ್ನು ಗುರುತಿಸಲು ಸಾಧ್ಯ.

**ನಗರಗಳ ಉಗಮಕ್ಕೆ ಕಾರಣವಾದ ಅಂಶಗಳು**

ನಗರೀಕರಣ ಪ್ರಕ್ರಿಯೆಯನ್ನು ಕುರಿತು ಅಧ್ಯಯನ ಮಾಡಿದ ಹೆಸರಾಂತ ವಿದ್ವಾಂಸರಾದ ವಿ. ಗೋರ್ಡಾನ್ ಚೈಲ್ಡ್ ಅವರು ೧೯೩೬ರಲ್ಲಿ ಪ್ರಕಟಿಸಿದ ತಮ್ಮ 'ಮ್ಯಾನ್ ಮೇಕ್ಸ್ ಹಿಮ್‌ಸೆಲ್ಫ್' ಎಂಬ ಕೃತಿಯಲ್ಲಿ ನಗರೀಕರಣ ಪ್ರಕ್ರಿಯೆಗೆ ಕಾರಣವಾದ ಹತ್ತು ಅಂಶಗಳನ್ನು ಗುರುತಿಸಿದ್ದಾರೆ.[೫೭] ಅವರು ಗುರುತಿಸಿದ ಕಾರಣಗಳು ಜಗತ್ತಿನ ಆರಂಭಿಕ ಇತಿಹಾಸ ಕಾಲದಲ್ಲಿ ಉಗಮಗೊಂಡ ನಗರಗಳ ಅಧ್ಯಯನಕ್ಕೆ ಸಂಬಂಧಿಸಿವೆ.

೧. ವಾಸಕ್ಕೆ ಯೋಗ್ಯವಾದ ವಿಸ್ತೃತ ನೆಲೆಗಳನ್ನು ಹುಡುಕುವುದು.

೨. ಪ್ರಜೆಗಳಿಂದ ಕರಗಳನ್ನು ಸಂಗ್ರಹಿಸುವ ಪದ್ಧತಿ ಪ್ರಾರಂಭ.

೩. ಸಾರ್ವಜನಿಕವಾಗಿ ಸಭೆ ಸೇರಲು ಅಥವಾ ಆಚರಣೆ ಕೈಗೊಳ್ಳಲು ಸಾರ್ವಜನಿಕ ಭವನಗಳು ಅಥವಾ ದೇವಾಲಯಗಳಲ್ಲಿ ಸಭಿಕರು ಸೇರಲು ಕಟ್ಟಡಗಳನ್ನು ನಿರ್ಮಿಸುವುದು.

೪. ಲಿಪಿ ಮತ್ತು ಭಾಷೆಯ ಬಳಕೆ

೫. ಗುಡಿಕೈಗಾರಿಕೆಗಳಂತಹ ಉದ್ಯಮ ಪ್ರಾರಂಭಿಸುವುದು.

೬. ಕುಶಲಕರ್ಮಿ ವರ್ಗಗಳು ನೆಲೆಗೊಳ್ಳಲು ಪ್ರಾರಂಭವಾಗುವುದು.

೭. ವ್ಯಾಪಾರ ವಾಣಿಜ್ಯ ಚಟುವಟಿಕೆಗಳಿಗೆ ದೂರದ ಸ್ಥಳಗಳೊಂದಿಗೆ ಸಾರಿಗೆ ಸಂಪರ್ಕ ಕಲ್ಪಿಸುವುದು.

೮. ವಿಜ್ಞಾನ ಶಾಖೆಗಳ ಜ್ಞಾನವನ್ನು ಬಳಸುವ ಕ್ರಮದ ಆರಂಭ.

೯. ಭೌಗೋಳಿಕ ಸನ್ನಿವೇಶಗಳ ಜ್ಞಾನ.

೧೦. ನಾಣ್ಯಗಳ ಚಲಾವಣೆ ಮತ್ತು ಪ್ರಯೋಗಗಳು.

ಈ ಎಲ್ಲಾ ಅಂಶಗಳು ನಗರಗಳ ಉಗಮಕ್ಕೆ ಕಾರಣವಾಗಿವೆ. ಮುಖ್ಯವಾಗಿ ಲಲಿತಕಲೆಗಳಾದ ಶಿಲ್ಪಕಲೆ, ಸಂಗೀತ ಮುಂತಾದವು ನಗರಕೇಂದ್ರೀಕೃತವಾಗಿರುತ್ತವೆ. ಕಲೆಗೆ ಪ್ರಾಧಾನ್ಯತೆ ನೀಡಲಾಗುತ್ತದೆ. ಪ್ರಾಚೀನ ಭಾರತದ ನಗರೀಕರಣ ಕುರಿತು ಅಧ್ಯಯನ ನಡೆಸಿರುವ ವಿಜಯಕುಮಾರ್ ಠಾಕೂರ್ ಅವರು ನಗರಗಳ ಉಗಮಕ್ಕೆ ನೀಡುವ ಕಾರಣಗಳು ಹೀಗಿವೆ; ಕೃಷಿ ಕ್ಷೇತ್ರದಲ್ಲಿ ಹೆಚ್ಚುವರಿ ಉತ್ಪಾದನೆ, ಜನಸಂಖ್ಯಾ ಹೆಚ್ಚಳ, ಕುಶಲಕರ್ಮಿಗಳು, ವ್ಯಾಪಾರ–ವಾಣಿಜ್ಯ, ಸಾರಿಗೆ–ಸಂಪರ್ಕಗಳು, ವರ್ತಕ ಸಂಘಗಳು, ಧರ್ಮ, ಶಿಕ್ಷಣ, ಆಡಳಿತ, ಜಮೀನ್ದಾರರು ಹಾಗೂ ಭೌಗೋಳಿಕ ಸನ್ನಿವೇಶ ಇತ್ಯಾದಿ ಅಂಶಗಳನ್ನು ಗುರುತಿಸಿದ್ದಾರೆ.[೫೮]

ನಗರಗಳನ್ನು ಹಳ್ಳಿಗಳಿಗೆ ಹೋಲಿಸುವ ಮೂಲಕ ನಗರದ ಪರಿಕಲ್ಪನೆಯನ್ನು ಗ್ರಹಿಸಿಕೊಳ್ಳಬೇಕಾಗುತ್ತದೆ. ಗ್ರಾಮಗಳು ಅಥವಾ ಹಳ್ಳಿಗಳು ಕೃಷಿ ಆಧಾರಿತ ನೆಲೆಗಳಾದರೆ ನಗರಗಳು ಕೃಷಿಯೇತರ ಚಟುವಟಿಕೆಗಳನ್ನು ಒಳಗೊಂಡಿರುತ್ತವೆ. ಇಲ್ಲಿ ನಗರಗಳು ಎನ್ನುವುದಕ್ಕಿಂತ ನಗರಕೇಂದ್ರಗಳೆಂದು ಕರೆಯಲಾಗುತ್ತದೆ. ಇವು ನಗರಗಳ ಸುತ್ತಮುತ್ತಲ ಗ್ರಾಮಗಳಿಗೆ ಕೇಂದ್ರಗಳಿಗೆ ಕಾರ್ಯನಿರ್ವಹಿಸುತ್ತವೆ. ಕೃಷಿಯಲ್ಲಿ ಹೆಚ್ಚುವರಿ ಉತ್ಪಾದನೆ ಅವುಗಳ ಮಾರಾಟ, ಮಾರಾಟಕ್ಕಾಗಿ ಮಾರಾಟ ಕೇಂದ್ರಗಳು, ವ್ಯಾಪಾರಸ್ಥರು, ವ್ಯಾಪಾರ ಮಾರ್ಗಗಳು ಒಂದೊಂದಾಗಿ ರೂಪುಗೊಂಡು ನಗರೀಕರಣ ಪ್ರಕ್ರಿಯೆ ಗಟ್ಟಿಗೊಳ್ಳಲಾರಂಭಿಸಿತು. ವ್ಯಾಪಾರ ವಾಣಿಜ್ಯದ ಬೆಳವಣಿಗೆಯೊಂದಿಗೆ ಮಹಾನಗರ, ನಗರ, ಪಟ್ಟಣ, ನಿಗಮ ಮುಂತಾದ ಕೇಂದ್ರಗಳು ಬೆಳೆದವು. ವ್ಯಾಪಾರದಲ್ಲಿ ನಾಣ್ಯಗಳ ಚಲಾವಣೆ ಚಾಲ್ತಿಗೆ ಬಂದಿತು. ಇದರಿಂದ ಪಟ್ಟಣಗಳಲ್ಲಿ ನೂರಾರು ವ್ಯವಸಾಯೇತರ ವೃತ್ತಿಗಳು ಬೆಳೆದವು. ಬೇರೆ ಬೇರೆ ಪ್ರದೇಶಗಳಿಗೆ ವ್ಯಾಪಾರಕ್ಕಾಗಿ ಪ್ರಯಾಣ ಬೆಳೆಸಿದ್ದರಿಂದ ವ್ಯಾಪಾರ ವಾಣಿಜ್ಯದ ಮಾರ್ಗಗಳು ನಿರ್ಮಾಣಗೊಂಡವು. ಮೌರ್ಯ ಆಳ್ವಿಕೆಯ ಸಂದರ್ಭದಲ್ಲಿ ಇದು ಮತ್ತಷ್ಟು ವಿಸ್ತಾರಗೊಂಡು ಉತ್ತರಪಥ ಮತ್ತು ದಕ್ಷಿಣಾಪಥದ ವ್ಯಾಪಾರ ಮಾರ್ಗಗಳು ರಚನೆಯಾದವು. ಇವು ವ್ಯಾಪಾರ ಮತ್ತು ಧರ್ಮ ಪ್ರಸಾರದ ಉದ್ದೇಶಕ್ಕಾಗಿ ವ್ಯಾಪಕವಾಗಿ ಬಳಕೆಯಾದವು. ಇದೇ ಸಂದರ್ಭದಲ್ಲಿ ಕರ್ನಾಟಕವು ಉತ್ತರ ಭಾರತದೊಂದಿಗೆ ಸಂಪರ್ಕ ಸಾಧಿಸಿತು. ಇದರೊಟ್ಟಿಗೆ ಹಲವು ಕೇಂದ್ರಗಳು ಈ ಮಾರ್ಗಗಳ ನಡುವಿನ ತಂಗುದಾಣಗಳಾಗಿ ಹುಟ್ಟಿ ಮುಂದೆ ನಗರಗಳಾಗಿ ಬೆಳವಣಿಗೆಯಾದವು.

**ಆದಿ ಇತಿಹಾಸದ ಕಾಲದ ಪಟ್ಟಣಗಳ ಲಕ್ಷಣಗಳು**

**೧. ಕೋಟೆಗಳು**

ಆದಿ ಇತಿಹಾಸದ ಕಾಲದ ಪಟ್ಟಣಗಳು ಅಥವಾ ನಗರಗಳು ಕೋಟೆ ಗೋಡೆಗಳಿಂದ ಸುತ್ತುವರೆದಿರುತ್ತವೆ. ಗ್ರೀಕ್ ರಾಯಬಾರಿ ಮೆಗಾಸ್ತನಿಸನು ತನ್ನ 'ಇಂಡಿಕಾ' ಕೃತಿಯಲ್ಲಿ ೩೦ಕ್ಕೂ ಹೆಚ್ಚು ಕೋಟೆಯುಳ್ಳ ನಗರಗಳಿದ್ದವೆಂದು ಉಲ್ಲೇಖಿಸಿದ್ದಾನೆ. ಮೌರ್ಯರ ಕಾಲದಲ್ಲಿ ನಗರಗಳನ್ನು ಭದ್ರವಾದ ತಳಪಾಯದಿಂದ ಕೂಡಿದ ರಕ್ಷಣಾ ಗೋಡೆಗಳಿಂದ ನಿರ್ಮಿಸಲಾಗಿತ್ತು. ಅಂದಿನ ಕಾಲದಲ್ಲಿ ಇಟ್ಟಿಗೆ ಮತ್ತು ಕಲ್ಲನ್ನು ಬಳಸಿ ಕೋಟೆಯನ್ನು ನಿರ್ಮಿಸುತ್ತಿದ್ದರು. ಕೋಟೆಯ ಒಳಭಾಗದಲ್ಲಿ ಪ್ರತ್ಯೇಕವಾದ 'ರಾಜವಾಡೆ'ಯನ್ನು ನಿರ್ಮಿಸಿ ಅದರಲ್ಲಿ ಅಧಿಕಾರಿವರ್ಗದವರನ್ನು ನಿಯೋಜನೆಗೊಳಿಸಲಾಗುತ್ತಿತ್ತು. ಸನ್ನತಿ, ಬ್ರಹ್ಮಗಿರಿ, ಬನವಾಸಿಯಲ್ಲಿ ಕೋಟೆಗಳಿದ್ದ ಬಗ್ಗೆ ಪುರಾತತ್ವ ಅವಶೇಷಗಳು ಸಾಕ್ಷಿಯಾಗಿವೆ.

**೨. ಮೃತ್ಪಾತ್ರೆಗಳು**

ಆದಿ ಇತಿಹಾಸದ ಕಾಲದ ಪಟ್ಟಣಗಳ ಲಕ್ಷಣಗಳಲ್ಲಿ ಮೃತ್ಪಾತ್ರೆಗಳು ಪ್ರಮುಖವಾದವು. ಮೌರ್ಯರ ಕಾಲದಲ್ಲಿ ವಿಶೇಷವಾದ ಮೃತ್ಪಾತ್ರೆಗಳನ್ನು ತಯಾರಿಸಲಾಗುತ್ತಿತ್ತು. ಔತ್ತರೇಯ ಕಪ್ಪು ಬಣ್ಣದ ಹೊಳಪಿನ ಮೃತ್ಪಾತ್ರೆಗಳು (ಎನ್.ಬಿ.ಪಿ.ಡಬ್ಲ್ಯೂ) ಅಸ್ತಿತ್ವದಲ್ಲಿದ್ದವು.[೬೦] ಇವು ಉತ್ತರ ಭಾರತದಲ್ಲಿ ಇತಿಹಾಸ ಆರಂಭ ಕಾಲದ ಪ್ರಾಚೀನ ನೆಲೆಗಳಲ್ಲಿ ಕಂಡುಬರುತ್ತವೆ. ಇವುಗಳನ್ನು ಮೌರ್ಯರ ಸಮಕಾಲೀನವೆಂದು ಗುರುತಿಸಲಾಗುತ್ತದೆ. ಈ ಬಗೆಯ ಮೃತ್ಪಾತ್ರೆಗಳು ಬನವಾಸಿ, ಸನ್ನತಿ, ಕೊಪ್ಪಳ ನೆಲೆಗಳಲ್ಲಿ ದೊರೆತಿವೆ. ಇವು ಅತ್ಯಂತ ನುಣುಪಾಗಿದ್ದು ಹೊಳಪಿನಿಂದ ಕೂಡಿರುತ್ತವೆ. ಇಂತಹ ಮಡಕೆಗಳನ್ನು ವಿಶೇಷ ಸಂದರ್ಭಗಳಲ್ಲಿ ಮಾತ್ರ ಬಳಸಲಾಗುತ್ತಿದ್ದರೆಂದು ತೋರುತ್ತದೆ. ಸಾಮಾನ್ಯವಾಗಿ ಎನ್.ಬಿ.ಪಿ.ಡಬ್ಲ್ಯೂ ಮಡಕೆಗಳು ದೊರೆತ ಸ್ಥಳದಿಂದ ಪ್ರಾಚೀನ ನೆಲೆಗಳ ಕಾಲಮಾನವನ್ನು ಗುರುತಿಸಲಾಗುತ್ತದೆ. ಇವು ದೊರೆಯುವ ಸ್ಥಳಗಳು ಮೌರ್ಯ ಕಾಲದ ಪ್ರಾಚೀನ ನೆಲೆಗಳು ಮತ್ತು ಆ ಕಾಲದ ಪಟ್ಟಣಗಳೆಂದು ಸುಲಭವಾಗಿ ಗುರುತಿಸಲಾಗುತ್ತದೆ.

**೩. ಮುದ್ರಾಂಕಿತ ನಾಣ್ಯಗಳು**

ಮೌರ್ಯರ ಕಾಲದಲ್ಲಿ ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ಚಲಾವಣೆಯಲ್ಲಿದ್ದವು. ಸಾಮಾನ್ಯವಾಗಿ ಈ ಪ್ರಕಾರದ ನಾಣ್ಯಗಳನ್ನು ಮೌರ್ಯರ ಆಳ್ವಿಕೆಯ ಪ್ರದೇಶದಲ್ಲಿ ಕಂಡುಬರುತ್ತವೆ. ಅಧ್ಯಯನ ಕ್ಷೇತ್ರವಾದ ಕೊಪ್ಪಳ ಜಿಲ್ಲೆಯ ಚಿಕ್ಕಸಿಂದೋಗಿ ಮತ್ತು ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆಯಲ್ಲಿ ಮುದ್ರಾಂಕಿತ ನಾಣ್ಯಗಳು ದೊರೆತಿವೆ. ಚಿಕ್ಕಸಂದೋಗಿಯಲ್ಲಿ[೬೧] ೫೩೦೦ಕ್ಕೂ ಹೆಚ್ಚು ನಾಣ್ಯಗಳು ದೊರೆತರೆ ತೆಕ್ಕಲಕೋಟೆಯಲ್ಲಿ ಒಂದು ನಾಣ್ಯ ಮಾತ್ರ ದೊರೆತಿದೆ.[೬೨] ಇಲ್ಲಿ ದೊರೆತಿರುವ ನಾಣ್ಯಗಳು ಬನವಾಸಿ, ಸನ್ನತಿ, ನೆಲೆಗಳಲ್ಲಿ ದೊರೆತಿದ್ದು ಇವುಗಳನ್ನು ಎಲ್ಲಿ? ಠಂಕಿಸಲಾಗುತ್ತಿತ್ತು ಎಂಬ ಪ್ರಶ್ನೆಗೆ ಉತ್ತರ ದೊರಕಿಲ್ಲ.

### ೪. ಬೌದ್ಧ ಸ್ತೂಪಗಳು ಮತ್ತು ಚೈತ್ಯಗಳು

ಮೌರ್ಯ ಅರಸ ಅಶೋಕನು ದಕ್ಷಿಣ ಭಾರತದಲ್ಲಿ ಬೌದ್ಧ ಸ್ತೂಪಗಳನ್ನು ನಿರ್ಮಿಸಿ ಅವುಗಳಿಗೆ ಆಶ್ರಯ ನೀಡಿದ್ದಾನೆ. ಭಾರತದ್ಯಾಂತ ೮೦,೦೦೦ಕ್ಕೂ ಅಧಿಕ ಸ್ತೂಪಗಳನ್ನು ನಿರ್ಮಿಸಿದ ಎಂಬ ಅಭಿಪ್ರಾಯಗಳಿವೆ. ಅಮರಾವತಿ, ಸನ್ನತಿ, ಕನಗನಹಳ್ಳಿಗಳಲ್ಲಿ ಬೌದ್ಧ ಸ್ತೂಪ ನಿರ್ಮಿಸಿರುವ ಬಲವಾದ ಕುರುಹುಗಳಿವೆ.[೬೩] ಬ್ರಹ್ಮಗಿರಿಯಲ್ಲಿ ಗಜಪೃಷ್ಠಾಕಾರದ ಬೌದ್ಧ ಚೈತ್ಯಾಲಯವನ್ನು ಶೋಧಿಸಲಾಗಿದೆ. ಅಧ್ಯಯನ ಪ್ರದೇಶದಲ್ಲಿರುವ ಹಂಪಿಯಲ್ಲಿ ಬೌದ್ಧ ಜಾತಕ ಕಥೆಗಳನ್ನು ಹೇಳುವ ಶಿಲಾಫಲಕಗಳು ಉತ್ಖನನದಲ್ಲಿ ದೊರೆತಿವೆ. ಈ ಬಗ್ಗೆ ಅಧ್ಯಯನ ಮಾಡಿರುವ ಅ. ಸುಂದರ ಅವರು ಕ್ರಿ.ಶ. ೧ ಮತ್ತು ೨ನೇ ಶತಮಾನದಲ್ಲಿ ಹಂಪಿಯಲ್ಲಿ ಬೌದ್ಧ ಸ್ತೂಪ ಇದ್ದಿರಬಹುದಾದ ಸಾಧ್ಯತೆಯನ್ನು ವ್ಯಕ್ತಪಡಿಸಿದ್ದಾರೆ.

### ೫. ಆಭರಣಗಳು

ಆದಿ ಇತಿಹಾಸ ಕಾಲದ ಜನರು ಆಭರಣ ಪ್ರಿಯರಾಗಿದ್ದರು ಎನ್ನುವುದಕ್ಕೆ ಉತ್ಖನನ ನೆಲೆಗಳಲ್ಲಿ ದೊರೆತ ಅಲಂಕಾರಿಕ ವಸ್ತುಗಳು ಸಾಕ್ಷಿಯಾಗಿವೆ. ಆಭರಣಗಳಿಂದ ಈ ಸಂಸ್ಕೃತಿಯ ಜನರಲ್ಲಿದ್ದ ವಿಶೇಷ ನಂಬಿಕೆ ಅಥವಾ ಪ್ರತೀತಗಳನ್ನು ಗುರುತಿಸಬಹುದು. ಕರ್ನಾಟಕದ ಉತ್ಖನನ ನೆಲೆಗಳಲ್ಲಿ ಆದಿ ಇತಿಹಾಸ ಕಾಲದ ಪದರುಗಳಲ್ಲಿ ವಿವಿಧ ಕಚ್ಚಾವಸ್ತುಗಳಿಂದ ತಯಾರಿಸಿದ ಆಭರಣಗಳು ದೊರೆತಿವೆ. ಕರ್ನಾಟಕದಲ್ಲಿ ಈವರೆಗೆ ಸು.೨೦ ಕ್ಕು ಹೆಚ್ಚು ಆದಿ ಇತಿಹಾಸ ಕಾಲದ ನೆಲೆಗಳು ಉತ್ಖನನಗೊಂಡಿವೆ. ಸಾಮಾನ್ಯವಾಗಿ ಈ ಸಂಸ್ಕೃತಿಯ ಜನರು ನದಿಗಳು ಹರಿಯುವ ಸ್ಥಳಗಳಲ್ಲಿ ಹಾಗೂ ಖನಿಜ ನಿಕ್ಷೇಪಗಳಿರುವ ಸ್ಥಳಗಳಲ್ಲಿಯೇ ಹೆಚ್ಚಿನ ಸಂಖ್ಯೆಯಲ್ಲಿ ಸ್ಥಳಗಳಲ್ಲಿ ಹಾಗೂ ವ್ಯಾಪಾರ ಮಾರ್ಗಗಳನ್ನು ಸೃಷ್ಟಿಸಿದರು. ಇಂಥ ಸಂಗತಿಗಳು ಪ್ರಾಯಶಃ ಅಂದಿನ ಜನರಲ್ಲಿದ್ದ ಮುಂದಾಲೋಚನೆ ಹಾಗೂ ಅವರಲ್ಲಿದ್ದ ತಾಂತ್ರಿಕ ನೈಪುಣ್ಯತೆಯನ್ನು ಅಭಿವೃದ್ಧಿಪಡಿಸಿಕೊಳ್ಳಲು ಸಾಧ್ಯವಾಗಿವೆ ಎಂದು ಹೇಳಬಹುದು. ಆರಂಭಿಕ ಇತಿಹಾಸ ಕಾಲದ ಆಭರಣಗಳ ತಂತ್ರಜ್ಞಾನ ಕುರಿತು ಅಧ್ಯಯನ ಮಾಡಿರುವ ಹೆಚ್.ಎಂ. ಅನಿತಾ ರವರು ಉತ್ಖನನ ವರದಿಗಳನ್ನಾಧರಿಸಿ ಕರ್ನಾಟಕದಲ್ಲಿ ದೊರೆತಿರುವ ಆಭರಣಗಳ ಕಚ್ಚಾವಸ್ತುಗಳ ದತ್ತಾಂಶದ ಆಧಾರದ ಮೇಲೆ ಜೈವಿಕ ಅವಶೇಷಗಳು, ಖನಿಜಾವಶೇಷಗಳು ಹಾಗೂ ಮಾನವ ನಿರ್ಮಿತ ವಸ್ತುಗಳೆಂದು ವಿಂಗಡಿಸಿದ್ದಾರೆ.[೬೪] ಬೃಹತ್ ಶಿಲಾಯುಗದ ಪದರುಗಳಲ್ಲಿ ಖನಿಜ ಮೂಲಗಳಿಂದ ತಯಾರಾದ ಆಭರಣದ ವಸ್ತುಗಳು ಅಧಿಕವಾಗಿ ಉತ್ಖನನದಲ್ಲಿ ದೊರೆತಿವೆ ಆದರೂ ಶಿಲಾ ಸ್ಫಟಿಕ, ಕೆಂಗಲ್ಲು, ಪದ್ಮರಾಗ, ಮಾಣಿಕ್ಯ ಮತ್ತು ಜೇಡಿ ಮಣ್ಣಿನ ಖನಿಜಾಂಶಗಳಿಂದ ತಯಾರಿಸಿದ ಆಭರಣಗಳು ಕೇವಲ ಆರಂಭಿಕ ಇತಿಹಾಸ ಕಾಲದ ಪದರುಗಳಲ್ಲಿ ದೊರೆತಿವೆ. ಮುಖ್ಯವಾಗಿ ಚಿನ್ನದ ವಸ್ತುಗಳಲ್ಲಿ ಮಣಿಗಳು ದೊರೆತಿದ್ದು ಅವು ಬೃಹತ್ ಶಿಲಾಯುಗದ ಜನರು ತಯಾರಿಸಿದ ವಸ್ತುಗಳಾಗಿವೆ ಎಂಬುದು ತುಂಬಾ ಮುಖ್ಯವಾದ ಸಂಗತಿ

ಆದಿ ಇತಿಹಾಸ ಕಾಲದ ಪದರಿನಲ್ಲಿ ಪ್ರಾಯಶಃ ಬಳೆಗೆ ಸೇರಿರಬಹುದಾದಂತಹ ಚಿನ್ನದ ಸುರುಳಿಯು ದೊರಕಿದೆ. ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿರುವ ಕುರುಗೋಡು ನೆಲೆಯಲ್ಲಿ ಶಿಲಾತಾಮ್ರಯುಗ ಹಂತದ

ಪದರಿನಲ್ಲಿ ಚಿನ್ನದ ಸುರುಳಿಯು ದೊರೆತಿರುವುದು ಗಮನಾರ್ಹ. ಸ್ಪಟಿಕ ಮ್ಯಾಗ್ನಸೈಟ್, ಅಗೇಟ್, ಚಾಲ್ಸಿಡೋನಿ, ಲ್ಯಾಪೀಸ್‌ಲಜೂಲಿ ಆಭರಣಗಳು ಆದಿ ಇತಿಹಾಸ ಕಾಲದ ಪದರಿನಲ್ಲಿ ಹೆಚ್ಚಾಗಿರುವುದು ಉತ್ಖನನ ವರಧಿಯಿಂದ ತಿಳಿಯುತ್ತದೆ. ಲ್ಯಾಪೀಸ್‌ಲಜೂಲಿಯೂ ಆಮದು ವಸ್ತುವಾಗಿದ್ದು ಉಳಿದೆಲ್ಲಾ ಕಚ್ಚಾವಸ್ತುಗಳು ಸ್ಥಳೀಯವಾಗಿ ದೊರೆತಂತಹವು ಜೈವಿಕ ವಸ್ತುಗಳಾದ ಮೂಳೆ, ಚಿಪ್ಪು, ಹವಳಗಳಂತಹ ವಸ್ತುಗಳಿಂದ ತಯಾರಾಗಿದ್ದು ಅವು ಗಣನೀಯ ಸಂಖ್ಯೆಯಲ್ಲಿ ದೊರಕಿವೆ.[೬೫] ಇದರಿಂದ ಅಂದಿನ ಜನರು ನದಿ ಸಂಪರ್ಕವನ್ನು ಸಮರ್ಪಕವಾಗಿ ಬಳಸುತ್ತಿದ್ದರೆಂಬುದನ್ನು ಊಹಿಸಬಹುದು.

ಆದಿ ಇತಿಹಾಸ ಕಾಲದ ಜನರು ವಿವಿಧ ಬಗೆಯ ಆಭರಣಗಳನ್ನು ಧರಿಸುತ್ತಿದ್ದರು ಅವುಗಳಲ್ಲಿ ಉಂಗುರ, ಕಿವಿಯೋಲೆ, ಮೂಗಿನ ಆಭರಣ, ಮಣಿಸರ, ಮೊದಲಾದ ಅಲಂಕಾರಿಕ ವಸ್ತುಗಳ ಪರಿಚಯ ಅಂದಿನ ಜನರಿಗಿತ್ತು. ಈ ಆಭರಣಗಳ ತಯಾರಿಕೆಗೆ ಬಳಸಲಾಗುವ ಕಚ್ಚಾವಸ್ತುಗಳು ಅಂದಿನ ಸಾಮಾಜಿಕ ಶ್ರೇಣೀಕರಣ ಸೂಚಕವಾಗಿದ್ದು ಆ ಕಾಲದ ಸಮಾಜವನ್ನು ನಿರೂಪಿಸುತ್ತವೆ. ಶಂಖ, ಮೂಳೆ, ಜೇಡಿಮಣ್ಣಿನಿಂದ ತಯಾರಿಸಿದ ಆಭರಣಗಳು ಮತ್ತು ಸುಡಾವೆ ಮಣ್ಣಿನಿಂದ ತಯಾರಿಸಿದ ವಸ್ತುಗಳು ಸುಲಭವಾಗಿ ಸಿಗುವುದರಿಂದ ಶ್ರೀಸಾಮಾನ್ಯರು ಅವುಗಳನ್ನು ಹೆಚ್ಚು ಉಪಯೋಗಿಸುತ್ತಿದ್ದರೆಂದು ಊಹಿಸಬಹುದು. ಬೆಲೆಬಾಳುವ ವಸ್ತುಗಳಿಂದ ತಯಾರಾದ ಆಭರಣಗಳನ್ನು ಶ್ರೀಮಂತರು ಧರಿಸುತ್ತಿದ್ದರೆಂದು ಊಹಿಸಬಹುದು.

ಆದಿ ಇತಿಹಾಸ ಕಾಲದಲ್ಲಿ ಪ್ರಶಸ್ಥ ಮತ್ತು ಅರೆ ಪ್ರಶಸ್ಥ ಶಿಲೆಗಳಿಂದ ತಯಾರಿಸಿದ ಮಣಿಗಳು ಆ ಕಾಲದ ನೆಲೆಗಳಲ್ಲಿ ವಿಫುಲವಾಗಿದ್ದು ಲೌಕಿಕ ಸಮೃದ್ಧಿಯ ಸೂಚಕವಾಗಿ ಹಾಗೂ ನಗರ ಜನರ ಅಭಿರುಚಿಗೆ ನಿದರ್ಶನಗಳಾಗಿವೆ. ಆರಂಭಿಕ ಇತಿಹಾಸ ಕಾಲದ ಆಭರಣಗಳನ್ನು ಬೃಹತ್ ಶಿಲಾಯುಗದ ಆಭರಣಗಳೊಂದಿಗೆ ಸಮೀಕರಿಸಿದಾಗ ಅವುಗಳ ಮುಂದುವರಿದ ತಂತ್ರಜ್ಞಾನವನ್ನು ಕಾಣಬಹುದಾಗಿದೆ. ಅದರ ಅಡಿಪಾಯವು ಬೃಹತ್ ಶಿಲಾಯುಗದ್ದಾಗಿದೆ. ಆದಿ ಇತಿಹಾಸ ಕಾಲದಲ್ಲಿ ಆಭರಣಗಳು ವಿನ್ಯಾಸ ಹೊಸ ನಮೂನೆ ಬಣ್ಣಗಳುಳ್ಳ ಆಭರಣಗಳ ತಯಾರಿಕ ವಿಧಾನವು ಹೊಸ ಆಯಾಮವನ್ನು ಪಡೆದುಕೊಳ್ಳುವುದು ಕೈಬಳೆಗಳ ಹೆಚ್ಚಿನ ಬಳಕೆ ಹೊಸ ಆಭರಣಗಳು ಆದಿ ಇತಿಹಾಸ ಕಾಲದಲ್ಲಿನ ಸಾಮಾಜಿಕ ಸಾಂಸ್ಕೃತಿಕ ಕ್ಷೇತ್ರದಲ್ಲಿನ ಗಣನೀಯ ಬೆಳವಣಿಗೆಯನ್ನು ಸೂಚಿಸುತ್ತವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಆಭರಣಗಳು ತಯಾರಿಸಲು ಬೇಕಾದ ವಿವಿಧ ರೀತಿಯ ಖನಿಜ ನಿಕ್ಷೇಪಗಳಿದ್ದು ಅವುಗಳ ಉಪಯೋಗವನ್ನು ಬೃಹತ್ ಶಿಲಾಯುಗ ಮತ್ತು ಆದಿ ಇತಿಹಾಸ ಕಾಲದ ಜನರು ಕಂಡುಕೊಂಡಿದ್ದರೆಂದು ತರ್ಕಿಸಬಹುದು.

**೬. ಉಪಕರಣಗಳು**

ಆದಿ ಇತಿಹಾಸ ಕಾಲದ ಉಪಕರಣ ತಯಾರಿಕೆಯಲ್ಲಿ ಕಲ್ಲಿನ ಬಳಕೆ ಮುಂದುವರೆಯಿತು. ಆದರೆ ಕಬ್ಬಿಣಕ್ಕೆ ಹೆಚ್ಚಿನ ಆದ್ಯತೆ ನೀಡಲಾಯಿತು. ಡಬಲ್ ಎಡ್ಜ್ ಬ್ಲೇಡ್ಸ್, ಸಮನಾಂತರ ಬದಿಯ

ಅಲಗುಗಳು, ನೇರ ಬೆಂಬಲಿತ ಅಲಗುಗಳು, ಹರೆಯುವ ಚಕ್ಕೆಗಳು, ರಬ್ಬರ್ಸ್, ಕೊಡಲಿಗಳು, ಪೌಂಡರ್ಸ್ ಮತ್ತು ಗಾರೆಗಳನ್ನು ಕೃಷಿ ಕಾರ್ಯಗಳಿಗೆ ಮತ್ತು ಗೃಹ ಕೆಲಸಗಳಿಗೆ ಬಳಸಲಾಗುತ್ತಿತ್ತು.[೬೬] ಕಲ್ಲಿನ ಅಲಗು ಮತ್ತು ರಬ್ಬರ್‌ಗಳನ್ನು ಪ್ರಾಯಶಃ ಪ್ರಾಣಿಗಳ ಚರ್ಮ ತೆರವುಗೊಳಿಸಲು ಬಳಸಿರಬಹುದು. ಆದರೆ ಚೆಂಡುಗಳನ್ನು ಬೇಟೆಯಾಡಲು ಬಳಸಲಾಗುತ್ತಿತ್ತು. ಕಬ್ಬಿಣದ ಕುಡುಗೋಲುಗಳು ರೈತನ ಸಲಕರಣೆಗೆ ಅತ್ಯಗತ್ಯ. ಕಬ್ಬಿಣದ ಉಂಗುರ, ಕೊಕ್ಕೆಗಳು, ಕೊರೆಯುವ ಉಪಕರಣ ಶಾಶ್ವತ ರಚನೆಗಳಿಗೆ ಅತ್ಯಾವಶ್ಯಕ. ಬಾಣದ ಮೊನೆಗಳು, ಸ್ಪಿಯರ್ ಹೆಡ್‌ಗಳು ಮತ್ತು ಕಠಾರಿಗಳು ಆಯುಧಗಳಾಗಿ ಕಾರ್ಯನಿರ್ವಹಿಸಿರಬಹುದು. ಅತಿ ಚಿಕ್ಕ ಗಾತ್ರದ ಮೂಳೆ ವಸ್ತುಗಳು, ಮೊನಚುಗಳು ಕಂಡುಬಂದಿವೆ. ಮೂಳೆಯ ಬಳಕೆಯು ಅತ್ಯಂತ ಕಡಿಮೆ ಪ್ರಮಾಣದಲ್ಲಿದೆ.

**ಆದಿ ಇತಿಹಾಸದ ಕಾಲದ ನಗರಗಳು**

ಆದಿ ಇತಿಹಾಸ ಕಾಲದ ನಗರಗಳಾಗಿ ಸನ್ನತಿ, ಬನವಾಸಿ, ವಡಗಾವ್-ಮಾಧವಪುರ, ಚಂದ್ರವಳ್ಳಿ, ಕೊಪ್ಪಳ, ಹಂಪಿ ನೆಲೆಗಳು ಬಹುವಿಸ್ತಾರವಾಗಿದ್ದು ಪ್ರತಿಯೊಂದು ಸುಮಾರು ೧-೨ ಚ.ಕಿ.ಮೀ. ಪ್ರದೇಶದಲ್ಲಿ ವ್ಯಾಪಿಸಿವೆ.

**ಸನ್ನತಿ**

ಆರಂಭಿಕ ನಗರಗಳಲ್ಲಿ ಸನ್ನತಿಯು ಪ್ರಮುಖವಾದುದು ಈ ನಗರವು 'ಸುವರ್ಣಗಿರಿ' ಎಂಬ ಹೆಸರಿನ ಮೌರ್ಯ ಪ್ರಾಂತ್ಯದ ರಾಜಧಾನಿ ಪಟ್ಟಣವಾಗಿತ್ತು. ಈ ಪಟ್ಟಣವು ಭೀಮಾ ನದಿಯ ದಡದಲ್ಲಿ ನಿರ್ಮಾಣವಾದ ವ್ಯವಸ್ಥಿತ ನಗರವಾಗಿತ್ತೆಂದು ಹೇಳಬಹುದು. ಭೀಮಾ ನದಿಯ ಪಶ್ಚಿಮ ದಂಡೆಯಿಂದ ಪೂರ್ವದ ದಂಡೆಯವರೆಗೆ ದೊಡ್ಡ ಗಾತ್ರದ ಇಟ್ಟಿಗೆಯ ಕೋಟೆಯನ್ನು ನಿರ್ಮಿಸಿ ಒಳಭಾಗದಲ್ಲಿ ಯೋಜನಬದ್ಧವಾಗಿ ನಗರವನ್ನು ನಿರ್ಮಿಸಲಾಗಿದೆ.[೬೭] ನಗರದ ಪ್ರವೇಶಕ್ಕೆ ಉತ್ತರದ ಕೋಟೆ ಗೋಡೆಯಲ್ಲಿ ಎರಡು ಪ್ರವೇಶದ್ವಾರಗಳನ್ನು ನಿರ್ಮಿಸಲಾಗಿದೆ. ಪ್ರಾಯಶಃ ಮರದಿಂದ ಮಾಡಿದ ಬಾಗಿಲು ಮತ್ತು ದ್ವಾರಬಂಧಗಳಿಂದ ಕೂಡಿದ್ದವು. ಕೋಟೆಗೋಡೆಯು ಭದ್ರವಾದ ತಳಪಾಯದಿಂದ ಕೂಡಿದೆ. ಕೋಟೆಯ ಮೇಲ್ಭಾಗದಲ್ಲಿ ಸೈನಿಕರ ಪಹರೆಗಾಗಿ ಚೌಕಾಕಾರದ ಕೊತ್ತಳಗಳನ್ನು ನಿರ್ಮಿಸಲಾಗಿದೆ. ಅಧಿಕಾರಿವರ್ಗದವರಿಗೆ 'ರಾಜವಾಡೆ' ಮತ್ತು ಅರಮನೆ, ಕಛೇರಿಗಳನ್ನು ನಿರ್ಮಿಸಲಾಗಿತ್ತು. ನಿವಾಸಿಗಳಿಗೆ ಅನುಕೂಲವಾಗುವಂತೆ ಉಗ್ರಾಣಗಳನ್ನು, ಸಿಹಿ ನೀರಿನ ಹೊಂಡಗಳನ್ನು (ಬಾವಿ) ನಿರ್ಮಿಸಲಾಗಿತ್ತು. ರಾಜ್ಯ ಪುರಾತತ್ವ ಇಲಾಖೆಯು ೧೯೮೪-೮೫ ಮತ್ತು ೧೯೯೩-೯೪ರಲ್ಲಿ ಭೂ ಉತ್ಖನನ ಇಟ್ಟಿಗೆಗಳಿಂದ ನಿರ್ಮಿಸಿದ ದೊಡ್ಡ ಸರಕು ಕೋಣೆ ಅಥವಾ ಉಗ್ರಾಣ, ವೃತ್ತಾಕಾರದ ಬಾವಿ, ವಾಸದ ಮನೆಗಳನ್ನು ಶೋಧಿಸಿದರು.[೬೮] ನಗರದ ಭಾಗವಾಗಿ ಧಾರ್ಮಿಕ ಆಚರಣೆಗಳನ್ನು ಕೈಗೊಳ್ಳಲು ನಗರದ ಆಚೆಗೆ ಸುತ್ತಲೂ ಸ್ತೂಪಗಳನ್ನು ನಿರ್ಮಿಸಿರುವುದು ವೈಶಿಷ್ಟ್ಯವೆನಿಸಿದೆ. ನಗರದ ಹೊರಬದಿಯಲ್ಲಿ ಆನೆಗುತ್ತಿ, ಬೆನಗುತ್ತಿ, ಕನಗನಹಳ್ಳಿ, ಹಗರಗುಂಡಿ ಹಾಗೂ ಚಂದ್ರಲಾಂಭದ ದೇಗುಲದ ಬಳಿ ಬೌದ್ಧ ಸ್ತೂಪಗಳನ್ನು

ನಿರ್ಮಿಸಲಾಗಿದೆ. ಇವುಗಳಲ್ಲಿ ಆನೆಗುತ್ತಿ ಮತ್ತು ಕನಗನಹಳ್ಳಿ ಸ್ತೂಪಗಳು ಕಲಾತ್ಮಕ ಶಿಲ್ಪಗಳಿಂದ ಕೂಡಿದ ವಾಸ್ತು ನಿರ್ಮಿತಿಯಾಗಿದ್ದರೆ, ಉಳಿದವು ಅವಶೇಷಗಳಲ್ಲಿ ರೂಪದಲ್ಲಿ ಕಂಡುಬರುತ್ತವೆ. ಒಟ್ಟಿನಲ್ಲಿ ಸುವರ್ಣಗಿರಿಯು ವಿಷ್ಣುಗುಪ್ತ ಅಥವಾ ಚಾಣಕ್ಯ ಅರ್ಥಶಾಸ್ತ್ರ ಕೃತಿಯಲ್ಲಿ ಸೂಚಿಸಿರುವ ಕೆಲವು ಲಕ್ಷಣಗಳಿಂದ ರಚಿತವಾದ ಪಟ್ಟಣವೆಂದು ಹೇಳಬಹುದು.

**ವಡಗಾವ್–ಮಾಧವಪುರ**

ಕರ್ನಾಟಕದ ಆರಂಭಿಕ ನಗರಗಳಲ್ಲಿ ವಡಗಾವ್–ಮಾಧವಪುರವು ಒಂದು. ಈ ನೆಲೆಗಳ ಉತ್ಖನನದಲ್ಲಿ ಇಟ್ಟಿಗೆ ನಿರ್ಮಿಸಿದ ವಾಸಗೃಹಗಳು ಬೆಳಕಿಗೆ ಬಂದಿದ್ದು, ಇವು ಹಜಾರವನ್ನು ಸುತ್ತುವರೆದ ೩–೪ ಕೋಣೆಗಳ ವಿನ್ಯಾಸವನ್ನು ಹೊಂದಿವೆ. ಧಾರ್ಮಿಕ ಕಟ್ಟಡಗಳು ಇದ್ದ ನಗರದಲ್ಲಿ ಇತರ ಕೆಲವು ಲೌಕಿಕ ಕಟ್ಟಡಗಳು ಇದ್ದುದಾಗಿ ಮತ್ತು ಇಟ್ಟಿಗೆಯಿಂದ ನಿರ್ಮಿಸಿದ ನೆಲಬಾವಿಗಳು ಕಂಡುಬಂದಿವೆ.[೬೯] ಎಫ್.ಆರ್. ಆಲ್ಚೀನ್ ಅವರು ಉತ್ಖನನ ನೆಲೆಗಳಲ್ಲಿ ದೊರೆತ ಕುರುಹುಗಳು ಹಾಗೂ ಅವುಗಳ ವಿಸ್ತೀರ್ಣವನ್ನು ಆಧರಿಸಿ ಮೌರ್ಯರ ಕಾಲದ ಪಟ್ಟಣಗಳನ್ನು ಆರು ದರ್ಜೆಗಳಾಗಿ ವಿಂಗಡಿಸಿದ್ದಾರೆ. ಅವುಗಳಲ್ಲಿ ಐದನೆಯ ದರ್ಜೆಯ ಪಟ್ಟಣಗಳು ೩೧–೬೦ ಹೆಕ್ಟರ್‌ಗಳ ನಡುವಿನ ವಿಸ್ತೀರ್ಣ ಹೊಂದಿರುತ್ತವೆ ಎಂದಿದ್ದಾರೆ. ಆ ಪಟ್ಟಣಗಳಲ್ಲಿ ಕಂದಹಾರ್, ತಕ್ಷಶಿಲ, ಬಲಿರಾಜಗಡ್, ಧಾನ್ಯಕಟಕ, ಅಮರಾವತಿ ಹಾಗೂ ಕರ್ನಾಟಕದ ಸನ್ನತಿ, ಮಾಧವಪುರಗಳನ್ನು ಗುರುತಿಸಿದ್ದಾರೆ.[೭೦] ಪಟ್ಟಣಗಳ ವಿಸ್ತೀರ್ಣಗಳ ಆಧಾರದ ಮೇಲೆ ಜನಸಂಖ್ಯೆಯನ್ನು ಹೆಕ್ಟರ್‌ಗೆ ೪೦೦ರಂತೆ ಲೆಕ್ಕ ಮಾಡಬಹುದು. ಅದರಂತೆ ಈ ಪಟ್ಟಣಗಳಲ್ಲಿ ೧೨೦೦೦–೨೪೦೦೦ ಜನಸಂಖ್ಯೆ ಇದ್ದಿತ್ತೆಂದು ಗುರುತಿಸಲಾಗಿದೆ. ಪ್ರಾಯಶಃ ಹಲವು ನಗರಗಳಲ್ಲಿ ಹರಡಿದ್ದ ಜನಸಂಖ್ಯೆ ಗಣನೀಯವಾಗಿಯೇ ಇದ್ದಿರಬೇಕು. ಆದರೆ ಒಟ್ಟು ಜನಸಂಖ್ಯೆಯಲ್ಲಿ ನಗರವಾಸಿಗಳ ಪ್ರಮಾಣವನ್ನು ನಿರ್ಣಯಿಸಲು ಮಾಹಿತಿ ಕೊರತೆ ಕಂಡುಬರುತ್ತದೆ.

**ಬನವಾಸಿ**

ಮೌರ್ಯರ ಅಧೀನಕ್ಕೆ ಒಳಪಟ್ಟ ಆರಂಭಿಕ ಪಟ್ಟಣಗಳಲ್ಲಿ ಬನವಾಸಿಯು ಒಂದಾಗಿತ್ತು. ಇದು ಸನ್ನತಿಯಂತೆ ವರದಾ ನದಿಯ ಎಡದಂಡೆಯ ಮೇಲೆ ನಿರ್ಮಾಣವಾಗಿದೆ. ಈ ನದಿಯು ದಕ್ಷಿಣ ದಿಕ್ಕಿನಿಂದ ಪೂರ್ವ ದಿಕ್ಕಿಗೆ ತಿರುವು ಪಡೆಯುವ ಸ್ಥಳದಲ್ಲಿ ನಿರ್ಮಾಣವಾದ ನಗರವಾಗಿದೆ.[೭೧] ಇದು ಆಯತಾಕಾರದ ವಿನ್ಯಾಸದಲ್ಲಿದ್ದು ಸುತ್ತಲೂ ರಕ್ಷಣಾ ಕೋಟೆಯನ್ನು ನಿರ್ಮಿಸಲಾಗಿದೆ. ಈ ನಗರವನ್ನು ಪ್ರವೇಶಿಸಲು ನಾಲ್ಕು ದಿಕ್ಕಿಗೆ ಪ್ರವೇಶದ್ವಾರಗಳನ್ನು ನಿರ್ಮಿಸಲಾಗಿದೆ. ನಾಲ್ಕು ದ್ವಾರಗಳಿಂದ ಬರುವ ರಸ್ತೆಗಳು ನಗರದ ಕೇಂದ್ರ ಭಾಗದಲ್ಲಿರುವ ಮಧುಕೇಶ್ವರ ದೇವಾಲಯದ ಸಮುಚ್ಚಯಕ್ಕೆ ಬಂದು ಸೇರುತ್ತದೆ. ಬನವಾಸಿಯ ಕೋಟೆಯ ಸುತ್ತಲೂ ಆಳವಾದ ಕಂದಕವನ್ನು ನಿರ್ಮಿಸಲಾಗಿದೆ. ೧೯೭೦ರ ದಶಕದಲ್ಲಿ ರಾಜ್ಯ ಪುರಾತತ್ವ ಇಲಾಖೆ ಮತ್ತು ಮೈಸೂರು ವಿಶ್ವವಿದ್ಯಾನಿಲಯ ಜಂಟಿಯಾಗಿ

ಗಜಪೃಷ್ಠಾಕಾರದ ಇಟ್ಟಿಗೆ ದೇವಾಲಯವನ್ನು ಶೋಧಿಸಿದ್ದಾರೆ.[೨೨] ಆದರೆ ಇವು ಮೌರ್ಯರ ಕಾಲದಷ್ಟು ಪ್ರಾಚೀನವಾದವುಗಳಲ್ಲ. ಆದರೆ ರಚನಾ ಶೈಲಿಯಿಂದ ಪ್ರಾಚೀನವಾದವು ಎಂಬುದು ನಿರ್ವಿವಾದ ಸಂಗತಿ. ಈ ನಗರದ ಸುತ್ತಲೂ ಬೌದ್ಧ ಸ್ತೂಪಗಳನ್ನು ಅಲ್ಲಲ್ಲಿ ನಿರ್ಮಿಸಿರುವುದು ವಿಶೇಷವೆನಿಸಿದೆ.

**ಇಸಿಲಾ(ಬ್ರಹ್ಮಗಿರಿ)**

ಆರಂಭಿಕ ಪಟ್ಟಣಗಳಲ್ಲಿ ಮತ್ತು ಮೌರ್ಯರ ಶಾಸನಗಳಲ್ಲಿ ಉಲ್ಲೇಖವಾಗಿರುವ ಇಸಿಲಾ ಅಥವಾ ಬ್ರಹ್ಮಗಿರಿ ಪಟ್ಟಣವು ಒಂದು. ೧೮೯೧ರಲ್ಲಿ ಬಿ.ಎಲ್. ರೈಸ್ ಅವರು ಶೋಧಿಸಿದ ಬಂಡೆಗಲ್ಲು ಶಾಸನದಲ್ಲಿ ಈ ಪಟ್ಟಣದ ಉಲ್ಲೇಖವಿದೆ.೨೩ ಇದು ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲೂಕಿನ ಸಿದ್ದಾಪುರ ಗ್ರಾಮದ ಬಳಿ ಇರುವ ಬೆಟ್ಟದ ತಪ್ಪಲಿನಲ್ಲಿದೆ. ಮೊಟ್ಟ ಮೊದಲು ವ್ಯವಸ್ಥಿತವಾಗಿ ಈ ಪಟ್ಟಣದ ಕುರಿತು ಸಂಶೋಧನೆ ಕೈಗೊಂಡದ್ದು ರಾಜ್ಯ ಪುರಾತತ್ವ ಇಲಾಖೆಯ ನಿರ್ದೇಶಕರಾಗಿದ್ದ ಎಂ.ಎಚ್. ಕೃಷ್ಣ ಅವರು. ಶಾಸನಗಳಲ್ಲಿ ಉಲ್ಲೇಖವಾದ ಇಸಿಲಾ ಎಂಬ ಪಟ್ಟಣದ ಕುರಿತು ಕುತೂಹಲದಿಂದ ಶೋಧನೆಗೆ ತೊಡಗಿದರು. ೧೯೪೦ರಲ್ಲಿ ಅಶೋಕನ ಶಾಸನ ಬಂಡೆಯ ಹಿಂಬದಿಯ ಬೆಟ್ಟದ ಬುಡದಲ್ಲಿ ಹರಡಿಕೊಂಡಿರುವ ವಿಶಾಲವಾದ ಪ್ರದೇಶವು ಇಸಿಲಾ ಪಟ್ಟಣ ಇದ್ದಿರಬಹುದಾದ ಸಾಧ್ಯತೆಗಳನ್ನು ಗುರುತಿಸಿದರು.[೨೪] ನಂತರದಲ್ಲಿ ೧೯೪೭ರಲ್ಲಿ ಕೇಂದ್ರ ಪುರಾತತ್ವ ಇಲಾಖೆಯ ಮುಖ್ಯಸ್ಥರಾಗಿದ್ದ ಮಾರ್ಟಿಮರ್ ವ್ಹೀಲರ್ ಅವರು ಪ್ರಾಚೀನ ಇಸಿಲಾ ಪಟ್ಟಣದ ಕುರಿತಾದ ಶೋಧನೆಗಾಗಿ ಭೂ-ಉತ್ಖನನ ಕೈಗೊಂಡರು. ಅಶೋಕನ ಶಿಲಾಶಾಸನ ಈ ಸ್ಥಳದಲ್ಲಿದ್ದ ಮೌರ್ಯರ ಸಮಕಾಲೀನ ಪ್ರಾಕ್ತನಾವಶೇಷಗಳು ದೊರಕದೆ ಇರುವುದು ಪಟ್ಟಣದ ಕಾಲವನ್ನು ಗುರುತಿಸಲು ತೊಡಕಾಗಿದೆ. ಆದರೆ ಈ ಪ್ರಾಚೀನ ನೆಲೆಯಲ್ಲಿ ಕಬ್ಬಿಣ ಯುಗದ ಹಲವಾರು ವಿವಿಧ ಪ್ರಕಾರದ ಶಿಲಾಸಮಾಧಿಗಳನ್ನು ಶೋಧಿಸಲಾಯಿತು. ಈ ನೆಲೆಯಲ್ಲಿ ದೊರೆತ ಪ್ರಾಚೀನ ಅವಶೇಷಗಳ ಆಧಾರದಿಂದ ಇಲ್ಲಿ ಇಸಿಲ ಪಟ್ಟಣವು ಬೆಟ್ಟದ ತಪ್ಪಲಿನಲ್ಲಿ ಇಳಿಜಾರು ಪ್ರದೇಶದಲ್ಲಿ ಹರಡಿಕೊಂಡಿತ್ತು ಎಂಬ ಅಭಿಪ್ರಾಯಗಳು ವ್ಯಕ್ತವಾದವು. ಇದೇ ನೆಲೆಯಿಂದ ರೊಪ್ಪದ ಬಳಿಯಿರುವ ರಸ್ತೆಯ ಬದಿಯಲ್ಲಿ ಪ್ರಾಚೀನವೆನ್ನುವ ಇಟ್ಟಿಗೆಯಲ್ಲಿ ನಿರ್ಮಿಸಿದ ಗಜಪೃಷ್ಠಾಕಾರದ ಚೈತ್ಯ ಮತ್ತು ೧೮ ಅಡಿ ಅಗಲವಾದ ಕಲ್ಲುಹಾಸಿನ ರಸ್ತೆಯೊಂದನ್ನು ಪತ್ತೆಮಾಡಲಾಗಿದೆ.[೨೫] ಈ ಎಲ್ಲಾ ಲಕ್ಷಣಗಳನ್ನು ಗಮನಿಸಿದರೆ ಇಲ್ಲಿನ ವಾಸ್ತುನಿರ್ಮಿತಿಗಳು ಮೌರ್ಯರ ಸಮಕಾಲೀನವಲ್ಲದಿದ್ದರೂ ಅವುಗಳ ರಚನಾಶೈಲಿ ಮತ್ತು ಅಶೋಕನ ಶಾಸನದ ಹಿನ್ನೆಲೆಯಲ್ಲಿ ಇಲ್ಲೊಂದು ಪ್ರಾಚೀನ 'ಪಟ್ಟಣ'ವಿತ್ತೆಂದು ಸ್ಪಷ್ಟವಾಗುತ್ತದೆ. ಮುಖ್ಯವಾಗಿ ಈ ನೆಲೆಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯಿಂದ ನಗರೀಕರಣ ಸಂಸ್ಕೃತಿಯ ಮುಂದುವರೆಕೆಯ ಭಾಗವಾಗಿ ರೂಪುಗೊಂಡಿರುವುದನ್ನು ಗುರುತಿಸಬಹುದು.

**ಕೊಪ್ಪಳ(ಕೊಪಣ)**

ಆರಂಭಿಕ ನಗರಗಳಲ್ಲಿ ಕೊಪಣವು ಒಂದಾಗಿದ್ದು ಕ್ರಿ.ಶ. ಆರಂಭದಲ್ಲಿ 'ಕುಪಣ' ಎಂಬ ಹೆಸರಿನಿಂದ ಗುರುತಿಸಿಕೊಂಡಿತು ಎಂಬುದು ಕನಗನಹಳ್ಳಿಯ ಶಾಸನಗಳು ಸ್ಪಷ್ಟಪಡಿಸುತ್ತವೆ. ಈ ನಗರವು ನೂತನ

ಶಿಲಾಯುಗದಿಂದ ಕ್ರಮೇಣವಾಗಿ ಕಬ್ಬಿಣ ಯುಗದ ಲೋಹ ಬಳಕೆಯ ಸಂಸ್ಕೃತಿಯಲ್ಲಿ ಉಂಟಾದ ಕೃಷಿ ಉತ್ಪಾದನೆ ಹಾಗೂ ಅಶೋಕನ ಕಾಲದಲ್ಲಿ ಒದಗಿ ಬಂದ ಅಕ್ಷರ ಜ್ಞಾನ ಮತ್ತು ದೂರದ ವ್ಯಾಪಾರ ಸಂಪರ್ಕಗಳಿಂದಾಗಿ ಆಯಕಟ್ಟಿನ ಸ್ಥಳ ಒಂದು ನಗರವಾಗಿ ಹೊರಹೊಮ್ಮಿದ ಪ್ರಕ್ರಿಯೆಯನ್ನು ಕೊಪಣದ ನಗರೀಕರಣ ಚರಿತ್ರೆಯಲ್ಲಿ ಗುರುತಿಸಬಹುದಾಗಿದೆ. ಶಾತವಾಹನರು ಬರೆಸಿದ ಈ ಶಾಸನಗಳ ಆಧಾರದಿಂದ ಕೂಪಣವು ಅಶೋಕನ ಕಾಲದಲ್ಲಿಯೇ ಒಂದು ಆಡಳಿತ ಕೇಂದ್ರವಾಗಿ ಬೌದ್ಧ ಕೇಂದ್ರವಾಗಿ ಹೊರಹೊಮ್ಮಿತ್ತು ಎಂಬುದಾಗಿ ವಿದ್ವಾಂಸರಾದ ಷ. ಶೆಟ್ಟರ್ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[೭೬] ಕನಗನಹಳ್ಳಿಯ ಶಾಸನ ಎರಡರಲ್ಲಿ 'ಖಜನಾಕರಸ ಮಹಿಸೇಸ ಕಸ ಕೂಪಣಸ್ ದಾನಮ್' ಎಂಬ ಪಾಠವಿದೆ. ಮೂರನೆಯ ಶಾಸನ 'ಕೂಪನ ರಥಿಕಸದಾನ', ನಾಲ್ಕನೆಯದು 'ಕೂಪಣ ರಥಿಕಸ ದೇಯಧ (ಮ)' ಎಂಬ ಪಾಠಗಳನ್ನು ಹೊಂದಿವೆ ಎಂದಿದ್ದಾರೆ.

ಕೊಪ್ಪಳದ ಹೆಸರನ್ನು ಒಮ್ಮೆ 'ಕುಪನ'ವೆಂದು ಮೂರು ಬಾರಿ 'ಕೂಪಣ'ವೆಂದು ಉಚ್ಚರಿಸಲಾಗಿದೆ. ಒಟ್ಟಿನಲ್ಲಿ ಶಾತವಾಹನರ ಕಾಲದಲ್ಲಿ ಬೆಳೆಯುತ್ತಿದ್ದ ಕನಗನಹಳ್ಳಿ (ಸುವರ್ಣಗಿರಿಗೆ) ಸ್ಥಳೀಯರಾದ ಕುಪಣದ ಅಧಿಕಾರಿಗಳು ಕೊಡುಗೆ ನೀಡಿದ್ದು ಗಮನಾರ್ಹ.[೭೭] ಅಲ್ಲದೆ ಇಲ್ಲಿನ ಪಾಲ್ಕಿಗುಂಡು ಮತ್ತು ಗವಿಮಠದಲ್ಲಿರುವ ಅಶೋಕನ ಶಾಸನಗಳು ಕೊಪಣ ನಗರದ ಐತಿಹಾಸಿಕ ಮಹತ್ವವನ್ನು ತಿಳಿಸುತ್ತವೆ. ಅಶೋಕನ ಕಾಲ ಅಥವಾ ಅನಂತರ ಕಾಲದಲ್ಲಿ ಕುಪಣವು ಒಂದು ಪ್ರಧಾನ ಆಡಳಿತ ಕೇಂದ್ರವಾಗಿ ಮಾರ್ಪಾಡು ಹೊಂದಿತ್ತು ಎಂದು ಹೇಳಬಹುದು.

**ಹಂಪಿ**

ಕ್ರಿ.ಶ. ೧-೨ನೇ ಶತಮಾನದಲ್ಲಿ ಬೌದ್ಧ ಧರ್ಮದ ಕೇಂದ್ರವಾಗಿತ್ತೆಂಬ ವರದಿಗಳು ಪ್ರಕಟವಾಗಿವೆ. ಹಂಪಿಯ ಮಹಾನವಮಿ ದಿಬ್ಬದ ಪರಿಸರದಲ್ಲಿ ಭಾರತೀಯ ಪ್ರಾಚ್ಯವಸ್ತು ಸರ್ವೇಕ್ಷಣಾಲಯವು ಕಾರ್ಯರೂಪಗೊಳಿಸಿದ ಉತ್ಖನನದಿಂದ ಒಂದು ಬಿಳಿಯ ಜೇಡಿಮಣ್ಣಿನ ಶಿರಭಾಗವೊಂದು ಶೋಧವಾಗಿದೆ. ಈ ಮಣ್ಣಿನ ಗೊಂಬೆಯು ಗಾಂಧಾರ ಶೈಲಿಯನ್ನು ಹೋಲುತ್ತದೆ. ವಡಗಾಂವ್ ಮಾಧವಪುರದ ಉತ್ಖನನದಲ್ಲಿ ದೊರೆತ ಕಪ್ಪು ಜೇಡಿಮಣ್ಣಿನ ಗೊಂಬೆಯ ಶಿರವು ಬುದ್ಧನನ್ನು ಪ್ರತಿನಿಧಿಸುತ್ತದೆ. ಅದೇ ರೀತಿ ಹಂಪಿಯಲ್ಲಿ ದೊರೆತ ಬಿಳಿ ಜೇಡಿಮಣ್ಣಿನ ಗೊಂಬೆಯು ಸಹ ಗಾಂಧಾರ ಶೈಲಿಯನ್ನು ಪ್ರತಿನಿಧಿಸುತ್ತದೆ ಎಂದು ಅ.ಸುಂದರ ಅವರು ತಮ್ಮ ಅಭಿಪ್ರಾಯಗಳನ್ನು ತಮ್ಮ ಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ.

ಹಂಪಿಯ ಉತ್ಖನನದಲ್ಲಿ ದೊರೆತಿರುವ ಕ್ರಿ.ಶ. ೧-೨ನೇ ಶತಮಾನದ ಸುಣ್ಣದ ಹಲಗೆಯ ಮೇಲಿರುವ ಬ್ರಾಹ್ಮೀಲಿಪಿ ಶಾಸನದಲ್ಲಿ 'ಥೆರಸಾ ಪುತಸಾ ದಾನಮ್' ಎಂದಿದ್ದು, 'ಥೇರಪುತ' ಬೌದ್ಧ ಸಂಘಕ್ಕೆ ದಾನ ನೀಡಿದ್ದರ ಬಗ್ಗೆ ಉಲ್ಲೇಖಿಸುತ್ತದೆ.[೭೮] ಹಜಾರರಾಮಸ್ವಾಮಿ ದೇವಾಲಯದ ಬಳಿ ನಡೆಸಲಾದ ಉತ್ಖನನದಲ್ಲಿ ಐದು ಬೌದ್ಧ ಜಾತಕ ಕಥೆಗಳನ್ನು ನಿರೂಪಿಸುವ ಕೆತ್ತನೆಯುಳ್ಳ ಬೌದ್ಧ

ಶಿಲಾಫಲಕಗಳು ಮತ್ತು 'ಆಯಕ ಸ್ತಂಭ' ದೊರೆತಿದ್ದು ಅತ್ಯಂತ ಗಮನಾರ್ಹ ವಿಚಾರವಾಗಿದೆ. ಈ ಶಿಲಾಫಲಕಗಳ ಅಧ್ಯಯನ ಮಾಡಿರುವ ಅ.ಸುಂದರ ಅವರು ಕ್ರಿ.ಶ. ೧-೨ನೆಯ ಶತಮಾನದಲ್ಲಿ ಇಲ್ಲೊಂದು ಬೌದ್ಧ ಸ್ತೂಪವಿದ್ದು ನಂತರದಲ್ಲಿ ಅಲಕ್ಷ್ಯಕ್ಕೊಳಪಟ್ಟು ಅದು ನಿರುಪಯುಕ್ತವಾಯಿತು ಎಂದಿದ್ದಾರೆ. ಇಲ್ಲಿರುವ ಅತಿ ಉಬ್ಬುಶಿಲ್ಪಗಳುಳ್ಳ ಫಲಕಗಳನ್ನು ಅನಂತರಾವಧಿಯಲ್ಲಿ ಅಮರಾವತಿ ಇಲ್ಲವೆ ಸನ್ನತಿಯಿಂದ ಇಲ್ಲಿಗೆ ತಂದಿರಬಹುದು ಎಂಬ ಅಭಿಪ್ರಾಯಗಳು ವ್ಯಕ್ತವಾಗಿವೆ. ಮೇಲಿನ ಈ ವಿವರಗಳಿಂದ ಹಂಪಿಯು ಬೌದ್ಧ ಧರ್ಮದ ಕೇಂದ್ರವಾಗಿದ್ದಿತು ಎಂದು ಗುರುತಿಸಬಹುದು. ಅಲ್ಲದೆ ಹಂಪಿಯು ಇತಿಹಾಸ ಪೂರ್ವ ನೆಲೆಯಾಗಿತ್ತು ಎಂಬುದಕ್ಕೆ ಮೊಸಳಯ್ಯನ ಗುಡ್ಡದಲ್ಲಿ ದೊರೆತ ಪ್ರಾಕ್ತನಾವಶೇಷಗಳು ಸಾಕ್ಷಿಯಾಗಿವೆ. ಹಂಪಿಯ ಪರಿಸರದಲ್ಲಿ ಗವಿ ಕಲ್ಲಾಸರೆಗಳಲ್ಲಿರುವ ವರ್ಣಚಿತ್ರಗಳು ಹಂಪಿಯು ಪ್ರಾಗೈತಿಹಾಸಿಕ ಕಾಲದಿಂದಲೂ ಕ್ರಮೇಣ ಬೆಳೆದ ನಗರವಾಗಿ ಹೊರಹೊಮ್ಮಿದ ಪಟ್ಟಣಗಳಲ್ಲಿ ಬಹುಮುಖ್ಯ ಪ್ರಾಚೀನ ನಗರೀಕರಣವಾಗಿದೆಯೆಂದು ಅಭಿಪ್ರಾಯಿಸಬಹುದು.

**ಚಂದ್ರವಳ್ಳಿ**

ಆದಿ ಇತಿಹಾಸ ಆರಂಭ ಕಾಲದ ನಗರಗಳಲ್ಲಿ ಚಂದ್ರವಳ್ಳಿಯು ಒಂದು. ಈ ನಗರವು ನವಶಿಲಾಯುಗದಿಂದ ಕ್ರಮೇಣವಾಗಿ ಕಬ್ಬಿಣಯುಗದ ಲೋಹ ಬಳಕೆಯ ಸಂಸ್ಕೃತಿಯಲ್ಲಿ ಉಂಟಾದ ಕೃಷಿ ಉತ್ಪಾದನೆ ಹಾಗೂ ಅಶೋಕನ ಕಾಲದಲ್ಲಿ ಒದಗಿಬಂದ ಅಕ್ಷರಜ್ಞಾನ, ದೂರದ ವ್ಯಾಪಾರ ಸಂಪರ್ಕಗಳಿಂದಾಗಿ ಆಯಕಟ್ಟಿನ ಸ್ಥಳವೊಂದು ನಗರವಾಗಿ ಹೊಮ್ಮಿದ ಪ್ರಕ್ರಿಯೆಯನ್ನು ಚಂದ್ರವಳ್ಳಿಯಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾಗಿದೆ.[೭೯] ಮೌರ್ಯ ಸಾಮ್ರಾಜ್ಯದ ಮೇರೆಗೆ ಹೊಂದಿಕೊಂಡಂತೆ ಇದ್ದ ಆಯಕಟ್ಟಿನ ಸ್ಥಳಗಳು ಕ್ರಮೇಣವಾಗಿ ಮುಖ್ಯ ಪಟ್ಟಣಗಳಾಗಿ ನೆಲೆಗೊಳ್ಳಲು ಅಣಿಯಾದವು ಎಂಬುದಕ್ಕೆ ಚಂದ್ರವಳ್ಳಿ ಪುರಾತನ ನಗರವು ಉತ್ತಮ ಉದಾಹರಣೆಯಾಗಿದೆ. ಇದು ಆರಂಭಿಕ ರಾಜಧಾನಿ ನಗರಗಳಲ್ಲಿ ಒಂದು ಎಂಬುದು ಗಮನಿಸುವ ಅಂಶವಾಗಿದೆ. ಶಾತವಾಹನರ ನಂತರ ಪ್ರಾಂತೀಯ ಅರಸರಾದ ಮಹಾರಥಿ ಅರಸರು ಇದನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ್ದರು ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಬನವಾಸಿ ರಾಜ್ಯ ಸ್ಥಾಪನೆಗೂ ಮುಂಚೆಯೇ ಚಂದ್ರವಳ್ಳಿಯಲ್ಲಿ ನೆಲೆಸಿದ ಮಯೂರವರ್ಮ ಇಲ್ಲಿ ಕೆರೆಯನ್ನು ಭದ್ರಪಡಿಸಿದ ಎಂಬ ಉಲ್ಲೇಖಗಳು ಚಂದ್ರವಳ್ಳಿ ಶಾಸನದಲ್ಲಿದೆ.[೮೦] ಇದು ತನ್ನ ಆಯಕಟ್ಟಿನ ಸ್ಥಳದಿಂದಾಗಿ ಪ್ರಾಚೀನ ಕಾಲದಲ್ಲಿ ಒಂದು ವಾಣಿಜ್ಯ ನಗರವಾಗಿ ಪರಿವರ್ತನೆಯಾಯಿತು ಎಂಬುದಕ್ಕೆ ಇಲ್ಲಿ ದೊರೆಯುವ ನಾಣ್ಯಗಳು ಸಾಕ್ಷಿಯಾಗಿವೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಸಂಗನಕಲ್ಲು, ತೆಕ್ಕಲಕೋಟೆ, ಕುರುಗೋಡು, ಹಿರೇಬೆಣಕಲ್ಲು, ತಾವರಗೆರೆ, ಹಾಲಸಾಗರ, ಮೊದಲಾದ ನೆಲೆಗಳು ಸಣ್ಣ ಗ್ರಾಮೀಣ ನೆಲೆಗಳಾಗಿದ್ದವು ಎಂಬುದಕ್ಕೆ ಈ ಗ್ರಾಮಗಳು ಹೊಂದಿದ್ದ ಬಾಹ್ಯ ರಚನೆಗಳಿಂದ ಸ್ಪಷ್ಟವಾಗಿ ಗುರುತಿಸಬಹುದು. ಹಳ್ಳಿ ಮತ್ತು ಸಣ್ಣ ಪಟ್ಟಣಗಳಲ್ಲಿ ತಡಿಕೆಮನೆ ಅಥವಾ ಗುಡಿಸಲುಗಳಲ್ಲಿ ಜನ ನೆಲೆಸಿದ್ದುದಾಗಿ ಉತ್ಖನನಗಳಿಂದ ತೋರ್ಪಟ್ಟರೆ, ದೊಡ್ಡ ಪಟ್ಟಣ ಮತ್ತು ನಗರಗಳಲ್ಲಿ ಕಟ್ಟಡಗಳು ಹೆಚ್ಚಿನ ಸಂಖ್ಯೆಯಲ್ಲಿ ಇದ್ದುದಾಗಿ ತಿಳಿದುಬರುತ್ತದೆ.

ಕಟ್ಟಡದ ಮೇಲ್ಛಾವಣಿಗೆ ಹೆಂಚಿನ ಹೊದಿಕೆ ಇದ್ದುದು ಹಲವಾರು ನೆಲೆಗಳಲ್ಲಿ ದೊರಕಿರುವ ಹೆಂಚಿನ ತುಂಡುಗಳಿಂದ ಸ್ಪಷ್ಟವಾಗುತ್ತದೆ. ಈ ಪ್ರದೇಶದಲ್ಲಿ ಮಧ್ಯಮ ಗಾತ್ರದ ಗ್ರಾಮ ನೆಲೆಗಳು ಹೆಚ್ಚಿನ ಪ್ರಮಾಣದಲ್ಲಿ ಇದ್ದುದು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ಈ ನೆಲೆಗಳು ನಗರಕೇಂದ್ರಿತವಾಗಿದ್ದು, ನಗರಗಳ ಬೆಳವಣಿಗೆಗೆ ಕಾರಣವಾಗಿವೆ. ಇವು ನಗರ ಕೇಂದ್ರಗಳಿಗೆ ಅವಶ್ಯಕವಾಗಿದ್ದ ಆಹಾರ ಧಾನ್ಯಗಳನ್ನು ಮತ್ತು ಕಚ್ಚಾ ವಸ್ತುಗಳನ್ನು ಪೂರೈಕೆ ಮಾಡುತ್ತಿದ್ದವು. ಇದರಿಂದ ನಗರಗಳು ಹೆಚ್ಚು ವಿಸ್ತಾರವನ್ನು ಪಡೆಯಲು ಅನುಕೂಲವಾಯಿತು. ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳಿಂದ ಗ್ರಾಮಗಳಲ್ಲಿ ತಯಾರಾದ ವಸ್ತುಗಳು ದೂರದ ಪ್ರದೇಶಗಳಿಗೆ ಪೂರೈಕೆಯಾದವು. ಹೊಸ ಜನಸಮುದಾಯಗಳ ಪರಸ್ಪರ ಪರಿಚಯ ಉಂಟಾಗಿ ವಿನಿಮಯ ಪದ್ಧತಿ ರೂಢಿಗೆ ಬಂದಿತು. ಇದರಿಂದ ಹೊಸ ಹೊಸ ಜ್ಞಾನಪರಂಪರೆಗಳು ಸೃಷ್ಟಿಯಾದವು. ಕ್ರಮೇಣವಾಗಿ ಗ್ರಾಮಗಳು ನಗರಗಳಾಗಿ ಪರಿವರ್ತನೆ ಹೊಂದಲು ಪ್ರಾರಂಭಿಸಿದವು. ಇಂತಹ ಪಟ್ಟಣ ಅಥವಾ ನಗರಗಳ ನಿರ್ಮಾಣಕ್ಕೆ ಹಲವು ಶತಮಾನಗಳು ಬೇಕಾಯಿತು.

### ೭.೪ ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳು

ಆರ್ಥಿಕ ಚಟುವಟಿಕೆಗಳ ಒಂದು ಭಾಗವಾಗಿ ವ್ಯಾಪಾರ–ವಾಣಿಜ್ಯ ವಿಷಯಗಳು ಪರಿಗಣಿಸಲ್ಪಡುತ್ತವೆ. ಕೃಷಿ ಕೈಗಾರಿಕೆ ಕ್ಷೇತ್ರದಲ್ಲಿ ಉತ್ಪಾದಿಸಿದ ವಸ್ತುಗಳನ್ನು ಮಾರಾಟ ಮಾಡುವ ಪ್ರಕ್ರಿಯೆಗಳು ಸಾಮಾನ್ಯವಾಗಿ ವ್ಯಾಪಾರ ವಾಣಿಜ್ಯ ಚಟುವಟಿಕೆಗಳೆಂದೆನಿಸಿಕೊಂಡಿವೆ. ಇವು ದೂರದ ಪ್ರದೇಶಗಳಿಗೆ ಸಂಪರ್ಕ ಕಲ್ಪಿಸುವ ಪ್ರಮುಖ ಮಾರ್ಗಗಳಾಗಿ ರೂಪಿತವಾಗಿವೆ. ಭಾರತದಲ್ಲಿ ಪ್ರಪ್ರಥಮವಾಗಿ ಸಿಂಧೂ ನಾಗರೀಕತೆಯ ನೆಲೆಗಳು ಬೇರೆ ಬೇರೆ ಪ್ರದೇಶಗಳ ಜೊತೆಗೆ ವ್ಯಾಪಾರ–ವಾಣಿಜ್ಯ ಸಂಬಂಧಗಳನ್ನು ಹೊಂದಿದ್ದವೆಂದು ತಿಳಿದುಬರುತ್ತದೆ.[೮೮] ಅಲ್ಲದೇ ಆ ಕಾಲದಲ್ಲಿ ಆಂತರಿಕ ಮತ್ತು ಬಾಹ್ಯ ವ್ಯಾಪಾರ ಚಟುವಟಿಕೆಗಳು ನಡೆಯುತ್ತಿದ್ದವು. ಮುಖ್ಯವಾಗಿ ಕರ್ನಾಟಕದಲ್ಲಿ ನಡೆಯುತ್ತಿದ್ದ ಗಣಿಗಾರಿಕೆಗಳಿಂದ ತಯಾರಾದ ಚಿನ್ನವು ಸಿಂಧೂ ಬಯಲಿನ ನಾಗರೀಕತೆ ನೆಲೆಗಳಿಗೆ ರಫ್ತಾಗುತ್ತಿದ್ದವು. ಗ್ರೀಕ್, ರೋಮನ್ ದೇಶಗಳ ಜೊತೆಗೆ ವ್ಯಾಪಾರ–ವಾಣಿಜ್ಯ ಹೊಂದಿರುವ ಮಾಹಿತಿಗಳಿವೆ. ಅಧ್ಯಯನ ಪ್ರದೇಶ ಹಾಗೂ ನೆರೆಹೊರೆಯ ಜಿಲ್ಲೆಗಳಲ್ಲಿ ದೊರಕಿರುವ ನಾಣ್ಯಗಳು, ಮಡಕೆಗಳಿಂದ ಸ್ಪಷ್ಟವಾಗುತ್ತದೆ. ಅಲ್ಲದೆ, ದೇಶೀಯ ಆಕರಗಳು ವ್ಯಾಪಾರ ಸಂಬಂಧಗಳನ್ನು ಕುರಿತು ಚರ್ಚಿಸುತ್ತವೆ. ಅನಾಮಧೇಯ ಗ್ರಂಥವಾದ 'ಪೆರಿಪ್ಲಸ್ ಆಫ್ ಎರಿತ್ರಿನ್ ಸಿ'ಯಲ್ಲಿ ಉಲ್ಲೇಖಗಳಿವೆ. ಪ್ಲಿನಿಯ 'ದಿ ಜಿಯೋಗ್ರಫಿ', ಮೆಗಸ್ತನಿಸ್‌ನ 'ಇಂಡಿಕಾ' ಕೃತಿಗಳಲ್ಲಿ ಕರ್ನಾಟಕದ ವಿವಿಧ ನೆಲೆಗಳ ಜೊತೆಗಿನ ವ್ಯಾಪಾರ ಸಂಬಂಧಗಳನ್ನು ಕುರಿತು ತಿಳಿಸುವ ಪ್ರಮುಖ ಆಕರಗಳಾಗಿವೆ. ಮೊಟ್ಟಮೊದಲು ಗಂಗಾನದಿ ಬಯಲಲ್ಲಿ ಮೌರ್ಯರ ಕಾಲದ ಕೃಷಿ ವ್ಯಾಪಾರದ ಚಟುವಟಿಕೆಗಳು ರೂಪುಗೊಂಡವು. ಕ್ರಿ.ಪೂ. ೩ನೇ ಶತಮಾನದ ನಗರೀಕರಣ ಪ್ರಕ್ರಿಯೆಯಿಂದ ಭಾರತದಾದ್ಯಂತ ವಿಸ್ತಾರಗೊಳ್ಳಲಾರಂಭಿಸಿತು.

ಕೃಷಿಯಲ್ಲಿ ಉತ್ಪಾದನೆ, ಕರಕುಶಲ ವಸ್ತುಗಳ ತಯಾರಿಕೆ ಹೆಚ್ಚಾದಂತೆಲ್ಲಾ ಅವುಗಳ ಮಾರಾಟ ಕೇಂದ್ರಗಳು ವ್ಯಾಪಾರ ಮತ್ತು ವ್ಯಾಪಾರ ಮಾರ್ಗಗಳು ರೂಪುಗೊಂಡವು. ವ್ಯಾಪಾರದಲ್ಲಿ ಮೊದಲು ವಸ್ತುವಿನಿಮಯ ಪದ್ಧತಿ ರೂಢಿಯಲ್ಲಿತ್ತು. ನಂತರ ವ್ಯಾಪಾರದಲ್ಲಿ ನಾಣ್ಯವನ್ನು ಉಪಯೋಗಿಸುವುದಕ್ಕೆ ಪ್ರಾರಂಭವಾಯಿತು. ಪಟ್ಟಣಗಳಲ್ಲಿ ಕೃಷಿಯೇತರ ಚಟುವಟಿಕೆಗಳು ಬೆಳೆದವು. ವ್ಯಾಪಾರವು 'ಸಾರ್ಥವಾಹ'ನೆಂಬ[೮೧] ಮುಖ್ಯಸ್ಥನ ನೇತೃತ್ವದಲ್ಲಿ ನಡೆಯುತ್ತಿತ್ತು. ಸಾರ್ಥವೆಂದರೆ, ವಸ್ತುಗಳ ಸಹಿತ ಹೊರಗಿನ ಪೇಟೆಗಳೊಂದಿಗೆ ವ್ಯಾಪಾರ ಮಾಡಲು ಹೊರಟ ಗುಂಪು. ಮೌರ್ಯರ ಆಳ್ವಿಕೆಯ ಕಾಲದಲ್ಲಿ ವ್ಯಾಪಾರವು ಹೆಚ್ಚು ವಿಸ್ತಾರಗೊಂಡು ಬೌದ್ಧ ಸಾಹಿತ್ಯದಲ್ಲಿ ಉತ್ತರ ಮತ್ತು ದಕ್ಷಿಣ ಪಥ ಎಂಬ ವ್ಯಾಪಾರ ಮಾರ್ಗಗಳು ಧರ್ಮ ಪ್ರಚಾರ ಮತ್ತು ವ್ಯಾಪಾರದ ಉದ್ದೇಶಕ್ಕಾಗಿ ರಚನೆಯಾದವು. ಈ ಅವಧಿಯಲ್ಲಿ ಕರ್ನಾಟಕವು ಉತ್ತರ ಭಾರತದೊಂದಿಗೆ ವ್ಯಾಪಾರ ಸಂಬಂಧವನ್ನು ಬೆಳೆಸಿತು. ಇದರಿಂದ ಹಲವಾರು ಪೇಟೆ ಪಟ್ಟಣಗಳು ಅಸ್ತಿತ್ವಕ್ಕೆ ಬರಲಾರಂಭಿಸಿದವು. ಸನ್ನತಿ, ಕೊಪ್ಪಳ, ಬ್ರಹ್ಮಗಿರಿ, ಚಂದ್ರವಳ್ಳಿ, ಬನವಾಸಿ ವಡಗಾಂವ್-ಮಾಧವಪುರಗಳು, ಹಂಪಿ ಆರಂಭಿಕ ನಗರಗಳಾಗಿದ್ದವು. ನಾಣ್ಯ ಚಲಾವಣೆ ವಿನಿಮಯಕ್ಕೆ ಸಹಕಾರಿಯಾಗಿದ್ದು ವ್ಯಾಪಾರ ಚಟುವಟಿಕೆಯಲ್ಲಿ ಗಣನೀಯ ವ್ಯತ್ಯಾಸಕ್ಕೆ ನಾಂದಿಯಾಯಿತು. ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ಮತ್ತು ತಾಮ್ರದ ಅಚ್ಚಿನ ನಾಣ್ಯಗಳು ಸಹ ಹಣದ ರೂಪದಲ್ಲಿ ವಿನಿಮಯವಾದವು.

ಬನವಾಸಿ, ಬ್ರಹ್ಮಗಿರಿ, ಚಂದ್ರವಳ್ಳಿ, ತೆಕ್ಕಲಕೋಟೆ, ಚಿಕ್ಕಸಿಂಧಗಿ, ಮಸ್ಕಿ, ವಡಗಾಂವ್-ಮಾಧವಪುರ, ಸನ್ನತಿ ಮೊದಲಾದ ಸ್ಥಳಗಳಲ್ಲಿ ಮುದ್ರಾಂಕಿತ ನಾಣ್ಯಗಳು ದೊರಕಿದ್ದು ವ್ಯಾಪಾರದ ಮಹತ್ವವನ್ನು ತಿಳಿಸುತ್ತವೆ. ಅಧ್ಯಯನ ಪ್ರದೇಶದಲ್ಲಿರುವ ಚಿಕ್ಕಸಿದೋಗಿ, ತೆಕ್ಕಲಕೋಟೆ ಎಂಬ ಹೆಸರಿನ ಎರಡು ನೆಲೆಗಳಲ್ಲಿ ಮಾತ್ರ ಮುದ್ರಾಂಕಿತ ನಾಣ್ಯಗಳು ದೊರೆತಿವೆ. ಚಿಕ್ಕಸಿಂದೋಗಿಯಲ್ಲಿ ದೊರೆತಿರುವ ಮುದ್ರಾಂಕಿತ ನಾಣ್ಯಗಳು ಭಾರತೀಯ ನಾಣ್ಯಶಾಸ್ತ್ರದಲ್ಲಿಯೇ ಒಂದು ಮೈಲುಗಲ್ಲು ಎಂಬುದಾಗಿ ವರದಿಯಾಗಿವೆ.[೮೨] ಚಿಕ್ಕಸಿಂದೋಗಿಯಲ್ಲಿ ದೊರೆತ ೧೬.೯೯ ಕೆ.ಜಿ.ಯಷ್ಟು ತೂಗುವ ನಾಣ್ಯಗಳು ತಾಮ್ರದ ಚಂಬಿನಲ್ಲಿದ್ದು ಅದರ ಮೇಲೆ 'ಚಿಂತಸ' ಎಂಬ ಬ್ರಾಹ್ಮಿಲಿಪಿ ಇರುವುದು ವಿಶೇಷ. ಈ ಲಿಪಿಯು ೨ ಅಥವಾ ೩ನೇ ಶತಮಾನದ ಮೌರ್ಯರ ಲಿಪಿಯನ್ನು ಹೋಲುತ್ತದೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. 'ಚಿಂತಸ' ಎಂದರೆ, ಚಂತನಿಗೆ ಸೇರಿದ್ದು ಎಂದಾಗುತ್ತದೆ.[೮೩] ಅಜಯಮಿತ್ರ ಶಾಸ್ತ್ರಿಯವರು ಚಂತ ಅಥವಾ ಶಂತ ಇರಬೇಕೆಂದು ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ. ಇಷ್ಟು ನಾಣ್ಯಗಳು ಚಂತನು ನನಗೆ ಸೇರಿದ್ದು ಎಂದು ಹೇಳಿಕೊಳ್ಳಬೇಕಾದರೆ ಪ್ರಾಯಶಃ ಆತನು ಚಿಕ್ಕಸಿಂದೋಗಿ ಪ್ರಾಂತ್ಯದ ಅರಸ ಅಥವಾ ಸಾಮಂತ ರಾಜನಿರಬೇಕೆಂದು ವಿದ್ವಾಂಸರು ಸಂಶಯ ವ್ಯಕ್ತಪಡಿಸಿದ್ದಾರೆ. ಇತ್ತೀಚೆಗೆ ನಮಿತ ಸಂಜಯ್ ಸುಂಗಧಿಯವರು ತೆಕ್ಕಲಕೋಟೆ ನೆಲೆಯಲ್ಲಿ ಒಂದು ಮುದ್ರಾಂಕಿತ ನಾಣ್ಯವನ್ನು ಶೋಧಿಸಿದ್ದಾರೆ. ಈ ಮುದ್ರಾಂಕಿತ ನಾಣ್ಯಗಳು ನಾಡಿನಾದ್ಯಂತ ದೊರಕಿದ್ದರೂ ಅವುಗಳ ಮೇಲೆ ಕೇವಲ ಗುರುತುಗಳಿರುವುದರಿಂದ ಅವುಗಳನ್ನು ಯಾರು ಜಾರಿ ಮಾಡಿದರೆಂಬುದು ಮತ್ತು

ಅವುಗಳನ್ನು ಇಲ್ಲಿಯೇ ಟಂಕಿಸಲಾಗುತ್ತಿತ್ತೋ ಇಲ್ಲವೆ ಹೊರಗಿನಿಂದ ತರಿಸಿಕೊಳ್ಳಲಾಗುತ್ತಿತ್ತೋ ಎನ್ನುವುದು ಇನ್ನು ಪ್ರಶ್ನೆಯಾಗಿ ಉಳಿದಿದೆ. ಮೌರ್ಯರ ಆಳ್ವಿಕೆಗೆ ಒಳಪಟ್ಟ ನಗರಗಳಲ್ಲಿ ವ್ಯಾಪಾರ-ವಾಣಿಜ್ಯ ವಿನಿಮಯ ಸಾಧನವಾಗಿದ್ದ ನಾಣ್ಯಗಳು ಚಲಾವಣೆಯಲ್ಲಿದ್ದವೆಂಬುದು ಸ್ಪಷ್ಟವಾಗಿದೆ. ಕ್ರಿ.ಪೂ.ದಲ್ಲಿಯೇ ಕರ್ನಾಟಕದಲ್ಲಿ ಲೋಹ ರಚನಾಶಾಸ್ತ್ರದ ತಂತ್ರ ಬೆಳೆದುಕೊಂಡು ಬಂದಿತ್ತು. ಆದುದ್ದರಿಂದ ಇಲ್ಲಿ ದೊರೆತ ನಾಣ್ಯಗಳು ಇಲ್ಲಿಯೇ ಟಂಕಿಸಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[೮೪]

ಮೌರ್ಯ ಸಾಮ್ರಾಜ್ಯವು ವ್ಯಾಪಾರಸ್ಥರಿಗೆ ರಾಜಕೀಯ ಶಕ್ತಿಯನ್ನು ನೀಡಿದ್ದರೆ, ಅಂದಿನ ಕಾಲದಲ್ಲಿ ರಾಜ್ಯ ಧರ್ಮವಾಗಿದ್ದ ಬೌದ್ಧ ಧರ್ಮದ ಪ್ರಸಾರವು ಹೊಸ ಭೂ ಭಾಗಗಳಿಗೆ ಪಸರಿಸುವಂತೆ ಮಾಡಿತು. ಧರ್ಮ ಪ್ರಸಾರದ ಮೂಲಕವು ರಾಜ್ಯ ವಿಸ್ತರಣೆ ಮಾಡುವ ತಂತ್ರವಾಗಿತ್ತು. ಅದು ವ್ಯಾಪಾರಸ್ಥರನ್ನು ಹೊರ ದೇಶಗಳೊಂದಿಗೆ ಸಂಪರ್ಕ ಸಾಧಿಸಲು ಕೊಂಡಿಯಾಯಿತು. ಮೆಗಾಸ್ಥನೀಸ್‌ನು ತನ್ನ ಕಥನದಲ್ಲಿ ಮೌರ್ಯ ಕಾಲಾವಧಿಯಲ್ಲಿ ವ್ಯಾಪಾರಸ್ಥರು ಅದರಲ್ಲೂ ವಿದೇಶಿ ವ್ಯಾಪಾರಸ್ಥರ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳಲು ಒಂದು ಇಲಾಖೆ ಇತ್ತೆಂದು ತಿಳಿಸಿದ್ದಾನೆ. ಬೌದ್ಧ ಸಾಹಿತ್ಯದಲ್ಲೂ ಸಹ ಈ ಬಗ್ಗೆ ಮಾಹಿತಿಯಿದೆ. ಇದರಿಂದ ತಿಳಿಯುವುದೇನೆಂದರೆ ಮೌರ್ಯ ಪೂರ್ವದಲ್ಲಿಯೇ ಉತ್ತರ ಭಾರತ ಮತ್ತು ದಕ್ಷಿಣ ಭಾರತಗಳು ಪರಸ್ಪರ ಸಂಬಂಧ ಹೊಂದಿದ್ದವು ಎಂಬುದು ಗಮನಾರ್ಹ ಸಂಗತಿಯಾಗಿದೆ. ದಕ್ಷಿಣಪಥವೆಂದರೆ ದಕ್ಷಿಣದತ್ತ ಸಾಗುವ ವಾಣಿಜ್ಯ ಮಾರ್ಗ. ಇದು ದಕ್ಷಿಣದ ರಾಜ್ಯಗಳನ್ನು ತಲುಪುತ್ತಿತ್ತು. ಮೋತೀಚಂದ್ರ ಅವರ 'ಸಾರ್ಥವಾಹ' (ಪ್ರಾಚೀನ ಪಥ ಪದ್ಧತಿ) ಎನ್ನುವ ಕೃತಿಯಲ್ಲಿ ಈ ಮಾರ್ಗಗಳ ಉಲ್ಲೇಖವಿದೆ. ಉಜ್ಜೈನಿಯಿಂದ ಮಹಾರಾಷ್ಟ್ರ, ವಿದರ್ಭ ಪ್ರದೇಶದಿಂದ ಆಂಧ್ರಪ್ರದೇಶ ಹಾಗೂ ರಾಯಚೂರು, ಕೊಪ್ಪಳ, ಬಳ್ಳಾರಿ, ಚಿತ್ರದುರ್ಗಗಳನ್ನು ಒಳಗೊಂಡ ಕರ್ನಾಟಕ ಪ್ರದೇಶವಾಗಿತ್ತು ಇಂತಹ ಪ್ರದೇಶದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಕುರುಹುಗಳು ದೊರಕಿದ್ದು ಅವು ಆಯಕಟ್ಟಿನ ಸ್ಥಳಗಳಾಗಿದ್ದವು.

ಬೌದ್ಧ ಸನ್ಯಾಸಿಗಳು ಸಂಚರಿಸುತ್ತಿದ್ದ ಈ ಕಣಿವೆ ಮಾರ್ಗಗಳು ಉತ್ತಮ ಸ್ಥಿತಿಯಲ್ಲಿದ್ದು ವ್ಯಾಪಾರ ವಹಿವಾಟು ಮತ್ತು ಸಂಪರ್ಕ ಏರ್ಪಡಿಸುವುದಕ್ಕೆ ಸಹಕಾರಿಯಾದವು ಎಂಬ ವಿವರಗಳು ರೊಮಿಲಾ ಥಾಪರ್ ಅವರು ತಮ್ಮ 'ಅಶೋಕ ಅಂಡ್ ದಿ ಡಿಕ್ಲೈನ್ ಆಫ್ ಮೌರ್ಯಸ್' ಎನ್ನುವ ಕೃತಿಯಲ್ಲಿ ಹೇಳಿದ್ದಾರೆ. ಅದೇ ರೀತಿ ಆರ್.ಎಸ್.ಶರ್ಮಾ, ಎನ್. ಲಾಹಿರಿ, ಡಿ.ಡಿ. ಕೋಸಂಬಿ, ಅ.ಸುಂದರ, ತಾಳ್ತಜೆ ವಸಂತಕುಮಾರ್ ಮೊದಲಾದವರು ಮೌರ್ಯ ಕಾಲದಲ್ಲಿದ್ದ ವಾಣಿಜ್ಯ ಮಾರ್ಗಗಳು ಮತ್ತು ಅವುಗಳಲ್ಲಿ ನಡೆಯುತ್ತಿದ್ದ ವ್ಯಾಪಾರ ಚಟುವಟಿಕೆಗಳನ್ನು ಕುರಿತು ಚರ್ಚಿಸಿದ್ದಾರೆ.[೮೫] ಈ ವ್ಯಾಪಾರಿ ಮಾರ್ಗದಲ್ಲಿ ಪ್ರಶಸ್ತ ಮತ್ತು ಅರೆ ಪ್ರಶಸ್ತ ಕಲ್ಲಿನ ಮಣಿಗಳು, ಕಾರ್ನೇಲಿಯ, ಜಾಸ್ಪರ್, ಲ್ಯಾಪೀಸ್‌ಲಜೂಲಿ (ವೈಡೂರ್ಯ), ಚಾಲ್ಸೆಡೋನಿ, ಅಗೇಟ್, ಹವಳ, ಸ್ಪಟಿಕದಂತಹ ಮುತ್ತು ರತ್ನಗಳು ಸಮುದ್ರದ ಚಿಪ್ಪಿನಿಂದ ತಯಾರಿಸಿದ ವಸ್ತುಗಳು ಬಂಗಾರದ ಆಭರಣಗಳನ್ನೊಳಗೊಂಡಂತೆ ಮೊದಲಾದ ವಸ್ತುಗಳು ವ್ಯಾಪಾರದಲ್ಲಿ ಮಾರಾಟವಾಗುತ್ತಿದ್ದ ವಸ್ತುಗಳಾಗಿದ್ದವು. ಈ ಕಾರಣಕ್ಕಾಗಿಯೇ ಮೌರ್ಯರು

ದಕ್ಷಿಣ ಭಾರತದೊಂದಿಗೆ ಸಂಪರ್ಕ ಹೊಂದಿದ್ದರು ಎಂದು ಹೇಳಬಹುದು. ಮೌರ್ಯರು ದಕ್ಷಿಣ ಭಾರತದೊಂದಿಗೆ ಗಣಿ ಸಂಬಂಧವಾದ ಸಂಪರ್ಕ ಹೊಂದಿದ್ದರು. ಕೋಲಾರ ಮತ್ತು ಹಟ್ಟಿ ಚಿನ್ನದ ಗಣಿಗಳಲ್ಲಿ ಕ್ರಿಪೂ. ೩ನೇ ಶತಮಾನದಲ್ಲಿ ಗಣಿಗಾರಿಕೆ ನಡೆಯುತ್ತಿತ್ತು. ಇಲ್ಲಿಂದ ಚಿನ್ನವನ್ನು ವ್ಯಾಪಾರಸ್ಥರು ಸಾಗಿಸುತ್ತಿದ್ದರು. ದ್ರಾವಿಡ ಅರಸು ಮನೆತನಗಳಾದ ಚೋಳ, ಚೇರ, ಪಾಂಡ್ಯರು ಚಿನ್ನವನ್ನು ಕೋಲಾರದಿಂದ ಪಡೆದುಕೊಳ್ಳುತ್ತಿದ್ದರು ಹಾಗೂ ಹಟ್ಟಿಯಲ್ಲಿ ತೆಗೆದ ಬಂಗಾರವು ಪಾಟಲಿಪುತ್ರಕ್ಕೆ ರವಾನೆಯಾಗುತ್ತಿತ್ತೆಂಬ ವಿವರಗಳು ದಾಖಲಾಗಿವೆ. ಐತಿಹಾಸಿಕ ಕಾಲದಲ್ಲಿ ನಮಗೆ ಕಾಣಸಿಗುವ ವ್ಯಾಪಾರ ಮಾರ್ಗಗಳ ಪೂರ್ವ ರೂಪಗಳು ಇತಿಹಾಸ ಪೂರ್ವ ಕಾಲದಲ್ಲಿಯೇ ಸಾಕಷ್ಟು ವಿಕಾಸ ಪಡೆದುಕೊಳ್ಳತೊಡಗಿದ್ದವು ಎಂದು ನಿಸ್ಸಂಶಯವಾಗಿ ಹೇಳಬಹುದು. ಬೃಹತ್ ಶಿಲಾಯುಗದಲ್ಲಿ ಬಳಕೆಯಲ್ಲಿದ್ದ ಲ್ಯಾಪೀಸ್ ಲಜೂಲಿ, ಕಾರ್ನೇಲಿಯನ್ ತಾಮ್ರ, ಕಬ್ಬಿಣ ಮತ್ತು ಉಡುಗೆ ತೊಡುಗೆಗಳು ವಿನಿಮಯ, ಸರಬರಾಜಿಗೆ ವ್ಯಾಪಾರ ಮಾರ್ಗಗಳು ಅನಿವಾರ್ಯವಾಗಿದ್ದವು. ಹಲವು ಕೇಂದ್ರಗಳು ಈ ಮಾರ್ಗಗಳ ನಡುವಿನ ತಂಗುದಾಣಗಳಾಗಿ ಹುಟ್ಟಿ ಮುಂದೆ ನಗರಗಳಾಗಿ ಬೆಳೆದುಬಂದವು.[೮]

**ಬಾಹ್ಯ ವ್ಯಾಪಾರ**

ಆದಿ ಇತಿಹಾಸ ಕಾಲದಲ್ಲಿ ಗ್ರೀಕ್, ರೋಮನ್‌ರೊಂದಿಗೆ ಬಾಹ್ಯ ವ್ಯಾಪಾರ ಚಟುವಟಿಕೆಗಳು ನಡೆಯುತ್ತಿದ್ದವು. ಇದಕ್ಕೆ ಸಾಕ್ಷಿಯಾಗಿ ಪುರಾತತ್ವ ಆಕರಗಳು ಮಾಹಿತಿ ನೀಡುತ್ತವೆ. ವಿದೇಶಿ ವ್ಯಾಪಾರಸ್ಥರು ಭಾರತೀಯ ವ್ಯಾಪಾರಸ್ಥರಿಗೆ ವಿದೇಶಿ ನೆಲೆಗಳನ್ನು ಪರಿಚಯಿಸುವಲ್ಲಿ ಮತ್ತು ಹೊಸ ಆಂತರಿಕ ನೆಲೆಗಳನ್ನು ಪತ್ತೆಹಚ್ಚುವಲ್ಲಿ ನೆರವಾದರು. ಶಾತವಾಹನರ ಕಾಲದಲ್ಲಿ ವಿದೇಶಿ ವ್ಯಾಪಾರಿ ಸಂಸ್ಥೆಗಳು ಮತ್ತು ಸ್ವದೇಶಿ ವ್ಯಾಪಾರ ಸಂಸ್ಥೆಗಳು ಪರಸ್ಪರ ಉತ್ತಮ ಬಾಂಧವ್ಯ ಹೊಂದಿದ್ದವು. ವ್ಯಾಪಾರಸ್ಥರು ಸ್ವತಂತ್ರವಾಗಿ ವ್ಯಾಪಾರ ವಿನಿಮಯ ಮಾಡುತ್ತಿದ್ದರು ಎಂಬುದಾಗಿ ಊಹಿಸಬಹುದು. ರೋಮನ್ನರು ಸಮುದ್ರ ವ್ಯಾಪಾರದ ಮೂಲಕ ದಕ್ಷಿಣ ಭಾರತದೊಂದಿಗೆ ಸಂಬಂಧ ಬೆಳೆಸಿದ್ದರು. ಸಮುದ್ರದ ವ್ಯಾಪಾರವು ಹೆಚ್ಚು ಲಾಭದಾಯಕವಾಗಿದ್ದರಿಂದ ವಿದೇಶಿ ವ್ಯಾಪಾರಸ್ಥರು ಅದರ ಮೂಲಕ ವ್ಯಾಪಾರಿ ಮಾರ್ಗಗಳನ್ನು ಕಂಡುಕೊಂಡಿದ್ದರು. ರೋಮನ್ನರಿಗೆ ಇಲ್ಲಿಯ ಸರಕುಗಳಲ್ಲಿ ಮೆಣಸು, ಶ್ರೀಗಂಧದ ಕಟ್ಟಿಗೆ, ಮತ್ತು ಬೆರಿಲ್ ರತ್ನಗಳಿಗೆ ಮಹತ್ವ ಕೊಡುತ್ತಿದ್ದರು. ಮಲೆನಾಡು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಇಂಥ ವಸ್ತುಗಳು ದೊಡ್ಡ ಪ್ರಮಾಣದಲ್ಲಿ ದೊರೆಯುತ್ತಿದ್ದವು. ಬೆರಿಲ್ ರತ್ನಗಳು ಕರ್ನಾಟಕದ ಬಹುತೇಕ ನೆಲೆಗಳಲ್ಲಿ ದೊರೆಯುತ್ತಿತ್ತು. ಆದ್ದರಿಂದ ದಕ್ಷಿಣ ಭಾರತದೊಂದಿಗೆ ಕರ್ನಾಟಕದಲ್ಲಿಯೂ ತಮ್ಮ ವ್ಯಾಪಾರ ಸಂಸ್ಥೆಗಳನ್ನು ಹೊಂದಿದ್ದರು ಎಂಬುದಕ್ಕೆ ಸಾಕ್ಷಿಯಾಗಿ ವಿದೇಶಿ ಪ್ರವಾಸಿಗರ ಮತ್ತು ವರ್ತಕರ ಬರಹಗಳು ಅಂತಹ ನೆಲೆಗಳಲ್ಲಿ ರೋಮನ್ನರ ಕಾಲದ ಮಡಕೆಗಳು ಹಾಗೂ ಇತರೆ ಪ್ರಾಕ್ತನ ವಸ್ತುಗಳು ಹೇರಳ ಪ್ರಮಾಣದಲ್ಲಿ ಸಾಕ್ಷಿಗಳಾಗಿ ನಿಂತಿವೆ. ಪ್ರಾರಂಭದಲ್ಲಿ ವಿದೇಶಿಯರಿಗೆ ಭಾರತದ ಭೌಗೋಳಿಕ ಲಕ್ಷಣದ ಬಗ್ಗೆ ಸ್ಪಷ್ಟ ಚಿತ್ರಣ ತಿಳಿದಿರಲಿಲ್ಲ. ಅವರು ಕರಾವಳಿ ಪ್ರದೇಶವನ್ನು 'ಮಲಬಾರ್' ಎಂದು ತಿಳಿದಿದ್ದರು.

ರೋಮನ್ ವಾಣಿಜ್ಯ ಸಂಪರ್ಕದ ಬಗ್ಗೆ ತಿಳಿಸುವ ಪ್ರವಾಸ ಕಥನಗಳಲ್ಲಿ 'ಪೆರಿಪ್ಲಸ್ ಆಫ್ ಎರಿತ್ರಿಯನ್ ಸೀ' ಮಹತ್ವದ ಕೃತಿಯಾಗಿದೆ.[೮೭] ಇದು ದಕ್ಷಿಣ ಭಾರತ ಹಾಗೂ ಕರ್ನಾಟಕದ ಭೌಗೋಳಿಕ, ವಾಣಿಜ್ಯ ಸಂಗತಿಗಳನ್ನು ಸ್ವವಿವರವಾಗಿ ತಿಳಿಸುವ ಪ್ರಪ್ರಥಮ ಕೃತಿಯಾಗಿದೆ. ಇದರಲ್ಲಿ ದಖನ್ ಪ್ರಸ್ಥಭೂಮಿ ಪ್ರದೇಶವನ್ನು 'ದಖನ್ ಬದಸ್' ಎಂದು ಕರೆಯಲಾಗಿದ್ದು ಈ ಭಾಗದಲ್ಲಿ ಶಾತವಾಹನರು ಆಳ್ವಿಕೆ ಮಾಡುತ್ತಿದ್ದರು. ಇವರ ಆಳ್ವಿಕೆ ಉತ್ತರದಲ್ಲಿ ನರ್ಮದಾ ನದಿಯಿಂದ ಹಿಡಿದು ದಕ್ಷಿಣದ ತುಂಗಭದ್ರ ನದಿಯಾಚೆಗಿನವರೆಗೆ ವಿಸ್ತರಿಸಿತ್ತು. ಪೂರ್ವ ಪಶ್ಚಿಮವಾಗಿ ಸಮುದ್ರಗಳೇ ಮೇರೆಗಳಾಗಿದ್ದವು ಇವರ ರಾಜಧಾನಿ ಗೋದಾವರಿ ನದಿ ತೀರದ ಪ್ರತಿಷ್ಠಾನವಾಗಿತ್ತು. ಕ್ರಿ.ಶ. ಸು. ೬೦ರಲ್ಲಿ ರಚನೆಯಾಗಿರುವ 'ಪೆರಿಪ್ಲಸ್ ಆಫ್ ಎರಿತ್ರಿಯನ್ ಸೀ' ಕೃತಿಯ ಲೇಖಕ ಯಾರೆಂಬುದು ತಿಳಿದುಬಂದಿಲ್ಲ. ಆದ್ದರಿಂದ ಇದನ್ನು ಅನಾಮಧೇಯನ್ನೊಬ್ಬ ರಚಿಸಿದ ಕೃತಿ ಎಂದೇ ಭಾವಿಸಲಾಗಿದೆ. ಮುಖ್ಯವಾಗಿ ಈ ಕೃತಿಯಲ್ಲಿ ಕೆಲವು ಬಂದರುಗಳು ಹಾಗೂ ಒಳನಾಡು ಪಟ್ಟಣಗಳ ಬಗ್ಗೆ ಉಲ್ಲೇಖಿಸುತ್ತದೆ. ಅವುಗಳಲ್ಲಿ ತಗರ, ಕಲೀಣ(ಕಲ್ಯಾಣ), ಬೈಜಂಟೀಯಂ(ವೈಜಯಂತಿ), ಸುಪ್ಪಾರ(ಸೋಪಾರ), ಮಂಡಗೋರ(ಮಂಗಳೂರು), ಸೀನತಿ(ಕಾರವಾರದ ಎದುರಿಗಿರುವ ದ್ವೀಪಗಳು) ಮೊದಲಾದವು.[೮೮] 'ಬೈಜಟಿಯಂ' ಎಂಬ ಹೆಸರು ಈಗಿನ ವಿಜಯದುರ್ಗಕ್ಕೆ ಸಂಬಂಧಿಸಿದ ಸ್ಥಳವೆಂದು ಅದು ರೋಮನ್ ನೆಲಸುವ ಸ್ಥಳವೆಂದು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ಆದರೆ ಬನವಾಸಿಗೆ 'ವೈಜಯಂತಿ' ಎಂಬ ಹೆಸರಿದ್ದು ಅದನ್ನೇ 'ಬೈಜಟಿಯಂ' ಎಂದು ಪ್ರವಾಸಿಗರು ಕರೆದಿರುವ ಸಾಧ್ಯತೆಯಿದೆ. ಮೇಲ್ಕಂಡ ಬಂದರುಗಳು ಮಹಾರಾಷ್ಟ್ರದ ರಾಜ್ಯದಲ್ಲಿವೆ.[೮೯] ಟಾಲೆಮಿಯು ತನ್ನ ಕಥನಗಳಲ್ಲಿ ಕೆಲವು ಉಪಯುಕ್ತ ಮಾಹಿತಿಗಳನ್ನು ದಾಖಲಿಸಿದ್ದಾನೆ. ಕ್ರಿ.ಶ.೨ನೆಯ ಶತಮಾನದಲ್ಲಿ ಕರ್ನಾಟಕದಲ್ಲಿದ್ದ ವಾಣಿಜ್ಯ ನಗರಗಳ ಬಗ್ಗೆ ಮಾಹಿತಿ ನೀಡಿದ್ದಾನೆ. ಕ್ರಿ.ಶ. ೨ನೆಯ ಶತಮಾನದಲ್ಲಿ ರೋಮನ್ ವಾಣಿಜ್ಯ ವ್ಯಾಪಾರವು ತೀವ್ರವಾಗಿ ನಡೆಯುತ್ತಿದ್ದ ಕಾಲವಾಗಿತ್ತು. ಆಗ ಕರ್ನಾಟಕದ ಬಗ್ಗೆ ರೋಮನ್ ಪ್ರವಾಸಿಗಳಿಗೆ ಹೆಚ್ಚು ಪರಿಚಿತವಾಯಿತು. ಇದು ಈ ಪ್ರದೇಶದಲ್ಲಿದ್ದ ವ್ಯಾಪಾರ ವಾಣಿಜ್ಯ ಮಹತ್ವವನ್ನು ಸೂಚಿಸುತ್ತದೆ. ಟಾಲೆಮಿಯು ಕ್ರಿ.ಶ. ೨ನೇ ಶತಮಾನದ ಉತ್ತರಾರ್ಧದಲ್ಲಿ ಕರ್ನಾಟಕದ ಒಳನಾಡಿನ ಸ್ಥಳಗಳನ್ನು ಗುರುತಿಸಿರುವುದು ಗಮನಾರ್ಹ. ಭೀಮಾ ನದಿ ಮತ್ತು ಬನವಾಸಿಯ ನಡುವಿನ ಒಳನಾಡಿನ ಗ್ರಾಮಗಳನ್ನು ತಿಳಿಸುವಾಗ ನಗರೂರು(ನಾಗೂರು), ತಬಸೊ(ತಾವಸಿ), ಇಂಡೇ(ಇಂಡಿ), ತಿರಿಪಂಗಲಿದ(ಡಗಹಿಂಗ್ಲಜ–ಕೊಲ್ಲಾಪುರ), ಡಿಪ್ಪೊಕೂರ(ಹೂವಿನ ಹಿಪ್ಪರಗಿ), ಸಬಡ(ಸವಡಿ–ಧಾರವಾಡ), ಸಿರಿಮಲಗಿ(ಚಿಮ್ಮಲಗಿ), ನಿರ್ಮಲಿಗೆ(ಬಿಜಾಪುರ), ಕಲ್ಲಿಗೇರಿಸ್(ಕನಕಗಿರಿ), ಮೊದೂಗೊಲ್ಲ(ಮುದ್ಗಲ್–ರಾಯಚೂರು), ಪೆತಿರ್ಗಾರು(ಹತ್ತಿರ್ಕಹಾಳ–ಬಿಜಾಪುರ ಜಿಲ್ಲೆ) ರಂ.ಶ್ರೀ ಮುಗಳಿಯವರು ಪೆತಿರ್ಗಾರು ಎಂಬುದು ಪಟ್ಟದಕಲ್ಲೊಂದು ಗುರುತಿಸಿದ್ದಾರೆ.[೯೦] ಅಧ್ಯಯನ ಪ್ರದೇಶದಲ್ಲಿರುವ ಕನಕಗಿರಿಯು ಕ್ರಿ.ಶ.೨ನೇ ಶತಮಾನದಲ್ಲಿಯೇ ಒಳನಾಡಿನ ಸ್ಥಳವಾಗಿತ್ತೆಂದು ತೋರುತ್ತದೆ. ಹೀಗೆ ಶಾತವಾಹನರ ಕಾಲದಲ್ಲಿ ರೋಮನ್ ವ್ಯಾಪಾರವು ವೇಗವಾಗಿ ನಡೆಯುತ್ತಿತ್ತು ಎಂಬುದು ಮೇಲಿನ ವಿವರಗಳಿಂದ ತಿಳಿಯುತ್ತದೆ.

ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಯ ನೆರೆಹೊರೆಯ ಜಿಲ್ಲೆಗಳಲ್ಲಿ ದೊರೆತ ರೋಮನ್ ನಾಣ್ಯಗಳು ಅಂದಿನ ವ್ಯಾಪಾರ ಸಂಪರ್ಕದ ಬಗ್ಗೆ ವಿಫುಲವಾದ ಮಾಹಿತಿಯನ್ನು ನೀಡುತ್ತವೆ. ಈ ನಾಣ್ಯಗಳು ನಗರ ಅರ್ಥವ್ಯವಸ್ಥೆ ಸ್ವರೂಪದ ಅಧ್ಯಯನಕ್ಕೂ ಸಹಕಾರಿಯಾಗಿವೆ.

ಉತ್ತರ ಕರ್ನಾಟಕದಲ್ಲಿ ಶಾತವಾಹನರ ಕಾಲದ ಬಹಳಷ್ಟು ನಾಣ್ಯಗಳು ದೊರೆತಿವೆ. ಅವುಗಳ ಜೊತೆ ರೋಮನ್ ನಾಣ್ಯಗಳು ದೊರೆತಿರುವುದು ಗಮನಾರ್ಹ. ರೋಮ್‌ನೊಂದಿಗೆ ನಡೆಯುತ್ತಿದ್ದ ವ್ಯಾಪಾರ–ವಾಣಿಜ್ಯದ ಮೂಲಕ ರೋಮನ್ ನಾಣ್ಯಗಳು ಕರ್ನಾಟಕಕ್ಕೆ ಪ್ರವೇಶಿಸಿವೆ ಎಂದು ಊಹಿಸಬಹುದು. ಕರ್ನಾಟಕದ ಹಲವು ನೆಲೆಗಳ ಉತ್ಖನನದಲ್ಲಿ ರೋಮನ್ನರ ಮಣ್ಪಾತ್ರೆಗಳು, ನಾಣ್ಯಗಳು, ಇತರೆ ವಸ್ತುಗಳು ಲಭ್ಯವಾಗಿವೆ. ಅವುಗಳಲ್ಲಿ ಬೆಂಗಳೂರು ಸಮೀಪದ 'ಯಶವಂತಪುರ,' ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ, ಧಾರವಾಡ ಜಿಲ್ಲೆಯ 'ಅಕ್ಕಿ ಆಲೂರು' ಪ್ರಮುಖವಾದವು. ಇಲ್ಲಿ ದೊರೆತ ನಾಣ್ಯಗಳು ಆಗಸ್ಟಸ್ (ಕ್ರಿ.ಪೂ. ೨೯– ಕ್ರಿ.ಶ. ೧೪) ಆಂಟನಿಯನ್ ಪಯದ್, ಥಿಯೋಡೊಸಿಸ್, ಮಾರಿಯನ್ಸ್, ಲಿಯೋ, ಜಿನೋ, ಆಗಸ್ಟಸಿಯಸ್ ಹಾಗೂ ಮೊದಲನೇ ಜಸ್ಟಿನಸ್ ಚಕ್ರವರ್ತಿಗಳ ಕಾಲದವು ಒಂದು ಬದಿಯಲ್ಲಿ ಚಕ್ರವರ್ತಿ ಮತ್ತೊಂದು ಬದಿಯಲ್ಲಿ ಟಂಕಸಾಲೆಗಳ ಹೆಸರುಗಳಿವೆ.[೧] ಹೀಗೆ ಶಾತವಾಹನರ ಆಳ್ವಿಕೆಯಲ್ಲಿ ಕರ್ನಾಟಕದಲ್ಲಿ ರೋಮನ್ ವ್ಯಾಪಾರ ತೀವ್ರವಾಗಿತ್ತು ಎಂಬ ಸಂಗತಿ ದೃಢವಾಗುತ್ತದೆ. ಹೀಗೆ ಕೃಷಿ ಚಟುವಟಿಕೆಗಳು, ಜನಸಂಖ್ಯೆ ಹೆಚ್ಚಳ, ಕರಕುಶಲತೆ ವೈವಿಧ್ಯತೆ, ವಿನಿಮಯ ಪದ್ಧತಿ, ಸಾಮಾಜಿಕ ಅಂತರ, ರಾಜಕೀಯ ಪ್ರಭಾವ, ನಗರೀಕರಣ, ಲಿಪಿಯ ಬಳಕೆ, ಉತ್ತರ ಭಾರತ ಹಾಗೂ ರೋಮನ್ನರ ಪ್ರಭಾವ, ನಾಣ್ಯಗಳ ಉಪಯೋಗದಿಂದ ವ್ಯಾಪಾರ–ವಾಣಿಜ್ಯ ಸಂಬಂಧಗಳು ವೃದ್ಧಿಯಾಗಿ ವ್ಯಾಪಾರ ಸಂಘಗಳು ಬೆಳವಣಿಗೆಯಾದವು. ಬೌದ್ಧ ಮತ್ತು ಜೈನ ಧರ್ಮ ಪ್ರಚಾರದಿಂದ ದೂರದ ಪ್ರದೇಶಗಳ ಸಂಪರ್ಕ ಉಂಟಾಯಿತು. ಶ್ರಮಿಕ ವರ್ಗದ ಮೇಲೆ ಆಳುವ ವರ್ಗ ಹಿಡಿತ ಸಾಧಿಸಿದ್ದು ಖಾಸಗಿ ಭೂ ಹಿಡುವಳಿಯ ಬೆಳವಣಿಗೆ ಇವೆಲ್ಲವೂ ರಾಜ್ಯ ನಿರ್ಮಾಣ ಪ್ರಕ್ರಿಯೆಗೆ ಕಾರಣವಾದವು.

**೭.೫ ರಾಜ್ಯ ನಿರ್ಮಾಣ ಪ್ರಕ್ರಿಯೆಗಳು**

ಪ್ರಾಚೀನ ಭಾರತದಲ್ಲಿ ವೇದೋತ್ತರ ಕಾಲದಲ್ಲಿ ಪ್ರಪ್ರಥಮ ರಾಜ್ಯ ನಿರ್ಮಾಣದ ಬೆಳವಣಿಗೆ ಕುರಿತು ೧೯೭೦ರಿಂದಲೇ ಚರ್ಚೆಗಳು ಪ್ರಾರಂಭವಾದವು. ಇತಿಹಾಸಕಾರರಾದ ರೋಮಿಲಾ ಥಾಪರ್ ಅವರು ೧೯೮೨ರಲ್ಲಿ ತಮ್ಮ 'ಲೀನಿಯೇಜ್ ಟು ಸ್ಟೇಟ್' ಎಂಬ ಗ್ರಂಥವನ್ನು ರಚಿಸಿದರು. ಈ ಗ್ರಂಥದಲ್ಲಿ ವೇದೋತ್ತರ ಕಾಲದ ರಾಜಕೀಯ ಬೆಳವಣಿಗೆಯನ್ನು ಕುರಿತು ವಿವರಿಸಿದ್ದಾರೆ. ಆದರೆ ರೋಮಿಲಾ ಥಾಪರ್ ಅವರ ಗ್ರಹಿಕೆಗಳನ್ನು ಪ್ರಶ್ನಿಸುವ ಮತ್ತು ಹೊಸ ನಿರೂಪಣೆಗಳನ್ನು ನೀಡುವ ಹಲವು ವಾದಗಳು ಅನಂತರ ಬಂದವು. ಈ ರೀತಿ ರಾಜ್ಯ ನಿರ್ಮಾಣದ ಕುರಿತು ಸೈದ್ಧಾಂತಿಕ ಚರ್ಚೆಗಳು ೭೦ರ ದಶಕದಲ್ಲಿ ಪ್ರಾರಂಭವಾದವು. ಪ್ರಾಯಶಃ ಭಾರತದ ಉಪಖಂಡದಲ್ಲಿ ಪ್ರಪ್ರಥಮ ರಾಜ್ಯ ಕಲ್ಪನೆ ಸಿಂಧೂ ನಾಗರಿಕತೆಯಲ್ಲಿಯೇ ಬೆಳೆದಿರಬೇಕು. ಆದರೆ ವೇದೋತ್ತರ ಕಾಲದ ರಾಜ್ಯ

ಕಲ್ಪನೆ ಅದರ ಪ್ರಭಾವದ ಕುರಿತು ಹೆಚ್ಚಿನ ಅಧ್ಯಯನಗಳಾಗಿಲ್ಲ. ಹಾಗಾಗಿ ವೇದಕಾಲದ ಅಂತ್ಯದಲ್ಲಾದ ರಾಜ್ಯನಿರ್ಮಾಣದ ಕುರುಹುಗಳನ್ನು ಗುರುತಿಸಬಹುದಾಗಿದೆ. ಕ್ರಿ.ಪೂ. ೬–೭ ನೆಯ ಶತಮಾನದದ ನಂತರ ರಾಜ್ಯ ಕಲ್ಪನೆಗಳು ಗೋಚರಿಸುತ್ತವೆ.[೧೨]

ಪ್ರಾಚೀನ ಕಾಲದಲ್ಲಿ ರಾಜಕೇಂದ್ರಿತ ರಾಜ್ಯಗಳು ರಾಜನ ಅತಿಮಾನುಷತ್ವ ದೈವತ್ವಗಳನ್ನೂ ರಾಜವಂಶಗಳ ಅನಿವಾರ್ಯತೆಯನ್ನು ಕುರಿತ ಲೋಕದೃಷ್ಠಿಯನ್ನು ಪ್ರತಿಪಾದಿಸುತ್ತದೆ.[೧೩] ಆದರೆ ಈ ರಾಜನಿಗೆ ಅತಿಮಾನುಷತೆಯನ್ನು ಆರೋಪಿಸುವ ಸಾಮಾಜಿಕ ಸಂಸ್ಥೆಗಳು ಅದನ್ನು ಸ್ವೀಕರಿಸಿ ಜೀವನ ರೂಪಿಸಿಕೊಂಡ ಸಾಮಾಜಿಕ ವರ್ಗಗಳು ರಾಜ್ಯಗಳಿಗೆ ಮೂಲಭೂತ ಅಗತ್ಯಗಳಾಗಿದ್ದವು. ಈ ಕಾರಣಗಳಿಂದ ಪ್ರಸ್ತುತ ಸಂದರ್ಭದಲ್ಲಿ ರಾಜ್ಯವನ್ನು ಆಳ್ವಿಕೆಯ ವ್ಯವಸ್ಥೆ ಎಂಬುದಕ್ಕೆ ಒತ್ತುಕೊಟ್ಟು ನೋಡಬೇಕಾಗುತ್ತದೆ. ರಾಜನಾದವನು ಆಡಳಿತ ನಿರ್ವಹಣೆಯ ಅಧಿಕಾರವನ್ನು ಹೊಂದಿದ್ದು, ರಾಜ್ಯದ ಸಂರಕ್ಷಣೆಗೆ ಹೆಚ್ಚಿನ ಆಧ್ಯತೆಯನ್ನು ವಹಿಸಬೇಕಾಗುತ್ತದೆ. ರಾಜ್ಯದ ಅಸ್ತಿತ್ವಕ್ಕೆ ಅನಿವಾರ್ಯ ವೆಚ್ಚಗಳನ್ನು ಪ್ರಜೆಗಳಿಂದ ವಸೂಲಿ ಮಾಡಿದ ಭಂಡಾರದಿಂದ ಭರಿಸಬೇಕಾಗುತ್ತದೆ. ರಾಜ್ಯ ವ್ಯವಸ್ಥೆಯು ಖಾಸಗಿ ಆಸ್ತಿಯನ್ನು ರಕ್ಷಿಸಲು ಗಡಿಯನ್ನು ರಕ್ಷಿಸಲು, ಉತ್ಪಾದನೆಯನ್ನು ನಿರ್ವಹಿಸಲು ಅನಿವಾರ್ಯವಾಗಿರುತ್ತದೆ. ಕರ್ನಾಟಕದಲ್ಲಿ ಬೃಹತ್ ಶಿಲಾಯುಗದ ಜನರು ಕಬ್ಬಿಣದ ಅದಿರನ್ನು ಕರಗಿಸುವುದರಲ್ಲಿ ಮತ್ತು ಕಮ್ಮಾರಿಕೆ ವೃತ್ತಿಯಿಂದ ಪ್ರಸಿದ್ಧಿಯಾಗಿದ್ದರೆಂದು ತೋರುತ್ತದೆ. ಪ್ರಾಯಶಃ ಇಲ್ಲಿನ ಆರ್ಥಿಕ ಸ್ಥಿತಿಯು ಸಾಮ್ರಾಟ ಅಶೋಕನ ಗಮನವನ್ನು ಸೆಳೆದಿರಬೇಕು. ಇದರಿಂದ ಉಪಯುಕ್ತ ಮತ್ತು ಲಾಭದಾಯಕ ವೃತ್ತಿಯ ಜನರ ಪ್ರದೇಶವನ್ನು ಸ್ವತಃ ಅಶೋಕನು ಜಯಿಸಿದನೆಂದು ತಿಳಿಯುತ್ತದೆ.[೧೪] ಹೊಸದಾಗಿ ಸೇರಿಸಲ್ಪಟ್ಟ ಈ ಭಾಗದ ಜನರಿಗೆ ತನ್ನ ಪರಿಚಯ ಮತ್ತು ಧೋರಣೆಗಳನ್ನು ಪರಿಚಯಿಸುವುದಕ್ಕೋಸ್ಕರವೇ ತನ್ನ ವೈಯಕ್ತಿಕ ಹೆಸರುಳ್ಳ ಕಿರು ಮತ್ತು ಬೃಹತ್ ಬಂಡೆಗಲ್ಲು ಶಾಸನಗಳನ್ನು ಈ ಪ್ರದೇಶದಲ್ಲಿ ಹಾಕಿಸಿದನೆಂದು ತಿಳಿಯುತ್ತದೆ.

ಅಧಿಕಾರಗಳಿಂದ ಮಹಾಮಾತ್ರರನ್ನು ಕಬ್ಬಿಣದ ಉಕ್ಕಿನ ಶಸ್ತ್ರಾಸ್ತ್ರಗಳ ತಯಾರಿಕೆಗೆ ಉತ್ತಮ ಕೇಂದ್ರವಾಗಿದ್ದ ಇಸಿಲಾ ಪಟ್ಟಣ(ಬ್ರಹ್ಮಗಿರಿ)ದಲ್ಲಿ ಉಸ್ತುವಾರಿಗಾಗಿ ನೇಮಿಸಿದನೆಂದು ಹೇಳಬಹುದು. ಹೀಗೆ ಉತ್ತರ ಕರ್ನಾಟಕವು ಮೌರ್ಯ ಸಾಮ್ರಾಜ್ಯದ ಆಡಳಿತಕ್ಕೆ ಒಳಪಟ್ಟು ಆದಿ ಇತಿಹಾಸ ಕಾಲಕ್ಕೆ ನಾಂದಿಯಾಯಿತು. ಹೀಗೆ ಉತ್ತರ ಭಾರತದಲ್ಲಿ ಆಳ್ವಿಕೆ ಮಾಡುತ್ತಿದ್ದ ಮೌರ್ಯವಂಶದ ಅರಸರು ಕರ್ನಾಟಕದ ಉತ್ತರ ಭಾಗದಲ್ಲಿ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿದ್ದಕ್ಕೆ ಬ್ರಹ್ಮಗಿರಿ, ಸಿದ್ಧಾಪುರ, ಜಟ್ಟಂಗಿ ರಾಮೇಶ್ವರ, (ಚಿತ್ರದುರ್ಗ ಜಿ), ಮಸ್ಕಿ(ರಾಯಚೂರು ಜಿ), ಗವಿಮಠ, ಪಾಲ್ಕಿಗುಂಡು(ಕೊಪ್ಪಳ ಜಿ), ಉಡೇಗೊಳಂ, ನಿಟ್ಟೂರು(ಬಳ್ಳಾರಿ ಜಿ) ಶಾಸನಗಳನ್ನೂ ಮತ್ತು ಸುವರ್ಣಗಿರಿ(ಸನ್ನತಿ) (ಕಲ್ಬುರ್ಗಿ ಜಿಲ್ಲೆ)ಯ ೧೩ ಮತ್ತು ೧೪ನೆ ಬಂಡೆಗಲ್ಲು ಶಾಸನಗಳು ಮತ್ತು ಎರಡೂ ಪ್ರತ್ಯೇಕವಾದ ಕಳಿಂಗ ಶಾಸನದ ಪ್ರತಿಗಳಿವೆ. ಇವುಗಳಿಂದ ಪ್ರಸ್ತುತ ಅಧ್ಯಯನ ಪ್ರದೇಶವು ಸೇರಿದಂತೆ ಕಲ್ಬುರ್ಗಿ, ರಾಯಚೂರು, ಕೊಪ್ಪಳ, ಬಳ್ಳಾರಿ, ಚಿತ್ರದುರ್ಗಗಳಂತು ನೇರವಾಗಿ ಮೌರ್ಯ ಸಾಮ್ರಾಜ್ಯದ ಅಧೀನಕ್ಕೆ ಒಳಪಟ್ಟಿತ್ತೆಂಬುದು

ಗಮನಾರ್ಹ. ಚಕ್ರವರ್ತಿ ಅಶೋಕನು ತನ್ನ ಸಾಮ್ರಾಜ್ಯದ ದಕ್ಷಿಣದ ಗಡಿಯಲ್ಲಿ ಸ್ನೇಹಬಾಂದವ್ಯ ಹೊಂದಿದ್ದ ರಾಜ್ಯಗಳಲ್ಲಿ ಸತಿಯಪುತವು ಈ ಸತಿಯಪುತವನ್ನು ಗುರುತಿಸುವಲ್ಲಿ ವಿದ್ವಾಂಸರಲ್ಲಿ ಒಮ್ಮತದ ಅಭಿಪ್ರಾಯವಿಲ್ಲ. ಇದು ತುಳು ಭಾಷೆಯನ್ನಾಡುವ ಮಂಗಳೂರಿನ ಸಮೀಪದ 'ಸತ್ಯಮಂಗಲಂ' ಎಂದೂ, ತಮಿಳುನಾಡಿನ ಕಾಂಚಿಪುರವೆಂದು, ಸಾಸತ್ವವೆಂದು, ಕೊಂಗುನಾಡ ಕೋಶಾರ್ ಎಂದು ಗುರುತಿಸಲಾಗಿದೆ. ಇವರು ಶಾತವಾಹನರ ಪೂರ್ವಜರಾಗಿದ್ದು ಮಂಗಳೂರಿನ ಸುತ್ತಮುತ್ತಲಿನ ಪ್ರದೇಶದವರೆಂದು ಅಭಿಪ್ರಾಯವಿದೆ. ಈ ಕುರಿತು ಸಂಗಂ ಸಾಹಿತ್ಯದಲ್ಲಿ ಉಲ್ಲೇಖಗಳ ಪರಿಶೀಲನೆಯಿಂದ ಸತಿಯಪುತವು ತಮಿಳುನಾಡಿನ ಪ್ರದೇಶವೆಂಬ ತರ್ಕವಿದೆ.[೯೫] ಆದರೆ ಅದು ದಕ್ಷಣ ಕನ್ನಡ ಜಿಲ್ಲೆಯ ಭಾಗವಾಗಿದ್ದಲ್ಲಿ ಅಲ್ಲಿಯವರೆಗೂ ಕರ್ನಾಟಕ ಪ್ರದೇಶವು ಸಾಮ್ರಾಜ್ಯದ ಒಂದು ಭಾಗವಾಗಿತ್ತೆಂದು ಹೇಳಬಹುದು. ಹೀಗೆ ಕರ್ನಾಟಕದಲ್ಲಿ ಮೌರ್ಯರ ಆಳ್ವಿಕೆಯ ಕಾಲವಧಿಯಿಂದ ರಾಜ್ಯ ನಿರ್ಮಾಣ ಪ್ರಕ್ರಿಯೆಗಳನ್ನು ಗುರುತಿಸಬಹುದು. ಅಶೋಕನು ತನ್ನ ರಾಜ್ಯದ ದಕ್ಷಿಣದ ಮೇರೆಗಳಲ್ಲಿ ಬೃಹತ್ ಬಂಡೆಗಲ್ಲು ಮತ್ತು ಲಘುಶಾಸನಗಳನ್ನು ಹಾಕಿಸಿದನೆಂದು ತಿಳಿದುಬರುತ್ತದೆ. ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ ಶಾಸನದಲ್ಲಿ ದೇವನಾಂಪ್ರಿಯ ನೆನಸಿದ ಅಶೋಕನ ಆಜ್ಞೆಯನ್ನು ಸುವರ್ಣಗಿರಿಯಲ್ಲಿದ್ದ ಆರ್ಯಪುತ್ರ ಹಾಗೂ ಮಹಾಮಾತ್ರರು ಇಸಿಲದ ಮಹಾಮಾತ್ರನಿಗೆ ತಿಳಿಸಿದ ಉಲ್ಲೇಖವಿದೆ. ಇಲ್ಲಿ ಆರ್ಯಪುತ್ರ ಎಂಬ ಮಾತು ರಾಜಪುತ್ರ ಯುವರಾಜನಿಗೆ ಸಂಬಂಧಿಸಿದ ಪದವಾಗಿದೆ. ಈ ಪ್ರಾಂತ್ಯದ ಆಡಳಿತಕ್ಕೆ ರಾಜಪುತ್ರ ಯುವರಾಜನೊಬ್ಬನನ್ನು ನೇಮಕ ಮಾಡಲಾಗುತ್ತಿತ್ತು. ಆತನ ಅಧೀನ ಅಧಿಕಾರಿ ಮಹಾಮಾತ್ಯನಾಗಿದ್ದ. ಇದು ಮೌರ್ಯ ಕಾಲದ ಪ್ರಾಂತ್ಯಾಡಳಿತಕ್ಕೆ ನಿದರ್ಶನವಾಗಿದೆ. ಆಡಳಿತದಲ್ಲಿ ರಾಜ, ಯುವರಾಜ, ಮಹಾಮಾತ್ರ, ಧರ್ಮಮಹಾಮಾತ್ರ, ಅಂತಮಹಾಮಾತ್ರ, ಪ್ರಾದೇಶಿಕ, ರಾಷ್ಟ್ರೀಕ, ರುಜ್ಜುಕ, ಯುಕ್ತ, ಆಯುಕ್ತ, ಮೊದಲಾದ ಅಧಿಕಾರಿಗಳಿದ್ದರು. ರಾಜನ ನಿರ್ದೇಶನದಲ್ಲಿ ಉಳಿದವರು ತಮ್ಮ ತಮ್ಮ ಅಧಿಕಾರ ಸ್ಥಾನದಿಂದ ಆಡಳಿತ ನಡೆಸುತ್ತಿದ್ದರೆಂದು ಹೇಳಬಹುದು.

ಮೌರ್ಯರ ಕಾಲದಲ್ಲಿಯೇ ರಾಜ್ಯ ನಿರ್ಮಾಣ ಪ್ರಕ್ರಿಯೆಗಳನ್ನು ಕಾಣಬಹುದಾದರೂ ನಂತರದಲ್ಲಿ ಆಳ್ವಿಕೆಗೆ ಬಂದ ಶಾತವಾಹನರು, ಚುಟುಗಳು ಹಾಗೂ ಕದಂಬರ ಕಾಲದಲ್ಲಿ ಇದರ ಸ್ಪಷ್ಟ ನಿದರ್ಶನಗಳನ್ನು ಗುರುತಿಸಬಹುದು. ಮೌರ್ಯರ ಅವನತಿಯ ನಂತರ ದಖ್ಖನ್ನಿನಲ್ಲಿ ಶಾತವಾಹನರೆಂಬ ಆಂಧ್ರಭೃತ್ಯರು ಆಳ್ವಿಕೆ ಮಾಡಿದರು. ಇವರು ಕರ್ನಾಟಕದ ಉತ್ತರ ಭಾಗ ಒಳಗೊಂಡಂತೆ ಸ್ವಲ್ಪ ಹೆಚ್ಚು ಕಡಿಮೆ ನರ್ಮದಾ ನದಿಯವರೆಗಿನ ಪ್ರದೇಶವನ್ನೊಳಗೊಂಡಂತೆ ರಾಜ್ಯ ನಿರ್ಮಾಣ ಮಾಡಿದರು. ಶಾತವಾಹನ ವಂಶದ ಮೂಲಪುರುಷನಿಂದ ಈ ಸಾಮ್ರಾಜ್ಯಕ್ಕೆ ಶಾತವಾಹನ ಎಂಬ ಹೆಸರು ಬಂದಿದೆ.

ಬೃಹತ್ ಶಿಲಾಯುಗೀಯ ಜನರು ಮತ್ತು ಶಾತವಾಹನರ ನಡುವಿನ ಸಂಬಂಧವನ್ನು ಪಿತೃತ್ವದ ಸಂಬಂಧವೆಂದು ವ್ಯಾಖ್ಯಾನಿಸಲಾಗುತ್ತದೆ.[೯೬] ಹಾಗೆಯೇ ಬೃಹತ್ ಶಿಲಾಯುಗದ ಸಾಂಸ್ಕೃತಿಕ ಅಂಶಗಳು ಐತಿಹಾಸಿಕ ಕಾಲವಧಿಯ ಆರಂಭಕ್ಕೆ ನಿರಂತರವಾಗಿ ಹರಿದು ಬಂದುದ್ದನ್ನು ಗುರುತಿಸಲಾಗುತ್ತದೆ. ಇತಿಹಾಸಕಾರರ ದೃಷ್ಟಿಯಲ್ಲಿ ಶಾತವಾಹನರ ರಾಜ್ಯ ಸ್ಥಾಪನೆಗೆ ಸೂಕ್ತ ಸಂದರ್ಭಗಳೆಂದರೆ ಕಬ್ಬಿಣದ

ನೇಗಿಲು ಕುಳಗಳ ಬಳಕೆ ಭತ್ತದ ನಾಟಿ ಗ್ರಾಮಗಳ ನಿರ್ಮಾಣ ಹಾಗೂ ಬರವಣಿಗೆ ಮುಖ್ಯವಾದ ಅಂಶಗಳಾಗಿವೆ. ಪುರಾಣಗಳಲ್ಲಿ ಶಾತವಾಹನ ವಂಶದ ಮೂಲಪುರುಷ ಆಂಧ್ರ ಜಾತಿಗೆ ಸೇರಿದ್ದರಿಂದ ಇವರನ್ನು ಆಂಧ್ರರೆಂದು ಹೆಸರಿಸಲಾಗಿದೆ. ಪ್ರಾಕ್ತನ ಆಕಾರಗಳಾದ ಶಾಸನಗಳು ಹಾಗೂ ನಾಣ್ಯಗಳು ದೊರೆತಿರುವ ಸ್ಥಳಗಳಿಂದ ಇವರನ್ನು ತಮ್ಮ ರಾಜಕೀಯ ಚಟುವಟಿಕೆಗಳನ್ನು ದಖ್ಖನ್ನಿನ ಪಶ್ಚಿಮ ಭಾಗದಲ್ಲಿ ಪ್ರಾರಂಭಿಸಿ ಪೂರ್ವ ಮತ್ತು ದಕ್ಷಿಣದ ಕಡೆಗೆ ವಿಸ್ತರಿಸಿ ರಾಜಕೀಯ ಪ್ರಭಾವ ಬೀರಿದರೆಂಬ ಅಭಿಪ್ರಾಯವಿದೆ. ಆಂಧ್ರಪ್ರದೇಶದ ಕೆಲವು ಭಾಗ ಮತ್ತು ಬಳ್ಳಾರಿ ಪ್ರದೇಶದ ಮ್ಯಾಕೆದೋಣಿ ಹಿರೆಹಡಗಲಿಯಲ್ಲಿ ದೊರೆತಿರುವ ಪ್ರಾಕೃತ ಶಾಸನಗಳು 'ಶಾತವಾಹನೀಹಾರ' ಮತ್ತು 'ಶಾತವಾಹನಿರಟ್ಟ' (ಶಾತವಾಹನಿರಾಷ್ಟ್ರ) ಎಂಬ ಪ್ರಯೋಗಗಳಿಂದ ಗುರುತಿಸುವುದು ಗಮನಾರ್ಹ.[೯೭]

ಶಾತವಾಹನರು ಈ ಪ್ರದೇಶದಿಂದಲೇ ರಾಜಕೀಯ ಚಟುವಟಿಕೆಗಳನ್ನು ಆರಂಭಿಸಿದರೆಂಬ ವಾದಕ್ಕೆ ಹೆಚ್ಚಿನ ಬಲ ಇದೆ. ಶಾತವಾಹನರು ತಮ್ಮ ಸಾಮ್ರಾಜ್ಯವನ್ನು ಈ ಪ್ರದೇಶದಿಮದ ಪಶ್ಚಿಮಕ್ಕೆ ವಿಸ್ತರಿಸಿದರೆಂದು ಹೇಳಲಾಗುತ್ತದೆ. ಆದರೆ ಈ ಕುರಿತು ಹೆಚ್ಚು ಅಧ್ಯಯನ ಮಾಡಿರುವ ಅಜಯ್‌ಮಿತ್ರ ಶಾಸ್ತ್ರಿಯವರು ಉತ್ತರ ಕರ್ನಾಟಕದ ಕೆಲವು ಭಾಗದಲ್ಲಿ ಇವರ ಒಂದು ರಾಜಧಾನಿ ಸ್ಥಾಪಿತವಾಗಿದ್ದಲ್ಲಿ ಕಲ್ಬುರ್ಗಿ ಜಿಲ್ಲೆಯ ಸನ್ನತಿಯೆಂದೇ ಗುರುತಿಸುತ್ತಾರೆ. ಶಾತವಾಹನರ ಪ್ರಥಮ ರಾಜಧಾನಿ ಮಹಾರಾಷ್ಟ್ರದ 'ಜುನ್ನಾರ್' ನಂತರ ಕಂಡುಬಂದಂತಹ ರಾಜಕೀಯ ಬೆಳವಣಿಗೆಗಳಿಂದ ರಾಜಧಾನಿಯನ್ನು ಸುರಕ್ಷಿತ ನೆಲೆಗೆ ವರ್ಗಾಯಿಸಲಾಗುತ್ತಿತ್ತು. ಮಹಾರಾಷ್ಟ್ರದ ಕೊಲ್ಲಾಪುರ-ಸತಾರ ಇಂತಹ ನೆಲೆಗಳಲ್ಲೊಂದಾಗಿದೆ. ಮತ್ತೊಂದು ತಾತ್ಕಾಲಿಕ ರಾಜಧಾನಿ ಆಂಧ್ರಪ್ರದೇಶದ ತೆಲಂಗಾಣ ಪರಿಸರದಲ್ಲಿತ್ತೆಂದು ಶಾತವಾಹನರು ಮತ್ತು ಆಂಧ್ರರ ಸಂಬಂಧವನ್ನು ಬೇರೆತರನಾಗಿ ಸಮರ್ಥಿಸುತ್ತಾರೆ. ಶಾತವಾಹನರ ಅರಸರುಗಳಾದ ವಸಿಷ್ಟಪುತ್ರ ಶಾತಕರ್ಣಿ, ವಸಿಷ್ಟಪುತ್ರ ಶಿವಶ್ರೀ ಪುಳಮಾಯಿ, ಗೌತಮಿ ಪುತ್ರ ಯಜ್ಞಶ್ರೀಶಾತಕರ್ಣಿಗೆ ಸಂಬಂಧಿಸಿದ ಪ್ರಾಕ್ತನ ಆಧಾರಗಳಾದ ಶಾಸನಗಳು, ನಾಣ್ಯಗಳು ಕ್ರಮವಾಗಿ ಮಹಾರಾಷ್ಟ್ರದ ಕನ್ನೇರಿ, ಆಂಧ್ರಪ್ರದೇಶದ ಆದವಾನಿ, ಕರ್ನಾಟಕದ ಸನ್ನತಿ, ಬನವಾಸಿ, ಚಂದ್ರವಳ್ಳಿ ಮತ್ತು ಗದಗ ನೆಲೆಗಳಲ್ಲಿ ಶೋಧವಾಗಿವೆ. ಶಾತವಾಹನರ ಕಾಲದ ನಾಣ್ಯಗಳು ಸಾವಿರಾರು ಸಂಖ್ಯೆಯಲ್ಲಿ ದೊರೆತಿದ್ದು ಅವು ವಿವಿಧ ಹೆಸರುಗಳಲ್ಲಿ ಇರುವುದರಿಂದ ವಿದ್ವಾಂಸರಲ್ಲಿ ಅವುಗಳ ಬಗ್ಗೆ ಜಿಜ್ಞಾಸೆ ಇದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಹಲವು ನೆಲೆಗಳಲ್ಲಿ ಕೆಂಪು ಲೇಪನದಡಿ ಬಿಳಿ ಚಿತ್ರವಿರುವ ಮೃತ್ಪಾತ್ರೆಗಳು(ಆರ್.ಸಿ.ಪಿ.ಡಬ್ಲ್ಯೂ) ಬೆಳಕಿಗೆ ಬಂದಿದ್ದು ಇವು ಶಾತವಾಹನ ಕಾಲದ ಕುರುಹುಗಳಾಗಿವೆ. ಹೀಗೆ ಶಾತವಾಹನರ ಆಡಳಿತದಲ್ಲಿ ರಾಜ್ಯ ನಿರ್ಮಾಣ ಪ್ರಕ್ರಿಯೆಗಳು ಚುರುಕಿನಿಂದ ಸಾಗಿತ್ತು ಎಂದು ಹೇಳಬಹುದು. ಶಾತವಾಹನರ ಸಾಮಂತರಾದ ಮಹಾರತಿಗಳು, ಚುಟುಗಳು, ಕದಂಬರ ಕಾಲದಲ್ಲಿ ರಾಜ್ಯ ನಿರ್ಮಾಣ ಪ್ರಕ್ರಿಯೆಗಳು ಗುರುತಿಸಬಹುದು. ಶಾತವಾಹನರ ನಾಸಿಕ್ ಶಾಸನವು ವಾಸಿಷ್ಟ ಪುತ್ರ ಪುಳಮಾಯಿಯನ್ನು 'ದಕ್ಷಿಣ ಪಥದ ಒಡೆಯನೆಂದು' ಕರೆಯಲಾಗಿದೆ. ಶಾತವಾಹನರ ಅಧಿಕಾರವನ್ನು ಕುಂತಳವೆಂದು ಕರೆಯಲ್ಪಡುತ್ತಿದ್ದ ಕರ್ನಾಟಕದ ಉತ್ತರ ಭಾಗದವರೆಗೆ ವಿಸ್ತರಿಸಿದುದ್ದನ್ನು

ಇದು ದೃಢಪಡಿಸುತ್ತದೆ. ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯಲ್ಲಿ ದೊರೆತ ಸೀಸದ ನಾಣ್ಯಗಳು ಸದಕಣಕಳಲಾಯ ಮಹಾರಠಿಸ್ಸ(ಸದಕಣ ಕಳಲಾಯ ಮಹಾರಥಿ)ಯನ್ನು ಪ್ರಸ್ತಾಪಿಸುತ್ತದೆ. ನಾನೇಘಾಟ್ ಶಾಸನದಲ್ಲಿ ಮಹಾರಥಿಯು ರಾಣಿ ನಾಗನಿಕಳ ತಂದೆಯೆಂದು ವರ್ಣಿತನಾಗಿದ್ದಾನೆ. ಈ ಮಹಾರಥಿಗಳು ಸ್ಥಳೀಯ ಪ್ರಭುತ್ವಗಳ ಅಧಿಕಾರ ಹೊಂದಿರುವರು. ಸದಕಣ ಎಂಬ ಪ್ರಯೋಗ ಶಾತವಾಹನರೊಂದಿಗಿನ ಸಂಬಂಧವಿದ್ದ ಸ್ಥಳೀಯ ಮನೆತನಗಳನ್ನು ಸ್ವೀಕರಿಸಿದ ಬಿರುದನ್ನು ಸೂಚಿಸುತ್ತದೆ ಎಂದು ಇತಿಹಾಸಕಾರರ ಅಭಿಪ್ರಾಯವಾಗಿದೆ. ಆದರೆ ಕಳಲಾಯ ಎಂದರೇನು ಎಂಬುದರ ಬಗ್ಗೆ ಸ್ಪಷ್ಟವಾಗಿ ತಿಳಿಯುವುದಿಲ್ಲ. ಪ್ರಾಯಶಃ ಇದು ನಾಣ್ಯ ಹೊರಡಿಸಿದ ವ್ಯಕ್ತಿನಾಮ ಇರಬಹುದೆಂದು ಮನು.ವಿ.ದೇವದೇವನ್ ಅಭಿಪ್ರಾಯಿಸಿದ್ದಾರೆ. 'ಮಹಾರಟಿಸ್ಸ' ಎಂದರೆ ಪ್ರಾಕೃತದಲ್ಲಿ ಮಹಾರಠರಿಗೆ ಸೇರಿದ್ದು ಎಂದರ್ಥ. ಮಹಾರಠಿ ಚಂದ್ರವಳ್ಳಿ ಸದಕಣರಿಗೆ ಮಾತ್ರ ಸೀಮೀತವಾಗಿದ್ದ ಬಿರುದಲ್ಲ.[೬೮] ಡೆಕ್ಕನ್ ಪ್ರಾಂತ್ಯದ ಹಲವು ಮನೆತನಗಳ ಮುಖಂಡರು ಈ ಬಿರುದನ್ನು ತಮ್ಮದಾಗಿಸಿಕೊಂಡಿದ್ದರೆಂದು ನಾಣ್ಯಗಳು ತಿಳಿಸುತ್ತವೆ.

ಈ ಮನೆತನಗಳು ಸ್ಥಳೀಯ ನೀರಾವರಿ ವ್ಯವಸ್ಥೆಯ ಮೂಲಕ ಪ್ರಭುತ್ವದ ಹೊಸ ಮಾದರಿಗಳನ್ನು ಜಾರಿಗೆ ತರುವಲ್ಲಿ ಯಶಸ್ವಿಯಾಗಿದ್ದರು. ಚಂದ್ರವಳ್ಳಿ ನಾಣ್ಯಗಳಲ್ಲಿ ಕಾಣುವ ವೃಷಭ ಚಿತ್ರವು ಮಹಾರಠಿಗಳಿಗೂ ಕೃಷಿಗೂ ಇರುವ ಸಂಬಂಧವನ್ನು ಸೂಚಿಸುತ್ತಿರಬಹುದು. ಇವರು ಶಾತವಾಹನರೊಂದಿಗೆ ಹೆಚ್ಚು ನಿಕಟ ಸಂಬಂಧವನ್ನು ಬೆಳಸಿಕೊಂಡಿದ್ದರೆಂದು ತಿಳಿದುಬರುತ್ತದೆ. ಅಧ್ಯಯನ ಪ್ರದೇಶದಲ್ಲಿ ಮಹಾರಠಿಗಳಿಗೆ ಸಂಬಂಧಿಸಿದ ನಾಣ್ಯಗಳಾಗಲಿ ಶಾಸನಗಳಾಗಲಿ ಅಥವಾ ಇನ್ನಿತರ ಪ್ರಾಕ್ತನಾಧಾರಗಳು ಬೆಳಕಿಗೆ ಬಂದಿಲ್ಲ. ಆದರೆ ನೆರೆಹೊರೆಯ ಜಿಲ್ಲೆಗಳಾದ ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ, ಚಿಪ್ಪಿನಕೆರೆ ಸ್ಥಳಗಳಲ್ಲಿ ದೊರೆತಿವೆ. ಮಹಾರಥಿಗಳ ನಂತರದಲ್ಲಿ ಚುಟುವಂಶದವರು ಅಧಿಕಾರವನ್ನು ಮುಂದುವರೆಸಿದರು. ಬನವಾಸಿ, ಕಾರವಾರ, ಚಿತ್ರದುರ್ಗದ ಚಂದ್ರವಳ್ಳಿಯಲ್ಲಿ ನಿವೇಶನದಲ್ಲಿ ಸಂಗ್ರಹಿಸಲಾದ ಸೀಸದ ನಾಣ್ಯಗಳು ಚುಟುಕುಲಾನಂದ ಮತ್ತು ಮುಡಾನಂದ ಎಂಬ ಎರಡು ವಂಶದ ರಾಜರ ಹೆಸರುಗಳನ್ನು ಸೂಚಿಸುತ್ತವೆ. ಆನಂದ ಎಂಬುದರಿಂದ ಅಂತ್ಯಗೊಳ್ಳುವ ಹೆಸರುಗಳಾಗಿರುವುದರಿಂದ ಈ ರಾಜವಂಶದವರು ಶಾತವಾಹನರ ಮಾಂಡಲಿಕರಾಗಿದ್ದರು. ಚುಟುಗಳು ನಂತರ ಕರ್ನಾಟಕದಲ್ಲಿ ಕದಂಬರು ಮೊಟ್ಟ ಮೊದಲು ಸ್ವತಂತ್ರ್ಯ ರಾಜ್ಯವನ್ನು ನಿರ್ಮಿಸಿ ಆಳ್ವಿಕೆ ನಡೆಸಿದರು. ಇವರು ಬನವಾಸಿಯನ್ನು ರಾಜಧಾನಿಯಾಗಿ ಆಳ್ವಿಕೆ ಮಾಡಿದರು. ಹೀಗೆ ಹಂತ ಹಂತವಾಗಿ ರಾಜ್ಯ ನಿರ್ಮಾಣ ಪ್ರಕ್ರಿಯೆಗಳು ಬೃಹತ್ ಶಿಲಾಯುಗ ಮತ್ತು ಆದಿ ಇತಿಹಾಸ ಕಾಲದದಿಂದ ವಿಸ್ತರಣೆಗೊಂಡಿರುವುದು ತಿಳಿದುಬರುತ್ತದೆ. ಈ ರಾಜ್ಯ ನಿರ್ಮಾಣ ಪ್ರಕ್ರಿಯೆಗಳು ರೂಪಗೊಳ್ಳಲು ಸಾವಿರಾರು ವರ್ಷಗಳು ಬೇಕಾಯಿತು ಎಂಬ ಇತಿಹಾಸ ಕಥನವು ರೋಚಕವು ಕುತೂಹಲಕಾರಿಯಾಗಿದೆ ಎಂಬುದು ದಿಟ.

**ಕೊನೆ ಟಿಪ್ಪಣಿ**

೧. ಸುಂದರ ಅ. (ಸಂ), (ಮರು ಮುದ್ರಣ) ೨೦೧೮, ಕರ್ನಾಟಕ ಚರಿತ್ರೆ ಸಂ.೧, ಪು. ೧೦೩.

೨. ನಾಗರಾಜು ಎಸ್. (ಮೂಲ) ೨೦೧೨, ಕರ್ನಾಟಕದ ಆದಿ ಚಾರಿತ್ರಿಕ ಹಂತ: ಚರಿತ್ರೆ ಮತ್ತು ಪುರಾತತ್ವ, ಇ.ದ, ಪುಸ್ತಕ ೧೨-೧೩, ಪು. ೩೭.

೩. ಅದೇ, ಪು. ೬೭-೬೮.

೪. ಫೂಟ್ ಆರ್.ಬಿ., ೧೯೧೪, ಇಂಡಿಯನ್ ಪ್ರಿ ಹಿಸ್ಟಾರಿಕ್ ಅಂಡ್ ಪ್ರೋಟೋ ಹಿಸ್ಟಾರಿಕ್ ಆ್ಯಂಟಿಕ್ವಿಟೀಸ್ ಪು. ೪೨-೫೬. ; ಮಜುಂದಾರ್ ಜಿ.ಜಿ ಮತ್ತು ರಾಜಗುರು ಎಸ್.ಎನ್., ೧೯೬೬, ಆ್ಯಶ್‌ಮೌಂಡ್ ಅಂಡ್ ಎಕ್ಸಕವೇಶನ್ ಅಟ್ ಕಪ್ಪಗಲ್, ಪು. ೬೭-೬೯.

೫. ಸುಬ್ಬರಾವ್ ಬಿ., ೧೯೪೮ ಸ್ಟೋನ್‌ಏಜ್ ಕಲ್ಚರ್ಸ್ ಆಫ್ ಬಳ್ಳಾರಿ ಪು. ೪ ; ಸಂಕಾಲಿಯ ಹೆಚ್.ಡಿ., ೧೯೬೯, ಮೆಸೋಲಿಥಿಕ್ ಅಂಡ್ ಪ್ರಿ ಮೆಸೋಲಿಥಿಕ್ ಇಂಡಸ್ಟ್ರೀಸ್ ಫ್ರಮ್ ದ ಎಕ್ಸ್‌ಕವೇಶನ್ ಅಟ್ ಸಂಗನಕಲ್, ಪು. ೬.

೬. ನಮಿತಾ ಸಂಜಯ್ ಸುಗಂಧಿ., ೨೦೧೯, ತೆಕ್ಕಲಕೋಟ ಥ್ರೂ ದ ಏಜಸ್ ರೀಸೆಂಟ್ ರಿಸರ್ಚ್ ಅಂಡ್ ಫರ್ಸ್‌ಪೆಕ್ಟಿವ್, ಮ್ಯಾನ್ ಅಂಡ್ ಎನ್ವಿರಾನ್‌ಮೆಂಟ್ ೪೯(೧), ಪು. ೬೨-೮೦.

೭. ಅನ್ಸಾರಿ ಝಡ್. ಡಿ., ೧೯೭೦, ಪೆಬಲ್ ಟೂಲ್ಸ್ ಫ್ರಮ್ ನಿಟ್ಟೂರು, ಇಂಡಿಯನ್ ಆ್ಯನಿಕ್ವರಿ ವ್ಯಾಲೂಮ್.೪, ೧-೪, ೧-೭ ಆರ್ಕಿಯಲಾಜಿ ವ್ಯಾಲೂಮ್, ಪು. ೯೨-೨೧೦.

೮. ಇಂ.ಆ.ರಿ, ೧೯೯೨-೯೩, ಪು. ೧೬.

೯. ಅದೇ, ಪು. ೧೬.

೧೦. ಅದೇ, ಪು. ೧೬.

೧೧. ಅದೇ, ಪು. ೧೬.

೧೨. ಅದೇ, ೧೯೭೭-೭೮, ಪು. ೨೫.

೧೩. ಅದೇ, ೧೯೯೨-೧೯೯೩, ಪು. ೪೨.

೧೪. ಅದೇ, ೧೯೮೭-೮೮, ಪು. ೩೩.

೧೫. ಫೂಟ್ ೧೯೧೬, ಪೂರ್ವೋಕ್ತ, ಪು.೮೦.

೧೬. ವೀಣಾ ಮಹಾಂತೇಶ್ ಸಿ., ೧೯೯೯, ಅಲ್ಲಿಪುರದಲ್ಲಿ ಬೃಹತ್ ಶಿಲಾಯುಗದ ನೆಲೆ, ಇ.ದ.ಸಂ. ೧೪, ಪು. ೧೫-೧೬.

೧೭. ಇಂ.ಆ.ರಿ, ೧೯೯೩-೯೪, ಪು. ೫೬-೬೬.

೧೮. ಫೂಟ್, ೧೯೧೬, ಪೂರ್ವೋಕ್ತ, ಪು. ೭೭-೭೮; ಇಂ.ಆ.ರಿ, ೧೯೯೩, ಪು. ೫೬-೬೬.

೧೯. ಇಂ.ಆ.ರಿ, ೧೯೯೩-೯೪, ಪು. ೫೬-೬೧.

೨೦. ಅದೇ, ಪು. ೫೬-೬೧.

೨೧. ಪೂಣಚ್ಚ ಕೆ.ಪಿ., ಮತ್ತು ವೆಂಕಟಶೇಯ್ಯ, ೧೯೯೩, ಹಂಪಿಯ ಇತ್ತೀಚಿನ ಉತ್ಖನನದಲ್ಲಿ ದೊರೆತ ಮುದ್ರೆಗಳು, ಇ.ದ.ಸಂ, ೮, ಪು.೧೦-೧೧ ; ಸುಂದರ ಅ, ೧೯೯೪, ಕರ್ನಾಟಕದ ಪ್ರಾಗಿತಿಹಾಸ ಕಲೆ ಪು. ೬೭-೬೯.

೨೨. ಸುಂದರ ಅ, ೧೯೯೪ ಪೂರ್ವೋಕ್ತ ಪು. ೬೭-೬೯ ; ಇಂ.ಅ.ರಿ, ೧೯೯೬, ಪು. ೪೧-೪೨.

೨೩. ಜಯಣ್ಣ ಉಲ್ಲಾನಹಳ್ಳಿ, ೨೦೦೩, ಮೊಳಕಾಲ್ಮೂರು ತಾಲ್ಲೂಕಿನ ಪುರಾತತ್ವೀಯ ಪರಿಸರ ಅಪ್ರಕಟಿತ ಪಿ.ಎಚ್‌ಡಿ ಮಹಾಪ್ರಬಂಧ, ಪು. ೧೩೭.

೨೪. ಇಂ.ಆ.ರಿ, ೧೯೯೬-೯೭, ಪು. ೪೧-೪೨.

೨೫. ಅದೇ, ಪು.೪೧-೪೪ ; ತಿಪ್ಪೇಶ ಹೆಚ್.ಎಂ., ೨೦೧೯, ಜರಿಮಲೆ ಬೆಟ್ಟದ ತಪ್ಪಲಿನಲ್ಲಿರುವ ಬೃಹತ್ ಶಿಲಾಸಮಾಧಿ ನೆಲೆಗಳ ಶೋಧ, ಇ.ದ.ಸಂ, ೩೪, ಪು. ೩೬-೩೮.

೨೬. ಅದೇ, ಪು.೪೧-೪೨.

೨೭. ಸುಂದರ ಅ., ೧೯೭೫, ಅರ್ಲಿ ಛೇಂಬರ್ ಟೋಂಬ್ಸ್ ಆಫ್ ಸೌತ್ ಇಂಡಿಯಾ, ಪು. ೬೬-೬೭ ಮತ್ತು ೧೯೯೪ ಪೂರ್ವೋಕ್ತ, ಪು. ೫೪.

೨೮. ಏನ್ಸಿಯಂಟ್ ಇಂಡಿಯಾ ೪, ೧೯೪೭-೪೮, ಪು. ೨೦೮.

೨೯. ಇಂ.ಅ.ರಿ, ೧೯೭೩-೭೪, ಪು. ೧೬.

೩೦. ಅದೇ, ೧೯೬೫-೬೬, ಪು. ೩೩; ೧೯೬೮-೬೯, ಪು.೬೮ ; ಸುಂದರ ಅ, ೧೯೭೫, ಪೂರ್ವೋಕ್ತ, ಪು. ೭೨-೭೭.

೩೧. ವಾಸುದೇವ ಬಡಿಗೇರ, ೧೯೯೯, ಹಂಪಿ ಪ್ರದೇಶದ ಲೋಹಶಾಸ್ತ್ರ ಕಲೆ, ಇ.ದ.ಸಂ, ೧೪, ಪು. ೨೩-೨೪.

೩೨. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೊಪ್ಪಳ ತಾಲ್ಲೂಕಿನ ಕೆರೆಹಳ್ಳಿ ಗ್ರಾಮದ ತೇರುಹನುಮಪ್ಪ ಬೆಟ್ಟದ ತಪ್ಪಲಿನ ಕಲ್ಲಾಸರೆಯಲ್ಲಿ ಆದಿ ಇತಿಹಾಸ ಕಾಲದ ಬಿಳಿ ವರ್ಣದ ಕಡ್ಡಿ ಚಿತ್ರಗಳನ್ನು ಶೋಧಿಸಲಾಗಿದೆ.

೩೩. ಇಂ.ಅ.ರಿ, ೧೯೬೮-೬೯, ಪು. ೬೯ ; ಸುಂದರ ಅ. ೧೯೭೫, ಪೂರ್ವೋಕ್ತ ಪು. ೭೨-೭೩.

೩೪. ಸುಂದರ ಅ, ೧೯೭೫, ಪೂರ್ವೋಕ್ತ ಪು. ೭೨

೩೫. ಸುಂದರ ಅ, ಗಂಗಾವತಿ ತಾಲ್ಲೂಕಿನ ಪ್ರಾಚ್ಯಾವಶೇಷಗಳು, ಕ.ಭಾ.ಸಂ.,೬-೧, ಪು. ೬೪-೭೫

೩೬. ಅದೇ, ಪು. ೬೬.

೩೭. ವಾಸುದೇವನ್ ಸಿ.ಎಸ್., ೨೦೧೦, ಕಡೇಬಾಗಿಲು-ಪ್ರಾಗಿತಿಹಾಸ ಕಾಲದ ನೆಲೆ, ಗೋಪಾಲ್ ಆರ್., (ಸಂ,) ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು. ೨೦-೨೧.

೩೮. ನಾಗರಾಜು ಎಸ್. (ಮೂಲ) ೨೦೧೨, ಪೂರ್ವೋಕ್ತ, ಪು. ೬೭-೭೧.

೩೯. ದೇವರಕೊಂಡ ರೆಡ್ಡಿ, ಭಟ್‌ಸೂರಿ ಕೆ.ಜಿ., ಕಲವೀರ ಮನ್ವಚಾರಿ, ಪರಮಶಿವಮೂರ್ತಿ ಡಿ.ವಿ., ೧೯೯೯, ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨, ಪು. ೩೭.

೪೦. ಅದೇ, ಪು. ೩೬.

೪೧. ದೇವರಕೊಂಡ ರೆಡ್ಡಿ, ಭಟ್‌ಸೂರಿ ಕೆ.ಜಿ., ಕಲವೀರ ಮನ್ವಚಾರಿ, ಪರಮಶಿವಮೂರ್ತಿ ಡಿ.ವಿ., ಬಳ್ಳಾರಿ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಪು. ೧೨೪.

೪೨. ಅದೇ, ಪು. ೧೨೫-೧೨೬.

೪೩. ಮೋಹನ್‌ಕೃಷ್ಣ ರೈ ಕೆ. ೧೯೯೩, ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ, ಪು. ೭.

೪೪. ಸುಂದರ ಅ., (ಸಂ), (ಮರು ಮುದ್ರಣ), ೨೦೧೮, ಕರ್ನಾಟಕ ಚರಿತ್ರೆ ಸಂಪುಟ ೧, ಪು. ೧೦೨-೧೦೩.

೪೫. ಅದೇ, ಪು. ೯೮-೯೯.

೪೬. ನಾಗರಾಜು ಎಸ್. (ಮೂಲ) ೨೦೧೨, ಪೂರ್ವೋಕ್ತ, ಪು. ೬೭-೭೧.

೪೭. ಅದೇ, ಪು.೬೭-೭೧.

೪೮. ಅದೇ, ಪು. ೬೭

೪೯. ಅದೇ, ಪು.೬೭-೭೧.

೫೦. ಸುಂದರ ಅ, ೨೦೧೮, ಪೂರ್ವೋಕ್ತ, ಪು..೧೦೧.

೫೧. ನಾಗರಾಜು ಎಸ್. (ಮೂಲ) ೨೦೧೨, ಪೂರ್ವೋಕ್ತ, ಪು. ೭೪-೭೫.

೫೨. ಸುಂದರ ಅ. ೨೦೧೮, ಪೂರ್ವೋಕ್ತ, ಪು. ೨೩೬.

೫೩. ಅದೇ, ಪು..೨೩೬.

೫೪. ಮೋಹನ್‌ಕೃಷ್ಣ ರೈ ಕೆ. ಪೂರ್ವೋಕ್ತ, ಪು. ೦೨.

೫೫. ಅದೇ, ಪು. ೨೭.

೫೬. ಅದೇ, ಪು. ೨೪.

೫೭. ಅರುಣಿ ಎಸ್.ಕೆ., ೨೦೨೦, ಕರ್ನಾಟಕದ ಐತಿಹಾಸಿಕ ನಗರಗಳು, ಬುಕ್ ಬ್ರಹ್ಮ ಅಂತರ್ಜಾಲ ತಾಣದ ಮಾಹಿತಿ, ಪು. ೧–೪.

೫೮. ಮೋಹನ್‌ಕೃಷ್ಣ ರೈ ಕೆ., ೧೯೯೩, ಪೂರ್ವೋಕ್ತ, ಪು. ೨೬.

೫೯. ಅರುಣಿ ಎಸ್.ಕೆ., ಪೂರ್ವೋಕ್ತ, ಪು. ೨–೩.

೬೦. ಸುಂದರ ಅ., ೧೯೮೬–೮೭, ಎಕ್ಸ್‌ಕವೇಶನ್ ಅಟ್ ಸನ್ನತಿ, ಪುರಾತತ್ವ–ಬುಲೆಟಿನ್ ಆಫ್ ದ ಇಂಡಿಯನ್ ಆರ್ಕಿಯಾಲಾಜಿ ಸೊಸೈಟಿ, ನಂ, ೧೭, ಪು. ೨೨–೨೫ : ಅರುಣಿ ಎಸ್.ಕೆ., ಪೂರ್ವೋಕ್ತ, ಪು. ೨–೩.

೬೧. ಗೋಪಾಲ್ ಆರ್., ೧೯೯೫, ಕರ್ನಾಟಕದಲ್ಲಿ ಮುದ್ರಾಂಕಿತ ನಾಣ್ಯಗಳು, ಇ.ದ.ಸಂ.೧೦, ಪು. ೬೩–೬೪.

೬೨. ನಮಿತ ಸಂಜಯ್ ಸುಗಂಧಿ., ೨೦೧೯, ಪೂರ್ವೋಕ್ತ, ಪು. ೬೨–೮೦.

೬೩. ಸುಂದರ ಅ., ೧೯೮೬–೮೭, ಪೂರ್ವೋಕ್ತ, ಪು. ೨೨–೨೫ ; ಶೆಟ್ಟರ್ ಷ., ೨೦೧೮, ಪ್ರಾಕೃತ ಜಗದ್ವಲಯ, ಪು. ೯೬.

೬೪. ಅನಿತಾ ಹೆಚ್.ಎಮ್., ೨೦೧೨, ಕರ್ನಾಟಕದಲ್ಲಿ ಆರಂಭಿಕ ಇತಿಹಾಸ ಕಾಲದ ಆಭರಣಗಳು, ಇ.ದ.ಪುಸ್ತಕ ೧೨–೧೩, ಪು. ೧೦೩–೧೦೭.

೬೫. ಅದೇ, ಪು. ೧೦೬.

೬೬. ಹೇಮ ಠಾಕೂರ್, ೨೦೧೭, ಅರ್ಲಿ ಹಿಸ್ಟಾರಿಕ್ ಮೆಟಿರಿಯಲ್ ಕಲ್ಚರ್ ಇನ್ ಕರ್ನಾಟಕ ವಿತ್ ಪರ್ಟಿಕ್ಯುಲರ್ ರೆಫರೆನ್ಸ್ ಟು ಬನವಾಸಿ, ನಾರ್ತ್ ಕೆನರಾ, ಇಂಡಿಯಾ ಏನ್ಸಿಯಂಟ್ ಏಷ್ಯಾ ೮; ೨, ಪು. ೩.

೬೭. ಸುಂದರ. ಅ., ೧೯೮೬–೮೭, ಪೂರ್ವೋಕ್ತ, ಪು.೨೨–೨೫. ; ಅರುಣಿ ಎಸ್.ಕೆ., ಕರ್ನಾಟಕದಲ್ಲಿ ಮೌರ್ಯ ಚಕ್ರವರ್ತಿ ಅಶೋಕನ ಆಳ್ವಿಕೆಯ ನಗರಗಳು, ಬುಕ್ ಬ್ರಹ್ಮ ಅಂತರ್ಜಾಲ ಮಾಹಿತಿ, ಪು. ೦೧–೦೩.

೬೮. ಅದೇ, ಪು. ೨೨–೨೫.

೬೯. ನಾಗರಾಜು ಎಸ್. (ಮೂಲ) ೨೦೧೨, ಪೂರ್ವೋಕ್ತ, ಪು.೬೭–೭೧.

೭೦. ಇರ್ಫಾನ್ ಹಬೀಬ್ ಮತ್ತು ವಿವೇಕನಂದ ಝಾ (ಮೂಲ), ನರಗೆರೆ ರಮೇಶ (ಅನು), ೨೦೧೪, ಮೌರ್ಯರ ಕಾಲದ ಭಾರತ, ಚಿಂತನ ಪುಸ್ತಕ, ಪು. ೧೪೧.

೭೧. ನರಸಿಂಹ ಮೂರ್ತಿ ಎ.ವಿ, ೧೯೯೭, ಎಕ್ಸ್‌ಕವೇಷನ್ ಅಟ್ ಬನವಾಸಿ, ಪು. ೧–೯.

೭೨. ಅದೇ, ಪು. ೭೫.

೭೩. ಮಾರ್ಟಿಮರ್ ವ್ಹೀಲರ್, ೧೯೪೭–೪೮, ಬ್ರಹ್ಮಗಿರಿ ಅಂಡ್ ಚಂದ್ರವಳ್ಳಿ, ಏನ್ಸಿಯಂಟ್ ಇಂಡಿಯಾ, ಬುಲೆಟಿನ್ ಆಫ್ ದ ಎ.ಎಸ್.ಐ, ವ್ಯಾಲ್ಯೂಮ್. ೦೪, ಪು.೧೮೦–೩೧೦.

೭೪. ಅದೇ, ಪು.೧೮೦–೩೧೦.

೭೫. ಅದೇ, ಪು.೧೮೦–೩೧೦.

೭೬. ಶೆಟ್ಟರ್ ಷ. ಪೂರ್ವೋಕ್ತ, ಪು. ೯೬.

೭೭. ಅದೇ ಪು. ೯೬.

೭೮. ಸುಂದರ ಅ, ೨೦೧೮, ಪೂರ್ವೋಕ್ತ, ಪು. ೧೦೧.

೭೯. ಮಾರ್ಟಿಮರ್ ವ್ಹೀಲರ್, ೧೯೪೭–೪೮, ಪೂರ್ವೋಕ್ತ, ಪು. ೩೮೦ ; ಲಕ್ಷ್ಮಣ ತೆಲಗಾವಿ, ೨೦೧೮, ಪೂರ್ವೋಕ್ತ, ಪು. ೧೮೬–೧೮೭ ; ರಾಜಶೇಖರಪ್ಪ ಬಿ., ೨೦೦೧, ಚಂದ್ರವಳ್ಳಿ ಶಾಸನದ ಮೇಲೆ ಹೊಸ ಬೆಳಕು, ದುರ್ಗಶೋಧನ, ಸಂಶೋಧನಾ ಲೇಖನಗಳು, ಪು. ೦೧–೧೦ ; ಹೇಮ ಠಾಕೂರ್, ೨೦೧೬, ಚಂದ್ರವಳ್ಳಿ ಆ್ಯನ್ ಅರ್ಲಿ ಹಿಸ್ಟಾರಿಕ್ ಸೆಟಲ್‌ಮೆಂಟ್ ಇನ್ ಕರ್ನಾಟಕ, ಇಂಡಿಯಾ, ಜರ್ನಲ್ ಆಫ್ ಏನ್ಸಿಯಂಟ್ ಹಿಸ್ಟರಿ ಅಂಡ್ ಆರ್ಕಿಯಾಲಾಜಿ ವ್ಯಾಲ್ಯೂಮ್, ೦೩(೦೩), ಪು. ೪೯–೫೪ ; ಅರುಣಿ ಎಸ್.ಕೆ., ಮಯೂರ ವರ್ಮ ತಟಾಕದ ನಗರ ಚಂದ್ರವಳ್ಳಿ, ಬುಕ್‌ಬ್ರಹ್ಮ, ಅಂತರ್ಜಾಲ ಮಾಹಿತಿ, ಪು. ೦೧–೦೮.

೮೦. ರಮೇಶ್ ನಾಯಕ (ಸಂ), ೨೦೦೭, ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ, ಪು. ೧೩೭.

೮೧. ಮೋತೀಚಂದ್ರ, (ಮೂಲ), ಪಾಟೀಲ್ ಹೆಚ್.ಎಸ್ (ಅನು), ೧೯೯೬, ಸಾರ್ಥವಾಹ, ಪು. ೭.

೮೨. ಗೋಪಾಲ್ ಆರ್., ಪೂರ್ವೋಕ್ತ, ಪು. ೬೩–೬೪.

೮೩. ಅದೇ, ಪು. ೬೪

೮೪. ಸುಂದರ ಅ.,(ಸಂ), ೨೦೧೮, ಕರ್ನಾಟಕ ಚರಿತ್ರೆ ಸಂ–೧, ಪು. ೩೮೨

೮೫. ಮೋಹನ್‌ಕೃಷ್ಣ ರೈ ಕೆ., ಪೂರ್ವೋಕ್ತ, ಪು. ೩೪.

೮೬. ವಸು ಎಂ.ವಿ., ೨೦೦೯, ಕನ್ನಡದೊಳ್ ಭಾವಿಸಿದ ಜನಪದಂ, ಪು. ೧೦೨.

೮೭. ಜಯಪ್ಪಗೌಡ ಡಿ.ಎಸ್., ಕರ್ನಾಟಕದ ಕಡಲಾಚೆಯ ಸಂಪರ್ಕಗಳು, ಪು. ೭೧–೭೨.

೮೮. ಅದೇ, ಪು. ೭೨.

೮೯. ಅದೇ, ಪು. ೭೧–೭೨.

೯೦. ಅದೇ, ಪು. ೭೨.

೯೧. ಸುಂದರ ಅ., ೨೦೧೮, ಪೂರ್ವೋಕ್ತ, ಪು. ೪೧೪-೪೧೬.

೯೨. ಮೋಹನ ಕೃಷ್ಣ ರೈ ಕೆ., ಪೂರ್ವೋಕ್ತ, ಪು. ೨೪.

೯೩. ರೊಮಿಲಾ ಥಾಪರ್(ಮೂಲ), ಉಮೇಶ, ಶಶಿಕುಮಾರ್ ಜೆ. ಮತ್ತು ದೀಪ (ಅನು), ೨೦೧೬, ಪ್ರಾಚೀನ ಭಾರತ: ಉಗಮದಿಂದ ಕ್ರಿ.ಶ ೧೩೦೦ರವರೆಗೆ, ಪು. ೧೭೩.

೯೪. ಲಕ್ಷ್ಮಣ್ ತೆಲಗಾವಿ., ೨೦೧೮, ಪೂರ್ವೋಕ್ತ, ಪು. ೩೮.

೯೫. ಅದೇ, ಪು. ೧೩.

೯೬. ಅದೇ, ಪು. ೮೬.

೯೭. ಅದೇ, ಪು. ೮೬-೮೭.

೯೮. ವಸು ಎಂ.ವಿ., ೨೦೦೯, ಪೂರ್ವೋಕ್ತ. ಪು. ೧೦೨.

# ಅಧ್ಯಾಯ : ಎಂಟು
# ಸಮಾರೋಪ

ಮಾನವ ಸಂಸ್ಕೃತಿಯ ಬೆಳವಣಿಗೆಯಲ್ಲಿ ಕರ್ನಾಟಕದ ಪಾತ್ರ ಅಪಾರವಾದುದು. ಪ್ರಾಗಿತಿಹಾಸ ಕಾಲದಿಂದ ಹಿಡಿದು ಇಂದಿನವರೆಗೆ ವಿವಿಧ ಬಗೆಯ ಸಾಂಸ್ಕೃತಿಕ ಕುರುಹುಗಳು ಮತ್ತು ನಂಬಿಕೆ ಆಚರಣೆಗಳಿರುವ ಹಲವು ನೆಲೆಗಳು ಬೆಳಕಿಗೆ ಬಂದಿವೆ. ಕರ್ನಾಟಕದಾದ್ಯಂತ ಪ್ರಾದೇಶಿಕವಾಗಿ ವಿಂಗಡಿಸಿ ಅಧ್ಯಯನ ಕೈಗೊಂಡರೆ ಆಯಾ ಜಿಲ್ಲಾ ತಾಲ್ಲೂಕುಗಳಲ್ಲಿರುವ ಪ್ರಾಚೀನ ನೆಲೆಗಳು, ಕೆರೆ ಕಟ್ಟೆಗಳು, ಗವಿ ಕಲ್ಲಾಸರೆಗಳು, ಬಯಲು ಬಂಡೆಗಳು, ನದಿ ತೀರಗಳು, ಬೆಟ್ಟಗುಡ್ಡಗಳು ಹಾಗೂ ಅವುಗಳ ತಪ್ಪಲಿನ ಸಮತಟ್ಟಾದ ಪ್ರದೇಶಗಳಲ್ಲಿ ಶಿಲಾಯುಗ ಹಂತದ ಮಾನವನ ಸಾಂಸ್ಕೃತಿಕ ಅವಶೇಷಗಳ ವೈಶಿಷ್ಟತೆಯನ್ನು ಗುರುತಿಸಬಹುದು. ಪ್ರಾದೇಶಿಕ ಅಧ್ಯಯನದಿಂದ ಮಾನವನ ಸಾಂಸ್ಕೃತಿಕ ವಿಕಸನದ ಹಂತಗಳನ್ನು ಗುರುತಿಸಿ ಕಾಲಾನುಕ್ರಮದಲ್ಲಿ ಬಿಟ್ಟು ಹೋಗಿರುವ ಕೆಲವು ಸಂಗತಿಗಳನ್ನು ದಾಖಲಿಸಲು ಸಾಧ್ಯವಾಗುತ್ತದೆ. ಚರಿತ್ರೆಯಲ್ಲಿ ರಾಜಧಾನಿ ಪಟ್ಟಣಗಳನ್ನು ಕೇಂದ್ರವನ್ನಾಗಿಸಿಕೊಂಡು ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಅಧ್ಯಯನಗಳು ನಡೆದು ಬಂದಿವೆ. ಆದರೆ ಇತ್ತೀಚಿನ ದಿನಗಳಲ್ಲಿ ಈ ಕ್ಷೇತ್ರ ಹೆಚ್ಚು ವಿಸ್ತಾರವನ್ನು ಪಡೆದುಕೊಂಡಿರುವುದರಿಂದ ಸ್ಥಳೀಯ ಇತಿಹಾಸಕ್ಕೆ ಹೆಚ್ಚಿನ ಮಹತ್ವವನ್ನು ನೀಡಲಾಗುತ್ತದೆ. ಅಧ್ಯಯನ ಕ್ಷೇತ್ರವಾದ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರವು ಪ್ರಾಗಿತಿಹಾಸ ಕಾಲದಿಂದ ಹಿಡಿದು ಆದಿ ಇತಿಹಾಸ ಕಾಲದವರೆಗಿನ ಸುದೀರ್ಘವಾದ ಇತಿಹಾಸದಲ್ಲಿ ಮಾನವನ ಜೀವನ ವಿಧಾನಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿರುವುದನ್ನು ಕಾಣುತ್ತೇವೆ. ಭೌಗೋಳಿಕವಾಗಿ ಸಂಪತ್ಭರಿತವಾಗಿರುವ ಇಲ್ಲಿಯ ಬೆಟ್ಟ-ಗುಡ್ಡ, ಅರಣ್ಯ ಪ್ರದೇಶ, ಖನಿಜ ಸಂಪನ್ಮೂಲ ಮೊದಲಾದ ಪ್ರಾಕೃತಿಕ ಸನ್ನಿವೇಶಗಳು ಮಾನವ ಸಂಸ್ಕೃತಿಯ ವಿವಿಧ ಹಂತಗಳು ಬೆಳೆದು ಬರಲು ಕಾರಣವಾಗಿವೆ.

ಅಧ್ಯಯನ ಪ್ರದೇಶದಲ್ಲಿ ಆದಿ ಹಳೆಯ ಶಿಲಾಯುಗದಿಂದ ಮಾನವನು ನೆಲೆಗೊಂಡಿದ್ದ ಎಂಬುದಕ್ಕೆ ಈ ಪ್ರದೇಶದಲ್ಲಿ ಬೆಳಕಿಗೆ ಬಂದಿರುವ ಹದಿನೈದು ನೆಲೆಗಳು ಸಾಕ್ಷಿಯಾಗಿವೆ. ಆ ನೆಲೆಗಳಲ್ಲಿ ಅಂದಿನ ಜನರು ಬಳಸಿ ಬಿಟ್ಟಿರುವ ಶಿಲೋಪಕರಣಗಳು ದೊರೆತಿವೆ. ಆದರೆ ನಂತರದ ಮಧ್ಯ ಹಳೆಯ ಶಿಲಾಯುಗದಲ್ಲಿ ಎರಡು ನೆಲೆಗಳಲ್ಲಿ ಮತ್ತು ಅಂತ್ಯ ಹಳೆಯ ಶಿಲಾಯುಗದಲ್ಲಿ ಮೂರು ನೆಲೆಗಳಲ್ಲಿ

ಮಾತ್ರ ಈ ಸಂಸ್ಕೃತಿಯ ಕುರುಹುಗಳು ದೊರೆತಿವೆ. ಇದರಿಂದ ವ್ಯಕ್ತವಾಗುವ ಅಂಶಗಳೇನೆಂದರೆ ಈ ಪ್ರದೇಶದಲ್ಲಿ ಹಳೆಯ ಶಿಲಾಯುಗದ ಅಂತ್ಯದಲ್ಲಿ ಮಾನವ ಸಂಸ್ಕೃತಿಯ ನೆಲೆಗಳು ದ್ವಿಗುಣಗೊಂಡಿಲ್ಲವೆಂದು ಅಭಿಪ್ರಾಯಿಸಬಹುದು. ಅಂತ್ಯ ಹಳೆಯ ಶಿಲಾಯುಗ ನಂತರ ಮುಂದುವರೆದು ಸೂಕ್ಷ್ಮಶಿಲಾಯುಗ ಹಂತವು ಕಾಣಿಸಿಕೊಳ್ಳುತ್ತದೆ. ಅಧ್ಯಯನ ಪ್ರದೇಶದಲ್ಲಿ ಒಟ್ಟು ಇಪ್ಪತ್ತೈದು ನೆಲೆಗಳಲ್ಲಿ ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಕುರುಹುಗಳು ಬೆಳಕಿಗೆ ಬಂದಿದ್ದು ಅವುಗಳಲ್ಲಿ ಕೆಲವು ಹಳೆಯ ಶಿಲಾಯುಗ ಹಂತದ ನೆಲೆಗಳಲ್ಲಿಯೇ ಸೂಕ್ಷ್ಮಶಿಲಾಯುಗದ ಅವಶೇಷಗಳು ಶೋಧವಾಗಿವೆ. ಅಲ್ಲದೇ ಹಳೆಯ ಶಿಲಾಯುಗದ ನೆಲೆಗಳಿಗೆ ಹೋಲಿಸಿದರೆ, ಸೂಕ್ಷ್ಮಶಿಲಾಯುಗದ ನೆಲೆಗಳು ಗಣನೀಯವಾಗಿರುವುದು ಅಧ್ಯಯನ ಮೂಲಕ ಗುರುತಿಸಲಾಗಿದೆ. ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಮುಂದುವರೆದ ಹಂತವಾಗಿ ನೂತನ ಶಿಲಾಯುಗ ಕಾಣಿಸಿಕೊಳ್ಳುತ್ತದೆ. ಈ ಹಂತದಲ್ಲಿ ಮಾನವನ ಜೀವನ ವಿಧಾನದಲ್ಲಿ ಸಾಕಷ್ಟು ಸುಧಾರಣೆಗಳಾದವು.

ಮಾನವನು ಮೊದಲು ಪಶುಪಾಲನೆ ಮತ್ತು ಕೃಷಿಯಲ್ಲಿ ತೊಡಗಿಕೊಂಡು ಹಿಂದಿನ ಆದಿಮ ಹಂತದಿಂದ ವಿಕಸನಗೊಂಡು ನವೀನ ರೀತಿಯಲ್ಲಿ ಜೀವಿಸಲು ಪ್ರಾರಂಭಿಸಿದ ಹಂತ ಇದಾಗಿದೆ. ಅಧ್ಯಯನ ಪ್ರದೇಶದಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಮೂವತ್ತೊಂಬತ್ತು ನೆಲೆಗಳು ಶೋಧಗೊಂಡಿವೆ. ಮುಖ್ಯವಾಗಿ ನೂತನ ಶಿಲಾಯುಗ ಮತ್ತು ಶಿಲಾತಾಮ್ರಯುಗ ಹಾಗೂ ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳುಳ್ಳ ಬಹುತೇಕ ನೆಲೆಗಳಲ್ಲಿ ಬೂದಿ ದಿನ್ನೆ ನೆಲೆಗಳಿವೆ. ಅವುಗಳಲ್ಲಿ ಕಪ್ಪಗಲ್ಲು, ಸಂಗನಕಲ್ಲು, ಕುಡುತಿನಿ, ಕುರುಗೋಡು, ಶಾನವಾಸಪುರ, ಹಲಕುಂದಿ, ನಿಂಬಾಪುರ, ವೆಂಕಟಾಪುರ, ಹಳೇನೆಲ್ಲುಡಿ, ಕಾಕುಬಾಳು, ಕೊಂಚಗೇರಿ ಮೊದಲಾದ ಸ್ಥಳಗಳಲ್ಲಿವೆ. ಕಪ್ಪಗಲ್ಲು, ಕುಡುತಿನಿ ನೆಲೆಗಳಲ್ಲಿರುವ ಬೂದಿ ದಿನ್ನೆಗಳನ್ನು ಉತ್ಖನನ ಮಾಡಲಾಗಿದೆ. ಉತ್ಖನನ ವರದಿಗಳಿಂದ ಅವುಗಳ ಸೃಷ್ಠಿ ಕಾಲಮಾನಗಳ ಬಗ್ಗೆ ವಿಭಿನ್ನ ಅಭಿಪ್ರಾಯಗಳು ದಾಖಲಾಗಿವೆ. ಅತಿ ದೊಡ್ಡ ಪ್ರಮಾಣದಲ್ಲಿ ಶೇಖರಿಸಿದ ಸಗಣಿಯನ್ನು ಹೆಚ್ಚಿನ ಉಷ್ಣತೆಯಲ್ಲಿ ಸುಟ್ಟಿದ್ದರಿಂದ ಇಂಥ ಬೂದಿ ದಿನ್ನೆಗಳು ಉಂಟಾಗಿವೆ ಎಂದು ವೈಜ್ಞಾನಿಕ ಅಧ್ಯಯನಗಳಿಂದ ದೃಢವಾಗಿದೆ. ಇಷ್ಟು ದೊಡ್ಡ ಪ್ರಮಾಣದಲ್ಲಿ ಸಗಣಿಯನ್ನು ಸುಡುವುದರ ಉದ್ದೇಶವೇನೆಂಬುದರ ಬಗ್ಗೆ ಸ್ಪಷ್ಟತೆ ಇಲ್ಲ. ಇಂಥ ದಿನ್ನೆಗಳ ಸೃಷ್ಠಿಗೆ ಪಶುಸಂಗೋಪನೆ ಮಾಡುತ್ತಿದ್ದ ಜನರು ಕಾರಣೀಭೂತರಾಗಿದ್ದರೆಂದು ಅಭಿಪ್ರಾಯಿಸಲಾಗಿದೆ. ಪ್ರಾಯಶಃ ಅತಿ ಹೆಚ್ಚು ಪ್ರಮಾಣದಲ್ಲಿ ಸಂಗ್ರಹವಾಗುತ್ತಿದ್ದ ಸಗಣಿಯನ್ನು ತಮ್ಮ ನಂಬಿಕೆ ಆಚರಣೆಗೆ ಸಂಬಂಧಿಸಿದ ಧಾರ್ಮಿಕ ಕಟ್ಟಳೆಯಂತೆ ಸುಡಲಾಗುತ್ತಿತ್ತೆಂಬ ಬಲವಾದ ನಂಬಿಕೆಯಿತ್ತು. ಇಂಥ ಪದ್ಧತಿ ಇಂದಿಗೂ ಮುಂದುವರೆದಿವೆ ಎಂಬುದಕ್ಕೆ ಹೋಳಿ, ದೀಪಾವಳಿ ಹಬ್ಬಗಳಲ್ಲಿ ಆಚರಿಸುವ ಪ್ರಕ್ರಿಯೆಯಲ್ಲಿ ಕಾಣುತ್ತೇವೆ.

ನೂತನ ಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಮಧ್ಯದವರೆಗೂ ಈ ರೀತಿಯ ದಿನ್ನೆಗಳು ಸೃಷ್ಟಿಯಾಗಿರಬಹುದೆಂದು ತೋರುತ್ತದೆ. ಅಧ್ಯಯನ ಪ್ರದೇಶದಲ್ಲಿರುವ ವೆಂಕಟಾಪುರದ ಬೂದಿದಿನ್ನೆಯನ್ನು ಸ್ಥಳೀಯರು ವಾಲಿಭಂಡಾರ, ವಾಲಿಕಾಷ್ಟ ಎಂದು ಕರೆಯುತ್ತಾರೆ. ಅದರಂತೆ

ಕುಡುತಿನಿಯಲ್ಲಿರುವ ಬೂದಿದಿನ್ನೆಯನ್ನು ಹಿಡಿಂಬಸುರನನ್ನು ದಹನ ಮಾಡಿದ ಸ್ಥಳವೆಂದು ಕರೆಯಲಾಗುತ್ತದೆ. ಪ್ರಾಯಶಃ ಆಯಾ ಸಮಾಜದ ಮುಖಂಡರಾದ ವಾಲಿ, ಹಿಡಿಂಬಸುರ ಮೊದಲಾದವರ ದಹನ ಪ್ರಕ್ರಿಯೆಯನ್ನು ಪದೇ ಪದೇ ದೊಡ್ಡ ಪ್ರಮಾಣದಲ್ಲಿ ಸಂಗ್ರಹಿಸಿದ ಸಗಣಿಯನ್ನು ರಾಶಿ ಮಾಡಿ ಸುಡುವುದರ ಮೂಲಕ ಆಚರಿಸುತ್ತಿದ್ದ ಸಾಧ್ಯತೆ ಇದೆಯೆಂದು ಅ.ಸುಂದರ ಅವರು ಅಭಿಪ್ರಾಯ ಪಡುತ್ತಾರೆ. ನೂತನ ಶಿಲಾಯುಗದ ನಂತರ ಮುಂದುವರೆದ ಹಂತವೇ ಶಿಲಾತಾಮ್ರಯುಗ. ಈ ಹಂತದಲ್ಲಿ ಜನರು ತಾಮ್ರದ ಅದಿರಿನಿಂದ ಆಯುಧಗಳನ್ನು ತಯಾರಿಸುವ ತಾಂತ್ರಿಕತೆಯನ್ನು ರೂಢಿಸಿಕೊಂಡರು. ಇದರಿಂದ ಶಿಲಾಯುಧಗಳ ಬಳಕೆ ಕಡಿಮೆಯಾಯಿತು. ಅಧ್ಯಯನ ಪ್ರದೇಶದಲ್ಲಿ ಶಿಲಾತಾಮ್ರಯುಗಕ್ಕೆ ಸಂಬಂಧಿಸಿದ ನಲವತ್ತು ನೆಲೆಗಳು ದೊರೆತಿವೆ. ಒಟ್ಟಿನಲ್ಲಿ ನವಶಿಲಾಯುಗ ಮತ್ತು ಶಿಲಾತಾಮ್ರಯುಗದ ನೆಲೆಗಳಿಗೆ ಹೋಲಿಸಿದರೆ ಶಿಲಾತಾಮ್ರಯುಗದ ನೆಲೆಗಳು ಅಧಿಕವಾಗಿವೆ. ಈ ರೀತಿಯಾಗಿ ಅಧ್ಯಯನ ಪ್ರದೇಶದಲ್ಲಿ ಪ್ರಾಗಿತಿಹಾಸ ಕಾಲದಿಂದ ಹಿಡಿದು ಆದಿ ಇತಿಹಾಸ ಕಾಲದವರೆಗಿನ ಸಾಂಸ್ಕೃತಿಕ ಅವಶೇಷಗಳಿರುವ ನೆಲೆಗಳು ಹೆಚ್ಚಿನ ಪ್ರಮಾಣದಲ್ಲಿವೆ ಎಂಬುದು ಪ್ರಮುಖ ಸಂಗತಿಯಾಗಿದೆ. ಇಲ್ಲಿನ ಪ್ರಾಚೀನ ಜನವರ್ಗ ವಿವಿಧ ಆಚರಣೆಗಳನ್ನು ತಾವು ನಿರ್ಮಿಸಿದ ವಾಸ್ತು ನಿರ್ಮಿತಿಗಳಾದ ಶಿಲಾಸಮಾಧಿಗಳಲ್ಲಿ ಹಾಗೂ ಗವಿ ಕಲ್ಲಾಸರೆ, ಬಯಲು ಬಂಡೆಗಳಲ್ಲಿ ಮೂಡಿಸಿದ ಚಿತ್ರಕಲೆಗಳಲ್ಲಿ ತೋರಿಸಿಕೊಟ್ಟಿದ್ದಾರೆ.

ಪ್ರಾಗಿತಿಹಾಸಕಾಲದ ಅವಶೇಷಗಳೊಂದಿಗೆ ಹಲವು ನಂಬಿಕೆ, ಕಲ್ಪನೆಗಳು ಮೌಖಿಕವಾಗಿ ಉಳಿದುಕೊಂಡು ಬಂದಿರುವುದನ್ನು ಗಮನಿಸಿದರೆ ವಿಶಿಷ್ಟ ಬಗೆಯ ಸಾಮಾಜಿಕ ಕಟ್ಟುಪಾಡುಗಳಿಗೆ ಒಳಗಾಗಿದ್ದಂತಹ ಜನವರ್ಗ ವಾಸವಾಗಿತ್ತೆಂದು ತೋರುತ್ತದೆ. ಬೃಹತ್ ಶಿಲಾಯುಗ ಅಥವಾ ಕಬ್ಬಿಣಯುಗದಲ್ಲಿ ಕಬ್ಬಿಣದ ಉತ್ಪಾದನೆ ಕಂಡುಕೊಂಡಿದ್ದಲ್ಲದೆ ಸತ್ತವರಿಗಾಗಿ ವೈವಿಧ್ಯಮಯ ಸಮಾಧಿಗಳ ನಿರ್ಮಾಣ ಕಲೆ ರೂಢಿಗೆ ಬಂದಿತು. ಈ ನಿರ್ಮಿತಿಗಳು ಸಾವಿರಾರು ವರ್ಷಗಳಿಂದ ಹಿಡಿದು ಇಂದಿನವರೆಗೆ ಉಳಿದುಕೊಂಡು ಬಂದಿರುವುದನ್ನು ಗಮನಿಸಿದರೆ ಅವುಗಳ ನಿರ್ಮಾಣ ಕಾರ್ಯದಲ್ಲಿ ಅನುಸರಿಸಿದ ತಂತ್ರ ಮತ್ತು ಅವರ ಶವಸಂಸ್ಕಾರ ಪದ್ಧತಿಗಳನ್ನು ಗಮನಿಸಿದರೆ ಅವರಲ್ಲಿ ವಿಶಿಷ್ಟ ಬಗೆಯ ಧಾರ್ಮಿಕ ನಂಬಿಕೆಗಳು ಆಚರಣೆಯಲ್ಲಿದ್ದವು ಎಂಬ ವಿವರಗಳಿಗೆ ಪೂರಕ ಸಾಕ್ಷಿಗಳಾಗಿವೆ. ಅಂದಿನ ಜನರು ಸ್ಥಳೀಯವಾಗಿ ದೊರೆಯುವ ಖನಿಜ ಸಂಪನ್ಮೂಲಗಳಿಂದ(ಕಬ್ಬಿಣದ ಅದಿರು) ಉತ್ಕೃಷ್ಟವಾಗಿರುವ ಗಟ್ಟಿಮುಟ್ಟಾದ ಆಯುಧೋಪಕರಣಗಳನ್ನು ತಯಾರಿಸುವ ಕಲೆಯನ್ನು ಅರಿತಿದ್ದರೆಂದು ಅಭಿಪ್ರಾಯಿಸಬಹುದು.

ಕರ್ನಾಟಕದ ಇತರೆ ಭಾಗಗಳಲ್ಲಿ ಬೆಳಕಿಗೆ ಬಂದಿರುವ ಬೃಹತ್ ಶಿಲಾಯುಗದ ವಾಸ್ತವ್ಯದ ನೆಲೆಗಳಿಗಿಂತ ಸ್ಮಶಾನ ನೆಲೆಗಳು ಅಧಿಕ ಸಂಖ್ಯೆಯಲ್ಲಿರುವಂತೆ ಅಧ್ಯಯನ ಪ್ರದೇಶದಲ್ಲಿಯೂ ಸ್ಮಶಾನ ನೆಲೆಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ. ಅಂದರೆ ಈ ಸಂಸ್ಕೃತಿಯ ವಾಸ್ತವ್ಯದ ನೆಲೆಗಳು ಇರಲಿಲ್ಲವೆಂದರ್ಥವಲ್ಲ. ಹಿರೇಬೆಣಕಲ್ಲು, ಸಂಗನಕಲ್ಲು, ಕುರುಗೋಡು, ಕಡೇಬಾಗಿಲು, ತಾವರಗೇರ ನೆಲೆಗಳಲ್ಲಿ ಈ ಸಂಸ್ಕೃತಿಯ

ವಸತಿ ನೆಲೆಗಳು ಶೋಧವಾಗಿವೆ. ಕುರುಗೋಡು ನೆಲೆಯಲ್ಲಿ ಸಂಸ್ಕೃತಿಯ ವಸತಿಯ ಕುರುಹುಗಳು ಬೆಳಕಿಗೆ ಬಂದಿವೆ. ಮುಖ್ಯವಾಗಿ ಈ ಸಂಸ್ಕೃತಿಯ ಜನರು ಬೇಗ ನಶಿಸಿಹೋಗುವಂತಹ ಪರಿಕರಗಳಿಂದ ವಸತಿಗಳನ್ನು ನಿರ್ಮಿಸಿಕೊಳ್ಳುತ್ತಿದ್ದರು ಅಥವಾ ಸಂಸ್ಕೃತಿ ಜನರ ಧಾರ್ಮಿಕ ಕಟ್ಟುಪಾಡುಗಳಿಂದ ಶಾಶ್ವತವಾಗಿ ಉಳಿಯುವಂತಹ ವಸತಿಯ ರಚನೆ ಅಥವಾ ಕಟ್ಟಡಗಳನ್ನು ನಿರ್ಮಿಸುತ್ತಿರಲಿಲ್ಲವೆಂಬುದು ಮತ್ತೊಂದು ಅಭಿಪ್ರಾಯವಾಗಿದೆ. ಈ ಸಂಸ್ಕೃತಿಯ ಜನರು ಸಾವನ್ನು ಸಾಂಕೇತಿಸುವಂತಹ ಸಮಾಧಿ ನಿರ್ಮಿತಿಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತಿದ್ದರೆನ್ನಬಹುದು. ಈ ಸಂಸ್ಕೃತಿಯ ಜನರು ವಾಸ್ತು ನಿರ್ಮಿತಿಗಳ ರಚನೆಯ ಉದ್ದೇಶಗಳು ಸ್ಪಷ್ಟವಾಗಿ ತಿಳಿಯದೆ ಹೋದರೂ ಪುನರ್‌ಜನ್ಮದ ಬಗ್ಗೆ ಅವರಲ್ಲಿದ್ದ ನಂಬಿಕೆಯು ಇಂಥ ನಿರ್ಮಿತಿಗಳ ನಿರ್ಮಾಣಕ್ಕೆ ಕಾರಣವಾಗಿವೆ ಎನ್ನಲು ಅಡ್ಡಿಯಿಲ್ಲ.

ಅಧ್ಯಯನ ಪ್ರದೇಶದಲ್ಲಿ ಬೆಳಕಿಗೆ ಬಂದಿರುವ ಬಹುತೇಕ ಬೃಹತ್ ಶಿಲಾಯುಗದ ಕುರುಹುಗಳು ನವಶಿಲಾಯುಗದ ನೆಲೆಗಳ ಭಾಗದಲ್ಲಿರುವುದು ಉತ್ಖನನ ವರದಿಗಳಿಂದ ಹಾಗೂ ಸ್ಥಳ ಪರಿಶೀಲನೆಯಿಂದ ತಿಳಿಯುತ್ತದೆ. ಅಂದರೆ ಕೆಲವು ನೂತನ ಶಿಲಾಯುಗದ ನೆಲೆಗಳಲ್ಲಿ ಬೃಹತ್ ಶಿಲಾಯುಗದ ಸಂಸ್ಕೃತಿಯ ಅವಶೇಷಗಳ ಜೊತೆಯಲ್ಲಿಯೇ ಲಭ್ಯವಾಗಿವೆ. ಅಂಥ ನೆಲೆಗಳಲ್ಲಿ ಆದಿ ಇತಿಹಾಸ ಕಾಲದ ಅವಶೇಷಗಳು ದೊರಕಿರುವುದು ಗಮನಾರ್ಹ ಸಂಗತಿಯಾಗಿದೆ. ಅಧ್ಯಯನ ಪ್ರದೇಶದಲ್ಲಿ ದೊರೆತಿರುವ ವಸ್ತು–ಅವಶೇಷಗಳಿಂದ ನವಶಿಲಾಯುಗ ಅಥವಾ ಶಿಲಾತಾಮ್ರಯುಗದ ಹಂತದಲ್ಲಿಯೇ ಬಳಕೆಯಲ್ಲಿದ್ದ ಮೃತ್ಪಾತ್ರೆಗಳು, ವಿಶಿಷ್ಟ ಬಗೆಯ ಶಿಲಾನಿರ್ಮಿತಿಗಳ ರಚನೆಗಳು ಕಂಡುಬಂದಿರುವುದರಿಂದ ದೈನಂದಿನ ಜೀವನಕ್ಕೆ ಸಂಬಂಧಿಸಿದ ಸಾಂಸ್ಕೃತಿಕ ಬದಲಾವಣೆಗಳು ಉಂಟಾದವೋ ಅಥವಾ ವಿಭಿನ್ನ ಸಂಸ್ಕೃತಿಯ ಜನವರ್ಗದ ಪ್ರಭಾವವು ಸ್ಥಳೀಯ ನಿವಾಸಿಗಳ ಮೇಲೆ ಬೀರಿತೋ ಎಂಬ ಪ್ರಶ್ನೆಗಳಿಗೆ ಸ್ಪಷ್ಟ ನಿದರ್ಶನಗಳಿಲ್ಲ. ಆದರೂ ಸಹ ಸಾಂಸ್ಕೃತಿಕ ಬದಲಾವಣೆಯಲ್ಲಿ ವಿಭಿನ್ನ ವರ್ಗದವರ ಪಾತ್ರವನ್ನು ತಳ್ಳಿಹಾಕುವಂತಿಲ್ಲ.

ಕರ್ನಾಟಕದ ವಿವಿಧ ನದಿ ಬಯಲಿನಲ್ಲಿ ಜೋರ್ವೆ ಸಂಸ್ಕೃತಿಯ ಶಿಲಾತಾಮ್ರಯುಗದ ಜನರು ನೆಲಿಸಿದ್ದ ಸಾಕ್ಷಿಗಳು ದೊರಕಿವೆ. ಇದರಿಂದ ನವಶಿಲಾಯುಗದ ಕೊನೆಯ ಹಂತದಲ್ಲಿ ಬೃಹತ್ ಶಿಲಾಯುಗದ ಜನರು ಬಂದು ಸೇರಿಕೊಂಡಿರುವುದು ಸ್ಪಷ್ಟವಾಗುತ್ತದೆ. ಈ ಎಲ್ಲಾ ಅಂಶಗಳಿಂದಲೇ ತಿಳಿಯ ಬಹದಾದ ವಿಭಿನ್ನ ಸಂಸ್ಕೃತಿಯ ಕುರುಹುಗಳು ಒಂದೇ ಕಡೆಯಲ್ಲಿ ಕಂಡುಬರುತ್ತವೆ ಎಂಬುದು ಜನ ಜೀವನದಲ್ಲಿಯೂ ಸಾಂಸ್ಕೃತಿಕ ವಿನಿಮಯ ಉಂಟಾಗಿ ಜೀವನ ಶೈಲಿಯಲ್ಲಿಯೂ ನವೀನ ತಂತ್ರಗಳು ಬೆಳೆಯುವುದಕ್ಕೆ ಅವಕಾಶವಾಗಿದ್ದಿರಬೇಕು. ಅಲ್ಲದೇ ಈ ಜನರು ಬಹುಮಟ್ಟಿಗೆ ಲೋಹೋದ್ಯಮದಲ್ಲಿ ಪರಿಣಿತರಾಗಿದ್ದು ತಾವು ಸಿದ್ಧಪಡಿಸಿದ ಕಬ್ಬಿಣದ ಸಲಕರಣೆಗಳನ್ನು ವಸತಿ ನೆಲೆಗಳಲ್ಲಿ ಕೊಟ್ಟು ಕೊಳ್ಳುವವರಾಗಿರಬಹುದು. ಸಂಡೂರು, ಕೂಡ್ಲಿಗಿ, ಹೊಸಪೇಟೆ ತಾಲ್ಲೂಕುಗಳಲ್ಲಿ ಕಬ್ಬಿಣದ ಕುಲುಮೆ ತಯಾರಿಕ ಘಟಕಗಳು ಹೆಚ್ಚಿನ ಪ್ರಮಾಣದಲ್ಲಿ ದೊರೆತಿದ್ದು ಅವುಗಳಲ್ಲಿ ಕಬ್ಬಿಣದ ವಸ್ತು, ಕುಲುಮೆಗೆ ಬೆಂಕಿಹಾಯಿಸಲು ಬಳಸಿದ ಮಣ್ಣಿನ ಕೊಳವೆಗಳು ದೊರೆತಿವೆ. ಇಂತಹ ಸ್ಥಳಗಳಲ್ಲಿ

ಉತ್ಖನನ ನಡೆಸಿದರೆ ಈ ಬಗ್ಗೆ ಹೆಚ್ಚಿನ ವಿವರಗಳು ದೊರೆಯಬಹುದು. ಬಹುತೇಕ ಕುಲುಮೆಗಳು ಬೃಹತ್ ಶಿಲಾಯುಗದ ನೆಲೆಗಳಾಗಿದ್ದು, ಇವುಗಳ ಸಮೀಪದ ಪ್ರಾಚೀನ ಪಟ್ಟಣಗಳಿಗೆ ಆಯುಧೋಪಕರಣಗಳನ್ನು ಇಲ್ಲಿಂದಲೆ ರವಾನೆಯಾಗುತ್ತಿದ್ದವು ಎಂಬುದು ಬಹುಮುಖ್ಯ ಸಂಗತಿಯಾಗುತ್ತದೆ. ಅಲ್ಲದೇ ಕಬ್ಬಿಣದ ಆಯುಧಗಳಿಂದ ಕೃಷಿಯ ಕಾರ್ಯವು ಸುಧಾರಿಸಿತು. ಹಾಗೂ ಕಲ್ಲಿನ ಆಯುಧಗಳ ಬಳಕೆ ಕ್ರಮೇಣ ಕಡಿಮೆಯಾಯಿತು. ಕೃಷಿಯಲ್ಲಿ ಕಬ್ಬಿಣದ ಬಳಕೆಯಿಂದಾಗಿ ಉತ್ಪಾದನೆ ಹೆಚ್ಚಳವಾಯಿತು. ಇದರಿಂದ ಕುಶಲಕರ್ಮಿಗಳು ಹಾಗೂ ಲೋಹ ತಯಾರಿಕೆ ತಂತ್ರಜ್ಞಾನದಿಂದ ಆಹಾರ ಉತ್ಪಾದನೆ ದ್ವಿಗುಣಗೊಂಡು ಕೃಷಿಯೇತರ ಚಟುವಟಿಕೆಗಳಿಂದ ಕರಕುಶಲ ಉದ್ಯಮಗಳು ಬೆಳೆದವು. ಸಮಾಜದಲ್ಲಿ ಶ್ರಮಿಕವರ್ಗ ಸೃಷ್ಟಿಯಾಗಿ ಜನಸಂಖ್ಯಾ ಹೆಚ್ಚಳಕ್ಕೆ ಕಾರಣವಾಯಿತು. ಕುಶಲಕರ್ಮಿಗಳು ಮತ್ತು ಕೃಷಿಕರ ನಡುವೆ ಬಾಂಧವ್ಯ ವೃದ್ಧಿಸಿತು. ಪರಸ್ಪರ ವಸ್ತುವಿನಿಮಯ ಪದ್ಧತಿ ರೂಢಿಗೆ ಬಂದಿತು. ಸಾಮಾಜಿಕ ಜೀವನಕ್ಕೆ ಅಗತ್ಯವಾದ ಆಹಾರ ಧಾನ್ಯದ ಉತ್ಪಾದನೆಯಾಯಿತು. ಉತ್ಪಾದನೆ ಹೆಚ್ಚಿದಂತೆ ಅವುಗಳ ಮಾರಾಟ ಮಾಡಲು ವ್ಯಾಪಾರಿವರ್ಗ ಸೃಷ್ಟಿಯಾಯಿತು. ನಂತರ ಪಟ್ಟಣಗಳು, ನಗರಗಳು ಹುಟ್ಟಿಕೊಂಡವು.

ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳು ವಿಶಿಷ್ಟ ಸಂಗತಿಗಳನ್ನು ತಿಳಿಸುತ್ತವೆ. ಈ ಪ್ರದೇಶದಲ್ಲಿ ಒಟ್ಟು ೭೮ ನೆಲೆಗಳಲ್ಲಿ ಈ ಸಂಸ್ಕೃತಿಯ ನೆಲೆಗಳು ಬೆಳಕಿಗೆ ಬಂದಿದ್ದು ಅವು ತುಂಗಭದ್ರಾ ನದಿಯ ಎಡ ಮತ್ತು ಬಲ ದಂಡೆಯ ಸುತ್ತಮುತ್ತಲಿನ ಪ್ರದೇಶದಲ್ಲಿ ಅಧಿಕ ಸಂಖ್ಯೆಯಲ್ಲಿವೆ. ಅದರಲ್ಲೂ ಕೊಪ್ಪಳ, ಗಂಗಾವತಿ, ಕುಷ್ಟಗಿ ತಾಲ್ಲೂಕುಗಳನ್ನು ಒಳಗೊಂಡಂತೆ ಬಳ್ಳಾರಿ, ಸಿರುಗುಪ್ಪ, ಹೂವಿನಹಡಗಲಿ, ಸಂಡೂರು, ಹೊಸಪೇಟೆ, ಕೂಡ್ಲಿಗಿ ತಾಲ್ಲೂಕಿನಲ್ಲಿ ಅಧಿಕ ಸಂಖ್ಯೆಯಲ್ಲಿ ಈ ಸಂಸ್ಕೃತಿಯ ನೆಲೆಗಳು ಶೋಧವಾಗಿವೆ. ಆದರೆ ಹಗರಿಬೊಮ್ಮನಹಳ್ಳಿ ತಾಲ್ಲೂಕು ಮತ್ತು ಯಲಬುರ್ಗಾ ತಾಲ್ಲೂಕಿನಲ್ಲಿ ಈ ಸಂಸ್ಕೃತಿಯ ನೆಲೆಗಳು ಬೆರಳಣಿಕೆಯಷ್ಟಿವೆ. ಏಕೆಂದರೆ ಈ ಎರಡೂ ತಾಲ್ಲೂಕು ಪರಿಸರದಲ್ಲಿನ ಭೌಗೋಳಿಕ ಅಂಶಗಳು ಮಾನವನು ನೆಲೆಗೊಳ್ಳಲು ಪೂರಕವಾಗಿಲ್ಲದಿರುವುದು ಪ್ರಮುಖ ಕಾರಣವೆಂದು ಅಭಿಪ್ರಾಯಿಸಬಹುದು. ಇತರೆ ತಾಲ್ಲೂಕುಗಳಲ್ಲಿ ಅಧಿಕ ಸಂಖ್ಯೆಯಲ್ಲಿರುವ ನೆಲೆಗಳು ಭೌಗೋಳಿಕ ಅಂಶಗಳಿಂದ ಸಮೃದ್ಧವಾಗಿವೆ. ಹಾಗಾಗಿ ಅಂತಹ ಪರಿಸರವು ಶಿಲಾಯುಗದ ಮಾನವನ ವಾಸಕ್ಕೆ ಯೋಗ್ಯವಾಗಿತ್ತೆಂದು ಅಭಿಪ್ರಾಯಿಸಬಹುದು.

ನೂತನ ಶಿಲಾಯುಗ ಮತ್ತು ಶಿಲಾತಾಮ್ರಯುಗದ ನೆಲೆಗಳಿಗೆ ಹೋಲಿಸಿದರೆ ಬೃಹತ್ ಶಿಲಾಯುಗದ ನೆಲೆಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದಿವೆ. ಈ ಸಂಸ್ಕೃತಿಯು ಭಾರತದಾದ್ಯಂತ ವ್ಯಾಪಕವಾಗಿ ಹರಡಿಕೊಂಡಿವೆ. ಆದರೂ ಸಹ ಈ ಸಂಸ್ಕೃತಿಯ ಉಗಮ, ವಿಕಾಸ ಹಾಗೂ ವೈಶಿಷ್ಟ್ಯತೆಗಳಲ್ಲದೇ ಇವರ ವಾಸ್ತವ್ಯದ ನೆಲೆಗಳು ಸಾಮಾಜಿಕ, ಆರ್ಥಿಕ, ಧಾರ್ಮಿಕತೆಯ ಕುರಿತು ವಿದ್ವಾಂಸರಲ್ಲಿ ಒಮ್ಮತದ ಅಭಿಪ್ರಾಯಗಳಿಲ್ಲ. ಮತ್ತೊಂದು ಪ್ರಮುಖವಾದ ವಿಷಯವೆಂದರೆ, ನೂತನ ಶಿಲಾಯುಗ, ಶಿಲಾತಾಮ್ರಯುಗ ಹಾಗೂ ಬೃಹತ್ ಶಿಲಾಯುಗ ಸಂಸ್ಕೃತಿಯ ಕುರುಹುಗಳು ಲಭ್ಯವಿರುವ ನೆಲೆಗಳಲ್ಲಿಯೇ

ಆದಿ ಇತಿಹಾಸ ಕಾಲದ ಅವಶೇಷಗಳು ಕಂಡುಬಂದಿವೆ. ಹಾಗಾಗಿ ಬೃಹತ್ ಶಿಲಾಯುಗದ ಮುಂದುವರಿದ ಜನಾಂಗವೇ ಆದಿ ಇತಿಹಾಸ ಕಾಲದಲ್ಲಿ ವಿಕಸನ ಹೊಂದಿದರೆಂದು ಅಭಿಪ್ರಾಯಿಸಬಹುದು. ಈ ಅವಧಿಯಲ್ಲಿ ಕಂಡುಬರುವ ಪ್ರಾಚ್ಯಾವಶೇಷಗಳನ್ನು ಅದರಲ್ಲೂ ರೆಸೆಟ್ಟಾ ಕೋಟೆಡ್ ಕೆಂಪು ವರ್ಣದ ಮಡಕೆಗಳನ್ನು 'ಆಂಧ್ರ ಸಂಸ್ಕೃತಿ'ಯ ಕುರುಹುಗಳೆಂದು ಮಾರ್ಟಿಮರ್ ವ್ಹೀಲರ್ ಅವರು ದಾಖಲಿಸಿದ್ದಾರೆ. ಆದರೆ ಬಿ.ಕೆ. ಥಾಪರ್ ಅವರು ಅವುಗಳು 'ಆಂಧ್ರ ಮೃತ್ಪಾತ್ರೆ'ಗಳೆಂಬ ಅಭಿಪ್ರಾಯಗಳಿಗೆ ಆಕ್ಷೇಪ ವ್ಯಕ್ತಪಡಿಸಿದ್ದಾರೆ. ಇಡೀ ದಕ್ಷಿಣ ಭಾರತದ ಬಹುತೇಕ ನೆಲೆಗಳಲ್ಲಿ ಈ ರೀತಿಯ ಮೃತ್ಪಾತ್ರೆಗಳು ಕಂಡುಬಂದಿರುವುದರಿಂದ ಕೇವಲ ಒಂದು ಪ್ರದೇಶದ ಹೆಸರಿನಿಂದ ಕರೆಯುವುದು ಹೆಚ್ಚು ಸಮಂಜಸವಲ್ಲವೆಂಬುದು ಅವರ ನಿಲುವಾಗಿದೆ. ಈ ರೀತಿಯ ಮಡಕೆಗಳು ಕರ್ನಾಟಕದಲ್ಲಿ ಶಾತವಾಹನರ ಕಾಲದ ನೆಲೆಗಳಲ್ಲಿಯೂ ಸಹ ಕಂಡುಬಂದಿವೆ.

ಬೃಹತ್ ಶಿಲಾಯುಗ ಸಂಸ್ಕೃತಿಯು ಮೌರ್ಯ ಮತ್ತು ಶಾತವಾಹನರ ಕಾಲಾವಧಿಯವರೆಗೂ ಮುಂದುವರಿಕೆಯಾಗಿತ್ತು ಎಂಬುದು ಗಮನಿಸಬಹುದಾದ ಸಂಗತಿಯಾಗಿದೆ. ಆದಿ ಇತಿಹಾಸ ಕಾಲಾವಧಿಯಲ್ಲಾದ ಬದಲಾವಣೆಗಳಿಗೆ ಬೃಹತ್ ಶಿಲಾಯುಗದ ಜನರು ಕಂಡುಕೊಂಡ ಲೋಹೋದ್ಯಮ ಪ್ರಮುಖ ಕಾರಣವೆನ್ನಬಹುದು. ಈ ಕಾರಣಕ್ಕಾಗಿ ಲೋಹ ಕರಗಿಸುವಲ್ಲಿ ಪರಿಣಿತ ಜನಸಮುದಾಯವನ್ನು ನಿಯಂತ್ರಣ ಮಾಡುವುದು ಅವಶ್ಯಕವಾಯಿತು. ಇದೇ ಮುಂದೆ ಒಂದು ಪ್ರದೇಶದ ರಾಜಕೀಯ ವ್ಯವಸ್ಥೆಗೆ ಮುನ್ನಡೆಯಾಯಿತು. ಗ್ರಾಮೀಣ ಸಂಸ್ಕೃತಿಯಿಂದ ನಗರ ಸಂಸ್ಕೃತಿಯೆಡೆಗೆ ವಿಕಾಸ ಹೊಂದಿತು. ಮೊಟ್ಟಮೊದಲು ಲಿಖಿತ ಸಮಾಜ ರೂಪುಗೊಂಡಿತು. ಇದರಿಂದ ಪಟ್ಟಣ ಮತ್ತು ನಗರಕೇಂದ್ರಗಳು ಹುಟ್ಟಿಕೊಂಡವು. ವ್ಯಾಪಾರ ವಾಣಿಜ್ಯ ಮಾರ್ಗಗಳು ತೆರೆದವು. ಮತ ಪ್ರಚಾರದಿಂದ ವ್ಯಾಪಾರಿಗಳಿಂದ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶದವರೆಗೆ ವ್ಯಾಪಕವಾಗಿ ಜನ ಸಂಪರ್ಕ ಏರ್ಪಟ್ಟಿತು.

ಅಧ್ಯಯನ ಪ್ರದೇಶದಲ್ಲಿ ಮೌರ್ಯ ಕಾಲದ ಶಾಸನಗಳು ಕೂಡ ಬೃಹತ್ ಶಿಲಾಯುಗದ ನೆಲೆಗಳ ಸಮೀಪದಲ್ಲಿ ಹಾಕಿಸಲ್ಪಟ್ಟಿವೆ. ಅವುಗಳಲ್ಲಿ ಕೊಪ್ಪಳ ಜಿಲ್ಲೆಯ ಪಾಲ್ಕಿಗುಂಡು, ಗವಿಮಠ ಮತ್ತು ಬಳ್ಳಾರಿ ಜಿಲ್ಲೆಯ ಉದೇಗೋಳ, ನಿಟ್ಟೂರು ನೆಲೆಗಳಲ್ಲಿ ತಲಾ ಎರಡೆರಡು ಶಿಲಾಶಾಸನಗಳು ದೊರಕಿವೆ. ಇದರಿಂದ ಈ ಪ್ರದೇಶವು ಮೌರ್ಯರ ಆಳ್ವಿಕೆಗೆ ನೇರ ಆಳ್ವಿಕೆಗೆ ಒಳಪಟ್ಟಿತ್ತು ಎಂಬ ಸಂಗತಿಯು ಕೂಡ ತಿಳಿಯುತ್ತದೆ. ಆದರೆ ಮೌರ್ಯರಿಗೆ ಸಂಬಂಧಿಸಿದಂತೆ ಶಾಸನಗಳು ಹೊರತುಪಡಿಸಿ ಹೆಚ್ಚಿನ ಪುರಾತತ್ವ ಆಕರಗಳು ಲಭ್ಯವಾಗುವುದಿಲ್ಲವಾದ್ದರಿಂದ ಮೌರ್ಯರು ಪಟ್ಟಣಗಳಿಗೆ ಮಾತ್ರ ಸೀಮಿತವಾಗಿದ್ದರು ಎಂಬ ಅಭಿಪ್ರಾಯವಿದೆ. ಹಾಗೂ ಶಾತವಾಹನರು ಮತ್ತು ಬೃಹತ್ ಶಿಲಾಯುಗದ ಜನರಿಗೆ ಪಿತೃತ್ವ ಸಂಬಂಧವಿದೆ ಎಂಬ ಅಭಿಪ್ರಾಯಗಳಿವೆ. ಇದಕ್ಕೆ ನೀಡುವ ನಿದರ್ಶನಗಳೆಂದರೆ ಶಿಲಾಸಮಾಧಿಗಳಲ್ಲಿ ಹುದುಗಿರುವ ಕುದುರೆ ಮೂಳೆ ಅವಶೇಷಗಳು ಮತ್ತು ವರ್ಣಚಿತ್ರಗಳಲ್ಲಿ ಕುದುರೆ ಬಳಕೆಯ ವಿವರಗಳು ಮೂಡಿಬಂದಿರುವ ಸಂಗತಿಗಳು ಇಂತಹ ಅಭಿಪ್ರಾಯಗಳಿಗೆ ಪೂರಕ ಸಾಕ್ಷಿಗಳಾಗಿ ನಿಲ್ಲುತ್ತವೆ.

**ಅಧ್ಯಯನದ ಫಲಿತಗಳು**

• ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರದ ಬೃಹತ್ ಶಿಲಾಯುಗದ ನೆಲೆಗಳನ್ನು ಅಧ್ಯಯನ ಕೈಗೊಂಡಾಗ ಒಟ್ಟು ೭೮ ಬೃಹತ್ ಶಿಲಾಯುಗದ ನೆಲೆಗಳು ಕಂಡುಬಂದಿವೆ. ಅವುಗಳಲ್ಲಿ ೨೦ ನೆಲೆಗಳನ್ನು ಹೊಸದಾಗಿ ಶೋಧಿಸಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ.

• ಅಧ್ಯಯನ ಪ್ರದೇಶದಲ್ಲಿರುವ ಬೃಹತ್ ಶಿಲಾಯುಗದ ನೆಲೆಗಳನ್ನು ಎರಡು ಪ್ರಕಾರಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಅವುಗಳಲ್ಲಿ ೧. ವಸತಿ ಮತ್ತು ಸ್ಮಶಾನ ನೆಲೆಗಳು ೨. ಸ್ಮಶಾನ ನೆಲೆಗಳು. ವಸತಿ ಮತ್ತು ಸ್ಮಶಾನ ನೆಲೆಗಳಿಗೆ ಹೋಲಿಸಿದರೆ, ಸ್ಮಶಾನ ನೆಲೆಗಳು ಗಣನೀಯವಾಗಿವೆ. ಆದ್ದರಿಂದ ಈ ಸಂಸ್ಕೃತಿಯ ಜನರು ಲೌಕಿಕ ವಿಚಾರಗಳಿಗಿಂತ ಅಲೌಕಿಕ ವಿಚಾರಗಳಿಗೆ ಹೆಚ್ಚು ಪ್ರಾಮುಖ್ಯತೆ ನೀಡುತ್ತಿದ್ದರು ಎಂಬುದಕ್ಕೆ ಅವರು ನಿರ್ಮಿಸಿದ ವೈವಿಧ್ಯಮಯ ವಾಸ್ತುನಿರ್ಮಿತಿಗಳೇ (ಕಲ್ಗೋರಿ) ಸಾಕ್ಷಿಗಳಾಗಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

• ಬೃಹತ್ ಶಿಲಾಯುಗದ ಜನರು ಸಾವನಪ್ಪಿದ ನಂತರ ದೊಡ್ಡ ದೊಡ್ಡ ಬಂಡೆಗಳನ್ನಿಟ್ಟು ಶಿಲಾಸಮಾಧಿಗಳನ್ನು ನಿರ್ಮಿಸಿ ಅವುಗಳಲ್ಲಿ ಶವವನ್ನಿಟ್ಟು ಅಂತ್ಯ ಸಂಸ್ಕಾರ ಮಾಡುತ್ತಿದ್ದರು. ಇಂತಹ ಶಿಲಾನಿರ್ಮಿತಿಗಳು ಅಧ್ಯಯನ ಪ್ರದೇಶದಲ್ಲಿ ಒಟ್ಟು ಹತ್ತು ಪ್ರಕಾರದಲ್ಲಿದ್ದು ಸಾಕಷ್ಟು ಸಂಖ್ಯೆಯಲ್ಲಿ ಕಂಡುಬಂದಿವೆ. ಅವುಗಳಲ್ಲಿ ಕಲ್ಮನೆ ಸಮಾಧಿ(ಹಾದಿಕೋಣೆ), ಕಂಡಿಕೋಣೆ ಸಮಾಧಿ, ನಿಲುಸುಗಲ್ಲು, ಕಲ್ಲುಗ್ಗುಪ್ಪೆ ಸಮಾಧಿ, ನೆಲಕೋಣೆ ಸಮಾಧಿ, ಶವಪೆಟ್ಟಿಗೆ (ಸಾರ್ಕೋಫೊಗಿ), ಶಿಲಾವೃತ್ತ ಸಮಾಧಿ(ಡಾಲ್ಮನೈಡ್ ಸಿಸ್ಟ್) ಶವಕುಣಿಗಳು ಹಾಗೂ ಮಾನವಾಕೃತಿ ಶಿಲೆಗಳು ಕಂಡುಬಂದಿದ್ದು ಅವು ಈ ಸಂಸ್ಕೃತಿಯ ಜನರಲ್ಲಿದ್ದ ಧಾರ್ಮಿಕ ವಿಶಿಷ್ಟತೆಯನ್ನು ಸೂಚಿಸುತ್ತವೆ.

• ದೇಶದ ವಿವಿಧ ಭಾಗಗಳಲ್ಲಿ ಮಾನವಾಕೃತಿಯ ಶಿಲೆಗಳು ಅಥವಾ ಕಲ್ಗೊಂಬೆಗಳು ವಿರಳವಾಗಿ ಕಂಡುಬರುವಂತೆ, ಅಧ್ಯಯನ ಪ್ರದೇಶದಲ್ಲಿ ಹಿರೇಬೆಣಕಲ್ಲು, ಅಗೋಲಿ, ಕಲ್ಲಪ್ಪನ ಕ್ಯಾಂಪ್, ಕುಮತಿ ಮತ್ತು ಹುಲಿಕುಂಟೆ ಎಂಬ ಐದು ನೆಲೆಗಳಲ್ಲಿ ಬೆಳಕಿಗೆ ಬಂದಿವೆ. ಅವುಗಳಲ್ಲಿ ಕುಮತಿಯಲ್ಲಿರುವ ಮಾನವಾಕೃತಿಗಳು ದಕ್ಷಿಣ ಭಾರತದ ಮಾನವಾಕೃತಿಗಳಲ್ಲಿ ಅತ್ಯಂತ ವಿಶಿಷ್ಟವಾಗಿವೆ.

• ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಗಡ್ಡಿ ಎಂಬ ನೆಲೆಯಲ್ಲಿ ಆಯಾತಾಕಾರದ ಕಲ್ಲುಗ್ಗುಪ್ಪೆ ಸಮಾಧಿಯನ್ನು ದುಂಡನೆಯ ಕಲ್ಲುಗಳಿಂದ ನಿರ್ಮಿಸಲಾಗಿದೆ. ಮೇಲ್ನೋಟಕ್ಕೆ ಇದು ಕಲ್ಲುಗ್ಗುಪ್ಪೆಯಂತೆ ಕಂಡರೂ ಪಶ್ಚಿಮದ ದಿಕ್ಕಿಗೆ ಪ್ರವೇಶದ್ವಾರವಿರುವುದು ವಿಶೇಷವೆನಿಸಿದೆ. ಈ ಬಗೆಯ ಶಿಲಾ ಸಮಾಧಿಯು ಅಧ್ಯಯನ ಪ್ರದೇಶದಲ್ಲಿ ಬೇರೆಲ್ಲೂ ಕಂಡುಬಂದಿಲ್ಲ.

• ಹಿರೇಬೆಣಕಲ್ಲು ನೆಲೆಯಲ್ಲಿರುವ ಬೃಹತ್ ಶಿಲಾಯುಗದ ಸಮಾಧಿಗಳು ಸಹ ದಕ್ಷಿಣ ಭಾರತದ ಬೃಹತ್ ಶಿಲಾಯುಗದ ಸಮಾಧಿಗಳಲ್ಲಿ ಅತ್ಯಂತ ಮಹತ್ವದ ನಿರ್ಮಿತಿಗಳೆನಿಸಿವೆ. ಹಾಗೂ ಇಲ್ಲಿನ ವರ್ಣಚಿತ್ರಗಳು ಸಹ ಮಹತ್ವದವುಗಳಾಗಿವೆ.

• ಬಳ್ಳಾರಿ ಜಿಲ್ಲೆಯ ಹಂಪಸಾಗರ ಮತ್ತು ಕುಡುತಿನಿ ನೆಲೆಯಲ್ಲಿ ಶೋಧವಾಗಿರುವ ಶವಪೆಟ್ಟಿಗೆಗಳು(ಸಾರ್ಕೋಫೋಗಸ್) ದಕ್ಷಿಣ ಭಾರತದ ಇತರೆ ನೆಲೆಗಳಲ್ಲಿ ದೊರಕಿರುವ ಸಾರ್ಕೋಫೋಗಸ್‌ಗಳಷ್ಟೇ ಪ್ರಸಿದ್ಧಿಯಾಗಿವೆ.

• ಕೊಪ್ಪಳ ಜಿಲ್ಲೆಯ ಅಚಲಾಪುರ ಮತ್ತು ಬಂಡಿಹರಲಾಪುರದ ಬೆಟ್ಟದ ತಪ್ಪಲಿನಲ್ಲಿ ೧೫ಕ್ಕೂ ಹೆಚ್ಚು ವಿವಿಧ ಮಾದರಿಯ ಶಿಲಾಸಮಾಧಿಗಳನ್ನು ಹೊಸದಾಗಿ ಶೋಧಿಸಿ ಅದು ಬೃಹತ್ ಶಿಲಾಯುಗದ ಸ್ಮಶಾನ ನೆಲೆ ಎಂದು ಗುರುತಿಸಲಾಗಿದೆ.

• ಸಂಡೂರು ತಾಲ್ಲೂಕಿನ ಹಿರೇಹಾಳು ಗ್ರಾಮದಲ್ಲಿ ಶಿಲಾವೃತ್ತ ಸಹಿತ ಕಲ್ಮನೆ ಸಮಾಧಿಯನ್ನು ಶೋಧಿಸಿ ದಾಖಲಿಸುವ ಕಾರ್ಯಮಾಡಲಾಗಿದೆ.

• ಸಂಡೂರು ಮತ್ತು ಮೊಳಕಾಲ್ಮೂರು ತಾಲ್ಲೂಕಿನ ಗಡಿಯಲ್ಲಿರುವ ಜಾಲಿಪೆಂಟೆಗುಡ್ಡದಲ್ಲಿ ಬೃಹತ್ ಶಿಲಾಯುಗದ ಜನರ ಕಲ್ಮನೆ ಮಾದರಿಯ ಶಿಲಾಸಮಾಧಿಗಳು ಹಾಗೂ ಕಬ್ಬಿಣದ ಕಿಟ್ಟ, ಮೂಸೆಗಳನ್ನು ಪತ್ತೆಹಚ್ಚಿ ಅವುಗಳ ವಿವರಗಳನ್ನು ಮಹಾಪ್ರಬಂಧದಲ್ಲಿ ದಾಖಲಿಸಲಾಗಿದೆ.

• ಕೂಡ್ಲಿಗಿ ತಾಲ್ಲೂಕಿನ ಜರಿಮಲೆ ಗ್ರಾಮದಲ್ಲಿ ಮ್ಯಾಸ ಬುಡಕಟ್ಟು ಸಮುದಾಯಕ್ಕೆ ಸೇರಿದ ದುರುಗಮ್ಮದೇವಿಯ ಪೂಜಾರಿ ವಂಶಸ್ಥರಲ್ಲಿ ಯಾರಾದರೂ ಸಾವನ್ನಪ್ಪಿದರೆ ಅವರ ಶವವನ್ನು ಬೆಟ್ಟದ ಮೇಲಿನ 'ವಡಕಟ್ಟೆಸರ' ಎನ್ನುವ ಸ್ಥಳದಲ್ಲಿ ಅಂತ್ಯಸಂಸ್ಕಾರ ಮಾಡಲಾಗುತ್ತದೆ. ಮೊದಲು ಶವವನ್ನು ಸುಟ್ಟು ಆನಂತರ ಅಳಿದುಳಿದ ಬೂದಿ ಅವಶೇಷಗಳನ್ನು ಸಂಗ್ರಹಿಸಿ ಅದರ ಗುರುತಿಗಾಗಿ ಸುತ್ತಲೂ ಒತ್ತಾಗಿ ಹಾಕಿದ ಸಣ್ಣಕಲ್ಲುಗಳಿಂದ ಮುಚ್ಚಿ ಕಲ್ಗುಪ್ಪೆ ನಿರ್ಮಾಣ ಮಾಡುವ ಸಂಪ್ರದಾಯ ಇಂದಿಗೂ ಜೀವಂತವಾಗಿರುವುದನ್ನು ಪ್ರಸ್ತುತ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ಈ ಕಲ್ಗುಪ್ಪೆ ಸಮಾಧಿಗಳಿಗೆ ಪ್ರತಿವರ್ಷ ಮಾರ್ಚ್ ತಿಂಗಳಲ್ಲಿ ನಡೆಯುವ ದುರುಗಮ್ಮ ಜಾತ್ರೆಯ ಸಂದರ್ಭದಲ್ಲಿ ಹೂ, ಬಳೆ, ವಸ್ತ್ರಗಳಿಂದ ಅಲಂಕರಿಸಿ, ಎಡೆ ಇಟ್ಟು ನೈವೇದ್ಯ ಮಾಡುವ ಪ್ರತೀತವಿದೆ.

• ಸಿರುಗುಪ್ಪ ತಾಲ್ಲೂಕಿನ ಕೊಂಚಗೇರಿಯಲ್ಲಿ ನೂತನ ಶಿಲಾಯುಗ ಮತ್ತು ಬೃಹತ್ ಶಿಲಾಯುಗ ಹಂತದ ಬೂದಿ ದಿನ್ನೆಯನ್ನು ಹೊಸದಾಗಿ ಶೋಧಿಸಿ ಅದರ ವಿವರಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

• ಹಾಲಸಾಗರದ ಬೃಹತ್ ಶಿಲಾಯುಗದ ನೆಲೆಯಲ್ಲಿ ನವಶಿಲಾಯುಗದ ಶಿಲಾಕೊಡಲಿಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪತ್ತೆಹಚ್ಚಲಾಗಿದ್ದು, ಇದರಿಂದ ಹಾಲಸಾಗರವು ನೂತನ ಶಿಲಾಯುಗದಿಂದ ಮಾನವನ ವಾಸ್ತವ್ಯದ ನೆಲೆಯಾಗಿತ್ತೆಂದು ಗುರುತಿಸುವ ಪ್ರಯತ್ನಮಾಡಲಾಗಿದೆ.

• ಅಧ್ಯಯನ ಪ್ರದೇಶದಲ್ಲಿ ನೂತನ ಶಿಲಾಯುಗ ಮತ್ತು ಶಿಲಾತಾಮ್ರಯುಗಕ್ಕೆ ಸೇರಿದ ನೆಲೆಗಳಲ್ಲಿಯೇ ಬೃಹತ್ ಶಿಲಾಯುಗದ ಕುರುಹುಗಳು ಕಂಡುಬಂದಿರುವುದರಿಂದ ಆ ನೆಲೆಗಳು ಪ್ರಾಚೀನ ಕಾಲದಿಂದಲೂ ಹೊಂದಿರಬಹುದಾದ ಸಾಂಸ್ಕೃತಿಕ ನಿರಂತರತೆಯನ್ನು ಗುರುತಿಸಲು ಸಹಾಯಕವಾಗಿರುವುದನ್ನು ಕಂಡುಕೊಳ್ಳಲಾಗಿದೆ.

• ಜರಿಮಲೆ, ತೆಕ್ಕಲಕೋಟೆಯ ಕರಿಮಟ್ಟಿಗುಡ್ಡ, ಕೆರೆಹಳ್ಳಿ, ಚಕ್ಕೆಮಂಡಿ, ಸಿದ್ದಾರಾಮಪುರ, ಮಾಳೇಹಳ್ಳಿ ನೆಲೆಗಳಲ್ಲಿ ಕಲಾತ್ಮಕ ನೆಲೆಗಳನ್ನು ಹೊಸದಾಗಿ ಕ್ಷೇತ್ರಕಾರ್ಯದಲ್ಲಿ ಗುರುತಿಸಲಾಗಿದ್ದು ಈ ಸಂಸ್ಕೃತಿ ಜನರ ಕಲಾಪ್ರಜ್ಞೆಯನ್ನು ಸೂಚಿಸುತ್ತವೆ.

• ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಅಪ್ಪಯ್ಯನಹಳ್ಳಿಯಲ್ಲಿ ಶೋಧವಾಗಿರುವ ಬೃಹತ್ ಶಿಲಾಯುಗದ ಬಯಲುಬಂಡೆ ಗೀರುಚಿತ್ರಗಳಲ್ಲಿರುವ ಪ್ರಾಣಿಗಳ ಸಮೂಹ ಹಾಗೂ ಮಂಡಲದ ಚಿತ್ರಗಳಿಗೆ ಅಪ್ಪಯ್ಯನಹಳ್ಳಿ ಮತ್ತು ದೇವರಹಟ್ಟಿ ಸುತ್ತಮುತ್ತಲಿನ ಮ್ಯಾಸಬೇಡ ಸಮುದಾಯದವರು ವಿಭೂತಿ, ಹೂ, ಹಣ್ಣು, ತೆಂಗಿನಕಾಯಿಗಳನ್ನಿಟ್ಟು ಪೂಜಿಸುವ ಸಂಪ್ರದಾಯ ಇಂದಿಗೂ ರೂಢಿಸಿಕೊಂಡಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಲಾಗಿದೆ. ಇಲ್ಲಿನ ಮ್ಯಾಸಬೇಡ ಸಮುದಾಯವು ಪಶುಪಾಲಕರಾಗಿದ್ದು ಪ್ರಾಚೀನ ಕಾಲದಿಂದಲೂ ಪಶುಗಳನ್ನು ದೇವರೆತ್ತುಗಳೆಂದು ಪೂಜಿಸುತ್ತಾ ಬಂದಿದ್ದಾರೆ. ಅಪ್ಪಯ್ಯನಹಳ್ಳಿಯ ಸಮೀಪದಲ್ಲಿರುವ ಗುಡ್ಡದಲ್ಲಿ ಹಿಂದಿನ ಕಾಲದಲ್ಲಿ ಶರಣರು ವಾಸವಾಗಿದ್ದರಿಂದ ಆ ಗುಡ್ಡಕ್ಕೆ ಶರಣರಗುಡ್ಡವೆಂದು ಕರೆಯಲಾಗುತ್ತದೆ. ಪ್ರಾಯಶಃ ಆ ಗುಡ್ಡದಲ್ಲಿ ವಾಸವಾಗಿದ್ದ ಶರಣರು ಬೃಹತ್ ಶಿಲಾಯುಗದ ಜನರಾಗಿದ್ದು, ಅವರು ಮೂಡಿಸಿದ ಬಯಲುಬಂಡೆ ಚಿತ್ರಗಳಲ್ಲಿ ಎತ್ತು, ದನ, ಚಿಂಕೆ ಮೊದಲಾದ ಪ್ರಾಣಿಗಳ ಚಿತ್ರಗಳಿರುವುದರಿಂದ ಪಶುಪಾಲಕರಾಗಿರುವ ಮ್ಯಾಸಬೇಡರು ಅವುಗಳನ್ನು ಪೂಜಿಸುತ್ತಾ ಬಂದಿದ್ದಾರೆನ್ನಬಹುದು. ಈ ನಿಟ್ಟಿನಲ್ಲಿ ವಿಸ್ತೃತವಾದ ಅಧ್ಯಯನಗಳು ತಲಸ್ಪರ್ಶಿಯಾಗುವ ಜರೂರತೆ ಇದೆ.

• ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕಿನ ಚೆಕ್ಕೆಮಂಡಿ ಎಂಬ ಸ್ಥಳದಲ್ಲಿರುವ ಬಯಲುಬಂಡೆಯ ಮೇಲೆ ನಗ್ನ ಮಾನವಾಕೃತಿಯ ಗೀರು ಚಿತ್ರಗಳು ಹಾಗೂ ಕಬ್ಬಿಣದ ಕಿಟ್ಟ, ಕುಲುಮೆ ಅವಶೇಷಗಳನ್ನು ಪತ್ತೆಹಚ್ಚಿ ಅವುಗಳ ವಿವರವನ್ನು ದಾಖಲಿಸಲಾಗಿದೆ.

• ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಚಿಕ್ಕರಾಮಪುರದ 'ಒನಕೆ ಕಿಂಡಿ' ಎನ್ನುವ ಸ್ಥಳದಲ್ಲಿ ಈಗಾಗಲೇ ಶೋಧಗೊಂಡಿರುವ ವರ್ಣಚಿತ್ರವು ಬೃಹತ್ ಶಿಲಾಯುಗದಲ್ಲಿ ಪ್ರಚಲಿತವಿದ್ದ ಕಲ್ಲುವೃತ್ತ ಸಮಾಧಿಯನ್ನು ಸಾಂಕೇತಿಸುವ ಚಿತ್ರವಾಗಿದೆ. ಇದು ಪ್ರಪಂಚದಲ್ಲಿಯೇ ಅಪರೂಪವಾದುದೆಂದು ಪರಿಗಣಿಸಬಹುದು.

• ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕಿನ ತಾವರೆಗೇರದಲ್ಲಿ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಹೊಸದಾಗಿ ಮಾನಪ್ಪಯ್ಯ ಗುಡ್ಡದ ಪೂರ್ವಕ್ಕೆ ಇರುವ ದೊಡ್ಡ ಬಂಡೆಯ ದಕ್ಷಿಣಾಭಿಮುಖವಾಗಿರುವ ಎತ್ತರದ ಗೋಡೆಯ ಮೇಲೆ ಕಲ್ಲಿನಿಂದ ಕೊರೆದ ಉದ್ದನೆಯ ಕೊಂಬುಗಳುಳ್ಳ ಜಿಂಕೆಯ ಚಿತ್ರವನ್ನು ಪತ್ತೆಹಚ್ಚಲಾಗಿದೆ. ಇದರ ತಳಭಾಗದಲ್ಲಿರುವ ಗವಿಯಲ್ಲಿ ವಸತಿ ಅವಶೇಷಗಳಾದ ಮಡಕೆಗಳು, ಸುಟ್ಟಮಣ್ಣು ಹಾಗೂ ಗವಿಯ ಭಿತ್ತಿಯಲ್ಲಿ ಐದು ಕೊಂಬುಗಳುಳ್ಳ ಜಿಂಕೆ, ಗೂಳಿ ಮತ್ತು ಇತರೆ ಪ್ರಾಣಿ ಚಿತ್ರಗಳನ್ನು ಹೊಸದಾಗಿ ಪತ್ತೆಹಚ್ಚಿ ದಾಖಲಿಸುವ ಪ್ರಯತ್ನಮಾಡಲಾಗಿದೆ.

• ಸಂಡೂರು ತಾಲ್ಲೂಕಿನ ರಾಜಾಪುರ ಗ್ರಾಮದ ಆಗ್ನೇಯ ದಿಕ್ಕಿನಲ್ಲಿರುವ ಕಲ್ಲುಬಂಡೆಯ ಮೇಲೆ ೧೦೧ ಕಲ್ಗುಳಿಗಳನ್ನು ಪತ್ತೆಹಚ್ಚಿ ದಾಖಲಿಸಲಾಗಿದೆ. ಈ ಕಲ್ಗುಳಿಗಳು ೫ ಸೆಂ. ಮೀ ಚಿಕ್ಕದಾಗಿದ್ದು, ಪ್ರಾಯಶಃ ಈ ಕುಳಿಗಳನ್ನು ಲೋಹದ ವಸ್ತು ಅಥವಾ ಚೂಪಾದ ಕಲ್ಲನ್ನು ಬಳಸಿ ರಚನೆ ಮಾಡಿರಬೇಕೆಂದು ತಿಳಿಯುತ್ತದೆ. ಅವು ಒಂದು ರೀತಿಯಲ್ಲಿ ಅಳಗುಳಿ ಆಟದ ಮನೆಗಳಂತೆ ಕಂಡುಬಂದರೂ ಅವುಗಳ ರಚನೆ ಉದ್ದೇಶಗಳು ಮಾತ್ರ ಸ್ಪಷ್ಟವಾಗಿ ತಿಳಿಯುವುದಿಲ್ಲ. ಇವುಗಳ ಭೌಗೋಳಿಕ ಸ್ಥಾನಮಾನ ಗಮನಿಸಿದರೆ, ಪ್ರಾಯಶಃ ಇವು ಬೃಹತ್ ಶಿಲಾಯುಗ ಕಾಲದವೂ ಎನ್ನಲು ಅಡ್ಡಿಯಿಲ್ಲ. ಇಂತಹ ಕಲ್ಗುಳಿಗಳನ್ನು ಗ್ರಹಗಳ ಚಲನೆಯನ್ನು ತಿಳಿಯಲು ಅಂದಿನ ಜನರು ರಚಿಸುತ್ತಿದ್ದರೆಂಬ ಅಭಿಪ್ರಾಯಗಳಿವೆ. ಈ ಬಗ್ಗೆ ವೈಜ್ಞಾನಿಕ ಅಧ್ಯಯನ ಮಾಡಿದಾಗ ಮಾತ್ರ ಸ್ಪಷ್ಟವಾದ ತೀರ್ಮಾನಕ್ಕೆ ಬರಲು ಸಾಧ್ಯತೆಯಿದೆ.

• ಕೂಡ್ಲಿಗಿ ತಾಲ್ಲೂಕಿನ ಹಾಲಸಾಗರ, ಚಿಲುಮೆನಹಳ್ಳಿ, ಚೆಕ್ಕೆಮಂಡಿ, ಶಿವಗಂಗೆ ಹಾಳೂರು, ಮಾರಮ್ಮನಹಳ್ಳಿ, ಹುರುಳಿಹಾಳು, ಕಲ್ಲಹಳ್ಳಿ, ನಡುವಲಹಳ್ಳಿ, ಕಕ್ಕುಪ್ಪಿ, ತಿಮ್ಮನಹಳ್ಳಿ, ಸಂಡೂರು ತಾಲ್ಲೂಕಿನ ಮತ್ತಾಜನಹಳ್ಳಿ, ಜಾಲಿಪೆಂಟೆ ನೆಲೆಗಳಲ್ಲಿ ಕಬ್ಬಿಣದ ಕುಲುಮೆ ತಯಾರಿಕ ಘಟಕಗಳ ಕುರುಹುಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶೋಧಿಸಲಾಗಿದೆ. ಈ ಸಂಸ್ಕೃತಿಯ ಜನರು ಲೋಹೋದ್ಯಮದಲ್ಲಿ ಪರಿಣಿತರಾಗಿದ್ದು, ಈ ಭಾಗದಲ್ಲಿ ಹೇರಳವಾಗಿ ದೊರಕುವ ಕಚ್ಚಾ ಅದಿರನ್ನು ಕರಗಿಸಿ ಕಬ್ಬಿಣದ ಉಪಕರಣಗಳನ್ನು ತಯಾರಿಸುತ್ತಿದ್ದರು. ಪ್ರಾಯಶಃ ಅವುಗಳನ್ನು ಸಮೀಪದಲ್ಲಿರುವ ಬ್ರಹ್ಮಗಿರಿ, ಕೊಪ್ಪಳ, ಹಂಪಿಯಂತಹ ಪಟ್ಟಣಗಳಿಗೆ ಪೂರೈಕೆ ಮಾಡಲಾಗುತ್ತೆಂದು ಅಭಿಪ್ರಾಯಿಸಬಹುದು.

ಒಟ್ಟಿನಲ್ಲಿ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲಾ ಪರಿಸರವು ಭೌಗೋಳಿಕವಾಗಿ ಬೆಟ್ಟ, ಗುಡ್ಡ, ನದಿ, ಖನಿಜಗಳು, ವನ್ಯಸಂಪತ್ತಿನಿಂದ ಸಮೃದ್ಧವಾಗಿದೆ. ಇಲ್ಲಿನ ಗವಿ ಕಲ್ಲಾಸರೆಗಳು ಶಿಲಾಯುಗದ ಮಾನವನು ನೆಲೆಸಲು ಅತ್ಯಂತ ಪ್ರಶಸ್ತನೀಯ ಪ್ರದೇಶವಾಗಿತ್ತು ಎಂಬುದು ಭೌಗೋಳಿಕ ವಿವರಗಳಿಂದ ತಿಳಿಯುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕ್ರಿ.ಪೂ.ಸು. ೧೪೦೦–೨೦೦ ವರ್ಷಗಳ ಅವಧಿಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯು ಅಸ್ತಿತ್ವದಲ್ಲಿತ್ತೆಂದು ಪುರಾತತ್ವಜ್ಞರ ವಿವಿಧ ಅಭಿಪ್ರಾಯಗಳಿಂದ ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ಬೆಳಕಿಗೆ ಬಂದಿರುವ ಬೃಹತ್ ಶಿಲಾಯುಗದ ನೆಲೆಗಳು ಬಹುತೇಕವಾಗಿ ಅನ್ವೇಷಣಾ ನೆಲೆಗಳಾಗಿವೆ. ಆದುದ್ದರಿಂದ ಅವುಗಳನ್ನು ಉತ್ಖನನಕ್ಕೆ ಒಳಪಡಿಸಿ ಹೆಚ್ಚಿನ ಅಧ್ಯಯನ ನಡೆಸಿದರೆ ಈ ಸಂಸ್ಕೃತಿಯ ಬಗೆಗೆ ಮತ್ತಷ್ಟು ಮಹತ್ವದ ಸಂಗತಿಗಳು ಲಭ್ಯವಾಗುವ ಸಾಧ್ಯತೆಯಿದೆ. ಸಾವಿರಾರು ವರ್ಷಗಳ ಹಿಂದೆ ಈ ಪರಿಸರದಲ್ಲಿ ನೆಲೆಸಿದ್ದ ಪೂರ್ವಜರ ಸಮಾಧಿಗಳು ಮತ್ತು ಅವರು ರಚಿಸಿದ ವರ್ಣಚಿತ್ರಗಳು, ರೇಖಾ ಚಿತ್ರಗಳಿರುವ ಬಹುತೇಕ ನೆಲೆಗಳು ಕಲ್ಲುಕ್ವಾರಿ ಅಥವಾ ಗಣಿಗಾರಿಕೆ, ಕೃಷಿ ಚಟುವಟಿಕೆಗಳಿಂದ ವಿನಾಶದ ಹಂತ ತಲುಪಿವೆ. ಪ್ರಸ್ತುತ ಮಹಾಪ್ರಬಂಧದಲ್ಲಿ ಇಂತಹ ವಿನಾಶದ ಹಂತ ತಲುಪಿರುವ ಬೃಹತ್ ಶಿಲಾಯುಗದ ನೆಲೆಗಳು ಮತ್ತು ಅವುಗಳ ಸ್ವರೂಪವನ್ನು ದಾಖಲಿಸುವ ಮತ್ತು ವಿಶ್ಲೇಷಿಸುವ ಪ್ರಮಾಣಿಕ ಪ್ರಯತ್ನಮಾಡಲಾಗಿದೆ.

# ಪರಾಮರ್ಶನ ಗ್ರಂಥಗಳು


**ಪ್ರಾಥಮಿಕ ಆಕರಗಳು**

**ಶಾಸನ ಸಂಪುಟಗಳು**

ಚನ್ನಬಸಪ್ಪ ಎಸ್. ಪಾಟೀಲ, ವಿನೋದಾ ಪಾಟೀಲ (ಸಂ), ೧೯೯೭, **ಬಳ್ಳಾರಿ ಜಿಲ್ಲೆಯ ಶಾಸನಗಳು ಸಂ–೨,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ್, ಭಟ್ಸೂರಿ ಕೆ.ಜಿ., ಪರಮಶಿವಮೂರ್ತಿ ಡಿ.ವಿ. (ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ–೧, ಬಳ್ಳಾರಿ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ್, ಭಟ್ಸೂರಿ ಕೆ.ಜಿ., ಪರಮಶಿವಮೂರ್ತಿ ಡಿ.ವಿ. (ಸಂ), ೧೯೯೯, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ–೨, ಕೊಪ್ಪಳ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಗೆಜೆಟಿಯರ್‌ಗಳು**

ಅಭಿಶಂಕರ್ ಕೆ., (ಪ್ರ.ಸಂ.), ೧೯೭೦, **ರಾಯಚೂರು ಡಿಸ್ಟ್ರಿಕ್ಟ್ ಗೆ ಜೆಟಿಯರ್**. ಮೈಸೂರು ರಾಜ್ಯ ಸರ್ಕಾರ, ಬೆಂಗಳೂರು.

ಅಭಿಶಂಕರ್ ಕೆ., (ಪ್ರ.ಸಂ.), ೧೯೭೨, **ಬಳ್ಳಾರಿ ಡಿಸ್ಟ್ರಿಕ್ಟ್ ಗೆ ಜೆಟಿಯರ್**, ಮೈಸೂರು ರಾಜ್ಯ ಸರ್ಕಾರ, ಬೆಂಗಳೂರು.

ಜಾನ್‌ಕೇಷಲ್, ೧೮೭೨, **ಮ್ಯಾನ್ವಲ್ ಆಫ್ ದ ಬಳ್ಳಾರಿ ಡಿಸ್ಟ್ರಿಕ್ಟ್**, ಮದ್ರಾಸ್.

ಫ್ರಾನ್ಸಿಸ್ ಡಬ್ಲ್ಯೂ, ೧೯೦೪, **ಬಳ್ಳಾರಿ ಡಿಸ್ಟ್ರಿಕ್ಟ್,** ಮದ್ರಾಸ್.

ಸೂರ್ಯನಾಥ ಕಾಮತ್, (ಪ್ರ.ಸಂ.), ೧೯೮೪, **ಕರ್ನಾಟಕ ರಾಜ್ಯ ಗೆಜೆಟಿಯರ್**, ಮೂರು ಸಂಪುಟಗಳು, ಕರ್ನಾಟಕ ಸರ್ಕಾರ, ಬೆಂಗಳೂರು.

**ವಿಶ್ವಕೋಶಗಳು**

ಅರವಿಂದ ಮಾಲಗಿತ್ತಿ (ಪ್ರ.ಸಂ.), ೨೦೧೫, **ಕನ್ನಡ ವಿಷಯ ವಿಶ್ವಕೋಶ, ಕರ್ನಾಟಕ ಸಂಪುಟ ೧,** ಮೈಸೂರು ವಿಶ್ವವಿದ್ಯಾನಿಲಯ ಮೈಸೂರು.

ಅಂಬಳಿಕೆ ಹಿರಿಯಣ್ಣ, (ಪ್ರ.ಸಂ.), ೨೦೦೯, **ಕನ್ನಡ ವಿಷಯ ವಿಶ್ವಕೋಶ, ಸಂಪುಟ ೪, ಇತಿಹಾಸ ಮತ್ತು ಪುರಾತತ್ವ,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ಮೈಸೂರು.

**ನಿಯತಕಾಲಿಕೆಗಳು**

**ಇತಿಹಾಸ ದರ್ಶನ ಸಂಪುಟಗಳು** – ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

**ಇತಿಹಾಸ ದರ್ಪಣ ಪುಸ್ತಕಗಳು** – ಇತಿಹಾಸ ದರ್ಪಣ, ಬೆಂಗಳೂರು.

**ಕರ್ನಾಟಕ ಭಾರತಿ** – ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**ಕನ್ನಡ ಪುಸ್ತಕಗಳು**

**ಆನುಷಂಗಿಕ ಆಕರಗಳು**

ಇರ್ಫಾನ್ ಹಬೀಬ್(ಮೂಲ), ಪ್ರದೀಪ್ ಬೆಳಗಲ್(ಅನು), ೨೦೦೮, **ಪೂರ್ವೇತಿಹಾಸ,** ಚಿಂತನ ಪುಸ್ತಕ, ಬೆಂಗಳೂರು.

ಇರ್ಫಾನ್ ಹಬೀಬ್, ವಿಜಯಕುಮಾರ್ ಠಾಕೂರ್(ಮೂಲ), ಚಂದ್ರಪ್ಪ ಸಿ, ಪ್ರದೀಪ್ ಬಿ. (ಅನು), ೨೦೧೪, **ವೈಧಿಕ ಯುಗ,** ಚಿಂತನ ಪುಸ್ತಕ, ಬೆಂಗಳೂರು.

ಕೃಷ್ಣ ಎಂ.ಎಚ್., ೧೯೫೩, **ಕರ್ನಾಟಕದ ಪೂರ್ವಚರಿತ್ರೆ,** ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ.

ಕೃಷ್ಣ ಮೋಹನ್ ಶ್ರೀಮಾಲಿ (ಮೂಲ), ನಾ. ದಿವಾಕರ (ಅನು), ೨೦೧೫, **ಕಬ್ಬಿಣಯುಗ ಮತ್ತು ಧಾರ್ಮಿಕ ಕ್ರಾಂತಿ(ಕ್ರಿ ಪೂ ೭೦೦–೩೫೦),** ಚಿಂತನ ಪುಸ್ತಕ, ಬೆಂಗಳೂರು.

ಕೈವಾರ ಗೋಪೀನಾಥ್, (ಮರು ಮುದ್ರಣ), ೨೦೧೨, **ಪ್ರಾಚೀನ ಭಾರತದಲ್ಲಿ ರಸಾಯನ ವಿಜ್ಞಾನ,** ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು.

ಕೋಸಾಂಬಿ. ಡಿ.ಡಿ. (ಮೂಲ), ವೇಣುಗೋಪಾಲ್ ಟಿ.ಎಸ್ ಮತ್ತು ಶೈಲಜಾ (ಅನು), ೨೦೧೧, **ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರೀಕತೆ ಚಾರಿತ್ರಿಕ ರೂಪುರೇಷೆ,** ಚಿಂತನ ಪುಸ್ತಕ, ಬೆಂಗಳೂರು.

ಚಿದಾನಂದ ಮೂರ್ತಿ ಎಂ., ೨೦೧೬, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ(ಕ್ರಿ.ಶ. ೪೫೦–೧೧೫೦),** ಸ್ವಪ್ನ ಬುಕ್ ಹೌಸ್ ಬೆಂಗಳೂರು.

ಗಿರಿಜಾ, ೨೦೧೧, **ಸಂಡೂರು ತಾಲ್ಲೂಕು ಒಂದು ಚಾರಿತ್ರಿಕ ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.

ಗುರುರಾಜ ರಾವ್ ಬಿ.ಕೆ., ೧೯೭೨, **ಕರ್ನಾಟಕದ ಲೋಹಯುಗ ಸಂಸ್ಕೃತಿಗಳು,** ಮೈಸೂರು ವಿಶ್ವವಿದ್ಯಾನಿಲಯ ಮಾನಸಗಂಗೋತ್ರಿ, ಮೈಸೂರು.

ಗುರುಮೂರ್ತಿ ಪೆಂಡಕೂರು, ೨೦೦೬, **ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು,** ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.

ಗೋಪಾಲ್ ಬಾ.ರಾ., ೧೯೯೬, **ಇತಿಹಾಸಶಾಸ್ತ್ರ ಮತ್ತು ಸಿದ್ಧಾಂತ,** ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಗೋಪಾಲ್ ಆರ್. (ಸಂ), ೨೦೧೦, **ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಪಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ಚಂದ್ರಶೇಖರಯ್ಯ ಬಿ.ಎಂ,. ೧೯೮೮, **ಕೂಡ್ಲಿಗಿ ತಾಲ್ಲೂಕು ದರ್ಶನ,** ಐಬಿಎಚ್ ಪ್ರಕಾಶನ, ಬೆಂಗಳೂರು.

ಜಯಪ್ಪ ಗೌಡ ಡಿ.ಎಸ್., ೧೯೮೬, **ಕರ್ನಾಟಕದ ಕಡಲಾಚೆಯ ಸಂಪರ್ಕಗಳು,** ಶುಭೋದಯ ಪ್ರಕಾಶನ, ಮೈಸೂರು.

ನರಸಿಂಹಮೂರ್ತಿ ಎ.ವಿ., ೨೦೧೦, **ಕರ್ನಾಟಕ ಪುರಾತತ್ವ ಕೆಲವು ಅಧ್ಯಯನಗಳು,** ಪ್ರಸಾರಾಂಗ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಮಾನಸಗಂಗೋತ್ರಿ, ಮೈಸೂರು.

ಪ್ರಕಾಶ ಹುಣಸಗಿ, ೧೯೮೭, **ಗಂಗಾವತಿ ತಾಲ್ಲೂಕು ದರ್ಶನ,** ಐಬಿಎಚ್ ಪ್ರಕಾಶನ, ಬೆಂಗಳೂರು.

ಬಾಶಮ್ ಎ.ಎಲ್. (ಮೂಲ), ಮಿರ್ಜಿ ಡಿ.ಆರ್ (ಅನು), ೨೦೧೨, **ಪ್ರಾಚೀನ ಭಾರತವೆಂಬ ಅದ್ಭುತ,** ಐಬಿಎಚ್ ಪ್ರಕಾಶನ, ಬೆಂಗಳೂರು.

ಮಹದೇವ ಸಿ., (ಸಂ), ೨೦೦೧, **ಕರ್ನಾಟಕ ಪುರಾತತ್ವ ಶೋಧ,** ಶ್ರೀಲಕ್ಷ್ಮೀ ಪ್ರಕಾಶನ, ಶ್ರೀರಂಗಪಟ್ಟಣ.

ಮೋತೀಚಂದ್ರ (ಮೂಲ), ಪಾಟೀಲ್ ಎಚ್.ಎಸ್ (ಅನು), ೧೯೭೨, ಸಾರ್ಥವಾಹ, ಸಾಹಿತ್ಯ ಅಕಾಡೆಮಿ, ಹೊಸ ದೆಹಲಿ.

ಮೋಹನ್‌ಕೃಷ್ಣ ರೈ ಕೆ., ೨೦೦೬, **ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮೋಹನ ಆರ್., ೨೦೧೯, **ಕರ್ನಾಟಕದ ಆದಿಮ ಚಿತ್ರಕಲೆ,** ಇತಿಹಾಸ ದರ್ಪಣ ಪ್ರಕಾಶನ, ಬೆಂಗಳೂರು.

ರಘುನಾಥ ಭಟ್ ಎಚ್.ಆರ್., ೧೯೮೪, **ಪುರಾತತ್ವ ಪರಿಚಯ,** ಮೈಸೂರು ವಿಶ್ವವಿದ್ಯಾನಿಲಯ ಮೈಸೂರು.

ರಮೇಶ ನಾಯಕ (ಸಂ), ೨೦೦೭, **ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರು ಚಿಂತನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರವಿಕುಮಾರ್ ಎನ್.ಎಮ್., ಮತ್ತು ವೃಷಭೇಂದ್ರಚಾರ್ ಎ, ೧೯೯೮, **ಮುನ್ನಡೆಯಲ್ಲಿ ಕೂಡ್ಲಿಗಿ,** ಹಿಮಾಂತ ಪ್ರಕಾಶನ, ಎಂ.ಬಿ ಅಯ್ಯನಹಳ್ಳಿ.

ರಾಜರಾಮ್ ಹೆಗಡೆ, ೨೦೦೩, **ಇತಿಹಾಸ ಮತ್ತು ಪ್ರಾಕ್ತನಾಶಾಸ್ತ್ರ,** ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ.

ರಾಧಾಕೃಷ್ಣ ಬಿ.ಪಿ., ೨೦೦೩, **ಕರ್ನಾಟಕದ ಖನಿಜ ಸಂಪತ್ತು,** ಜಿಯಾಲಾಜಿಕಲ್ ಸೊಸೈಟಿ ಆಫ್ ಇಂಡಿಯಾ, ಬೆಂಗಳೂರು.

ರಾಮದಾಸ ರೆಡ್ಡಿ ಎಸ್.ಜಿ., ೨೦೦೯, **ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.

ರಾಮಕೃಷ್ಣಯ್ಯ ಎನ್., ೨೦೧೪, **ಸಿರುಗುಪ್ಪ ತಾಲೂಕಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ,** ಸಿರುಗುಪ್ಪ.

ರೇಣುಕಾ ಕೋಡಗುಂಟಿ (ಸಂ), ೨೦೦೯, **ಕರ್ನಾಟಕದಲ್ಲಿ ಶವಸಂಸ್ಕಾರ,** ಬಂಡಾರ ಪ್ರಕಾಶನ, ಮಸ್ಕಿ.

ರೇಣುಕಾ ಕೋಡಗುಂಟಿ (ಸಂ), **ಕರ್ನಾಟಕದ ಹಿಂದುಳಿದ ಮತ್ತು ಬುಡಕಟ್ಟು ಸಮುದಾಯಗಳಲ್ಲಿ ಶವಸಂಸ್ಕಾರ,** (ಸಂ–೨), ಜಮುನಾ ಪಬ್ಲಿಕೇಷನ್, ಬೆಂಗಳೂರು.

ರೊಮಿಲಾ ಥಾಪರ್ (ಮೂಲ), ಉಮೇಶ ಎಚ್.ಎಸ್, ಶಶಿಕುಮಾರ್ ಜೆ. ಮತ್ತು ದೀಪ (ಅನು), ೨೦೧೬, **ಪ್ರಾಚೀನ ಭಾರತ: ಉಗಮದಿಂದ ಕ್ರಿ.ಶ.೧೩೦೦ವರೆಗೆ,** ವಿಸ್ಮಯ ಪ್ರಕಾಶನ, ಮೈಸೂರು.

ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ ಎಂ.ವಿ. (ಸಂ), ೧೯೭೬, **ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು,** ಹುಲ್ಲೂರು ಶ್ರೀನಿವಾಸ ಜೋಯಿಸರ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ.

ಲಕ್ಷ್ಮಣ್ ತೆಲಗಾವಿ (ಸಂ), ೧೯೮೭, **ಹರತಿಸಿರಿ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀನಿವಾಸ ಎಂ.ವಿ., (ಸಂ), ೧೯೯೫, **ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು,** ಹುಲ್ಲೂರು ಶ್ರೀನಿವಾಸ ಜೋಯಿಸರ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ.

ಲಕ್ಷ್ಮಣ್ ತೆಲಗಾವಿ (ಮರು ಮುದ್ರಣ), ೨೦೧೯, **ಮೌರ್ಯ ಮತ್ತು ಶಾತವಾಹನಯುಗ** (ಕ್ರಿ.ಪೂ. ೩.– ಕ್ರಿ ಶ. ೩) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಲೀಲಾ ಎನ್.ಎಸ್., ೨೦೦೩, **ಜೀವ ವಿಕಾಸ,** ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ವಸು ಎಂ.ವಿ., ೨೦೦೯, **ಕನ್ನಡದೊಳ್ ಭಾವಿಸಿದ ಜನಪದಂ,** ಚಿಂತನ ಪ್ರಕಾಶನ, ಬೆಂಗಳೂರು.

ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, **ಚಿನ್ನಹಗರಿ ಸಿರಿ,** ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ.

ವಾಸುದೇವ ಬಡಿಗೇರ, ೧೯೯೭, **ಸಂಡೂರು ಪರಿಸರದ ಕಾರ್ತಿಕೇಯ ತಪೋವನ ಚಾರಿತ್ರಿಕ ಅಧ್ಯಯನ,** ಮಯ ಪ್ರಕಾಶನ, ಕಾಮಲಾಪುರ.

ವಾಸುದೇವ ಬಡಿಗೇರ, ೨೦೧೦, **ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವೆಂಕಟರತ್ನ ಮತ್ತು ಪದ್ಮ ಎಂ.ಬಿ., ೧೯೮೫, **ಇತಿಹಾಸ ಸಂಶೋಧನಾ ಮಾರ್ಗ**, ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ ಲಿಮಿಟೆಡ್, ಬೆಂಗಳೂರು.

ಶರ್ಮಾ ಆರ್.ಎಸ್(ಮೂಲ), ಶಂಕರ ನಾರಾಯಣ್ ರಾವ್(ಅನು), ೧೯೯೭, **ಪ್ರಾಚೀನ ಭಾರತ,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಶರಣಬಸಪ್ಪ ಕೋಲ್ಕಾರ, ೨೦೧೦, **ಶಿಲಾಯುಗದ ಗವಿಚಿತ್ರಗಳು,** ಬಸವ ಪ್ರಕಾಶನ, ಗುಲಬರ್ಗಾ.

ಶರಣಬಸಪ್ಪ ಕೋಲ್ಕಾರ, ೨೦೧೫, **ಪ್ರಾಕ್ಚಾರಿತ್ರಿಕ ಶಿಲಾ ಚಿತ್ರಕಲೆ,** ಸಿದ್ದಲಿಂಗೇಶ್ವರ ಪ್ರಕಾಶನ, ಗುಲಬರ್ಗಾ.

ಶಿವತಾರಕ್ ಕೆ.ಬಿ., ೨೦೦೧, **ಕರ್ನಾಟಕ ಪುರಾತತ್ವ ನೆಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀಕಂಠಶಾಸ್ತ್ರಿ, ೧೯೭೫, **ಪುರಾತತ್ವ ಶೋಧನೆ,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಶ್ರೀನಿವಾಸ್ ರಿತ್ತಿ, ೧೯೮೭, **ಅಶೋಕನ ಧರ್ಮ ಶಾಸನಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀನಿವಾಸ ಪಾಡಿಗಾರ, ೧೯೭೮, **ಪುರಾತತ್ವಶಾಸ್ತ್ರ ಪರಿಚಯ,** ಚೈತನ್ಯ ಪ್ರಕಾಶನ, ಧಾರವಾಡ.

ಶ್ರೀನಿವಾಸ್ ಎಲ್., ೨೦೧೦, **ಹಂಪಿ ಪರಿಸರದ ಆದಿಮಾನವನ ನೆಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀಶೈಲ್ಯ ಆರಾಧ್ಯ, ೧೯೮೩, **ಸಂಶೋಧನೆಯ ಹಾದಿಯಲ್ಲಿ,** ಆರೋಹಣ ಪ್ರಕಾಶನ, ಚಿತ್ರದುರ್ಗ.

ಶೆಟ್ಟರ್ ಷ., ೨೦೧೭, **ಶಂಗಂ, ತಮಿಳಗಂ ಮತ್ತು ಕನ್ನಡ ನಾಡು-ನುಡಿ,** ಆಭಿನವ, ಬೆಂಗಳೂರು.

ಶೆಟ್ಟರ್ ಷ., ೨೦೧೮, **ಪ್ರಾಕೃತ ಜಗದ್ವಲಯ ಪ್ರಾಕೃತ-ಕನ್ನಡ-ಸಂಸ್ಕೃತ ಭಾಷೆಗಳ ಅನುಸಂಧಾನ,** ಅಭಿನವ ಪ್ರಕಾಶನ, ಬೆಂಗಳೂರು.

ಶೆಟ್ಟರ್ ಷ., ೨೦೧೯, **ರೂವಾರಿ ಕನ್ನಡ ನಾಡಿನ ವಾಸ್ತು-ಶಿಲ್ಪಿಗಳ ಚಾರಿತ್ರಿಕ ಹಿನ್ನಲೆ,** ಅಭಿನವ ಪ್ರಕಾಶನ, ಬೆಂಗಳೂರು.

ಷೇಕ್ ಅಲಿ.ಬಿ., (ಪ್ರ.ಸಂ), (ಮರು ಮುದ್ರಣ), ೨೦೧೮, **ಕರ್ನಾಟಕ ಚರಿತ್ರೆ ಸಂಪುಟಗಳು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸಾಯಬಣ್ಣ ಕ. ಮೇಲಕಾರ, ೨೦೧೧, **ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಚರಿತ್ರೆ ಮತ್ತು ಶಿಲಾಯುಗ ಸಂಸ್ಕೃತಿ,** ಭಾರತ ಸಿಂಧು ರಶ್ಮಿ ಪ್ರಕಾಶನ, ಧಾರವಾಡ.

ಸುಂದರ ಅ.(ಸಂ), (ಮರು ಮುದ್ರಣ) ೨೦೧೮, **ಕರ್ನಾಟಕ ಚರಿತ್ರೆ ಸಂಪುಟ ೧,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸುಂದರ ಅ., ೧೯೭೧, **ಇತಿಹಾಸ ಪೂರ್ವ ಕರ್ನಾಟಕ ಅಥವಾ ಕರ್ನಾಟಕ ಪ್ರಾಗೈತಿಹಾಸ,** ಐಬಿಎಚ್ ಪ್ರಕಾಶನ, ಬೆಂಗಳೂರು.

ಸುಂದರ ಅ., ೧೯೮೮, **ಪ್ರಾಚ್ಯವಸ್ತು ಸಂಶೋಧನೆ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಸುಂದರ ಅ.,(ಸಂ), ೧೯೯೪, **ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ,** ಕರ್ನಾಟಕ ಲಲಿತ ಕಲೆ ಅಕಾಡೆಮಿ, ಬೆಂಗಳೂರು.

ಸುಂದರ ಅ., ೧೯೭೩, **ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ,** ಐಬಿಎಚ್ ಪ್ರಕಾಶನ, ಬೆಂಗಳೂರು.

ಸೂರ್ಯನಾಥ ಕಾಮತ್,(ಮರು ಮುದ್ರಣ), ೨೦೧೫, **ಕರ್ನಾಟಕ ಸಂಕ್ಷಿಪ್ತ ಇತಿಹಾಸ,** ಎಮ್.ಸಿ.ಸಿ ಪಬ್ಲಿಕೇಷನ್, ಬೆಂಗಳೂರು.

**ಪತ್ರಿಕೆ–ಲೇಖನ**

ಕನ್ನಡ ಪ್ರಭಾ ಪತ್ರಿಕೆ, ೨೮ ಮೇ ೨೦೧೧, **ಅಪರೂಪದ ನಿಲುವುಗಲ್ಲುಗಳಿಗೆ ಬೇಕು ರಕ್ಷಣೆ,**

ಕನ್ನಡ ಪ್ರಭಾ ಪತ್ರಿಕೆ, ೫ ಮೇ ೨೦೧೦, **ಹುರುಳಿಯಾಳ್ ಬಳಿ ಪುರಾತನ ಕುಲುಮೆ ಪತ್ತೆ,**

ಕನ್ನಡ ಪ್ರಭಾ ಪತ್ರಿಕೆ, ೯ ಜುಲೈ ೨೦೦೫, **ಗುಡೇಕೋಟೆ ಸಮೀಪ ಆದಿಮಾನವನ ಗುಹೆಗಳು ಪತ್ತೆ,**

ಸಂಯುಕ್ತ ಕರ್ನಾಟಕ, ೧೬, ಜನವರಿ, ೨೦೧೯, **ಜಕ್ಕೇರುಗುಡ್ಡದಲ್ಲಿ ಪ್ರಾಗೈತಿಹಾಸಿಕ ವರ್ಣಚಿತ್ರ ಪತ್ತೆ,**

**ಅಂತರ್ಜಾಲ ಮಾಹಿತಿ**

ಅರುಣಿ ಎಸ್.ಕೆ., ೨೨ ಆಗಸ್ಟ್ ೨೦೨೦, 'ಕರ್ನಾಟಕದ ಐತಿಹಾಸಿಕ ನಗರಗಳು', **ಬುಕ್‌ಬ್ರಹ್ಮ,** ಅಂತರ್ಜಾಲತಾಣ. (www.bookbrahma.com)

ಅರುಣಿ ಎಸ್.ಕೆ., ೫ ಸೆಪ್ಟೆಂಬರ್, ೨೦೨೦, 'ಕರ್ನಾಟಕದಲ್ಲಿ ಮೌರ್ಯ ಚಕ್ರವರ್ತಿ ಅಶೋಕನ ಆಳ್ವಿಕೆಯ ನಗರಗಳು', **ಬುಕ್‌ಬ್ರಹ್ಮ,** ಅಂತರ್ಜಾಲ ತಾಣ. (www.bookbrahma.com)

ಅರುಣಿ ಎಸ್.ಕೆ., ೩೦ ಸೆಪ್ಟೆಂಬರ್, ೨೦೨೦, 'ಮಯೂರ ವರ್ಮ ತಟಾಕದ ನಗರ ಚಂದ್ರವಳ್ಳಿ', **ಬುಕ್‌ಬ್ರಹ್ಮ,** ಅಂತರ್ಜಾಲ ತಾಣ. (www.bookbrahma.com)

## ಲೇಖನಗಳು

ಅನಿತ ಎಂ.ಎಚ್., ೨೦೧೨, 'ಕರ್ನಾಟಕದಲ್ಲಿ ಆರಂಭಿಕ ಇತಿಹಾಸ ಕಾಲದ ಆಭರಣಗಳ ತಂತ್ರಜ್ಞಾನ ಬೆಳವಣಿಗೆ,' **ಇತಿಹಾಸ ದರ್ಪಣ**, ಪುಸ್ತಕ. ೧೨-೧೩(ಜನವರಿ-ಜೂನ್), (ಸಂ), ಇತಿಹಾಸ ದರ್ಪಣ, ಬೆಂಗಳೂರು.

ಓಬಯ್ಯ ಓ., ೨೦೧೯, 'ಹಾಲಸಾಗರ ಬೆಟ್ಟದ ಪ್ರಾಗೈತಿಹಾಸಿಕ ಕಾಲದ ವರ್ಣಚಿತ್ರಗಳು', **ಇತಿಹಾಸ ದರ್ಶನ**, ಸಂ.೩೪, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ಕೃಷ್ಣಮೂರ್ತಿ ಎಂ.ಎಸ್., ೨೦೧೨, 'ಕರ್ನಾಟಕ ಪುರಾತತ್ವ ಉತ್ಖನನಗಳು', ಇತಿಹಾಸ ದರ್ಪಣ, ಪುಸ್ತಕ. ೧೨-೧೩(ಜನವರಿ-ಜೂನ್), (ಸಂ), ಇತಿಹಾಸ ದರ್ಪಣ, ಬೆಂಗಳೂರು.

ಗೋಪಾಲ್ ಆರ್., ೧೯೯೫, 'ಕರ್ನಾಟಕದಲ್ಲಿ ಮುದ್ರಾಂಕಿತ ನಾಣ್ಯಗಳು', ಇತಿಹಾಸ ದರ್ಶನ, ಸಂ.೧೦, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ಜಯ್ಯಣ್ಣ ಉಲ್ಲಾನಹಳ್ಳಿ, ೨೦೦೩, 'ಕೂಡ್ಲಿಗಿ ತಾಲೂಕು ಗುಡೇಕೋಟೆ ಪರಿಸರದ ಪುರಾತತ್ವ ಸಮೀಕ್ಷೆ', **ಇತಿಹಾಸ ದರ್ಶನ**, ಸಂ.೧೮, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ದುರುಗಪ್ಪ ಎಂ.ಕೆ., ೨೦೦೪, 'ಹಗರಿಬೊಮ್ಮನಹಳ್ಳಿ ತಾಲ್ಲೂಕು ದಶಮಾಪುರ ಪರಿಸರದ ಪ್ರಾಗೈತಿಹಾಸಿಕ ಕುರುಹುಗಳು', ಇತಿಹಾಸ ದರ್ಶನ, ಸಂ.೧೯, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ದುರುಗಪ್ಪ ಎಂ.ಕೆ., ೨೦೦೬, 'ಹೇಮಗುಡ್ಡ : ಚಾರಿತ್ರಿಕ ನೋಟ', **ಇತಿಹಾಸ ದರ್ಶನ**, ಸಂ.೨೦, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ನಾಗರಾಜು ಎಸ್. (ಮೂಲ), ಶೋಭಾ ವಿ. (ಅನು), 'ಕರ್ನಾಟಕ ಚಾರಿತ್ರಿಕ ಹಂತ : ಚರಿತ್ರೆ ಮತ್ತು ಪುರಾತತ್ವ', ಇತಿಹಾಸ ದರ್ಪಣ, ಪುಸ್ತಕ. ೧೨-೧೩(ಜನವರಿ-ಜೂನ್), (ಸಂ), **ಇತಿಹಾಸ ದರ್ಪಣ**, ಬೆಂಗಳೂರು.

ಪುರುಷೋತ್ತಮ ರೆಡ್ಡಿ, ೨೦೦೨, 'ಸಂಡೂರು ಪ್ರದೇಶದ ಕಬ್ಬಿಣ ತಯಾರಿಕೆ : ಒಂದು ಐತಿಹಾಸಿಕ ನೋಟ', **ಇತಿಹಾಸ ದರ್ಶನ**, ಸಂ.೧೭, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು.

ಪೂಣಚ್ಚ ಕೆ.ಪಿ. ಮತ್ತು ವೆಂಕಟಶೇಯ್ಯ, ೧೯೯೩, ಹಂಪಿಯ ಇತ್ತೀಚಿನ ಉತ್ಖನನದಲ್ಲಿ ದೊರೆತ ಮುದ್ರೆಗಳು, **ಇತಿಹಾಸ ದರ್ಶನ**, ಸಂ.೮, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು.

ಮಂಜನಾಯ್ಕ ಆರ್., ೨೦೧೮, 'ಹಾಲಸಾಗರ ಸಮೀಪ ಬೃಹತ್ ಶಿಲಾಯುಗದ ಸಮಾಧಿಗಳ ಶೋಧ', **ಇತಿಹಾಸ ದರ್ಶನ**, ಸಂ.೩೩, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ಮಂಜನಾಯ್ಕ ಆರ್., ೨೦೧೯, 'ಮಡಕಲಕಟ್ಟೆಯಲ್ಲಿ ದೊರೆತ ನವಶಿಲಾಯುಗದ ಕೊಡಲಿ ಮತ್ತು ಬೃಹತ್ ಶಿಲಾಯುಗದ ಸಮಾಧಿಗಳು', **ಇತಿಹಾಸ ದರ್ಶನ**, ಸಂ.೩೪, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ಮಂಜನಾಯ್ಕ ಆರ್., ೨೦೧೭, 'ಗುಡೇಕೋಟೆ ಪರಿಸರದ ನವಶೋಧಿತ ಪ್ರಾಗೈತಿಹಾಸಿಕ ವರ್ಣಚಿತ್ರಗಳು', **ಇತಿಹಾಸ ದರ್ಪಣ**, ಪು.೩೩-೩೪, ಇತಿಹಾಸ ದರ್ಪಣ(ಸಂ), ಬೆಂಗಳೂರು.

ಮೋಹನ ಆರ್., ೨೦೨೦, 'ತಾಯಮ್ಮ ಬಂಡ ನೆಲೆಯ ವರ್ಣಚಿತ್ರ ಶೋಧ: ಏಣಿಯ ಪ್ರಾಚೀನತೆ', **ಇತಿಹಾಸ ದರ್ಶನ**, ಸಂ.೩೫, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ತಿಪ್ಪೇಸ್ವಾಮಿ ಹೆಚ್., ೧೯೯೯, 'ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು', **ಇತಿಹಾಸ ದರ್ಶನ**, ಸಂ.೧೪, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ತಿಪ್ಪೇಸ್ವಾಮಿ ಹೆಚ್., ೨೦೦೦, 'ನುಂಕೆಮಲೆ ಪರಿಸರದಲ್ಲಿ ಪ್ರಾಗೈತಿಹಾಸಿಕ ನೆಲೆಗಳ ಶೋಧನೆ', **ಇತಿಹಾಸ ದರ್ಶನ**, ಸಂ.೧೫, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ತಿಪ್ಪೇಸ್ವಾಮಿ ಹೆಚ್., ೨೦೦೧, 'ಕೂಡ್ಲಿಗಿ ತಾಲೂಕಿನಲ್ಲಿ ಪ್ರಾಗೈತಿಹಾಸಿಕ ನೆಲೆಗಳು', ಇತಿಹಾಸ ದರ್ಶನ, ಸಂ.೧೬, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

ತಿಪ್ಪೇಸ್ವಾಮಿ ಹೆಚ್., ೨೦೧೪, 'ನಿಂಬಾಪುರದ ಪ್ರಾಚ್ಯಾವಶೇಷಗಳು', **ಇತಿಹಾಸ ದರ್ಶನ**, ಸಂ.೨೯, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ತಿಪ್ಪೇಶ ಹೆಚ್.ಎಂ., ೨೦೧೬, 'ಹುರುಳಿಹಾಳು ಮತ್ತು ಮಾಳೇಹಳ್ಳಿಯ ಬೃಹತ್ ಶಿಲಾಯುಗದ ಅವಶೇಷಗಳು', **ಇತಿಹಾಸ ದರ್ಶನ**, ಸಂ.೩೧, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ತಿಪ್ಪೇಶ ಹೆಚ್.ಎಂ., ೨೦೧೭, 'ಹಾಲಸಾಗರ ಗ್ರಾಮದ ಪ್ರಾಚ್ಯಾವಶೇಷಗಳು', **ಇತಿಹಾಸ ದರ್ಶನ**, ಸಂ.೩೨, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ತಿಪ್ಪೇಶ ಹೆಚ್.ಎಂ., ೨೦೧೮, 'ಕೊಂಚಗೇರಿಯ ಬೂದಿದಿಬ್ಬ ಹಾಗೂ ಸಿದ್ದರಾಂಪುರದ ಪ್ರಾಗೈತಿಹಾಸಿಕ ವರ್ಣಚಿತ್ರಗಳು', **ಇತಿಹಾಸ ದರ್ಶನ**, ಸಂ.೩೩, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ತಿಪ್ಪೇಶ ಹೆಚ್.ಎಂ., ೨೦೧೯, 'ಜರಿಮಲೆ ಬೆಟ್ಟದ ತಪ್ಪಲಿನಲ್ಲಿರುವ ಬೃಹತ್ ಶಿಲಾಯುಗದ ಸಮಾಧಿಗಳ ಶೋಧ', **ಇತಿಹಾಸ ದರ್ಶನ**, ಸಂ.೩೪, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ತಿಪ್ಪೇಶ ಹೆಚ್.ಎಂ., ೨೦೨೦, 'ಕುಮ್ಮಟದುರ್ಗ ಮತ್ತು ಅಚಲಾಪುರ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು', **ಇತಿಹಾಸ ದರ್ಶನ**, ಸಂ.೩೫, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ಲಿಂಗಣ್ಣಸ್ವಾಮಿ ಕೆ., ೨೦೧೬, 'ಹಲಕುಂದಿ ಪರಿಸರದ ಬಯಲುಬಂಡೆ ಚಿತ್ರಗಳು: ಮುಂದುವರೆದ ಶೋಧನೆಗಳು', ಇತಿಹಾಸ ದರ್ಶನ, ಸಂ.೧೪, ಕರ್ನಾಟಕ ಇತಿಹಾಸ ಅಕಾಡೆಮಿ(ರಿ), ಬೆಂಗಳೂರು.

ಲಿಂಗಣ್ಣಸ್ವಾಮಿ ಕೆ., ೨೦೧೯, 'ಬಳ್ಳಾರಿ ಪರಿಸರದ ಸಂಜೀವರಾಯನಕೋಟೆ: ನವಶೋಧಿತ ನೂತನ ಶಿಲಾಯುಗ ಸಂಸ್ಕೃತಿಯ ಬಯಲುಬಂಡೆ ಚಿತ್ರನೆಲೆ', **ಇತಿಹಾಸ ದರ್ಪಣ**, ಮಸ್ತಕ. ೪೩(ಅಕ್ಟೋಬರ್-ಡಿಸೆಂಬರ್), (ಸಂ), ಇತಿಹಾಸ ದರ್ಪಣ, ಬೆಂಗಳೂರು.

